# ಶ್ರೀಮದ್ವಾಲ್ಮೀಕಿರಾಮಾಯಣಮ್

# ಬಾಲಕಾಂಡಃ

(ಕನ್ನಡ ಅನುವಾದ ಸಹಿತ)

ಮುನ್ನುಡಿ:

**ಡಾ|| ಡಿ. ವಿ. ಗುಂಡಪ್ಪನವರಿಂದ**

ಶ್ರೀ ಶ್ರೀ

ಅನುವಾದಕರು:

**ವಿದ್ವಾನ್ ಎನ್. ರಂಗನಾಥಶರ್ಮಾ**

ಪ್ರಕಾಶಕರು:

**ರಾಮಾಯಣ ಪ್ರಕಾಶನ ಸಮಿತಿ**

ನರಸಿಂಹರಾಜ ಕಾಲೊನಿ, ಬೆಂಗಳೂರು-೧೯

# ಬಿನ್ನಹ

ಸುಮಾರು ಒಂದು ವರ್ಷದ ಹಿಂದೆ ನಮ್ಮ ಸಂಘವು ಪ್ರಕಟಪಡಿಸಿದ ಶ್ರೀಮದ್ವಾಲ್ಮೀಕಿ ರಾಮಾಯಣ-ಸುಂದರಕಾಂಡ (ಕನ್ನಡ ಅನುವಾದ ಸಹಿತ) ಗ್ರಂಥವು ಕನ್ನಡ ಜನತೆಯ ಮೆಚ್ಚುಗೆಯನ್ನು ಪಡೆದಿದೆ. ಮಹಾಜನಗಳು ಉಳಿದ ಕಾಂಡಗಳೂ ಹೀಗೆಯೇ ಪ್ರಕಟವಾಗಲೆಂದು ತಮ್ಮ ಅಪೇಕ್ಷೆಯನ್ನು ವ್ಯಕ್ತಪಡಿಸಿದ್ದಾರೆ. ಅವರ ಪ್ರೋತ್ಸಾಹದ ಫಲವಾಗಿ ಈಗ ಬಾಲಕಾಂಡ ಗ್ರಂಥವು ಬೆಳಕಿಗೆ ಬಂದಿದೆ.

ಹಿಂದಿನಂತೆ ಈಗಲೂ ಹಿರಿಯ ಸಾಹಿತಿಗಳಾದ ಡಾ|| ಡಿ.ವಿ.ಜಿ.ಯವರು ಈ ನಮ್ಮ ಕಾರ್ಯಕ್ಕೆ ಸಂಪೂರ್ಣ ಬೆಂಬಲವನ್ನು ನೀಡಿ, ತಮ್ಮ ಮಾರ್ಗ ದರ್ಶನದಲ್ಲಿ ಗ್ರಂಥರಚನೆಯಾಗಲು ಸಹಾಯಮಾಡಿರುತ್ತಾರೆ. ಅಲ್ಲದೆ ಈ ಗ್ರಂಥಕ್ಕೆ ಅಮೂಲ್ಯವಾದ ಮುನ್ನುಡಿಯನ್ನು ಬರೆದುಕೊಟ್ಟು ಉಪಕರಿಸಿ ದ್ದಾರೆ. ಅವರಿಗೆ ನಮ್ಮ ಸಂಘದ ಅನಂತ ವಂದನೆಗಳು.

ಸುಂದರಕಾಂಡಗ್ರಂಥಕ್ಕೆ ಶ್ರೀ. ರಂಗನಾಥಶರ್ಮರು ಬರೆದುಕೊಟ್ಟ ಅನುವಾದವನ್ನು ವಿದ್ವಾಂಸರುಗಳೂ ಮತ್ತು ಮಹಾಜನಗಳೂ ಮುಕ್ತಕಂಠ ದಿಂದ ಹೊಗಳಿದ್ದಾರೆ. ಶ್ರೀ ರಂಗನಾಥಶರ್ಮರು ನಮ್ಮ ಪ್ರಾರ್ಥನೆಯನ್ನು ಅಂಗೀಕರಿಸಿ ಬಾಲಕಾಂಡಗ್ರಂಥಕ್ಕೂ ಸಹ ಭಾವಾನುವಾದವನ್ನು ಬರೆದು ಗ್ರಂಥದ ಮುದ್ರಣ ಕಾರ್ಯದಲ್ಲಿ ತುಂಬ ಶ್ರಮವಹಿಸಿ ಉಪಕಾರ ಮಾಡಿರು ತ್ತಾರೆ ಅವರಿಗೆ ಸಂಘವು ತುಂಬ ಋಣಿಯಾಗಿದೆ. ಅಲ್ಲದೆ ಅನೇಕ ರೀತಿ ಯಲ್ಲಿ ಸಹಾಯ ಮಾಡಿರುವ ರಾಮಭಕ್ತರಿಗೆ ನಮ್ಮ ಸಂಘವು ಋಣಿಯಾಗಿದೆ.

ಮೆ|| ಬೃಂದಾವನ ಪ್ರಿಂಟರ್ಸ್ ಮತ್ತು ಪಬ್ಲಿಷರ್ಸ್ ಸಂಸ್ಥೆಯವರು ಅಂದವಾಗಿ ಗ್ರಂಥಮುದ್ರಣವನ್ನು ಮಾಡಿಕೊಟ್ಟು ಉಪಕಾರಮಾಡಿದ್ದಾರೆ. ಅವರಿಗೆ ಸಂಘದ ವಂದನೆಗಳು.

ಸುಂದರಕಾಂಡಕ್ಕೆ ದೊರೆತಂತೆ ಈ ಗ್ರಂಥಕ್ಕೂ ಕನ್ನಡ ಜನತೆಯ ಪ್ರೋತ್ಸಾಹವು ದೊರೆಯುವುದೆಂದು ನಂಬಿದ್ದೇವೆ. ಉಳಿದ ಕಾಂಡಗಳ

ಪ್ರಕಟನೆಗಳೂ ಸಹ ಇದೇ ರೀತಿಯಲ್ಲಿ ಶ್ರೀ ರಾಮಾನುಗ್ರಹದಿಂದ ನೆರವೇರುವಂತಾಗಲೆಂದು ಹಾರೈಸುತ್ತೇವೆ

**ಎಸ್. ಎನ್. ಮೂರ್ತಿ**
ಗೌ॥ ಕಾರ್ಯದರ್ಶಿ

**ಡಿ. ಸಿ. ಅನಂತರಾಮಯ್ಯ**
ಅಧ್ಯಕ್ಷರು

ಶ್ರೀ ನರಸಿಂಹರಾಜ ಕಾಲೊನಿ ಅಸೋಸಿಯೇಷನ್ (ರಿ.), ಶ್ರೀರಾಮಮಂದಿರ

ಬೆಂಗಳೂರು
೨೫–೧–೧೯೬೬

# ಎರಡನೆಯ ಮುದ್ರಣ

ಶ್ರೀ ನರಸಿಂಹರಾಜ ಕಾಲೊನಿ ಅಸೋಸಿಯೇಷನ್, ಶ್ರೀರಾಮಮಂದಿರ—ಈ ಸಂಸ್ಥೆಯವರು ಪ್ರಥಮದಲ್ಲಿ ಪ್ರಕಟಿಸಿದ **ಬಾಲಕಾಂಡ**ದ ಸರ್ವಸ್ವಾಮ್ಯವನ್ನೂ ರಾಮಾಯಣ ಪ್ರಕಾಶನ ಸಮಿತಿಯು ವಹಿಸಿಕೊಂಡಿತು. ಪ್ರಥಮ ಮುದ್ರಣದ ಪ್ರತಿಗಳೆಲ್ಲವೂ ಮಾರಾಟವಾದ್ದರಿಂದ ಈ ಸಮಿತಿಯು ಈಗ ದ್ವಿತೀಯ ಮುದ್ರಣವನ್ನು ಕೈಗೊಂಡು ಮುದ್ರಿಸಿ ಪ್ರಕಟಿಸಿದೆ.

ಪ್ರಥಮ ಮುದ್ರಣದ ಅನುವಾದವನ್ನು ಅನುವಾದಕರೇ ಪುನಃ ಪರಿಷ್ಕರಿಸಿಕೊಟ್ಟಿದ್ದಾರೆ. ವಿಖ್ಯಾತ ಚಿತ್ರಕಲಾವಿದರಾದ ಶ್ರೀ ಪುರುಷೋತ್ತಮರಾಯರು ಹೊದಿಕೆಯ (ಜಾಕೆಟ್) ನಕ್ಷೆಯನ್ನೂ ಪಾಯಸಪ್ರದಾನ ಮತ್ತು **ಸೀತಾಕಲ್ಯಾಣ**—ಎಂಬ ಎರಡು ಚಿತ್ರಗಳನ್ನೂ ಸುಂದರವಾಗಿ ಬರೆದುಕೊಟ್ಟಿದ್ದಾರೆ. ಪ್ರಭಾ ಮುದ್ರಣಾಲಯದ ಮಾಲಿಕರಾದ ಶ್ರೀ. ಡಿ. ಎನ್. ಕೃಷ್ಣಾಚಾರ್ಯರು ಈ ಗ್ರಂಥವನ್ನು ಅಂದವಾಗಿ ಮುದ್ರಿಸಿಕೊಟ್ಟಿದ್ದಾರೆ. ಇವರೆಲ್ಲರಿಗೂ ರಾಮಾಯಣ ಪ್ರಕಾಶನ ಸಮಿತಿಯು ತನ್ನ ಕೃತಜ್ಞತೆಗಳನ್ನರ್ಪಿಸುತ್ತದೆ

ಬೆಂಗಳೂರು
೧೫–೪–೧೯೭೨

**ಡಿ. ಸಿ. ಅನಂತರಾಮಯ್ಯ**
ಕಾರ್ಯದರ್ಶಿ
ರಾಮಾಯಣ ಪ್ರಕಾಶನ ಸಮಿತಿ

# ಮುನ್ನುಡಿ

ಶ್ರೀರಾಮಾಯಣಹೇಮಾದ್ರಿರ್ನೃಸತ್ತ್ವಮಣಿಶೇಖರಃ ।
ಧರ್ಮಸ್ರವಂತೀಮಹಿತಃ ಶೋಭತೇ ಸರ್ವಶೋಭನಃ ॥

## ಗ್ರಂಥಮಹಿಮೆ

ಶ್ರೀಮದ್ವಾಲ್ಮೀಕಿಮಹರ್ಷಿಪ್ರಣೀತವಾದ ಶ್ರೀಮದ್ರಾಮಾಯಣವು ಪರಮಸುಂದರವೂ ಪರಮಮಂಗಲಕರವೂ ಆದ ಗ್ರಂಥವೆಂದು ಜಗತ್ಪ್ರಸಿದ್ಧವಾಗಿದೆ ಭರತಖಂಡದ ಜನಕ್ಕೆ ಅದು ಎಷ್ಟೋ ಸಹಸ್ರ ವರ್ಷಗಳಿಂದ ಜೀವನಯಾತ್ರೆಯಲ್ಲಿ ಮಾರ್ಗಜ್ಯೋತಿಯಾಗಿ ನಿಂತಿದೆ. ಭರತಖಂಡದ ಹೊರಗೂ ಅದರ ಕೀರ್ತಿ ವಿಸ್ತಾರವಾಗಿದೆ ಈಗ ಇಂಡೊನೇಸಿಯ (Indonesia), ಇಂಡೊಚೈನ (Indo-China) ಎಂದು ಹೆಸರಾದ ಪ್ರದೇಶಗಳಲ್ಲಿ—ಕಾಂಬೋಡಿಯಾ (ಚಂಪ), ಬಾಲಿ, ಜಾವ ಮೊದಲಾದ ದ್ವೀಪಾಂತರಗಳಲ್ಲಿ—ಕ್ರಿಸ್ತಶಕ ಐದನೆಯ-ಆರನೆಯ ಶತಮಾನಗಳಷ್ಟು ಹಿಂದಿನ ಕಾಲದಲ್ಲಿ ರಾಮಾಯಣಪ್ರಸಂಗವು ಪ್ರಚುರವಾಗಿತ್ತೆಂದು ಅಲ್ಲಿಯ ದೇವಾಲಯಗಳ ಶಿಲ್ಪಾವಶೇಷಗಳಿಂದಲೂ ಪ್ರಾಚೀನ ಶಿಲಾಲೇಖಗಳಿಂದಲೂ ಆ ಜನತೆಯಲ್ಲಿ ಇಂದಿಗೂ ಕಾಣಬರುವ ನಾಮಧೇಯರೂಢಿಯಿಂದಲೂ ಸಾಮಾಜಿಕ ಸಂಪ್ರದಾಯ ಸಂಕೇತಗಳಿಂದಲೂ ನಿರ್ವಿವಾದವಾಗಿ ತಿಳಿದು ಬರುತ್ತದೆಯೆಂದು ಸಂಶೋಧಕರು ಹೇಳಿದ್ದಾರೆ.

ಕನ್ನಡ ಜನಕ್ಕಂತೂ ರಾಮಾಯಣವು ಪರಮಪ್ರಿಯವಾದ ಗ್ರಂಥ. ಸೀತಾರಾಮ ಸ್ಪರ್ಶದಿಂದ ಪವಿತ್ರಿತವಾದ ಪಂಪಾಸರೋವರವೂ ಸುಗ್ರೀವಾಂಜನೇಯರ ಸ್ವಸ್ಥಲವಾದ ಕಿಷ್ಕಿಂಧೆಯೂ ಕರ್ಣಾಟಕದ ಕ್ಷೇತ್ರಸಂಪತ್ತು. ಕುಮಾರವ್ಯಾಸನ ಕಾಲಕ್ಕೆ—ಎಂದರೆ ಇಂದಿಗೆ ಐನೂರು ವರ್ಷಗಳ ಹಿಂದೆ—ಕನ್ನಡದಲ್ಲಿ ರಾಮಾಯಣ ಗ್ರಂಥಗಳು ನೂರಾರು ಆಗಿದ್ದಿರಬೇಕು ಆತ ಹೇಳಿದ್ದಾನೆ:

ತಿಣಿಕಿದನು ಫಣಿರಾಯ ರಾಮಾ- ।
ಯಣದ ಕವಿಗಳ ಭಾರತದಲಿ ತಿಂ- ।
ತಿಣಿಯ ರಘುವರಚರಿತದಲಿ ಕಾಲಿಡಲು ತೆರಪಿಲ್ಲ ॥

**(ಕುಮಾರವ್ಯಾಸ ಭಾರತ: ೧–೧೭)**

ಹಾಗಿದ್ದರೂ ರಾಮಾಯಣಗ್ರಂಥಗಳು ಕನ್ನಡದಲ್ಲಿ ಇನ್ನೂ ಹೊಸ ಹೊಸದಾಗಿ ಹುಟ್ಟಿಯೂ ಹುಟ್ಟುತ್ತಲೂ ಇವೆ. ಅಂಥವುಗಳಲ್ಲಿ ಮೊನ್ನೆತಾನೆ ಪುತ್ತೂರಿನ ಶ್ರೀ ಶಿವರಾಮಕಾರಂತರವರಿಂದ ಪ್ರಕಟಿತವಾದ ಕೌಶಿಕ ರಾಮಾಯಣ ಒಂದು.

ಇಂಡಿಯದ ಇತರ ಭಾಷೆಗಳೆಲ್ಲವುಗಳಲ್ಲಿಯೂ ರಾಮಾಯಣ ಕಾವ್ಯಗಳು ಹೇರಳವಾಗಿವೆ ತಮಿಳಿನ ಕಂಬರಾಮಾಯಣವೂ ಹಿಂದೀ ಭಾಷೆಯ ತುಲಸೀರಾಮಾಯಣವೂ ಮಹಾಪ್ರಸಿದ್ಧಿ ಪಡೆದಿರುವ ಕಾವ್ಯಗಳು.

ಸಂಸ್ಕೃತ ಭಾಷೆಯಲ್ಲಂತೂ ವಾಲ್ಮೀಕಿರಾಮಾಯಣವನ್ನವಲಂಬಿಸಿ ಕೊಂಡು ಹುಟ್ಟಿರುವ ಪದ್ಯಪ್ರಬಂಧಗಳು, ಚಂಪುಗಳು, ನಾಟಕಗಳು, ಸ್ತೋತ್ರಗಳು ಮೊದಲಾದ ನಾನಾ ಜಾತಿಗಳ ಕಾವ್ಯಕೃತಿಗಳ ಲೆಕ್ಕಕ್ಕೆ ಕೊನೆಮೊದಲಿಲ್ಲ ಭಾಸಕಾಲಿದಾಸಾದಿಯಾಗಿ ನೂರಾರು ಮಂದಿ ಸಂಸ್ಕೃತ ಕವಿಗಳು ರಾಮವೃತ್ತಾಂತವನ್ನು ಬಗೆಬಗೆಯಾಗಿ ಬಣ್ಣಿಸಿದ್ದಾರೆ.

ವೇದಾಂತಿಗಳಿಗೂ ಪರಮಪ್ರಿಯವಾದದ್ದು ರಾಮಸ್ಮರಣೆ. ರಾಮ ರಹಸ್ಯ, ರಾಮತಾಪನೀ ಮೊದಲಾದ ಉಪನಿಷತ್ತುಗಳೂ ಯೋಗವಾಸಿಷ್ಠ, ಅಧ್ಯಾತ್ಮರಾಮಾಯಣ ಮೊದಲಾದ ಪರತತ್ತ್ವಪ್ರಕರಣಗಳೂ ರಾಮ ಸಂಕೀರ್ತನೆಗಳೇ ಆಗಿವೆ. ವಾಲ್ಮೀಕಿಮಹರ್ಷಿ ತನ್ನ ಕೃತಿಯ ವಿಷಯದಲ್ಲಿ—

ಪರಂ ಕವೀನಾಮಾಧಾರಮ್ ||

(ಬಾಲಕಾಂಡ: ೪-೨೦)

ಎಂದು ನುಡಿದ ಭವಿಷ್ಯದ್ವಾಣಿಯು ಕಾಲಕ್ರಮದಲ್ಲಿ ಸಾರ್ಥಕವಾಗಿದೆ. ವಾಲ್ಮೀಕಿಯನ್ನು ಉಪಜೀವಿಸಿಕೊಂಡಿರುವ ಕವಿಗಳ ಪಟ್ಟಿ ಬೆಳೆಯುತ್ತಲೇ ಇದೆ.

ಹೀಗೆ ವಾಲ್ಮೀಕಿಯ ಉಪಜೀವಿಗಳಾದ ರಾಮಕಾವ್ಯಗಳು ಸಾವಿರ ವಿರುವಲ್ಲಿ ಅವುಗಳ ನಡುವೆ ವಾಲ್ಮೀಕಿಯ ಮೂಲಕೃತಿಗೆ ಇನ್ನೂ ಒಂದು ಸ್ಥಾನವುಂಟೆ? ಅದೇನೋ ಆದಿಕಾವ್ಯ ಸರಿ. ಕಾಲದೃಷ್ಟಿಯಿಂದ ಅದು ಅಗ್ರಗಣ್ಯವಾಗಿರುವುದು ಸರಿ. ಅದಕ್ಕೆ ಬೇರೆ ಪ್ರಾಶಸ್ತ್ಯವೇನಾದರೂ ಉಂಟೆ? ಉಂಟು; ಖಂಡಿತವಾಗಿ ಉಂಟು; ಮತ್ತು ಬಹುವಾಗಿ ಉಂಟು. ಕಾವ್ಯಗುಣ ದೃಷ್ಟಿಯಿಂದಲೂ ಆದಕ್ಕೆ ಅಗ್ರಸ್ಥಾನ ಸಲ್ಲುತ್ತದೆ.

ಉಪಜೀವಿಕಾವ್ಯಗಳಲ್ಲಿ ಒಂದೊಂದು ಒಂದೊಂದು ಸ್ವಾರಸ್ಯವಿಶೇಷದಿಂದ ಆದರಣೀಯವಾಗಿದೆ. ಕೆಲವುಗಳ ಸ್ವಾರಸ್ಯವು ಕಥಾನಿರೂಪಣೆ; ಕೆಲವುಗಳದು ಸನ್ನಿವೇಶವರ್ಣನೆ; ಕೆಲವುಗಳದು ಸಂವಾದ; ಕೆಲವುಗಳದು ಪಾತ್ರಪೋಷಣೆ; ಕೆಲವುಗಳಲ್ಲಿ ಶಬ್ದಸಂದರ್ಭ ಚೆನ್ನ, ಕೆಲವುಗಳಲ್ಲಿ ಧಾಟಿ; ಕೆಲವುಗಳಲ್ಲಿ ಲಾಲಿತ್ಯ; ಕೆಲವುಗಳಲ್ಲಿ ಓಜಸ್ಸು, ಕೆಲವುಗಳಲ್ಲಿ ಕರುಣ ವೀರಾದಿ ರಸಪುಷ್ಟಿ ಮುಖ್ಯ; ಕೆಲವುಗಳಲ್ಲಿ ಭಕ್ತಿಯ ಆವೇಶ ದೊಡ್ಡದು. ಹೀಗೆಯೇ ಈ ನಾನಾ ಕಾವ್ಯಜಾತಿಗಳಲ್ಲಿ ಒಂದೊಂದಕ್ಕೂ ಒಂದೊಂದು ವಾಚಕವರ್ಗದ ಪುರಸ್ಕಾರವಿರುತ್ತದೆ. ವಾಚಕವರ್ಗದಲ್ಲಿ ನಾಲ್ಕಾರು ಮಟ್ಟಗಳುಂಟಷ್ಟೆ? ಒಂದೊಂದು ಅಂತಸ್ತಿನವರಿಗೆ ಒಂದೊಂದು ತೆರದ ರಾಮಾಯಣ ಗ್ರಂಥ ಮೆಚ್ಚಾಗಿದೆ

ಆದರೆ ವಾಲ್ಮೀಕಿಯ ಸ್ವಾರಸ್ಯ ಈ ಎಲ್ಲ ಕಾವ್ಯಜಾತಿಗಳ ಸ್ವಾರಸ್ಯಗಳಿಂದ ಬೇರೆಯಾದದ್ದಾಗಿ, ಆ ಎಲ್ಲದರ ಗುಣಾಂಶಗಳನ್ನೂ ಒಳಕೊಂಡದ್ದಾಗಿ, ತನ್ನದೇ ಆದ ಒಂದು ವಾಗ್ವೈಭವದಿಂದಲೂ ಪಾತ್ರಪ್ರತ್ಯಕ್ಷೀಕರಣ ಚಾತುರ್ಯದಿಂದಲೂ ಭಾವೋದಾತ್ತತೆಯಿಂದಲೂ ಅನುಪಮ ಪ್ರಭಾವಶಾಲಿಯಾಗಿದೆ. ಉಪಜೀವಿಕಾವ್ಯಗಳು (ಫೋಟೋ) ಪ್ರತಿಚ್ಛಾಯಾಬಿಂಬದಂತೆ ವಸ್ತುವಿನ ಒಂದೊಂದು ಭಾಗವನ್ನು ಅಥವಾ ಒಂದೊಂದು ದೃಶ್ಯಪ್ರಕಾರವನ್ನು, ಅಷ್ಟಿಷ್ಟು ಪ್ರತಿಬಿಂಬಿಸುತ್ತವೆ. ಮೂಲದ ಸಮಗ್ರಸ್ವರೂಪ ಫೋಟೋವಿನಲ್ಲಿ ಬಾರದು. ರಾಮಾಯಣದ ಸ್ವಾರಸ್ಯವನ್ನು ಸಂಪೂರ್ಣವಾಗಿ ಅನುಭವಿಸಬೇಕೆನ್ನುವವರು ವಾಲ್ಮೀಕಿವಿರಚಿತವಾದ ಮೂಲಗ್ರಂಥಕ್ಕೆ ಹೋಗಬೇಕು. ಸಂಸ್ಕೃತ ಭಾಷೆಯ ಪರಿಚಯ ನಾಕಷ್ಟಿಲ್ಲದವರು ಸಂಪೂರ್ಣ ಮೂಲಗ್ರಂಥದ ದೇಶಭಾಷೀಯ ಅನುವಾದಕ್ಕೆ ಹೋಗಬೇಕು.

ಸಾಮಾನ್ಯಜನರನ್ನು ವಾಲ್ಮೀಕಿಯ ಸನ್ನಿಧಿಗೆ ನೇರವಾಗಿ ಕೂಡಿದಷ್ಟು ಹತ್ತಿರ ಕರೆದುಕೊಂಡು ಹೋಗಬೇಕೆಂಬುದು ಪ್ರಕೃತಗ್ರಂಥದ ಉದ್ದೇಶ. ಸಂಸ್ಕೃತಮೂಲವನ್ನು ಸಾಮಾನ್ಯರಿಗೆ ದೊರಕಿಸುವ ಮಾರ್ಗಗಳಲ್ಲಿ ಅತ್ಯಂತ ಸಮೀಪದ್ದು ಪದವಿಭಾಗ—ಪ್ರತಿಪದಪದಾರ್ಥದ್ದು. ಆದರೆ ಅದರ ಉಪಯೋಗಬೇಕೆನ್ನುವವರು ಹೆಚ್ಚಿನ ಕಾಲವ್ಯಯಕ್ಕೆ ಸಿದ್ಧರಾಗಿರಬೇಕು. ಮತ್ತು ಹೆಚ್ಚು ತಾಳ್ಮೆಯೂ ನೆಮ್ಮದಿಯೂ ಚಿತ್ತಾವಧಾನವೂ ಉಳ್ಳವರಾಗಿರಬೇಕು.

ನಮ್ಮ ಇಂದಿನ ಅವಸರ ಜೀವನದ ಒತ್ತಡದಲ್ಲಿ ಅಂಥ ಜನ ತೀರಾ ಕಡಮೆ. ಆದ್ದರಿಂದ ಪ್ರತಿಪದಾರ್ಥದ ದಾರಿಯು ಈಗ ಬಹುಸಂಖ್ಯೆಯ ಜನಕ್ಕೆ ಪ್ರಯೋಜಕವಾಗಲಾರದು. ಅದನ್ನು ಬಿಟ್ಟರೆ ಸುಗಮವಾದ ದಾರಿ ಮೂಲ ಸಂಸ್ಕೃತದ ಕನ್ನಡ ವಾಕ್ಯಾನುವಾದದ್ದು. ಅದು ಪ್ರಕೃತಗ್ರಂಥದ್ದು. ಕೊಂಚಕೊಂಚವಾದರೂ ಸಂಸ್ಕೃತದ ಪರಿಚಯವಿರುವವರಿಗೆ ಈ ಅನುವಾದ ಗ್ರಂಥ ಅನೇಕವಿಧಗಳಲ್ಲಿ ಉಪಕಾರಕವಾಗುತ್ತದೆ ಅಂಥವರು ಕನ್ನಡ ವಾಕ್ಯಗಳನ್ನೋದುವಾಗ ಅಲ್ಲಲ್ಲಿ ಸಂಸ್ಕೃತಮೂಲದ ಕಡೆಗೂ ಕಣ್ಣನ್ನು ತಿರುಗಿಸಿದರೆ ಇಲ್ಲಿಗೂ ಅಲ್ಲಿಗೂ ಇರುವ ಸಾಮ್ಯವನ್ನು ಕಾಣುವಂತಾಗುತ್ತದೆ. ಅವರಿಗೆ ಮೂಲಗ್ರಂಥವು ಅತ್ಯಂತ ಸಮೀಪದ್ದಾಗುತ್ತದೆ ಸಂಸ್ಕೃತದ ಕಡೆ ತಿರುಗದೆ ಕನ್ನಡ ವಾಕ್ಯಭಾಗಮಾತ್ರವನ್ನೇ ಓದಿದರೂ ಅವರಿಗೆ ವಾಲ್ಮೀಕಿಯ ಪ್ರಸಾದ ತಪ್ಪದೆ ದೊರೆಯುತ್ತದೆ.

## ಗ್ರಂಥಸ್ವರೂಪ

ಈಗ ಗ್ರಂಥದ ಸ್ವರೂಪವನ್ನು ಕುರಿತು ಕೊಂಚ ವಿಚಾರಮಾಡೋಣ. ರಾಮಾಯಣವು ಗ್ರಂಥಗಳಲ್ಲಿ ಕಾವ್ಯವೆಂಬ ಸಾಹಿತ್ಯಜಾತಿಗೆ ಸೇರಿದ್ದೆಂಬ ಅಭಿಪ್ರಾಯವು ಅದರ ರಚನೆಯ ದಿನದಿಂದ ಲೋಕಾಂಗೀಕೃತವಾಗಿ ಬಂದಿದೆ

ರಾಮಾಯಣವು ಶಾಸ್ತ್ರಗ್ರಂಥವಲ್ಲ; ಚರಿತ್ರೆಯಲ್ಲ. ಅದು ಕಾವ್ಯ; ಆದರೆ ಶಾಸ್ತ್ರ-ಚರಿತ್ರೆಗಳೆರಡನ್ನೂ ಒಳಕೊಂಡಿರುವ ಕಾವ್ಯ; ಶಾಸ್ತ್ರವನ್ನು ತೊರೆದ ಕಾವ್ಯವಲ್ಲ, ಚರಿತ್ರೆಯ ಆಧಾರವಿಲ್ಲದ ಕಾವ್ಯವಲ್ಲ, ಕಟ್ಟುಕಥೆಯಲ್ಲ. ಅದು ವಾಸ್ತವಿಕಸಂಗತಿಗಳನ್ನು ಅಸ್ಥಿಪಂಜರವಾಗಿರಿಸಿಕೊಂಡು ದೃಢಾಂಗವಾಗಿ ಪುಷ್ಟವಾಗಿರುವ ಕಾವ್ಯ.

ಕಾವ್ಯವೆಂದರೆ ಏನು? 'ಮನುಷ್ಯನ ಹೃದಯದಲ್ಲಿ ಅವನಿಗೆ ಇಷ್ಟವೆನಿಸುವ ಅನುಭವವನ್ನು ಉಂಟುಮಾಡಿಸಬಲ್ಲ ವಾಕ್ಯಸಮುದಾಯವೇ ಕಾವ್ಯ. ಎದೆಯನ್ನು ತಳಮಳಗೊಳಿಸುವುದು ಕಾವ್ಯವೆಂಬ ವಾಙ್ನಿರ್ಮಾಣದ ಲಕ್ಷಣ. ಅದನ್ನು ಕೇಳಿದಾಗ ನಮ್ಮ ಒಳಗಡೆ ಏನೋ ಒಂದು ಆಗಬೇಕು. ಮನಸ್ಸಿನೊಳಗೆ ಆಹಾ! ಎನ್ನಿಸಬೇಕು, ಓಹೋ! ಎನ್ನಿಸಬೇಕು, ಅಯ್ಯೋ!

ಎನ್ನಿಸಬೇಕು, ಭೇಷ್! ಭಲಾ!! ಎನ್ನಿಸಬೇಕು. **ಹೀಗೆ** ಒಂದು ಕನಿಕರದ, ಅಥವಾ ಅಚ್ಚರಿಯ, ಅಥವಾ ರೋಷದ, ಅಥವಾ ಸಂತೋಷಾತಿಶಯದ ಕೂಗು ಎದೆಯೊಳಗಿನಿಂದ ಹೊರಡುವಂತೆ ಮಾಡುವ ಅನುಭವ ಯಾವುದೋ ಅದೇ ರಸ. ಅಂಥ ರಸವು ನಮ್ಮ ಅಂತರಂಗದಲ್ಲಿ ಒಸರುವಂತೆ ಮಾಡಬಲ್ಲ ವಾಕ್ಪ್ರಬಂಧ ಯಾವುದೋ ಅದು ಕಾವ್ಯ

ನಮ್ಮ ಪೂರ್ವಿಕರು ಕಾವ್ಯರಹಸ್ಯವನ್ನು ಕುರಿತು ತುಂಬಾ ಜಿಜ್ಞಾಸೆ ನಡಸಿದ್ದಾರೆ ವಾಕ್ಕಿನ ರೀತಿಯಿಂದ ಕಾವ್ಯವೆಂದು ಕೆಲವರು, ಅಲಂಕಾರದಿಂದ ಕಾವ್ಯವೆಂದು ಕೆಲವರು, ಧ್ವನಿಯಿಂದ ಕಾವ್ಯವೆಂದು ಕೆಲವರು, ವಕ್ರೋಕ್ತಿಯಿಂದ ಕಾವ್ಯವೆಂದು ಕೆಲವರು, ರಮಣೀಯಾರ್ಥದಿಂದ ಕಾವ್ಯವೆಂದು ಕೆಲವರು ವಾದಿಸಿದ್ದಾರೆ. ಆ ಎಲ್ಲ ವಾದಗಳೂ ಅಬದ್ಧಗಳೇನಲ್ಲ; ಆದರೆ ಏಕದೇಶೀಯಗಳು, ಆದದ್ದರಿಂದ ಅಪೂರ್ಣಗಳು ರಸವೆಂಬುದೇ ಕಾವ್ಯಸಾರವೆಂಬ ಮತವು ಲೋಕಜನಾಂಗೀಕೃತವಾಗಿದೆ. ಕಾವ್ಯವೆಂಬ ಮಾನುಷಸಂಪತ್ತು ಸರ್ವಲೋಕ ಸಾಮಾನ್ಯವಾದದ್ದು. ಅದು ಸಂಸ್ಕೃತ ಭಾಷೆಯೊಂದರ ವಿಶೇಷಸ್ವತ್ತೇನೂ ಅಲ್ಲ ಸೃಷ್ಟಿಯಲ್ಲಿ ಮನುಷ್ಯನ ಪ್ರಥಮ ಜನನ ಎಂದು ಆಯಿತೋ, ಎಲ್ಲಿ ಆಯಿತೋ, ಅದರೊಡನೆಯೇ ಅಂದು, ಅಲ್ಲಿ ಕಾವ್ಯಜನನವೂ ಆಯಿತು ಮನುಷ್ಯ ಎಂದರೆ ಮನಸ್ಸು; ಮನಸ್ಸು ಎಂದರೆ ಚಿಂತೆ ಸಂತನಗಳು; ಚಿಂತೆ ಸಂತನಗಳು ಮಾತಾಗಿ ಉಕ್ಕಿಹರಿದದ್ದೇ ಕಾವ್ಯ. ಮನುಷ್ಯ, ಮನಸ್ಸು, ಮಾತು—ಈ ಮೂರೂ ಅಂಟಿಕೊಂಡೇ ಇರತಕ್ಕವಾದದ್ದರಿಂದ ಲೋಕದಲ್ಲಿ ಎಲ್ಲೆಲ್ಲೂ ಮನುಷ್ಯ ಎಷ್ಟು ಹಳಬನೋ ಕಾವ್ಯವೂ ಅಷ್ಟು ಹಳೆಯದು. ಪ್ರಪಂಚದ ಎಲ್ಲ ಜನಾಂಗಗಳೂ, ಎಲ್ಲ ಭಾಷೆಗಳೂ ತಮ್ಮತಮ್ಮ ವಿದ್ಯಾಸಂಸ್ಕಾರದ ಮಟ್ಟಕ್ಕೆ ತಕ್ಕಂತೆ ಕಾವ್ಯ ಸಾಹಿತ್ಯವನ್ನು ಸಂಪಾದಿಸಿಕೊಂಡಿರುತ್ತವೆ. ಅಂಥ ಎಲ್ಲ ಸಾಹಿತ್ಯಗಳಲ್ಲಿಯೂ ಕಂಡುಬರುವ ಸರ್ವಸಾಮಾನ್ಯವಾದ ಕಾವ್ಯಲಕ್ಷಣವು ಮುಖ್ಯವಾಗಿ "ರಸ". ರಸವೆಂದರೆ ಬೇಕೆನಿಸುವ ರುಚಿ ("ರಸ ಆಸ್ವಾದನಸ್ನೇಹನಯೋಃ"=ಸವಿಯ ಬೇಕೆನಿಸುವುದು, ಇಷ್ಟವೆನಿಸುವುದು) ಅದೇ ಪಾಕದ ಷಡ್ರಸಗಳು. ಅದೇ ಸಂಗೀತದ ನಾದರಸ. ಅದೇ ಪ್ರಣಯಿಗಳ ಸರಸ ಅದೇ ಕ್ರೂರಿಗಳಲ್ಲಿಲ್ಲದ, ಧರ್ಮಿಷ್ಠರಲ್ಲಿರುವ, ದಯಾರಸ.

ಜನರೂಢಿಯಲ್ಲಿ "ರಸ" ಶಬ್ದವು ಹೇಗೆ ವಸ್ತುಸಾರವಾಚಕವೋ ವೇದದಲ್ಲಿಯೂ ಹಾಗೆಯೇ.

ರಸೋ ವೈ ಸಃ |
ರಸಗ್ಂ ಹ್ಯೇವಾಯಂ ಲಬ್ಧ್ವಾಽಽನನ್ದೀ ಭವತಿ ||

(ತೈತ್ತಿರೀಯೋಪನಿಷತ್ತು: ೨-೭)

ಪರಮಾತ್ಮನೇ "ರಸ". ಆದದ್ದರಿಂದಲೇ ರಸಾನುಭವದಿಂದ ಆನಂದವಾಗುತ್ತದೆ. ಯಾವುದು ಆನಂದ ಕೊಡಬಲ್ಲದೋ ಅದು ರಸ.

ವಾಲ್ಮೀಕಿ ತನ್ನ ಕಾವ್ಯದ ಮೇಲ್ಮೆಯನ್ನು ಸೂಚಿಸುವುದು "ರಸ" ಶಬ್ದದಿಂದ:

ರಸೈಃ ಶೃಂಗಾರಕರುಣಹಾಸ್ಯರೌದ್ರಭಯಾನಕೈಃ |
ವೀರಾದಿಭಿಶ್ಚ ಸಂಯುಕ್ತಂ ಕಾವ್ಯಮೇತದಗಾಯತಾಮ್ ||

(ಬಾಲಕಾಂಡ ೪-೯)

ಅಲಂಕಾರ, ಧ್ವನಿ, ವಕ್ರೋಕ್ತಿ ಮೊದಲಾದವುಗಳು ರಸೋತ್ಪಾದನೆಗೆ ಉಪಾಯ - ಉಪಕರಣಗಳು.

ಭೋಜನರಸ ನಾಲಗೆಗೆ ಹೇಗೋ, ಗಾನರಸ ಕಿವಿಗೆ ಹೇಗೋ, ರೂಪಲಾವಣ್ಯರಸ ಕಣ್ಣಿಗೆ ಹೇಗೋ ಕಾವ್ಯಕಲಾರಸ ಮನಸ್ಸಿಗೆ ಹಾಗೆ ಆಪ್ಯಾಯನಕಾರಿ. ಆದರೆ ಕಾವ್ಯರಸದಲ್ಲಿ ಒಂದು ವಿಶೇಷವುಂಟು: ಅದು ಮನಸ್ಸನ್ನು ಆಪ್ಯಾಯನಗೊಳಿಸುವುದರ ಜೊತೆಗೆ ಜೀವನವನ್ನೂ ಪರಿಷ್ಕಾರಗೊಳಿಸುತ್ತದೆ ದೇಹದ ಪಂಚೇಂದ್ರಿಯಗಳಿಗೆ ಲಭ್ಯಗಳಾದ ಶಬ್ದಸ್ಪರ್ಶರೂಪರುಚಿಗಂಧಾದಿ ರಸಗಳು ತತ್ತದಿಂದ್ರಿಯಮಾತ್ರಗ್ರಾಹ್ಯಗಳಾಗಿ ಸಕಲೇಂದ್ರಿಯ ಕೇಂದ್ರವಾದ ಮನಸ್ಸಿಗೆ ರಂಜಕಗಳಾಗುತ್ತವೆ. ಕಾವ್ಯಕಲಾರಸವಾದರೋ ಪಂಚೇಂದ್ರಿಯಪರಿಣಾಮಕ್ಷೇತ್ರವಾದ ಮನಸ್ಸಿಗೆ ರಂಜನೆ ಮಾಡುವುದಲ್ಲದೆ ಅಲ್ಲಿಂದ ಜೀವಕ್ಕೂ ವ್ಯಾಪಿಸಿ ಜೀವಸ್ವಭಾವದಮೇಲೆ ಪರಿಣಾಮಮಾಡಬಲ್ಲದ್ದಾಗುತ್ತದೆ. ಹೀಗೆ ಕಾವ್ಯಕ್ರಿಯೆ ಎರಡು ಘಟ್ಟಗಳಲ್ಲಿ ನಡೆಯುಬಹುದಾಗಿದೆ:

(೧) ಮನೋರಂಜನೆ,

(೨) ಜೀವೋತ್ಕರ್ಷ.

ಯಾವ ಕಾವ್ಯವು ಮೊದಲನೆಯ ಕ್ರಿಯೆಯಿಂದ ಮುಗಿಯದೆ ಎರಡನೆಯ ಕ್ರಿಯೆಗೂ ತೊಡಗುತ್ತದೆಯೋ ಅದು ಮಹಾಕಾವ್ಯವಾಗುತ್ತದೆ. ಅದರಲ್ಲಿ ಮನೋರಂಜನೆಯ ಜೊತೆಗೆ ಜೀವವ್ಯಾಪನೆ ಎಷ್ಟೆಷ್ಟು ಹೆಚ್ಚಾಗಿರುತ್ತದೆಯೋ ಅಷ್ಟಷ್ಟು ಅದು ಮಹಾಕಾವ್ಯ. ಕಾವ್ಯದ ಮಹತ್ತ್ವವು ಅದರ ಜೀವೋದ್ಧಾರಸಾಮರ್ಥ್ಯದಿಂದ ಬರತಕ್ಕದ್ದು. ಅಂಥಾ ಸಾಮರ್ಥ್ಯದ ಅತಿಶಯವು ಶ್ರೀಮದ್ರಾಮಾಯಣದ ಮಹಿಮೆ.

ಜೀವೋದ್ಧಾರವೆಂದರೆ ನೀತಿಪ್ರಭಾವ ಆದರೆ ಕಾವ್ಯದ ನೀತಿಪ್ರಭಾವವು ಪ್ರತ್ಯಕ್ಷಬೋಧನೆಯಿಂದಲ್ಲ, ಅಪ್ರತ್ಯಕ್ಷ ಹೃದಯಪರಿವರ್ತನೆಯಿಂದ. ಇದು ಕಾವ್ಯದ ವಿಶೇಷಶಕ್ತಿ ಪ್ರತ್ಯಕ್ಷೋಪದೇಶವು ನೀತಿಶಾಸ್ತ್ರದ ಕಾರ್ಯ. ಶ್ರೀಮದ್ರಾಮಾಯಣ ನಮಗೆ ಹಾಗೆ ಉಪದೇಶಮಾಡಹೊರಟಿಲ್ಲ; ಅದು ನಮಗೆ ಕಥೆ ಹೇಳುತ್ತದೆ. ಆ ಮನೋಹರವಾದ ಕಥೆಯನ್ನು ಕೇಳಿ ಅದರ ಸಂಗತಿಗಳನ್ನು ನಮ್ಮನಮ್ಮ ಅಂತರಂಗದಲ್ಲಿ ಅನುಭವಿಸಿದಾಗ ಸದಸದ್ವಿವೇಕವನ್ನು ನಮಗೆ ನಾವಾಗಿ ಮಾಡಿಕೊಳ್ಳುವಂತಾಗುತ್ತದೆ. "ರಾಮನನ್ನು ಪೂಜಿಸಿರಿ," "ಸೀತೆಯನ್ನು ಸೇವಿಸಿರಿ," "ಲಕ್ಷ್ಮಣನನ್ನು ಅನುಕರಿಸಿರಿ," "ಆಂಜನೇಯನನ್ನು ಅವಲಂಬಿಸಿರಿ"—ಎಂದು ವಾಲ್ಮೀಕಿಗಳು ನಮಗೆ ಸ್ಪಷ್ಟ ಬೋಧನೆ ಮಾಡಿಲ್ಲ. ಆದರೆ ವಾಲ್ಮೀಕಿಗಳ ಆಖ್ಯಾನವನ್ನು ನಾವು ಕೇಳಿದಾಗ ತತ್ಕಥಾನಾಯಕರು ಎಂಥ ಮಹಾನುಭಾವರು, ಎಷ್ಟು ಅನುಕರಣಾರ್ಹರು—ಎಂದು ನಮನಮಗೇ ಅನ್ನಿಸುತ್ತದೆ. ಈ ಅಂತಃಕರಣದ ಸ್ವತಃಪ್ರವರ್ತಿತ ಸದ್ಭಾವಪ್ರವಾಹವೇ ಮಹಾಕಾವ್ಯದ ಪರಮೋಪಕಾರ "ಸತ್ಯಂ ವದ", "ಧರ್ಮಂ ಚರ"—ಎಂದು ಸ್ಫುಟವಚನದಿಂದ ವಿಧಿಸುವುದು ವೇದ. ಅದು ಪ್ರಭುವಿನಂತೆ ಆಜ್ಞೆ ಮಾಡಬಲ್ಲದ್ದು ಕಾವ್ಯದ ದಾರಿ ಆಜ್ಞೆಯದಲ್ಲ, ಅನುನಯದ್ದು. ರಾಮನ ಸತ್ಯಶ್ರದ್ಧೆ ಎಷ್ಟು ಚೆನ್ನ! ಸೀತೆಯ ಪತಿನಿಷ್ಠೆ ಎಷ್ಟು ಚೆನ್ನ! ಎಂದು ಯಾರ ಪ್ರೇರಣೆಯೂ ಇಲ್ಲದೆ ನಮ್ಮಷ್ಟಕ್ಕೆ ನಾವೇ ಹೇಳಿಕೊಳ್ಳುವಂತೆ ಮಾಡುತ್ತದೆ ವಾಲ್ಮೀಕಿಯ ಕಾವ್ಯ. ಆದದ್ದರಿಂದಲೇ ಕಾವ್ಯವು ಪ್ರೇಯಸಿಯ ಮಾತಿನಂತೆ ಅಪ್ರಯತ್ನಪಟುವಾದ ಹಿತೋಕ್ತಿಯೆಂದು ಪೂರ್ವಿಕವಾಕ್ಯ :

ಕಾಂತಾಸಂಮಿತತಯೋಪದೇಶಯುಜೇ ||

**(ಕಾವ್ಯಪ್ರಕಾಶ: ೧–೨)**

ರಾಮಾಯಣವು ಶಾಸ್ತ್ರವಲ್ಲ, ಚರಿತ್ರೆಯೂ ಅಲ್ಲ—ಎಂದು ಮೇಲೆ ಹೇಳಿದೆ ಈ ವಿಷಯವ್ಯವಚ್ಛೇದನೆಯೂ ಮುಖ್ಯವಾದದ್ದು. ಪ್ರಕೃತದಲ್ಲಿ ಶಾಸ್ತ್ರವೆಂದರೆ ವಿಶೇಷವಾಗಿ (೧) ಧರ್ಮಶಾಸ್ತ್ರ—ಮನುಸ್ಮೃತಿ ಮೊದಲಾದವು, (೨) ತತ್ತ್ವಶಾಸ್ತ್ರ—ಸಾಂಖ್ಯ ವೇದಾಂತಾದಿಗಳು, (೩) ಭೌತಶಾಸ್ತ್ರ—ಖಗೋಲವಿಜ್ಞಾನ, ವೈದ್ಯವಿಜ್ಞಾನ, ಫಿಸಿಕ್ಸ್, ಕೆಮಿಸ್ಟ್ರಿ, ಬಯಾಲಜಿ—ಇಂಥವು. ಚರಿತ್ರೆಯೆಂದರೆ ಇಂಗ್ಲಿಷಿನ ಹಿಸ್ಟರಿ (History) ದೇಶವೃತ್ತಾಂತ, ವ್ಯಕ್ತಿಮನುಷ್ಯನ ಜೀವನವೃತ್ತಾಂತ, ಸರಕಾರದ ವರದಿಗಳು ವೃತ್ತಪತ್ರಿಕೆಗಳ ವರದಿಗಳು—ಇಂಥವು ಶಾಸ್ತ್ರಚರಿತ್ರೆಗಳ ಕಾರ್ಯಕ್ಷೇತ್ರವು ಬುದ್ಧಿ ಕಾವ್ಯದ ಕಾರ್ಯಕ್ಷೇತ್ರವು ಹೃದಯ ಇದು ಮೊದಲನೆಯ ಭೇದ. ಎರಡನೆಯದಾಗಿ, ಶಾಸ್ತ್ರ-ಚರಿತ್ರೆಗಳು ಬಹಿಷ್ಪ್ರಮಾಣಗಳನ್ನು ಅವಲಂಬಿಸಿಕೊಂಡಿರುತ್ತವೆ. ವಿಜ್ಞಾನಶಾಸ್ತ್ರಗಳು ತೂಕ, ಗಾತ್ರ, ಕಾರ್ಯಕಾರಣಸಂಬಂಧ, ಪ್ರಯೋಗಫಲಿತಾಂಶ ಮೊದಲಾದ ಪರೀಕ್ಷೆಗಳಿಗೆ ಅಧೀನವಾಗಿವೆ. ಚರಿತ್ರೆಯು ಕೋರ್ಟಿನಂತೆ ತಿಥಿ, ತಾರೀಖು, ಘಳಿಗೆ, ಸ್ಥಲ, ಸಾಕ್ಷ್ಯ, ದಾಖಲೆ—ಇಂಥ ಹೊರ ರುಜುವಾತುಗಳನ್ನು ಅಪೇಕ್ಷಿಸುತ್ತದೆ. ಕಾವ್ಯಕ್ಕೆ ಬೇಕಾದದ್ದು ಬಹಿರಂಗಪ್ರಮಾಣವಲ್ಲ, ಅಂತರಂಗ ಪ್ರಮಾಣ.

ರಾಮಾಯಣವು ಚರಿತ್ರೆಯಲ್ಲ, ಆದರೆ ಚರಿತ್ರಾತ್ಮಕವಾದ ಕಾವ್ಯ. ಒಂದೇ ವಾಸ್ತವಿಕ ಘಟನೆಯನ್ನು ಬಹಿರಾಕಾರದ ದೃಷ್ಟಿಯಿಂದ ನೋಡಿದರೆ ಅದು ಚರಿತ್ರೆ-ಕೇವಲ ಚರಿತ್ರೆ, History; ಅದನ್ನು ಅದರ ಹೃದಯಪರಿಣಾಮದ ದೃಷ್ಟಿಯಿಂದ ನೋಡಿದರೆ ಅದು ಕಾವ್ಯ-ಕಲ್ಪಿತಕಥನಕಾವ್ಯಕ್ಕಿಂತ ಹೆಚ್ಚಿನ ಪ್ರಭಾವವುಳ್ಳ ಕಾವ್ಯ. ರಾಮಾಯಣವು ಚರಿತ್ರೆಯನ್ನು ಅಂತರ್ಗತ ಮಾಡಿಕೊಂಡಿರುವ ಕಾವ್ಯವಾದದ್ದರಿಂದಲೇ ಅದು ವಾಸ್ತವಿಕಪ್ರಮಾಣವೆಂಬಂತೆ ಜನಾಂಗೀಕಾರವನ್ನು ಸಂಪಾದಿಸಿಕೊಂಡಿದೆ. ನಮಗೆ ಅದು ಚಾರಿತ್ರಿಕ ಸಾಮಗ್ರಿ ಹೌದು; ಅದಕ್ಕಿಂತ ಹೆಚ್ಚಾಗಿ ಅದು ಹೃದಯಸಂಸ್ಕಾರ ಸಾಮಗ್ರಿ. ಅದು ದೇಶಚರಿತ್ರೆ ಹೌದು; ಅದಕ್ಕಿಂತ ಹೆಚ್ಚಾಗಿ ಅದು ಜನತಾಂತರಾತ್ಮ ಚರಿತ್ರೆ.

ಕಾವ್ಯವ್ಯಾಸಂಗಿಯ ಗಮನದಲ್ಲಿರಬೇಕಾದ ಎರಡು ತತ್ತ್ವಸೂತ್ರಗಳಿಗೆ ಇಲ್ಲಿ ತಕ್ಕ ಅವಕಾಶ ಕಾಣುತ್ತದೆ:

(೧) ಕಥಾವಿವರಗಳಲ್ಲಿ ಬಂದ ಸಂಶಯಗಳನ್ನು ಉದ್ದೇಶಪೂರ್ವಕವಾಗಿ ಅನಿರ್ಣಯದಲ್ಲಿ (ಅಮಾನತ್ತಿನಲ್ಲಿ) ಇರಿಸಿರಬೇಕು ("Willing suspension of disbelief").

(೨) ಪದವಾಕ್ಯಗಳಿಗೆ ಅರ್ಥಮಾಡುವಲ್ಲಿ ಲಕ್ಷ್ಯಾರ್ಥ ಮುಖ್ಯ; ಶಬ್ದಾರ್ಥ ಅಷ್ಟು ಮುಖ್ಯವಲ್ಲ.

ರಾವಣನಿಗೆ ತಲೆ ಹತ್ತು ಇದ್ದದ್ದು ನಿಜವೆ? ಅವನ ಫೋಟೋಗ್ರಾಫ್ (ಛಾಯಾಪ್ರತಿಬಿಂಬ) ತೋರಿಸಿದರೆ ನಂಬಿಯೇವು — ಎನ್ನಲಾಗದು. ರಾಮಾಯಣದಮಟ್ಟಿಗೆ ರಾವಣನಿಗೆ ಹತ್ತು ತಲೆಯಿದ್ದದ್ದನ್ನು ನಂಬಬೇಕು. ಕಾವ್ಯದಲ್ಲಿ ಮುಖ್ಯವಾದದ್ದು ಬಹಿರಂಗಸಂಗತಿಯಲ್ಲ, ಅಂತರಂಗಸಂಗತಿ. ಬಹಿರಂಗವು ಸಂಕೇತ ಮಾತ್ರ. ರಾವಣನು ಮಹಾಬಲಿಷ್ಠ, ಅತಿಶಯ ಪರಾಕ್ರಮಿ—ಎಂದು ತಿಳಿಸುವುದು ಕವಿಯ ತಾತ್ಪರ್ಯ. ಅದನ್ನು ಸೂಚಿಸಲು ದಶಶಿರಸ್ಸಿನ ಉಪಾಯ. ಇಲ್ಲಿ ಹತ್ತು ಎಂದರೆ ಒಂಭತ್ತು-ಮತ್ತು-ಒಂದು ಎಂದಾಗಲಿ, ಹನ್ನೊಂದು-ಮೈನಸ್-ಒಂದು ಎಂದಾಗಲಿ ಸಿದ್ಧಾಂತವಲ್ಲ. ಒಬ್ಬ ಸಾಮಾನ್ಯಮನುಷ್ಯನ ಶಕ್ತಿಯನ್ನು ನಾಲ್ಮಡಿ, ಆರ್ಮಡಿ ಮಾಡಿದರೆ ಎಷ್ಟಾಗಬಹುದೋ ಅಷ್ಟು ಶಕ್ತಿಯನ್ನು ರಾವಣನೊಬ್ಬನೇ ಪಡೆದಿದ್ದನೆಂದು ಗ್ರಹಿಸಬೇಕಾದದ್ದು ಹೀಗೆ ಹೊರವರ್ಣನೆಯ ಒಳತಾತ್ಪರ್ಯವನ್ನು ಗ್ರಹಿಸದಿದ್ದರೆ ದಶಕಂಠತ್ತ್ವ, ಕಪಿಯ ಸಂಭಾಷಣೆ, ಸಮುದ್ರಲಂಘನ— ಇಂಥಾ ಬಹಿರ್ಘಟನೆಗಳ ಅಸಾಮಂಜಸ್ಯವೇ ದೊಡ್ಡದಾಗಿ, ಕಾವ್ಯದ ಅಂತರಂಗಾನುಭವವು ನಮಗೆ ದುರ್ಲಭವಾಗುತ್ತದೆ. ಮಹಾಕಾವ್ಯದ ಬಳಿ ಹೋಗುವವರು ತಾಯ ಬಳಿ ಹೋಗುವ ಎಳೆಮಕ್ಕಳಂತೆ ಮನಸ್ಸುಮಾಡಿಕೊಂಡು ಹೋಗಬೇಕು. ಅಂಥ ಅಕೃತ್ರಿಮ, ಅಂಥ ಸರಳತೆ, ಅಂಥ ಅವಿಶಂಕೆ, ಅಂಥ ಅವಿತರ್ಕ, ಅಂಥ ಸಿದ್ಧವಿಶ್ವಾಸ—ಇವು ಇಲ್ಲದವರಿಗೆ ಕಾವ್ಯಮಾತೆ ಒಲಿಯಳು.

ಶಬ್ದಾರ್ಥಗ್ರಹಣದಲ್ಲಿಯೂ ಹಾಗೆಯೇ ಕವಿಯ ತಾತ್ಪರ್ಯವನ್ನು ಮೊದಲು ಗುರಿಯಲ್ಲಿರಿಸಿಕೊಂಡು ಬಳಿಕ ಅದಕ್ಕೆ ವಾಕ್ಯವನ್ನು ಅನ್ವಯಿಸಬೇಕು. ಆ ಗುರಿಯನ್ನು ಮರೆತ ಯುಕ್ತಿಚಮತ್ಕಾರಗಳ ವ್ಯಾಖ್ಯಾನಗಳು

ರಸಾಭಾಸಕ್ಕೆ ಕಾರಣವಾಗುತ್ತವೆ. ಕವಿಯು ಕಥೆ ಹೇಳುವ ಉತ್ಸಾಹಾವೇದಲ್ಲಿ ಮಾತುಗಳನ್ನು ರಾಶಿ ರಾಶಿಯಾಗಿ ಸುರಿಯುತ್ತಾನೆ. ಒಂದೊಂದ ಮಾತನ್ನೂ ತೂಕಮಾಡಿ ಬಣ್ಣ ನೋಡಿ ಪ್ರಯೋಗಿಸಲು ಅವನಿಗೆ ವ್ಯವಧಾನವಿಲ್ಲ ಅವನು ಬಿಡುವು ತೆಗೆದುಕೊಂಡರೆ ಕಾವು ಆರಿಹೋದೀತು. ವೇಗಧೋರಣೆಗಳು ಕವಿಕರ್ಮದಲ್ಲಿ ಅನಿವಾರ್ಯ ಮಾತ್ರವೇ ಅಲ್ಲ, ಅಪೇಕ್ಷಣೀಯವೂ ಆಗುತ್ತದೆ. ಅದರ ರಭಸದಲ್ಲಿ ನಾವು ಅಕ್ಷರಕ್ಷರವನ್ನೂ ಬೇರೆಬೇರೆ ಕಿತ್ತು ಕೆದಕಿ ನೋಡತಕ್ಕದ್ದಲ್ಲ ಎಷ್ಟೋ ಮಂದಿ ವ್ಯಾಖ್ಯಾನಕಾರರಲ್ಲಿರುವ ದೋಷ ಇದು ಚಮತ್ಕಾರ ಅತಿಯಾದರೆ ರಸಾಸ್ವಾದನೆ ತಪ್ಪಿಹೋಗುತ್ತದೆ. ವ್ಯಾಖ್ಯಾನದಿಂದ ರಸಪೋಷಣೆಯಾಗಬೇಕೇ ಹೊರತು ರಸಭಂಗವಾಗಬಾರದು ತಾರ್ಕಿಕನು ಕವಿಯ ಮೇಲೆ ಕೈಮಾಡಬಾರದು.

ಶ್ರೀಮದ್ರಾಮಾಯಣವು ಕಾವ್ಯಮಾತ್ರವಲ್ಲ—ಆದಿಕಾವ್ಯ ಅದರ ಆದಿತ್ವವು ಕಾಲಮಾನಮಾತ್ರದ್ದಲ್ಲ, ಗುಣಾಧಿಕ್ಯದಿಂದಲೂ ಸಿದ್ಧವಾದದ್ದು. ಪ್ರಪಂಚದ ಸಾಹಿತ್ಯಚರಿತ್ರೆಯಲ್ಲಿ ಇದು ಒಂದು ಅಚ್ಚರಿಯ ಸಂಗತಿ. ಪ್ರಪಂಚದಲ್ಲಿ ನಮಗೆ ದೊರೆತಿರುವ ಮೊಟ್ಟಮೊದಲನೆಯ ಕಾವ್ಯವೇ ಕಾವ್ಯದ ಸಲ್ಲಕ್ಷಣಗಳಿಗೆ ಆದರ್ಶವೂ ಆಗಿದೆ. ಪ್ರಪಂಚದ ಇತರ ವಸ್ತುಗಳ ಚರಿತ್ರೆಯಲ್ಲಿ ಪ್ರಥಮಕೃತಿಗೂ ಆಮೇಲಿನದಕ್ಕೂ ನಡುವೆ ಒಂದು ಪರಿಷ್ಕಾರಕ್ರಮ ಕಂಡುಬರುತ್ತದೆ. ಮೊದಮೊದಲಿನ ಕೃತಿ ಒರಟಾಗಿ ಪೆಡಸಾಗಿರುತ್ತದೆ, ಆಮೇಲಿನದರಲ್ಲಿ ನಯ ನಾಜೂಕುಗಳು ಕಾಣುತ್ತವೆ. ಕೃತಿಕಾರನ ಕುಶಲ ದಿನೇದಿನೇ ಉತ್ತಮವಾಗುತ್ತದೆ. ಇಂಗ್ಲಿಷ್ ಸಾಹಿತ್ಯದ ಚರಿತ್ರೆಯಲ್ಲಿ ಇ ಕಾಣಬರುತ್ತದೆ. ಜಾನ್ಸನ್ನಿನ ಕಾಲದ (1649-1703) ವಚನಶೈಲಿಯನ್ನು ಮೊನ್ನೆ ತಾನೆ ತೀರಿಕೊಂಡ ಸಾಮರ್ಸೆಟ್ ಮಾಮ್ ಕಾಲದ ಶೈಲಿಯೊಡ ಹೋಲಿಸಿನೋಡಬಹುದು. ಬರ್ನ್ಸ್ ಕವಿಯ ಹಿಂದಣ ದಿನಗಳ ಜನಗೀ ಗಳನ್ನು ಟೆನ್ನಿಸನ್ನನ ಪದ್ಯಗಳೊಡನೆ ಹೋಲಿಸಿನೋಡಬಹುದು. ಅ ಒಂದು (Evolution) ಎವೊಲ್ಯೂಷನ್ ಎಂಬ ಪರಿಷ್ಕಾರಾನುಕ್ರಮ ಕ ಬರುತ್ತದೆ. ಸಂಸ್ಕೃತದಲ್ಲಿ ಹಾಗಾಗಿಲ್ಲವೆ? ಮೊದಮೊದಲಿನದು ವಾಗಿದ್ದು ಕಾಲಾನಂತರ ಬಂದದ್ದರಲ್ಲಲ್ಲವೆ ಉತ್ತಮದಶೆ ತೋರಬೇಕ ಸಂಸ್ಕೃತದಲ್ಲಿ ಹಾಗಾಗದೆ ಪ್ರಪ್ರಥಮಸೃಷ್ಟಿಯೇ ಸರ್ವೋತ್ಕೃಷ ಯಾಯಿತೆ? ಇಲ್ಲಿ ಒಂದು ವಿಶೇಷಸಂದರ್ಭವಿದೆ, ಗಮನಿಸಬೇಕು.

ಇತರ ಭಾಷೆಗಳಲ್ಲಿ ಜನಪದಸಾಹಿತ್ಯ ಯಾವ ಕೆಲಸ ಮಾಡಿತ್ತೋ ಅದನ್ನು ಸಂಸ್ಕೃತದಲ್ಲಿ ವೇದವಾಙ್ಮಯ ಮಾಡಿತ್ತು. ಇಂಗ್ಲಿಷಿನಲ್ಲಿ ಜನ ಸಾಮಾನ್ಯದ ವಾಕ್ಚತುರರು ಹಾಡು ಕಟ್ಟಿ, ಲಾವಣಿ ಹೆಣೆದು, ಗಾದೆ ಜೋಡಿಸಿ, ಭಾಷೆಯನ್ನು ಪಳಗಿಸಿದರು. ಹಾಗೆ ಕುದುರಿದ್ದ ಮೂಲದ್ರವ್ಯ ವನ್ನು ಆ ತರುವಾಯ ಬಂದ ಸಾಹಿತ್ಯಕರ್ತರು ಉಪಯೋಗಿಸಿಕೊಂಡು ತಮ್ಮ ನಯದ ಕೆಲಸವನ್ನು ಮುಂದುವರಿಸಿದರು. ಸಂಸ್ಕೃತದಲ್ಲಾದರೋ ಭಾಷೆಯನ್ನು ಪಳಗಿಸುವ ಕೆಲಸ ವೈದಿಕ ಋಷಿಗಳಿಂದ ನಡೆದಿತ್ತು ಜನದ ಮನೋಬುದ್ಧಿಗಳನ್ನು ಸಂಸ್ಕರಿಸುವ ಕಾರ್ಯವನ್ನೂ ಅವರು ನಡಸಿದ್ದರು. ವಾಲ್ಮೀಕಿಗಳ ಕೈಗೆ ಸಿದ್ಧವಾಗಿ ವೇದದ ಅನುಷ್ಟುಭ್, ತ್ರಿಷ್ಟುಭ್ ಮೊದಲಾದ ಛಂದೋಬಂಧಗಳು ಲಭ್ಯವಾಗಿದ್ದವು. ದಶರಥನ ಆಸ್ಥಾನದಲ್ಲಿ ವಂದಿಮಾಗಧರೂ ಗಾಯಕರೂ ಇದ್ದರು ಋಷ್ಯಶೃಂಗಪ್ರಕರಣದಲ್ಲಿ ಗಣಿಕೆಯರ ಪ್ರಶಂಸೆಯೇ ಉಂಟಲ್ಲ! ಅವರು ಹಾಡಲಿಲ್ಲವೆ? ಆ ಕಾಲಕ್ಕೇ ಗೇಯಕೃತಿಗಳಿದ್ದಿರಬೇಕು. ಅದೆಲ್ಲ ವಾಲ್ಮೀಕಿಗೆ ಮೂಲಸಾಮಗ್ರಿಯಾಯಿತು. ಹಾಗೆಯೇ ಒಂದು ಸುಸಂಸ್ಕೃತ ಜನಸಮಾಜವೂ ವಾಲ್ಮೀಕಿಯ ಕಾವ್ಯವನ್ನು ಆದರಿಸಲು ಸಿದ್ಧವಾಗಿತ್ತು. ಆ ಕಾಲಕ್ಕೆ ಹಿಂದೆ ಆಗದೆ, ಇನ್ನೂ ಆಗಲು ಉಳಿದಿದ್ದ ಸಾಹಿತ್ಯರಚನೆಯೆಂದರೆ ಒಂದು ಸಮಗ್ರಕಾವ್ಯ. ಹಾಡಿನ ರೂಪದ, ಗಾದೆಗಳ ರೂಪದ, ಪ್ರಾಸ್ತಾವಿಕ ಸಾಮತಿಗಳ ರೂಪದ ಖಂಡಕಾವ್ಯಗಳು, ಥವಾ ಕಾವ್ಯಖಂಡಗಳು ವಾಲ್ಮೀಕಿಪೂರ್ವದಲ್ಲಿ ಇದ್ದಿರಬೇಕು. ಪೂರ್ಣ ಪದ ಕಾವ್ಯ ಆಗಿರಲಿಲ್ಲ. ಹಾಗೆ ಸಿದ್ಧವಾಗಿ ಬಂದಿದ್ದ ಭಾಷಾಸಾಮಗ್ರಿ ದ ಸರ್ವಾಂಗಪರಿಪೂರ್ಣವೂ ಸರ್ವಾಂಗಸುಂದರವೂ ಆದ ಒಂದು ಗ್ರಕಾವ್ಯವನ್ನು ಪ್ರಥಮವಾಗಿ ನಿರ್ಮಿಸಿದ ಯಶಸ್ಸು ವಾಲ್ಮೀಕಿಯದು.

## ವೇದವು ಕಾವ್ಯವಲ್ಲವೆ?

ಕಾವ್ಯಲಕ್ಷಣಗಳು ವೇದದಲ್ಲಿ ಯಥೇಷ್ಟವಾಗಿವೆ. ಚಿತ್ತಾಕರ್ಷಕವಾದ ಶನ, ವರ್ಣನಾವೈಖರಿ, ಛಂದೋಧಾಟಿ, ಇವೆಲ್ಲಕ್ಕಿಂತ ಹೆಚ್ಚಾಗಿ ಹೃದಯದ ಆರ್ತಸ್ವರ—ಇವು ವೇದದ ಸಂಹಿತಾಧ್ಯಾಯಗಳಲ್ಲಿರು ವ ಕಾವ್ಯದಲ್ಲಿಯೂ ಇರಲಾರವೆಂದು ಹೇಳಬಹುದು. ಆದರೂ

ವೇದವು ಕಾವ್ಯವಾಗದು. ಏಕೆಂದರೆ ಕಾವ್ಯದಲ್ಲಿ ಕೇಂದ್ರಸ್ಥಾನ ಮನುಷ್ಯನದು, ವೇದದಲ್ಲಿ ಕೇಂದ್ರಸ್ಥಾನ ದೇವತೆಯದು ಸಮಸ್ತ ಜಗತ್ತಿಗೂ ಯಾವ ರಹಸ್ಯಚೈತನ್ಯವು ನಿಯಾಮಕವೋ, ಹಾಗೆಯೇ ಪರಿಪಾಲಕವೋ—ಯಾವುದರ ನಿಗ್ರಹಾನುಗ್ರಹಶಕ್ತಿಗಳು ಮನುಷ್ಯಜೀವನವನ್ನು ಆಗಿಸುತ್ತವೆಯೋ, ಹೋಗಿಸುತ್ತವೆಯೋ—ಆ ಸರ್ವಶಕ್ತಿಸ್ವರೂಪನಾದ ಈಶ್ವರನೇ ವೇದದಲ್ಲಿ ಕಥಾನಾಯಕ. ಮನುಷ್ಯನು ಅಲ್ಲಿ ಶರಣಾಗತನಾದ ಉಪಜೀವಿ. "ಹೇ ಇಂದ್ರ, ನನಗೆ ಮಳೆಬೆಳೆಗಳನ್ನು ಕೊಡು; ಹೇ ಅಗ್ನಿ, ನನ್ನ ಮನೆ ಮಂದಿಯನ್ನು ಕಾಪಾಡು. ಹೇ ವರುಣ, ನನ್ನ ಪಾಪಗಳನ್ನು ಕ್ಷಮಿಸು; ಹೇ ರುದ್ರ, ನನ್ನಲ್ಲಿ ಕೋಪಮಾಡಬೇಡ, ನನ್ನ ಶತ್ರುಗಳಲ್ಲಿ ಕೋಪ ತೋರು" ಈ ಪ್ರಕಾರ ಬೇಡುವವನು ಮನುಷ್ಯ ಅವನ ಆ ಬೇಡಿಕೆಯ ಸಮಯದಲ್ಲಿ ಅವನು ನಾನಾ ದೇವತೆಗಳ ಮಹಿಮೆಗಳನ್ನು ಬಗೆಬಗೆಯಾಗಿ ಬಣ್ಣಿಸುತ್ತಾನೆ. ಹೀಗೆ ವೇದದಲ್ಲಿ ಮನುಷ್ಯನ ಆವೇಗಾಕಾಂಕ್ಷೆಗಳು ನಿಮಿತ್ತ, ಭಗವತ್ಪ್ರಸಾದವು ಉದ್ದೇಶ ವೇದದಲ್ಲಿ ದೈವವು ಮುಖ್ಯ, ಮನುಷ್ಯನು ಪ್ರಾಸಂಗಿಕ. ಕಾವ್ಯದಲ್ಲಾದರೋ ಮನುಷ್ಯನು ಮುಖ್ಯ, ದೈವವು ಪ್ರಾಸಂಗಿಕ. ಹೀಗೆ ವೇದವೂ ಕಾವ್ಯವೂ ಪರಸ್ಪರ ಪರಿಪೂರಕಗಳು

ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ |
ಬಿಭೇತ್ಯಲ್ಪಶ್ರುತಾದ್ವೇದೋ ಮಾಮಯಂ ಪ್ರಹರೇದಿತಿ ||

( ಮಹಾಭಾರತ, ಆದಿಪರ್ವ. ೧-೨೬೪ )

ಇತಿಹಾಸಾದಿ ಮಾನುಷಸಾಹಿತ್ಯಪ್ರಸಂಗದಿಂದ ವೇದವಿದ್ಯೆಗೆ ಪುಷ್ಟಿ ಬರುತ್ತದೆ. ಕಾವ್ಯಾನುಭವವಿಲ್ಲದವನು ತನ್ನನ್ನು ಹೊಡೆದಾನೆಂದು ವೇದಕ್ಕೆ ಹೆದರಿಕೆಯಂತೆ! ಎಂದರೆ, ವೇದದ ಅರ್ಥವನ್ನು ಸರಿಯಾಗಿಯೂ ಸಮಗ್ರವಾಗಿಯೂ ತಿಳಿಯಬೇಕೆನ್ನುವವನು ಲೋಕಪರಿಜ್ಞಾನವನ್ನು ಸಂಪಾದಿಸಿಕೊಂಡಿರಬೇಕು. ಲೋಕಾನುಭವಕ್ಕೂ ಲೋಕಪರಿಜ್ಞಾನಕ್ಕೂ ಸಾಧನವು ಸತ್ಕಾವ್ಯ ಯಾರು ಶ್ರೀಮದ್ರಾಮಾಯಣಪ್ರಸಂಗದಿಂದ ಲೋಕಜೀವನದ ಮರ್ಮಗಳನ್ನು ಕಂಡಿರುತ್ತಾನೋ ಅವನಿಗೆ ವೇದಾರ್ಥವು ಸುಲಭಲಭ್ಯವಾಗುತ್ತದೆ.

# ಎರಡು ದೃಷ್ಟಿಗಳು

ಶ್ರೀಮದ್ರಾಮಾಯಣದ ವಿಷಯದಲ್ಲಿ ಎರಡು ದೃಷ್ಟಿಗಳು ಸಾಧ್ಯವಾಗಿವೆ

ವೇದವೇದ್ಯೇ ಪರೇ ಪುಂಸಿ ಜಾತೇ ದಶರಥಾತ್ಮಜೇ |
ವೇದಃ ಪ್ರಾಚೇತಸಾದಾಸೀತ್ ಸಾಕ್ಷಾದ್ರಾಮಾಯಣಾತ್ಮನಾ ||

(೧) ಮಹಾವಿಷ್ಣುವು ಶ್ರೀರಾಮನಾಗಿ ಮನುಷ್ಯರೂಪದಲ್ಲಿ ಅವತರಿಸಿದನು; ತದನುಸಾರವಾಗಿ ವೇದವು ರಾಮಾಯಣರೂಪದಲ್ಲಿ ಅವತರಿಸಿತು

(೨) ಶ್ರೀರಾಮನು ಮನುಷ್ಯನಾಗಿ ಹುಟ್ಟಿ ಮಹಾವಿಷ್ಣುಪದವಿಗೆ ಏರಿದನು; ತದನುಸಾರವಾಗಿ ವಾಲ್ಮೀಕಿಪ್ರಣೀತ ರಾಮಾಯಣವು ವೇದಪ್ರಾಯವಾಯಿತು.

ಮೊದಲನೆಯದು ಅನುಗ್ರಹಾಪೇಕ್ಷೆಯ ದೃಷ್ಟಿ, ಎರಡನೆಯದು ಅರ್ಹತಾಸಂಪಾದನೆಯ ದೃಷ್ಟಿ.

ಇವೆರಡೂ ಬೇರೆಬೇರೆ ದೃಷ್ಟಿಗಳು, ಆದರೆ ಪರಸ್ಪರ ವಿರೋಧಿಗಳಲ್ಲ. ಹಾಲೂ ತುಪ್ಪವೂ ಬೇರೆಬೇರೆ, ಆದರೆ ವಿರೋಧಿಗಳಲ್ಲ. ಹಲಸೂ ಜೇನೂ ಬೇರೆಬೇರೆ, ಆದರೆ ವೈರಿಗಳಲ್ಲ. ಎರಡೂ ಒಟ್ಟಿಗೆ ಇರಲಾಗುತ್ತದೆ.

ಮೊದಲನೆಯ ದೃಷ್ಟಿಯಲ್ಲಿ ಪ್ರಸಾದನಿರೀಕ್ಷೆ ಮುಖ್ಯಾಶಯ. ಶ್ರೀರಾಮನು ಭಗವಂತನ ಪ್ರತ್ಯಕ್ಷಮೂರ್ತಿ. ಆತನು ಕೃಪಾಳು. ಆತನನ್ನು ಆಶ್ರಯಿಸಿದವನಿಗೆ ಇಷ್ಟಾರ್ಥಲಾಭವು ಸ್ವತಸ್ಸಿದ್ಧ. ಆದದ್ದರಿಂದ ರಾಮಭಕ್ತಿಯು ಪರಮಶ್ರೇಯಸ್ಸಾಧಕ. ಅಲ್ಲಿ ಪ್ರಶ್ನೆ ವಿಚಾರಣೆಗಳಿಗೆಡೆಯಿಲ್ಲ. ದೃಢವಾದ ಶ್ರದ್ಧೆಯೇ ಕರ್ತವ್ಯ.

ಎರಡನೆಯ ದೃಷ್ಟಿಯಲ್ಲಿ ಪ್ರಯತ್ನದಾರ್ಢ್ಯವು ಮುಖ್ಯಾಶಯ. ಶ್ರೀರಾಮನು ಮಾನುಷಸತ್ತ್ವಕ್ಕೆ ಆದರ್ಶಮೂರ್ತಿ. ಭಗವದವತಾರವಾದರೂ ಮನುಷ್ಯಬೋಧೆಗಾಗಿ ಆದ ಅವತಾರ. ಮನುಷ್ಯನು ಹೇಗೆ ಆತ್ಮಸಂಯಮದಿಂದ, ಆತ್ಮಪರೀಕ್ಷಣದಿಂದ, ಆತ್ಮಶಿಕ್ಷಣದಿಂದ, ಆತ್ಮಪ್ರಯತ್ನದಿಂದ, ಆತ್ಮ

ಶೌರ್ಯದಿಂದ ಲೋಕಜೀವನದ ಕಷ್ಟಪರೀಕ್ಷೆಗಳಿಂದ ಪಾರಾಗಿ ಪರಮ ಪದವಿಗೇರಬಹುದು—ಎಂಬುದಕ್ಕೆ ನಿದರ್ಶನ ರಾಮಚರಿತೆ. ರಾಮನು ಮನುಷ್ಯನಿಗೆ ಅನುಕರಣೀಯನಾದ ಧರ್ಮಗುರು. "ಉದ್ಧರೇದಾತ್ಮ-ನಾತ್ಮಾನಂ"—ಎಂಬ ಗೀತೋಕ್ತಿಗೆ ನಿದರ್ಶನಮೂರ್ತಿ.

ಈ ಎರಡು ದೃಷ್ಟಿಗಳಲ್ಲಿ ಯಾವುದು ತಪ್ಪು? ಯಾವುದೂ ತಪ್ಪಲ್ಲ. ಯಾವುದು ಸರಿ? ಎರಡೂ ಸರಿ. ದೈವವು ಗುರುವಾಗಲಾರದೆ? ಗುರುವು ದೈವವಾಗಬಾರದೆ?

ಯಸ್ಯ ದೇವೇ ಪರಾ ಭಕ್ತಿರ್ಯಥಾ ದೇವೇ ತಥಾ ಗುರೌ ||

(ಶ್ವೇತಾಶ್ವತರೋಪನಿಷತ್ತು. ೬–೨೩)

ಭಕ್ತನ ಅಂತರಂಗಪ್ರವೃತ್ತಿಯಂತೆ, ಅವನಿಗೆ ಪ್ರಾತಃಕಾಲದಲ್ಲಿ ದೈವವಾಗಿದ್ದ ಶ್ರೀರಾಮನು ಮಧ್ಯಾಹ್ನ ಒಂದು ಧರ್ಮಸಂಕಟದಲ್ಲಿ ನಡವಳಿಕೆಗೆ ಗುರುವಾಗಬಹುದು; ರಾತ್ರಿ ಏಕಾಂತಧ್ಯಾನದಲ್ಲಿ ಪರಬ್ರಹ್ಮಪ್ರತೀಕ ವಾಗಬಹುದು

ರಮನ್ತೇ ಯೋಗಿನೋಽನನ್ತೇ ನಿತ್ಯಾನನ್ದೇ ಚಿದಾತ್ಮನಿ |
ಇತಿ ರಾಮಪದೇನಾಸೌ ಪರಂ ಬ್ರಹ್ಮಾಭಿಧೀಯತೇ ||

(ರಾಮಪೂರ್ವತಾಪಿನ್ಯುಪನಿಷತ್ತು)

"ರಾಮ" ಶಬ್ದವು ಮೊದಲು ಪರಬ್ರಹ್ಮವಾಚಕವಾಗಿತ್ತೆಂದೇ ನನ್ನ ನಂಬಿಕೆ. ಅದನ್ನು ದಶರಥನ ಕಾಲಕ್ಕೆ ಹಿಂದೆಯೇ ಮನುಷ್ಯನ ಹೆಸರಾಗಿ ಬಳಸುತ್ತಿದ್ದಿರಬೇಕು ಜಮದಗ್ನಿಯ ಮಗನಾದ ಪರಶುರಾಮನು ರಘು ರಾಮನಿಗಿಂತ ಪುರಾತನನು. ರಾಮ ಎಂಬ ಹೆಸರಿನವರು ಬೇರೆಯವರೂ ಹಿಂದೆ ಇದ್ದಿರಬಹುದು.

ರಾಮಃ ಕ್ರಾತುಜಾತೇಯೋ ವೈಯಾಘ್ರಪದ್ಯಃ ||

(ಜೈಮಿನೀಯೋಪನಿಷತ್ತು

ವಾಲ್ಮೀಕಿಯು ನಾರದನಿಂದ ತಿಳಿಯಬಯಸಿದ್ದು ಮನುಷ್ಯವಿ-ವನ್ನು :

ಮಹರ್ಷೇ ತ್ವಂ ಸಮರ್ಥೋಽಸಿ ಜ್ಞಾತುಮೇವಂವಿಧಂ ನರಮ್

(ಬಾಲಕಾಂಡ :

ನಾರದನು ಹೇಳಿದ್ದು ಮನುಷ್ಯವಿಷಯವನ್ನು :

ತ್ರೈಯರ್ಯುಕ್ತಃ ಶ್ರೂಯತಾಂ ನರಃ ||

(ಬಾಲಕಾಂಡ: ೧-೭)

ಶ್ರೀರಾಮಚಂದ್ರನು ತನ್ನನು ತಾನು ಮನುಷ್ಯನೆಂದೇ ತಿಳಿದು ಕೊಂಡಿದ್ದ :

ಆತ್ಮಾನಂ ಮಾನುಷಂ ಮನ್ಯೇ ರಾಮಂ ದಶರಥಾತ್ಮಜಮ್ ||

(ಯುದ್ಧಕಾಂಡ ೧೨೦-೧೧)

ಇಂಥಾ ಶ್ರೀರಾಮನನ್ನು ಸಾಕ್ಷಾದ್ವಿಷ್ಣುವೆಂದು ಭಾವಿಸಿ ಸ್ತುತಿಸಿದವರು ಬ್ರಹ್ಮಾದಿದೇವತೆಗಳು.

ಮನುಷ್ಯರಿಗೆ ಸ್ವಾಭಾವಿಕವಾಗಿ ತಗಲುವ ಮನೋವೇಧೆ ವಿಕಾರ ಗಳನ್ನು ತಾನು ಪಟ್ಟವನೆಂದು ಶ್ರೀರಾಮನು ಸ್ವತಃ ಹೇಳಿಕೊಂಡದ್ದು ಆತನನ್ನು ನಮಗೆ ಸಮೀಪಗೊಳಿಸಿ ಆತನು ನಮಗೆ ಅಷ್ಟಿಷ್ಟಾದರೂ ಅನುಕರಣಸಾಧ್ಯನೆಂದು ತೋರಿಸುತ್ತದೆ.

## ಕಾಲದೇಶ ವಿವರಗಳು

ವಾಲ್ಮೀಕಿಮಹರ್ಷಿ ಯಾವ ಕಾಲದಲ್ಲಿದ್ದವನು, ಯಾವ ಪ್ರದೇಶ ದವನು ಮೊದಲಾದ ಜೀವನವೃತ್ತಾಂತ ವಿವರಗಳನ್ನು ನಿಷ್ಕರ್ಷೆಯಾಗಿ ತಿಳಿಯಲು ಆಧಾರಗಳಿಲ್ಲ ಶ್ರೀರಾಮಾವತಾರವು ತ್ರೇತಾಯುಗದಲ್ಲಿ ಆದದ್ದು. ವಾಲ್ಮೀಕಿಯು ರಾಮಸಮಕಾಲಿಕನೆಂದು ರಾಮಾಯಣದಿಂದ ಗೊತ್ತಾಗುತ್ತದೆ.

ಶ್ರೀರಾಮಾವತಾರಕಾಲದಿಂದ ಇಂದಿನವರೆಗೆ—ಎಂದರೆ ಕ್ರಿಸ್ತಶಕ ೬೫ಕ್ಕೆ ಸರಿಯಾದ ವಿಶ್ವಾವಸು ಸಂವತ್ಸರದ ವೇಳೆಗೆ—ಎಂಟು ಲಕ್ಷ ಛತ್ತೊಂಭತ್ತು ಸಾವಿರದ ಅರುವತ್ತಾರು ವರ್ಷಗಳಷ್ಟು ಕಾಲ ಸೆಯೆಂದು ನಮ್ಮ ಸಾಂಪ್ರದಾಯಿಕವಾದ ಲೆಕ್ಕ. ಅದು ಹೀಗೆ:

| | | |
|---|---|---|
| ತ್ರೇತಾಯುಗದ ಅವಶಿಷ್ಟ | ೩೦,೦೦೦ | ವರ್ಷ |
| ದ್ವಾಪರಯುಗ | ೮,೬೪,೦೦೦ | ವರ್ಷ |
| ಕಲಿಯುಗ | ೫,೦೬೬ | ವರ್ಷ |
| ಒಟ್ಟು | ೮,೯೯,೦೬೬ | ವರ್ಷ |

ಪಾಶ್ಚಾತ್ಯ ಶೋಧಕರು ರಾಮಾಯಣ ಅಷ್ಟು ಪ್ರಾಚೀನವೆಂದು ಒಪ್ಪಲಾರರು. ತಮ್ಮ ಸಂಸ್ಕೃತಿ ನಾಗರಿಕತೆಗಳಿಗಿಂತ ಇಂಡಿಯದ್ದು ಬಹು ಪುರಾತನವೆನ್ನಲು ಅವರಿಗೆ ಮನಸ್ಸು ಬಾರದು. ಅವರು ರಾಮಾಯಣ ಮಹಾಭಾರತ ಗ್ರಂಥಗಳ ರಚನೆಯ ಕಾಲವು ಕ್ರಿಸ್ತಪೂರ್ವದ ೫೦೦ರಿಂದ ಕ್ರಿಸ್ತಾನಂತರದ ೨೦೦ ರ ಒಳಗೆ ಎಂದು ಅಂದಾಜು ಮಾಡಿದ್ದಾರೆ. ಈ ಏಳು ಶತಾಬ್ದಗಳಲ್ಲಿ ರಾಮಾಯಣದ ರಚನೆ ಮೊದಲು ಆಯಿತೆಂದೂ ಭಾರತವು ಆಮೇಲಿನದೆಂದೂ ಒಂದು ಊಹೆ. ವಿಂಟರ್‌ನಿಟ್ಸ್ (Winternitz) ಪಂಡಿತನು ಹೀಗೆ ಹೇಳಿದ್ದಾನೆ :—

"It is probable that the **Ramayana** had its present extent and contents as early as towards the close of the second century A. D . It is probable that the original **Ramayana** was composed in the third century B. C. by Valmiki on the basis of ancient ballads"

ಏನೋ ಇದ್ದೀತು ಇರಲಾರದುಗಳ ಅರೆಮರೆಯ ಅಂದಾಜು ಇದು ಇದನ್ನು ನಾವು ಒಪ್ಪಿಕೊಳ್ಳಲೇಬೇಕೆಂದೆನ್ನಿಸುವಷ್ಟರ ಪ್ರಮಾಣ ಕಾರಣ ಗಳೇನೂ ಇಲ್ಲ. ಪ್ರಶ್ನೆ ಎಷ್ಟು ಅಸಾಧ್ಯವೆಂಬುದನ್ನು ತೋರಿಸಲು ಅದನ್ನಿಲ್ಲಿ ಪ್ರಸ್ತಾಪಿಸಿದ್ದಾಗಿದೆ. ನಮ್ಮ ದೇಶದ ಪೂರ್ವಚರಿತ್ರೆಯ ಆಧಾರಸಾಮಗ್ರಿ ಎಷ್ಟೋ ಭಾಗ ಭೂಮಿಯಲ್ಲೂ ಸಮುದ್ರದಲ್ಲೂ ಆಳವಾಗಿ ಮುಚ್ಚಿಹೋಗಿದೆ. ಅದನ್ನೆಲ್ಲ ಎತ್ತಿ ತೆಗೆದು ಶೋಧಿಸುವ ಕೆಲಸ ಈಚೀಚೆಗೆ ಕೊಂಚಕೊಂಚ ನಡೆದಿದೆ. ಹರಪ್ಪ ಮೊಹೆಂಜೊದಾರೊ ಪ್ರದೇಶಗಳ ಪೂರ್ವಾವಶೇಷಗಳು ಕ್ರಿಸ್ತಪೂರ್ವ ೩೦೦೦ಕ್ಕೆ ಹಿಂದೆ ಹೋಗುತ್ತವೆ. ಇಂಥ ಶೋಧನೆ ನಡೆದಂತೆಲ್ಲ ನಮ್ಮ ನಾಗರಿಕತೆಯ ಪ್ರಾಚೀನತೆ ಹೆಚ್ಚೆನಿಸುವ ಸೂಚನೆ ಬರುತ್ತದೆ. ಕಾದು ನೋಡೋಣ.

ವಾಲ್ಮೀಕಿಯ ಆಶ್ರಮವಿದ್ದದ್ದು ತಮಸಾನದಿಯ ಬಳಿ, ಗಂಗಾನದಿಯ ಪ್ರದೇಶದಲ್ಲಿ ಎಂದು ರಾಮಾಯಣದಿಂದಲೇ ಗೊತ್ತಾಗುತ್ತದೆ.

ಆತ ಪ್ರಚೇತಸನೆಂಬ ಋಷಿಯ ವಂಶದಲ್ಲಿ ಹುಟ್ಟಿದವನಾದದ್ದರಿಂದ ಪ್ರಾಚೇತಸನೆಂದು ಹೆಸರು ಪಡೆದಿದ್ದನು. ಆ ಋಷಿಯು ಸೃಷ್ಟಿಕರ್ತ ಬ್ರಹ್ಮನಿಂದ ಮೊದಲು ಉತ್ಪನ್ನರಾದ ಹತ್ತುಮಂದಿ ಋಷಿಗಳಲ್ಲೊಬ್ಬ.

ಪತೀನ್ ಪ್ರಜಾನಾಮಸೃಜಂ ಮಹರ್ಷೀನಾದಿತೋ ದಶ ||
ಮರೀಚಿಮತ್ರ್ಯಂಗಿರಸೌ ಪುಲಸ್ತ್ಯಂ ಪುಲಹಂ ಕ್ರತುಮ್ |
ಪ್ರಚೇತಸಂ ವಸಿಷ್ಠಂ ಚ ಭೃಗುಂ ನಾರದಮೇವ ಚ ||

(ಮನುಸ್ಮೃತಿ : ೧–೩೫)

ಹರಿಕಥೆ ಮಾಡುವವರು—ಬಹುಶಃ ಕನ್ನಡಿಗರು—ವಾಲ್ಮೀಕಿಯನ್ನು ಕುರಿತು ಕಟ್ಟಿರುವ ಒಂದು ಕಥೆ ಪ್ರಚಾರದಲ್ಲಿದೆ. ವಾಲ್ಮೀಕಿ ಹೇಗೋ ಕಳ್ಳರ ಸಹವಾಸಕ್ಕೆ ಬಿದ್ದು, ದಾರಿಹೋಕರನ್ನು ಹಿಡಿದು ಬಡಿದು ಸುಲಿಗೆ ಮಾಡಿ ಹೊಟ್ಟೆಹೊರೆಕೊಳ್ಳುತ್ತಿದ್ದ. ಒಂದು ದಿನ ನಾರದರು ಅವನ ಕೈಗೆ ಸಿಕ್ಕಿಬಿದ್ದಾಗ ಅವನಲ್ಲಿ ಕನಿಕರವುಳ್ಳವರಾಗಿ, ಅವನು ಮಾಡುತ್ತಿದ್ದ ಪಾಪವನ್ನು ಅವನ ತಿಳಿವಳಿಕೆಗೆ ತಂದು, ಅವನು ಪಶ್ಚಾತ್ತಾಪಪಟ್ಟು ಕ್ಷಮೆ ಬೇಡಿದಾಗ, ಅವನಿಗೆ ಒಂದು ಮರವನ್ನು ತೋರಿಸಿ 'ಇದನ್ನು ನಂಬಿ ಜಪಿಸು' ಎಂದು ಉಪದೇಶಿಸಿ ಹೋದರು. ಅವನು ಅದರಂತೆ 'ಮರಾ, ಮರಾ' ಎಂದು ಜಪಿಸುತ್ತಿದ್ದಾಗ 'ರಾಮ, ರಾಮ' ಎಂದು ಅವನ ಮನಸ್ಸಿಗೆ ಹೊಳೆಯಿತಂತೆ! ಹಾಗೆ ಅವನು ರಾಮನನ್ನು ಧ್ಯಾನಿಸಿದ್ದರಿಂದ ಅವನಿಗೆ ರಾಮನು ಪ್ರತ್ಯಕ್ಷನಾದ. ಬಳಿಕ ಅವನು ರಾಮಾಯಣದ ಕವಿಯಾದ   ಇದು ಕಥೆ.

ವಾಲ್ಮೀಕಿಯೂ ನಾರದರೂ ಮಾತನಾಡಿದ್ದು ಯಾವ ಭಾಷೆಯಲ್ಲಿ? ಸಂಸ್ಕೃತದಲ್ಲಾದರೆ ಆ ಭಾಷೆಯಲ್ಲಿ ವೃಕ್ಷಕ್ಕೆ 'ಮರ' ಎಂಬ ಪರ್ಯಾಯಪದ ವಿಲ್ಲ. ಬೆಳೆದ ಗಿಡ ಎಂಬರ್ಥದಲ್ಲಿ 'ಮರ' ಎಂಬ ಮಾತಿರುವುದು ಕನ್ನಡ ದಲ್ಲಿ, ತಮಿಳಿನಲ್ಲಿ; ತೆಲುಗಿನಲ್ಲಲ್ಲ, ಹಿಂದಿಯಲ್ಲಿಯೂ ಅಲ್ಲ. ವಾಲ್ಮೀಕಿ ನಾರದರು ಕನ್ನಡಿಗರೋ, ತಮಿಳರೋ?

ಕಥೆಯನ್ನು ಕಥೆಯೆಂದುಕೊಂಡು ಅಲ್ಲಿಗೆ ಬಿಡಬಹುದು.

ಕವಿಯ ಕಾಲದೇಶಾದಿ ಜೀವನಸಂಗತಿಗಳನ್ನು ಕುರಿತು ಹೆಚ್ಚು ಶ್ರಮ ಪಡುವುದು ಪಾಶ್ಚಾತ್ಯ ಶೋಧಕರ ಪದ್ಧತಿ. ನಮಗೆ ಕವಿಗಿಂತ ಕಾವ್ಯ ಮುಖ್ಯ. ಕಾವ್ಯಕಾರಣದಿಂದ ಕವಿ ಬೇಕಾದವನೇ ಹೊರತು ಕವಿಯ ಕಾರಣದಿಂದ ಕಾವ್ಯ ಬೇಕಾದದ್ದೆಂದಲ್ಲ.

ವಾಲ್ಮೀಕಿಯ ವಾಸಸ್ಥಲವೆನಿಸಬಯಸುವ ಊರುಗಳು ನೂರಿವೆ. ಮುಳಬಾಗಲು ಬಳಿಯ ಆವನಿಯ ಜನ ಅದೇ ಆವಂತೀಕ್ಷೇತ್ರವೆಂದೂ

ಅಲ್ಲಿಯೇ ಸೀತಮ್ಮ ಬಾಣಂತಿಯಾಗಿದ್ದದ್ದೆಂದೂ ಹೇಳಿ, ಗುಡ್ಡದಲ್ಲಿ ಒಂದು ಹೊಂಡವನ್ನು ತೋರಿಸಿ ಅದೇ ಆಕೆ ಮಕ್ಕಳ ಬಟ್ಟೆ ಒಗೆಯುತ್ತಿದ್ದ ಜಾಗವೆನ್ನುತ್ತಾರೆ. ಅದು ಅವರ ಸ್ವಸ್ಥಲಾಭಿಮಾನ. ನಮಗೆ ಸಂತೋಷ. ಅದನ್ನು ಹಾಗಲ್ಲವೆನ್ನದೆ, ನಕ್ಕು ಒಪ್ಪಿಕೊಂಡಂತೆ ಇದ್ದರೆ ಅದರಿಂದ ನಮ್ಮ ಕಾವ್ಯಾನುಭವಕ್ಕೆ ಎಷ್ಟುಮಾತ್ರವೂ ಭಂಗ ಬಾರದು. ವಾಲ್ಮೀಕಿ ಆವನಿಯುವನಲ್ಲ. ಮದ್ರಾಸ್ ಬಳಿಯ ವನ್ನಿಯೂರಿನವನು ಎನ್ನುತ್ತಾರೆ ಅಲ್ಲಿಯುವರು. ಹಾಗೂ ಆಗಲಿ. ವಾಲ್ಮೀಕಿ ಎಲ್ಲಿಯುವನಾದರೂ ನಮ್ಮವನೇ—ನಮಗೆ ಅವನ ಕಾವ್ಯ ಬೇಕೆನಿಸಿದ ಪಕ್ಷದಲ್ಲಿ

ಶ್ರೀಮದ್ರಾಮಾಯಣದ ಗ್ರಂಥಗಾತ್ರವು ಅದು ಈಗ ಪ್ರಚಾರದಲ್ಲಿರುವಷ್ಟೆಲ್ಲ - ಮೊದಲಿನಿಂದ ಕೊನೆಯವರೆಗೂ ಒಂದೊಂದಕ್ಷರವೂ - ವಾಲ್ಮೀಕಿಯಿಂದ ಬಂದದ್ದೆ? ಅಥವಾ ವಾಲ್ಮೀಕಿಯಿಂದ ಮೊದಲು ಒಂದಷ್ಟು ಗ್ರಂಥ ಬಂದಿದ್ದು, ಬಳಿಕ ಈಚಿನವರು ಯಾರುಯಾರೋ ಆ ಮೂಲಾಂಶಕ್ಕೆ ತಮ್ಮ ತಮ್ಮ ಕೈಕೆಲಸವನ್ನು ಸೇರಿಸಿದ್ದಾರೆಯೆ? ಇತರರ ಕೈವಾಡ ಅಷ್ಟಿಷ್ಟು ಸೇರಿದ್ದರೂ ಇರಬಹುದು.

(೧) ಗ್ರಂಥದ ಪ್ರಚಾರವಾದದ್ದು ಲಿಖಿತಪುಸ್ತಕದಿಂದ ಅಲ್ಲ, ಬಾಯಿ ಹಾಡಿಕೆಯಿಂದ. ಲವಕುಶರ ತರುವಾಯ ಸೂತಪುರಾಣಿಕರು ತಾವಿದ್ದ ಕಡೆ, ತಾವು ಹೋದ ಕಡೆ ರಾಮಾಯಣವನ್ನು ಹಾಡುತ್ತಿದ್ದರು. ಕೆಲಕೆಲ ಕಡೆ ಕೆಲಕೆಲ ದಿವಸ ಹೊಸ ಶ್ರೋತರು ಬರುತ್ತಿದ್ದರು. ಅಂಥವರ ಪ್ರಯೋಜನಕ್ಕಾಗಿ ಹಿಂದಿನ ನಾರಿ ಹೇಳಿದ್ದದ್ದನ್ನು ಸಂಗ್ರಹಿಸಿ ಪುನರಾವರ್ತನ ಮಾಡಬೇಕಾಗಿತ್ತು. ಹಳೆಯ ಶ್ರೋತೃಗಳಿಗೆ ಹೊಸ ರುಚಿ ತೋರಿಸುವುದಕ್ಕಾಗಿ ಒಂದೆರಡು ವಾಕ್ಯಗಳನ್ನು ಹೊಸದಾಗಿ ಸೇರಿಸಿದರೆ ಕಳೆಯೇರೀತೆಂದು ಪುರಾಣಿಕರಿಗೆ ತೋರಿರಬಹುದು ಕಥೆ ಹೇಳುವವರಿಗೆ ಅಭ್ಯಾಸ ಹೆಚ್ಚಿದಂತೆಲ್ಲ ಹೊಸಹೊಸ ಸೊಗಸುಗಳು ತೋರಿ ಕುಸುರಿಯ ಕೆಲಸ ನಡೆದಿರಬಹುದು. ಇದು ನಮಗೆಲ್ಲ ಅನುಭವದಲ್ಲಿರುವುದು ತಾನೆ? ಕಥೆ ಹೇಳ ಹೇಳ ಅದರ ಕೈಕಾಲು ಬೆಳೆಯುತ್ತದೆ. ಹೋಮರ್ ಕವಿಯ "ಇಲಿಯಡ್" ಮಹಾಕಾವ್ಯ ಹೀಗೆ ಬೆಳೆದದ್ದೆಂದು ವಿದ್ವಾಂಸರು ಅನುಮಾನಿಸಿದ್ದಾರೆ. ಅದರಂತೆ ವಾಲ್ಮೀಕಿಗಳ ಕೃತಿಯು ಪುರಾಣಿಕರು ಹಾಡಿಹಾಡಿದಂತೆ ಕಾಲಾಂತರದಲ್ಲಿ ಗಾತ್ರವೃದ್ಧಿ ಪಡೆದಿರಬಹುದು.

(೨) ಜನಪ್ರಿಯವಾದ ಕಥೆಯಲ್ಲಿ ಭಕ್ತಿಬೋಧನೆಗೆ ಅವಕಾಶ ಚೆನ್ನಾಗಿರುತ್ತದೆ. ಶ್ರೀರಾಮನು ಸಾಕ್ಷಾದ್ವಿಷ್ಣುವೆಂದು ನಂಬಿದ್ದವರು ಆ ನಂಬಿಕೆಯನ್ನು ಪರಿಪೋಷಿಸುವುದಕ್ಕಾಗಿ ಇಲ್ಲೊಂದು ಅಲ್ಲೊಂದು ವಾಕ್ಯ ನೇರಿಸಿರಬಹುದು. ಒಟ್ಟಿನಲ್ಲಿ ಬಾಲಕಾಂಡದ ಬಹುಭಾಗವೂ ಉತ್ತರಕಾಂಡದ ಎಲ್ಲವೂ ಪ್ರಕ್ಷಿಪ್ತಗಳೆಂದು ಕೆಲಮಂದಿಯ ಮತ

ಹಾಗಾಗಿದ್ದರೆ ಅದಿದ್ದುಕೊಳ್ಳಲಿ. ಪ್ರಕ್ಷಿಪ್ತಗಳೆಂದು ಹೇಳುವ ಗ್ರಂಥ ಭಾಗಗಳನ್ನು ಪ್ರಕ್ಷಿಪ್ತಗಳೇ ಎಂದು ಸಾಧಿಸುವುದು ಸುಲಭವಲ್ಲ ಅದೆಲ್ಲ ಸಂದೇಹಭೂಮಿ ನಮಗೆ ವಿವಾದ ಬೇಕಿಲ್ಲ. ನಾವು ಕಾವ್ಯರಸೈಕದೃಕ್ಕುಗಳು. ಶ್ಲೋಕವು ರಮ್ಯವಾಗಿದ್ದರ ಅದು ಅಲ್ಲಿ ಹೇಗೆ ಬಂತೆಂದು ನಾವು ಕೇಳ ಬೇಕಾಗಿಲ್ಲ. ವಾಕ್ಯರಚನೆ ಸುಂದರವಾಗಿದೆಯೆ ? ಭಾವ ಉಚಿತವಾಗಿದೆಯೆ ? ಹಾಗಿದ್ದರೆ ಬೇರೆ ತಕರಾರು ನಮಗೆ ಬೇಕಿಲ್ಲ.

## ಬಾಲಕಾಂಡ

ಪ್ರಕೃತಕ್ಕೆ ನಮ್ಮ ಮುಂದಿರುವ ರಾಮಾಯಣಭಾಗವನ್ನು ನೋಡೋಣ. ಬಾಲಕಾಂಡದ ಎಪ್ಪತ್ತೇಳು ಸರ್ಗಗಳಲ್ಲಿ ಮೊದಲ ನಾಲ್ಕು ವಾಲ್ಮೀಕಿಯವಲ್ಲ, ಶಿಷ್ಯರೊಬ್ಬರು ರಚಿಸಿ ಅಂಟಿಸಿದ್ದು—ಎಂದು ಕೆಲವರ ಊಹೆ. ಈ ಊಹೆ ಯುಕ್ತಿಯುಕ್ತವಾಗಿದೆಯೆಂದು ನನಗನ್ನಿಸುತ್ತದೆ. ಈ ನಾಲ್ಕು ಸರ್ಗಗಳು ಪೀಠಿಕೆಯಾಗಿವೆ, ಕಥಾಂಗವಾಗಿಲ್ಲ. ಕಥೆ ಪ್ರಾರಂಭವಾಗುವುದು ಐದನೆಯ ಸರ್ಗದಿಂದ ;

ಸರ್ವಾ ಪೂರ್ವಮಿಯಂ ಯೇಷಾಮಾಸೀತ್ಕೃತ್ಸ್ನಾ ವಸುಂಧರಾ ||

—ಹೀಗೆ. ಆದರೆ ಮೊದಲನೆಯ ನಾಲ್ಕು ಸರ್ಗಗಳನ್ನು ನಾನು ಬಿಡಲಾರೆ. ಅವುಗಳ ವಿಷಯ ಹೀಗಿದೆ :

ಸರ್ಗ (೧) ನಾರದ-ವಾಲ್ಮೀಕಿ ಸಂವಾದ : ಸಮಗ್ರಕಥಾಸಂಕ್ಷೇಪ.
,, (೨) ಬ್ರಹ್ಮನಿಂದ ವಸ್ತುಸಂದರ್ಶನಾನುಗ್ರಹ.
,, (೩) ಕವಿಯ ಕಾವ್ಯವಸ್ತುಸಾಕ್ಷಾತ್ಕಾರ.
,, (೪) ಕೃತಿಪ್ರಚಾರವಿಧಾನ—ಕಾವ್ಯಗಾನ.

ಈ ನಾಲ್ಕೂ ರಮಣೀಯಗಳು.

ಗ್ರಂಥೋಪಕ್ರಮವೇ ಸೊಗಸು. ಮೊದಲ ವಾಕ್ಯವೇ ಭಾವೋನ್ನತಿ ಕಾರಕವಾಗಿದೆ :

ತಪಸ್ಸ್ವಾಧ್ಯಾಯನಿರತಂ ತಪಸ್ವೀ ವಾಗ್ವಿದಾಂ ವರಮ್ ||

ತಪಸ್ಸು, ವೇದಾಧ್ಯಯನ, ವಿದ್ಯಾಪ್ರಭಾವ, ಮಹಾಪುರುಷಲಕ್ಷಣ ಸ್ಮರಣೆ—ಈ ಗಂಭೀರ ಪವಿತ್ರ ವಾತಾವರಣಕ್ಕೆ ಕವಿ ನಮ್ಮನ್ನು ಕಂಡೊಡನೆಯೇ ಕರೆದೊಯ್ದು ಮೈಮರೆಯಿಸುತ್ತಾನೆ. ತಾನು ನಾರದರಿಗೆ ಅರಿಕೆಮಾಡಿಕೊಂಡ ಕುತೂಹಲಾತಿಶಯವನ್ನು ("ಪರಂ ಕೌತೂಹಲಂ ಹಿ ಮೇ") ಕವಿ ನಮ್ಮಲ್ಲಿ ಕೆರಳಿಸುತ್ತಾನೆ. ಆ ಕುತೂಹಲದ ಮೊದಲ ಆತುರ ತೀರುವಂತೆ ಸಮಗ್ರ ರಾಮವೃತ್ತಾಂತದ ಛಾಯಾರೇಖೆಯನ್ನು ತೋರಿಸುತ್ತಾನೆ. ಹೀಗೆ ಕೌತುಕದ ಜೊತೆಗೆ ನೆಮ್ಮದಿ ಸೇರಿ ನಮ್ಮ ಮನಸ್ಸು ಅವಧಾನಸಮರ್ಥವಾಗುತ್ತದೆ.

ಎರಡನೆಯ ಸರ್ಗದಲ್ಲಿ ಕವಿಯ ಮನಸ್ಸು ಹೇಗೆ ಕೆರಳಿ ಕಾವೇರಿತೆಂಬುದರ ಕಥೆ ಇದೆ. ಕವಿಯ ಅಂತರಂಗಾವೇಶದ ಕಥೆ ಕುತುಕವನ್ನುಂಟುಮಾಡತಕ್ಕದ್ದೇ ಸರಿ. ಆದರೆ ಇಲ್ಲಿ ಮಾತ್ರ ನನ್ನದೊಂದು ತಕರಾರಿದೆ. ಬೇಡನನ್ನು ಕುರಿತು ಕವಿ ನುಡಿದನೆಂದು ಹೇಳಿರುವ ಶಾಪವಾಕ್ಯ ವಾಲ್ಮೀಕಿಯ ಶೈಲಿಯಲ್ಲಿಲ್ಲ.

ಮಾ ನಿಷಾದ ಪ್ರತಿಷ್ಠಾಂ ತ್ವಮ್ ಅಗಮಃ ಶಾಶ್ವತೀಃ ಸಮಾಃ |
ಯತ್ಕ್ರೌಂಚಮಿಥುನಾದೇಕಮ್ ಅವಧೀಃ ಕಾಮಮೋಹಿತಮ್ ||

(ಬಾಲಕಾಂಡ : ೨–೧೫)

ರತಿಭಂಗದ ದೃಶ್ಯದಿಂದ ಸಹೃದಯರಲ್ಲಿ ಮರುಕ ಹುಟ್ಟುವುದು ಸ್ವಾಭಾವಿಕ. ಎಳೆಮಕ್ಕಳು ಆಟವಾಡಿಕೊಂಡು ನಲಿಯುತ್ತಿರುವಾಗ ಯಾರಾದರೂ ಬಂದು ಅವಕ್ಕೆ ಏಟು ಕೊಟ್ಟರೆ ಎಂಥವರಿಗೂ ರೋಷವೇರುತ್ತದೆ. ಸನ್ನಿವೇಶ ಹೀಗೆ ಯುಕ್ತವೇ. ಆದರೆ ದಂಪತಿಪಕ್ಷಿಗಳಲ್ಲಿ ಒಂದನ್ನು ಮಾತ್ರ ಕೊಂದದ್ದು ಅಪರಾಧವೆ? "ಏಕಮವಧೀಃ" ಎರಡನ್ನೂ ಒಟ್ಟಿಗೆ ಕೊಂದುಹಾಕಿದ್ದಿದ್ದರೆ ದುಃಖವಾಗುತ್ತಿರಲಿಲ್ಲವೆ?

"ಪ್ರತಿಷ್ಠಾಂ ಶಾಶ್ವತೀಃ ಸಮಾಃ ಮಾ ಅಗಮಃ"

"ನೀನು ಲೋಕದಲ್ಲಿ ನೆಲೆಯನ್ನು ಶಾಶ್ವತವಾಗಿ ಪಡೆಯದವನಾಗು."

ಇದೆಂಥ ಶಾಪ? ನಿರಪರಾಧಿಗಳಾದ ಜನಕ್ಕೆ ಮಾತ್ರ ಲೋಕವೇನು ಶಾಶ್ವತವೆ? "ನೀನು ಶಾಶ್ವತವಾಗಿ ಬದುಕಬೇಡ"—ಎಂಬುದರಲ್ಲಿ ಉದ್ವೇಗವುಂಟೆ? "ಶಾಶ್ವತವಾದ ಬದುಕು ನನಗೂ ಬೇಡ, ಸ್ವಾಮಿ. ಇನ್ನೈವತ್ತು ವರ್ಷ ಸಾಕು" ಎಂದು ಬೇಡನೆಂದಿದ್ದರೆ ಅದಕ್ಕೆ ವಾಲ್ಮೀಕಿಯ ಉತ್ತರವೇನು?

ಇದು ಕೃತಕವಾದ ಶ್ಲೋಕ—ಎರಡರ್ಥಗಳು ಸಾಧ್ಯವಾಗಬೇಕೆಂಬ ಉದ್ದೇಶದಿಂದ ತಯಾರಾದದ್ದು. ನಿಷಾದನನ್ನು ಶಪಿಸುವುದು ಮೊದಲಿನ ಅರ್ಥ ಇನ್ನೊಂದರ್ಥ ಹೀಗೆ: "ಎಲೋ ಕ್ರೂರಿಯಾದ ರಾವಣ, ನೀನು ಮಹಾಲಕ್ಷ್ಮೀ ವಿಷ್ಣುಸ್ವರೂಪರಾದ ಸೀತಾರಾಮ ದಂಪತಿಗಳಲ್ಲಿ ಒಬ್ಬರನ್ನು ಅಪಹರಿಸಿದೆ. ಆ ಕಾರಣದಿಂದ ಬೇಗ ಮೃತ್ಯುವಶನಾಗು." ಹೀಗೆ ವ್ಯಾಜಾಂತರದಿಂದ ವಸ್ತುನಿರ್ದೇಶ ಮಾಡುವುದು ಕವಿಯ ಆಶಯವೆಂದು ವ್ಯಾಖ್ಯಾನಕಾರರು ವಾದಿಸಿದ್ದಾರೆ ಕಾವ್ಯಾರಂಭದಲ್ಲಿ—

ಆಶೀರ್ನಮಸ್ಕ್ರಿಯಾ ವಸ್ತುನಿರ್ದೇಶೋ ವಾ ||

(ದಂಡಿ, ಕಾವ್ಯಾದರ್ಶ)

—ಎಂದು ಸೂತ್ರವಿರುವುದು ದಿಟ. ಆದರೆ ಅದು ವಾಲ್ಮೀಕಿಯ ಕಾಲದಿಂದೀಚಿನದು. ವಾಲ್ಮೀಕಿ ಅದಕ್ಕೆ ಕಟ್ಟುಬಿದ್ದಿದ್ದನೆಂದು ನಾನು ನಂಬಲಾರೆ. ವಾಲ್ಮೀಕಿಯು ಶ್ಲೇಷಕವಿಯೆನ್ನಲು ಇನ್ನೊಂದುದಾಹರಣೆಯಿಲ್ಲ. ವ್ಯಾಕರಣ ಚಮತ್ಕಾರಪ್ರಯಾಸದಿಂದ ಕಲ್ಪಿಸಿದ ಅರ್ಥವು ಪ್ರತಿವಾದಿಗೆ ಬಾಯಿಮುಚ್ಚಿಸಬಹುದು; ಸರ್ಕಸ್ಸಿನ ಅಂಗಾಂಗವಿನ್ಯಾಸಚಿತ್ರದಂತೆ ಬೆರಗುಮಾಡಬಹುದು; ಆದರೆ ಅಂತರಂಗದಲ್ಲಿ ಸಮಾಧಾನವನ್ನು ನೆಲೆಗೊಳಿಸಲಾರದು ಈ ಒಂದು ಶ್ಲೋಕವನ್ನು ವಿನಾಯಿಸಿದರೆ ಬಾಲಕಾಂಡದ ಎರಡನೆಯ ಸರ್ಗವು ಕವಿಯ ಸಹೃದಯತೆಗೆ ದೃಷ್ಟಾಂತವನ್ನು ಕೊಡಬಲ್ಲದ್ದಾಗಿದೆ.

ಮೂರನೆಯ ಸರ್ಗವು ಕವಿ ಮಾಡಿಕೊಂಡ ಮನಶ್ಶುದ್ಧಿ ಮನಸ್ಸಿದ್ಧತೆಗಳನ್ನು ತಿಳಿಸುತ್ತದೆ. ಸತ್ಕಾವ್ಯರಚನೆ ಎಂಥ ಅಂತರಂಗಸಂಪತ್ತನ್ನಪೇಕ್ಷಿಸುತ್ತದೆ, ಅದು ಎಷ್ಟು ಪ್ರತ್ಯುತ್ತರಗೌರವವುಳ್ಳ ಪ್ರಯತ್ನ, ಅದು ಎಂಥ ತಪಶ್ಚರ್ಯೆ—ಎಂಬುದನ್ನು ಇಲ್ಲಿ ಕಾಣಬಹುದು.

ನಾಲ್ಕನೆಯ ಸರ್ಗವು ಅತ್ಯಂತ ರಮಣೀಯವಾದದ್ದು. ಕುಶಲವರು ಹಾಡಿದ್ದು, ಋಷಿಗಳು ಮೆಚ್ಚಿ ಇನಾಂ ಕೊಟ್ಟದ್ದು ಇಲ್ಲಿಯ ವಿಷಯ. ವಾಲ್ಮೀಕಿಯ ಹಸನಚ್ಛಾಯೆ ಇಲ್ಲಿ ಕಾಣುತ್ತದೆ.

ಹೀಗೆ ಶಿಷ್ಯಕಲ್ಪಿತಗಳೆಂದು ಊಹಿಸಲಾಗುವ ನಾಲ್ಕು ಸರ್ಗಗಳೂ ಸುಂದರವಾಗಿ ಸ್ಥಾನೋಚಿತವಾಗಿವೆ.

## ಅವತಾರದ ಅದ್ಭುತಸನ್ನಿವೇಶ

ಬಾಲಕಾಂಡದಲ್ಲಿಯ ಕಥೆ ಮೂರು ಪ್ರಕರಣಗಳುಳ್ಳದ್ದು :

(೧) ಶ್ರೀರಾಮಾದಿಜನನ, (೨) ವಿದ್ಯಾರ್ಜನೆ, (೩) ವಿವಾಹ.

ರಾಮಾದಿಗಳ ಅವತಾರಸಂದರ್ಭದಲ್ಲಿ ಕೆಲವು ಅದ್ಭುತಘಟನೆಗಳ ಪ್ರಸ್ತಾವವಿದೆ: ಋಷ್ಯಶೃಂಗರು ಬಂದು ಮಾಡಿಸಿದ ಯಜ್ಞ, ಯಜ್ಞಪುರುಷನು ಕೊಟ್ಟ ಪಾಯಸ—ಇವು ಮುಖ್ಯವಾದವು. ದೈವಾಂಶಸಂಭೂತನಾದ ಮಹಾಪುರುಷನ ಜನನವು ಸಾಮಾನ್ಯಜನರ ಜನನದಂತಲ್ಲ, ಗರ್ಭಕ್ಕೆ ಹಿಂದಿನಿಂದಲೇ ಕೆಲವು ಮಹತ್ತ್ವದ ಲಕ್ಷಣಗಳು ಅವನಿಗೆ ಸೇರಿಕೊಂಡು ಬಂದಿರುತ್ತವೆ — ಎಂಬ ನಂಬಿಕೆ ಎಲ್ಲ ದೇಶಗಳಲ್ಲೂ ಸಾಮಾನ್ಯವಾಗಿದ್ದದ್ದೆಂದು ತೋರುತ್ತದೆ. ಪುರಾತನ ಗ್ರೀಕರ ಪುರಾಣಗಳಲ್ಲಿ ಅದು ಕಾಣಬರುತ್ತದೆ ಮಹಾಪುರುಷನ ಜನ್ಮಸಮಯದಲ್ಲಿ ಆಕಾಶವಾಣಿ ಮೊಳಗುತ್ತದೆ; ನಕ್ಷತ್ರ ಗ್ರಹಗಳು ಸೂಚನೆ ಕೊಡುತ್ತವೆ; ಹುಟ್ಟಲಿರುವವನ ವಿಷಯದಲ್ಲಿ ಭಯ ಭಕ್ತಿಗಳಿಂದ ನಡೆದು ಕೊಳ್ಳತಕ್ಕದ್ದೆಂದು ದೈವವು ಜನವನ್ನು ಹೇಗೆಹೇಗೋ ಎಚ್ಚರಿಸುತ್ತದೆ. ವಿಶೇಷಾಕಾರದ ಸಿದ್ಧತೆ ನಡೆಯುತ್ತದೆ. ಮಹಾಮಹಿಮರು ಅದರಲ್ಲಿ ಸೇರಿರುತ್ತಾರೆ. ಋಷ್ಯಶೃಂಗನು ಹಾಗೆ ರಾಮಾವತಾರಕ್ಕೆ ಸಂಬಂಧಪಟ್ಟ ಮಹಿಮವಂತ.

ದಿವ್ಯಪಾಯಸದ ಪ್ರಸಕ್ತಿಯೂ ಅಂಥಾದ್ದೇ. ಮಹಾಪುರುಷನು ಮನುಷ್ಯಬೀಜಫಲಿತನಲ್ಲ ಕೌಸಲ್ಯೆ ಸುಮಿತ್ರೆ ಕೈಕೇಯಿಯರಂತೆ ಕುಂತಿ ಮಾದ್ರಿಯರೂ ದಿವ್ಯಪ್ರಸಾದದಿಂದ ಗರ್ಭವತಿಯರಾದರೆಂಬುದನ್ನು ಜ್ಞಾಪಕಕ್ಕೆ ತಂದುಕೊಳ್ಳಬಹುದು.

ಇಂಥಾ ಅದ್ಭುತಗಳು ವಾಸ್ತವಿಕಗಳೆ? — ಎಂದು ಕೇಳತಕ್ಕದ್ದಲ್ಲ. ನಾವು ಓದುತ್ತಿರುವುದು ಕಾವ್ಯವನ್ನ, ಕೋರ್ಟು ಕೈಫಿಯತ್ತನ್ನಲ್ಲ. ಕಾವ್ಯದ ಮುಖ್ಯವಸ್ತುವನ್ನು ನಾವು ಗೌರವಗಂಭೀರ ಬುದ್ಧಿಯಿಂದ ನೋಡಬೇಕೆಂಬುದು ಕವಿಯ ಆಶಯ. ಅಂಥಾ ಬುದ್ಧಿಯನ್ನು ನಮ್ಮಲ್ಲಿ ಉತ್ಪಾದನೆ ಮಾಡುವುದಕ್ಕಾಗಿ ಅವನು ಅದ್ಭುತಘಟನೆಗಳ ವಾತಾವರಣವನ್ನು ನಿರ್ಮಿಸುತ್ತಾನೆ.

ಋಷ್ಯಶೃಂಗೋಪಾಖ್ಯಾನವು ಒಂದು ಹಳೆಯ ನಂಬಿಕೆಯನ್ನು ತೋರಿಸುತ್ತದೆ. ತಪಸ್ವಿ ಇರುವಲ್ಲಿ ಸಮೃದ್ಧಿ ; ವ್ರತಶೀಲನಿರುವಲ್ಲಿ ಜನಕ್ಷೇಮ.

ಇನ್ನೊಂದು ಹಳೆಯ ನಂಬಿಕೆ. ಗಣಿಕಾವೃತ್ತಿ ತ್ರೇತಾಯುಗದಲ್ಲಿಯೇ ಒಂದು ನಿಯತವಾದ ಕುಲವೃತ್ತಿಯಾಗಿತ್ತು. ಸಮಾಜವು ಆ ವೃತ್ತಿಯ ಆವಶ್ಯಕತೆಯನ್ನು ಅಂಗೀಕರಿಸಿತ್ತು. ಬೆಕ್ಕು ಕಣ್ಣುಮುಚ್ಚಿಕೊಂಡು ಹಾಲು ಕುಡಿದಂತೆ ಆಗಿನ ಜನ ಮಾಡಲಿಲ್ಲ. ಊರಿಗೊಂದು ಕೆರೆ, ಕಾಮಿಗೊಂದು ಶೃಂಗಾರ ಪೇಟೆ. ಕೊಳ್ಳುವವರಿಗೆ ಒಂದು ಗೊತ್ತಾದ ಪೇಟೆಯಿಲ್ಲದಿದ್ದರೆ ಅವರು ಮನೆಮನೆಯೂ ಅಂಗಡಿ ಎಂದು ತಿಳಿದಾರು ಇದು ಇಂದಿನ ನವನಾಗರಿಕ ಸುಧಾರಕರು ಆಲೋಚಿಸಬೇಕಾದ ವಿಷಯ.

ಶ್ರೀರಾಮನ ವಿದ್ಯಾವಿಕಾಸಕ್ಕಾಗಿ ವಿಶ್ವಾಮಿತ್ರನನ್ನು ಕರೆತಂದದ್ದು ವಾಲ್ಮೀಕಿಯ ಸಂಧಾನಕೌಶಲದ ಒಂದು ಶಿಖರಾಗ್ರ. ಮಹಾಪುರುಷನನ್ನು ಮಹಾಕಾರ್ಯಕ್ಕೆ ಸಿದ್ಧಪಡಿಸಲು ಮಹಾಪುರುಷನೇ ಬೇಕು. ವಿಶ್ವಾಮಿತ್ರನು ಅಸಾಧಾರಣಪುರುಷ. ಕ್ಷತ್ರಿಯನಾಗಿದ್ದು ಬ್ರಹ್ಮತ್ವವನ್ನು ಸಂಪಾದಿಸಿಕೊಂಡವನು ; ಮನುಷ್ಯಸ್ವಭಾವದ ಆಳವನ್ನೂ ತುದಿಯನ್ನೂ ಕಂಡಿದ್ದವನು; ಲೋಕಮೋಹಗಳಲ್ಲಿ ಪಾಡುಪಟ್ಟು ಪಾರಾಗಿದ್ದವನು ; ಸಾಹಸಮಾಡಿ ಸೋತು ಎದೆಗುಂದದೆ ಮತ್ತೆಮತ್ತೆ ಪ್ರಯತ್ನ ಮಾಡಿ ಕೃತಾರ್ಥನಾದವನು ; ಪರಾಕ್ರಮಿ, ಶರಣಾಗತರಕ್ಷಕ. ಇಂಥವನಲ್ಲವೇ ಜೀವನಮಾರ್ಗದಲ್ಲೊದಗುವ ಅಪಾಯಗಳನ್ನು ಕುರಿತು ಎಚ್ಚರಿಕೆ ಕೊಡಬಲ್ಲವನು—ಭಯ ಬಿಡಿಸಿ ಉತ್ಸಾಹ ತುಂಬಬಲ್ಲವನು? ಆತನಿಂದ ಶ್ರೀರಾಮನಿಗಾದ ಪ್ರಯೋಜನಗಳು ಐದು ತೆರದವು : (೧) ಅಸ್ತ್ರಶಸ್ತ್ರೋಪದೇಶ, (೨) ರಾಕ್ಷಸ ಪರಿಚಯ, (೩) ಪೂರ್ವೇತಿಹಾಸಶ್ರವಣ, (೪) ಮನಃಪ್ರಸನ್ನತಾ ಸಾಧಕವಾದ ನಾನಾದೇಶಸಂಚಾರ, (೫) ಸಾನುರೂಪವಿವಾಹ.

ಶ್ರೀರಾಮನಿಗೆ ವಿಶ್ವಾಮಿತ್ರನು ಹೇಳಿದ ಆಖ್ಯಾಯಿಕೆಗಳಲ್ಲಿ ಮುಖ್ಯವಾದ ಅಂಶಗಳು ತನ್ನ ಜೀವಿತಕಥೆ, ರಾಮಪೂರ್ವಿಕಕಥೆ, ಷಣ್ಮುಖಕಥೆ, ಭಗೀರಥಕಥೆ, ಅಹಲ್ಯಾಕಥೆ ಇವುಗಳಲ್ಲಿ ಕೆಲವು ದೇಶಚರಿತ್ರೆಯ ಅಂಶಗಳು, ಕೆಲವು ಎಷ್ಟೋ ಹಿಂದಿನಿಂದ ಬಂದಿದ್ದ ಐತಿಹ್ಯಗಳು ಅಹಲ್ಯೋಪಾಖ್ಯಾನವು ವೇದದಿಂದ ಬಂದಿದ್ದದ್ದು

ಗೌರಾವಸ್ಕನ್ದಿನ್ನಹಲ್ಯಾಯೈ ಜಾರ |
ಕೌಶಿಕಬ್ರಾಹ್ಮಣ ಗೌತಮಬ್ರುವಾಣ ||

(ತೈತ್ತಿರೀಯಾರಣ್ಯಕ: ೧-೧೨)

ದೇವೇಂದ್ರನು ಮಹಾತೇಜಸ್ವಿ, ಆದರೆ ವಿಷಯಲಂಪಟ. ಅವನನ್ನು ಬಿಟ್ಟು ಬಾಳಲಾಗದು; ನಂಬಿ ಮೈಮರೆತಿರಬಾರದು. ಭೂಲೋಕದಲ್ಲಿ ಯಾರಾದರೂ ಯಜ್ಞ ಮಾಡುತ್ತಾರೆ, ತಪಸ್ಸು ಮಾಡುತ್ತಾರೆ—ಎಂದರೆ, ಅವರು ಯಾವ ವರ ಸಂಪಾದಿಸಿ ತನಗೆ ಏನು ಊನ ತಂದಾರೋ ಎಂದು ಇಂದ್ರನಿಗೆ ಭಯ. ಕೂಡಲೆ ಅವನು ವಿಘ್ನ ತರುತ್ತಾನೆ ವಿಶ್ವಾಮಿತ್ರನ ತಪಸ್ಸನ್ನು ಕೆಡಿಸಲು ರಂಭೆಯನ್ನು ಕಳುಹಿಸಿದ್ದ ಮೇನಕೆಯನ್ನು ಕಳುಹಿಸಿದ. ಸಗರಚಕ್ರವರ್ತಿಯು ಯಜ್ಞವನ್ನು ಸಂಕಲ್ಪಿಸಿ ಯಜ್ಞಾಶ್ವವನ್ನು ದಿಗ್ವಿಜಯಕ್ಕೆ ಕಳುಹಿಸಿದಾಗ, ಇಂದ್ರನು ಆ ಅಶ್ವವನ್ನು ಕದ್ದು ಪಾತಾಳದಲ್ಲಿ ಬಚ್ಚಿಟ್ಟು, ಸಗರಪುತ್ರರ ವಿನಾಶಕ್ಕೆ ಕಾರಣನಾದ. ಇಂಥ ಕಥೆಗಳು ಶ್ರೀರಾಮನಿಗೆ ಬುದ್ಧಿವಿಚಾರಪ್ರಚೋದಕವಾಗಿದ್ದಿರಬೇಕು

ಶ್ರೀರಾಮಚಂದ್ರನಿಗೆ ಬೇಕಾಗಿದ್ದದ್ದು ಪುಸ್ತಕಪಾಠವಲ್ಲ, ಲೋಕಪರಿಜ್ಞಾನ, ಯುಕ್ತಾಯುಕ್ತವಿವೇಚನಾಭ್ಯಾಸ, ಧರ್ಮಸೂಕ್ಷ್ಮಗ್ರಹಣಕುಶಲತೆ, ಆತ್ಮವಿಶ್ವಾಸ, ಸ್ವಕರ್ತವ್ಯಗೌರವ. ಈ ಗುಣಗಳನ್ನು ಅವನಲ್ಲಿ ಕೃಷಿಮಾಡಿ, ಬೆಳಸಲು ವಿಶ್ವಾಮಿತ್ರನು ಹೇಳಿದ ಉಪಾಖ್ಯಾನಗಳು ಸಾಧಕವಾದವು. ಮಹರ್ಷಿಯ ಸಹವಾಸದಲ್ಲಿ ಮಾಡಿದ ದೇಶಸಂಚಾರದಿಂದ ಬಾಲಕನಾದ ಶ್ರೀರಾಮನ ದೇಹಪಾಟವವೂ ಧನುರ್ದಕ್ಷತೆಯೂ ಮನೋವಿಕಾಸವೂ ಬುದ್ಧಿಜಾಗರ್ಯವೂ ಬೆಳೆದವು. ಆತನು ಹಾಗೆ ಪ್ರಬುದ್ಧಜೀವನಭಾರನಿರ್ವಾಹಕ್ಕೆ ಅರ್ಹನಾದನೆಂಬ ನಂಬಿಕೆ ವಿಶ್ವಾಮಿತ್ರನಲ್ಲುದಿಸಿತು. ಆ ವೇಳೆಗೆ ಮಿಥಿಲಾನಗರದಲ್ಲಿ ಜನಕರಾಜನು ಮಗಳಿಗಾಗಿ ವರಾನ್ವೇಷಕ್ಕೆ ಸಜ್ಜುಮಾಡಿ

ಕೊಂಡಿದ್ದ. ಸಕಾಲದಲ್ಲಿ ದಶರಥ-ಜನಕಬಾಂಧವ್ಯದ ಅನ್ಯೋನ್ಯಾರ್ಹತೆಯನ್ನು ಕಂಡುಕೊಂಡದ್ದು ವಿಶ್ವಾಮಿತ್ರನ ಭವಿಷ್ಯದ್ದೃಷ್ಟಿ. ಆ ಮಹರ್ಷಿಯ ರಂಭಾ ಮೇನಕಾ ಪ್ರಸಂಗಗಳನ್ನು ನೆನೆಸಿಕೊಳ್ಳುವವರು ಶ್ರೀಸೀತಾರಾಮವಿವಾಹ ಸಂಧಾನಿಯೂ ಆತನೇ ಎಂಬುವನ್ನು ಮರೆಯಬಾರದು ಹಾಗೆಯೇ ವಿಶ್ವಾಮಿತ್ರಸಂಧಾನದಿಂದ ಯಾವ ಅಹಲ್ಯೆಗೆ ಶ್ರೀರಾಮಸಂದರ್ಶನಮಹಿಮೆ ಯಿಂದ ಶಾಪವಿಮೋಚನೆಯಾಯಿತೋ ಆಕೆಯ—ಆ ಗೌತಮಪತ್ನಿಯ— ಮಗ ಶತಾನಂದನೇ ಜನಕಪುರೋಹಿತನೂ ಶ್ರೀಸೀತಾಕಲ್ಯಾಣದಲ್ಲಿ ಶಾಸ್ತ್ರ ಕಾರ್ಯಪ್ರವರ್ತಕನೂ ಆದನೆಂಬುದನ್ನೂ ಮರೆಯಬಾರದು ಹೀಗೆ ಎಲ್ಲಕ್ಕೂ ಶುಭದಲ್ಲಿ ಪರಿಸಮಾಪ್ತಿ.

ಪರಶುರಾಮನು ಕ್ರಾಂತಿಪುರುಷ (Revolutionary). ಲೋಕದಲ್ಲಿ ಒಂದು ಅನ್ಯಾಯ ಪ್ರಬಲಿಸಿದಾಗ ಎಲ್ಲೋ, ಯಾರ ಮನಸ್ಸಿನಲ್ಲೋ, ಒಂದು ಪ್ರತಿಭಟನೆಯ ವೀರಾವೇಶವೇಳುತ್ತದೆ. ಅದು ಕ್ರಾಂತಿ. ಅತ್ಯನ್ಯಾಯ ಕ್ಕಾದ ಪ್ರತಿಕ್ರಿಯೆ ಕ್ರಾಂತಿ. ಅದು ಮನುಷ್ಯಸ್ವಭಾವದಲ್ಲಿರುವ ಸತ್ತ್ವಗುಣದ ಉದ್ರೇಕ,—ಆದರೆ ರಜೋಮಿಶ್ರಿತವಾದ ಉದ್ರೇಕ. ಕ್ರಾಂತಿಕಾರನ ರೋಷ ದಲ್ಲಿ ದಯೆ ದಾಕ್ಷಿಣ್ಯಗಳಿಗೆಡೆಯಿಲ್ಲ, ಸಾವಧಾನವಾದ ಯುಕ್ತಾಯುಕ್ತ ವಿವೇಚನೆಗೂ ಎಡೆಯಿಲ್ಲ; ಎಲ್ಲವೂ ಹಠ—ವಿಚಾರನಿಗ್ರಹಿಯಾದ ಹಠ. ಇಂಥ ಹಠೋದ್ವೇಗಕ್ಕೂ ಮನುಷ್ಯಚರಿತ್ರೆಯಲ್ಲಿ ಸ್ಥಲವುಂಟು, ಏಕೆಂದರೆ ಮನುಷ್ಯಸ್ವಭಾವದಲ್ಲಿ ಅನ್ಯಾಯಾವಕಾಶವುಂಟು. ಅನ್ಯಾಯವು ಅತ್ಯುತ್ಕಟ ವಾದಾಗ ನ್ಯಾಯತತ್ಪರವಾದ ಕ್ರಾಂತಿಯೇ ಅದಕ್ಕೆ ತಕ್ಕ ಪ್ರತೀಕಾರವಾಗು ತ್ತದೆ. ರೋಗ ಎಂಥಾದ್ದೋ ಔಷಧ ಅಂಥಾದ್ದು. ಶೀತಕ್ಕೆ ಶುಂಠಿ, ಸನ್ನಿಪಾತಕ್ಕೆ ಜ್ವರಕುಠಾರ. ಕ್ರಾಂತಿಗೆ ಕಾರಣ ಹುಟ್ಟದಿರುವುದು ಸಮಾಜ ಕ್ಷೇಮದ ಮೊದಲನೆಯ ಲಕ್ಷಣ. ಕ್ರಾಂತಿ ಹುಟ್ಟಿದಮೇಲೆ ಅದನ್ನು ಕೂಡಿ ದಷ್ಟು ಬೇಗ ಶಮನಮಾಡುವುದು ಎರಡನೆಯ ಕ್ಷೇಮಲಕ್ಷಣ. ಪರಶುರಾಮನ ಕ್ರಾಂತಿಯ ಕಾರ್ಯ ಮುಗಿದಿತ್ತು, ಆ ಕ್ರೋಧದ ಜ್ವಾಲೆ ಮಾತ್ರ ಇಳಿದಿರಲಿಲ್ಲ. ನೃಸಿಂಹಸ್ವಾಮಿ ಮಾಡಬೇಕಾಗಿದ್ದ ಕೆಲಸ ಮುಗಿದಮೇಲೂ ಆ ಕೋಪದ ಬೆಂಕಿ ಉರಿಯುತ್ತಿರಲಿಲ್ಲವೇ? ಅಡಿಗೆಯಾಗಿ ಪಾತ್ರೆಯನ್ನಿಳಿಸಿದಮೇಲೂ ಒಲೆಯಲ್ಲಿ ಕೆಂಡವಾರದೆ ಇರುತ್ತದಲ್ಲವೆ? ಪರುಶುರಾಮನ ಕೋಪದ ಬಿಸಿಯಿಳಿ

ದಲ್ಲದೆ ಲೋಕಕ್ಕೆ ನೆಮ್ಮದಿ ಬಾರದು ಮನೆಯಲ್ಲಿ ಒಲೆ ಉರಿಯಬೇಕಾದದ್ದು ದಿನದ ಇಪ್ಪತ್ತುನಾಲ್ಕು ಘಂಟೆಗಳಲ್ಲಿ ಒಂದೆರಡರ್ಧಘಂಟೆಗಳ ಕಾಲಮಾತ್ರ. ಸಮಾಜಕ್ಕೆ ಕ್ರಾಂತಿ ಬೇಕಾಗಬಹುದಾದದ್ದು ಒಂದು ಯುಗದಲ್ಲಿ ಒಂದೆರಡು ದಿನವಿರಬಹುದು ಮಿಕ್ಕ ದಿವಸ ಬೇಕಾದದ್ದು ಸಮಾಧಾನ — ಸುವ್ಯವಸ್ಥೆಯ ಶಾಂತಿ. ಅದನ್ನು ನೆಲಗೊಳಿಸಬಲ್ಲವನು ದಶರಥರಾಮನು

ಕಾಲಾಗ್ನಿಸದೃಶಃ ಕ್ರೋಧೇ ಕ್ಷಮಯಾ ಪೃಥಿವೀಸಮಃ ||

ಆಪಾತವಿರುದ್ಧಗಳಾದ ಗುಣಗಳನ್ನು ಲೋಕಕ್ಷೇಮಸಾಧನೆಯಲ್ಲಿ ಸಮರಕ್ಕೆ ತರಬಲ್ಲ ಧರ್ಮಸೂಕ್ಷ್ಮಸಮರ್ಥನು ಬೇಕಾಗಿದ್ದ ಕಾಲದಲ್ಲಿ ಅಂಥ ಮಹೋಪಕಾರಿ ಶ್ರೀರಾಮರೂಪದಲ್ಲಿ ಸಿದ್ಧನಾಗಿದ್ದನೆಂದು ಸೂಚಿಸಿ ಬಾಲ ಕಾಂಡವು ಸಮಾಪ್ತವಾಗುತ್ತದೆ.

ಬಾಲಕಾಂಡವು ಶ್ರೀರಾಮನ ಸ್ವಭಾವಪರಿಪಾಕವಿಧಾನದ ನಿರೂಪಣೆ.

ಅದರ ಬೇರೆಬೇರೆ ಪ್ರಕರಣಗಳು ಸಮಂಜಸವಾಗಿ ಹೊಂದಿಕೊಂಡು ಕಥಾಧಾರೆಯನ್ನು ಮನೋಹರವಾಗುವಂತೆ ಹರಿಯಿಸಿ, ಅಯೋಧ್ಯಾಕಾಂಡ ದಲ್ಲಿ ಶ್ರೀರಾಮನನ್ನು ಹಠಾತ್ತಾಗಿ ಎದುರಿಸಿದ ಕಠೋರಪ್ರಶ್ನೆಗೆ ಆತನು ಹೇಗೆ ಸಿದ್ಧಪಟ್ಟಿದ್ದನೆಂಬುದನ್ನು ತೋರಿಸುತ್ತದೆ.

ವಿಶ್ವಾಮಿತ್ರಾಂತರಂಗಾಯ ಮಿಥಿಲಾನಗರೀಪತೇಃ |
ಭಾಗ್ಯಾನಾಂ ಪರಿಪಾಕಾಯ ಭವ್ಯರೂಪಾಯ ಮಂಗಲಮ್ ||

ಯಾವ ಸರಸಾಗ್ರವಾದ ಲೇಖನಿ ಸುಂದರಕಾಂಡವನ್ನು ಕನ್ನಡಜನಕ್ಕೆ ಎರಡು ವರ್ಷಗಳ ಹಿಂದೆ ಒದಗಿಸಿತೋ ಅದೇ ಕೃತಕೃತ್ಯಲೇಖನಿ ಈಗ ಬಾಲಕಾಂಡವನ್ನು ಬರೆದುಕೊಟ್ಟಿರುವ ಸಂಗತಿ ಸಮಸ್ತರಿಗೂ ಸಂತೋಷ ಪ್ರದವಾಗುತ್ತದೆಯೆಂದು ನಾನು ನಂಬಿಕೊಂಡಿದ್ದೇನೆ ರಾಮಾಯಣವನ್ನು ಭಾಷಾಂತರಮಾಡುವುದು ಸುಲಭದ ಕೆಲಸವಲ್ಲ ಮೂಲಗ್ರಂಥದ ಪಾಠಾಂತರ ಗಳಲ್ಲಿ ಉತ್ತಮವಾವುದೆಂಬುದನ್ನು ನಿಶ್ಚಯಮಾಡುವುದು ಮೊದಲನೆಯ ಕಷ್ಟ. ಆರಿಸಿಕೊಂಡ ಪಾಠಕ್ಕೆ ನಾನಾವ್ಯಾಖ್ಯಾನಗಳು ನಾನಾವಿಧವಾಗಿ ಅರ್ಥ ಹೇಳುವಾಗ ಯಾವುದು ಗ್ರಾಹ್ಯವೆಂಬುದು ಎರಡನೆಯ ಕಷ್ಟ. ಇದೂ ಆದಮೇಲೆ ಅದಕ್ಕೆ ತಕ್ಕ ಕನ್ನಡ ಶಬ್ದಸಾಮಗ್ರಿಯನ್ನೂ ವಾಕ್ಯಶೈಲಿಯನ್ನೂ

ಅಳವಡಿಸಿಕೊಳ್ಳುವುದು ಬಹುದೊಡ್ಡ ಕಷ್ಟ. ಮಾತಿಗೆ ಪ್ರತಿಮಾತನ್ನಿಡುವುದು ಭಾವಾನುವಾದವಲ್ಲ. ಸಂಸ್ಕೃತ ಬಲ್ಲವರಿಗೆ ಸಂಸ್ಕೃತಮೂಲದಿಂದ ಎಂಥ ಸರಳತೆಯ, ಎಂಥ ಪದಮಾಧುರ್ಯದ, ಯಾವ ಸನ್ನಿವೇಶಚಿತ್ರದ, ಯಾವ ಗಂಭೀರಾರ್ಥದ ಅನುಭವವಾಗುತ್ತದೆಯೋ ತತ್ಸದೃಶವಾದ ಅನುಭವವು ಕನ್ನಡಿಗರಾದ ಓದುಗರಿಗೆ ಅಷ್ಟು ಸುಲಭವಾಗಿ ಆಗಬೇಕೆಂಬುದಲ್ಲವೆ ಉದ್ದೇಶ? ಇದು ಬಹುವಾಗಿ ಬುದ್ಧಿಪರಿಶ್ರಮವನ್ನಪೇಕ್ಷಿಸುತ್ತದೆ; ರಸವಿವೇಕವನ್ನಪೇಕ್ಷಿಸುತ್ತದೆ. ಕಾವ್ಯವನ್ನು ಕಾವ್ಯವಾಗಿ ಪರಿವರ್ತಿಸುವುದಲ್ಲವೆ ನಮಗೆ ಬೇಕಾದದ್ದು? ವಿದ್ವಾನ್ ರಂಗನಾಥಶರ್ಮರವರು ಸುಮಾರು ಆರು ವ್ಯಾಖ್ಯಾನಗಳನ್ನು ಪರಿಶೀಲಿಸಿ, ಅಲ್ಲಿ ದೊರೆತದ್ದನ್ನು ಸ್ವತಂತ್ರ ವಿಮರ್ಶೆಯಿಂದ ನೋಡಿ, ಅರ್ಥ ನಿಷ್ಕರ್ಷೆಮಾಡಿದ್ದಾರೆ. ಎಷ್ಟೋ ಸಾರಿ ತಮಗೆ ಶಂಕೆ ಉಳಿದುಕೊಂಡಾಗ ನನ್ನೊಡನೆಯೂ ಇತರ ಮಿತ್ರರೊಡನೆಯೂ ವಿಚಾರ ನಡೆಸಿದ್ದಾರೆ. ಹೀಗೆ ಪ್ರಯಾಸಸಿದ್ಧವಾದದ್ದು ಈ ಗ್ರಂಥದಲ್ಲಿರುವ ಭಾವಾನುವಾದ. ಶ್ರೀ ರಂಗನಾಥಶರ್ಮರವರ ಕನ್ನಡ ಬರಿಯ ತರ್ಜುಮೆಯದಲ್ಲ, ಸ್ವತಂತ್ರ ಪ್ರಸನ್ನವಾದದ್ದು. ಕನ್ನಡದಲ್ಲಿ ವ್ಯಾಕರಣದ ಕಡೆ ಹೆಚ್ಚು ಗಮನವಿಟ್ಟರೆ ವಾಕ್ಯವು ಪೆಡಸಾಗುತ್ತದೆ; ಸುಲಭತೆಯ ಕಡೆ ನೋಡಿದರೆ ವಾಕ್ಯವು ದುರ್ಬಲವಾಗುತ್ತದೆ. ಪಾಂಡಿತ್ಯದ ಅತಿಯೂ ಪಾಮರತೆಯ ಅತಿಯೂ ಇಲ್ಲದಂತೆ ಬರೆಯುವುದು ಕನ್ನಡದಲ್ಲಿ ಬಹು ಕಷ್ಟ. ನಾಲ್ಕು ಬಗೆಯ ವಾಕ್ಯರಚನೆ ಸಾಧ್ಯವಾಗಿರುವಾಗ ಅದರಲ್ಲಿ ಯಾವುದು ರಸಪೋಷಕವೆಂದು ಶ್ರೀ ರಂಗನಾಥಶರ್ಮರವರು ಹುಡುಕಿ ತಿಳಿದಿದ್ದಾರೆ. ಅವರ ವಾಕ್ಪ್ರವಾಹದಲ್ಲಿ ಸಹಜತೆ, ಲಾಲಿತ್ಯ, ವೈಶದ್ಯ, ಗಾಂಭೀರ್ಯ, ಓಜಸ್ಸು— ಈ ಗುಣಗಳು ಪ್ರಕಾಶಮಾನವಾಗಿವೆ. ಅವರ ಮುಖ್ಯದೃಷ್ಟಿ ರಸಪುಷ್ಟಿಯ ಕಡೆ; ಮಾತುಮಾತೂ ಅದಕ್ಕೆ ಸಹಾಯವಾಗಿದೆ. ಒಳ್ಳೆಯ ಕನ್ನಡ ಹೇಗಿರುತ್ತದೆಂದು ಕೇಳುವವರಿಗೆ ಇದು ನಾನು ತೋರಿಸುವ ಮಾದರಿ. ಶ್ರೀ ರಂಗನಾಥಶರ್ಮರವರು ತಮ್ಮ ಭಗವದನುಗೃಹೀತವಾದ ಲೇಖನಿಯಿಂದ ಶ್ರೀಮದ್ರಾಮಾಯಣದ ಉಳಿದ ಐದು ಕಾಂಡಗಳನ್ನೂ ಕನ್ನಡಿಗರಿಗೆ ದೊರಕಿಸಿ ಯಶಸ್ವಿಗಳಾಗುವಂತೆ ಭಗವಾನ್ ವಾಲ್ಮೀಕಿಮಹರ್ಷಿಗಳು ಆಶೀರ್ವದಿಸಬೇಕೆಂದು ಬೇಡುತ್ತೇನೆ.

ಈ ವಾಲ್ಮೀಕಿಸೇವಾಪ್ರಯತ್ನದಲ್ಲಿ ನನಗೆ ಅವಕಾಶ ಕೊಡಿಸಿದವರು ಮುಖ್ಯವಾಗಿ ನನ್ನ ಮಿತ್ರರಾದ ಇಂಜಿನೀರ್ ಶ್ರೀ ಡಿ ಸಿ. ಅನಂತರಾಮಯ್ಯನವರು. ಅವರು ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯ ಕಟ್ಟಡದ ಸಂಬಂಧದಲ್ಲಿ ನನಗೆ ಉಪಕಾರಿಗಳಾಗಿ ನನ್ನ ಕೃತಜ್ಞತೆಯನ್ನು ಸಂಪಾದಿಸಿಕೊಂಡು ಇತರ ಕಾರಣಗಳಿಂದಲೂ ಇಷ್ಟರಾಗಿದ್ದಾರೆ ಶ್ರೀರಾಮಮಂದಿರದ ಇತರ ಕಾರ್ಯಕರ್ತರುಗಳಾದ ಶ್ರೀ ಎಚ್. ಎಸ್. ಕೃಷ್ಣಸ್ವಾಮಿ, ಶ್ರೀ ಎನ್. ಎನ್. ಮೂರ್ತಿ ಮೊದಲಾದ ಮಿತ್ರರು ನನ್ನನ್ನು ಪ್ರೋತ್ಸಾಹಿಸಿದ್ದಾರೆ ಸಮಗ್ರ ರಾಮಾಯಣವನ್ನೂ ಇದೇ ರೀತಿ ಪ್ರಕಾಶಪಡಿಸುವ ಭಾಗ್ಯವನ್ನು ಶ್ರೀಸೀತಾರಾಮಪ್ರಭುವು ಈ ಸನ್ಮಿತ್ರರಿಗೆ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಜಗನ್ಮಂಗಲಕರವಾದ ವಾಲ್ಮೀಕಿಪ್ರಸಾದವು ವಿಸ್ತರಿಸಿ ಸಂವರ್ಧಿಸಲಿ. ಸರ್ವಂ ಶಿವಂ

ಶ್ರೀಮದ್ಧರ್ಮಾತ್ಮಸಂಸಕ್ತಲೋಕಚಾರಿತ್ರದರ್ಶನಃ |
ರಾಜತಾಂ ಸತತಂ ಸ್ವಚ್ಛೋ ವಾಲ್ಮೀಕೇಃ ಕಾವ್ಯದರ್ಪಣಃ ||

**ಡಿ. ವಿ. ಜಿ.**

# ನಿವೇದನೆ

ಶ್ರೀಮದ್ರಾಮಾಯಣದ ಸುಂದರಕಾಂಡಕ್ಕೆ ನಾನು ಕನ್ನಡದಲ್ಲಿ ಅನುವಾದವನ್ನು ಬರೆದಾಗ ಇತರ ಕಾಂಡಗಳಿಗೂ ಅನುವಾದವನ್ನು ರಚಿಸುವ ಉದ್ದೇಶವಿರಲಿಲ್ಲ. ಸುಂದರಕಾಂಡದ ಪ್ರಕಟನೆಯನ್ನು ಮಹಾಜನರು ಆದರದಿಂದ ಸ್ವಾಗತಿಸಿದರು. ರಾಮಾಯಣದ ಇತರ ಕಾಂಡಗಳಿಗೂ ಅದೇ ರೀತಿಯಲ್ಲಿ ಅನುವಾದವನ್ನು ಬರೆದು ಪ್ರಕಟಿಸಬೇಕೆಂದು ಪ್ರೋತ್ಸಾಹಿಸಿದರು. ವಿದ್ವಾಂಸರಾದ ಸಹೃದಯರು ಪತ್ರಿಕೆಗಳಲ್ಲಿ ಸುಂದರಕಾಂಡದ ಅನುವಾದ ವನ್ನು ವಿಮರ್ಶಿಸಿ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದರಲ್ಲದೆ ಉಳಿದ ಕಾಂಡಗಳಿಗೂ ಹೀಗೆಯೇ ಅನುವಾದವು ಬರಲೆಂದು ಹಾರೈಸಿದರು. ಇದರಿಂದ ಪ್ರೋತ್ಸಾಹಿತರಾದ ನರಸಿಂಹರಾಜ ಕಾಲೊನಿ ಶ್ರೀರಾಮಮಂದಿರದ ಅಸೋಸಿ ಯೇಷನ್ನಿನವರು ಬಾಲಕಾಂಡವನ್ನು ಪ್ರಕಟಿಸಲು ಮುಂದೆ ಅಡಿಯಿಟ್ಟರು. ಅನುವಾದದ ಕಾರ್ಯವನ್ನು ನನಗೆ ವಹಿಸಿದರು

ಸುಂದರಕಾಂಡವನ್ನು ನಾನು ಅನುವಾದಿಸಿದಾಗ ನನಗೆ ಪ್ರಧಾನ ಪ್ರೇರಕಶಕ್ತಿಯಾಗಿದ್ದವರು ಪೂಜ್ಯರಾದ ಡಾ|| ಡಿ. ವಿ ಗುಂಡಪ್ಪನವರು. ಈಸಲ ನಾನು ಅವರ ಅನುಮತಿಯನ್ನು ಕೇಳಿದಾಗ ಅವರು ಬಹಳ ಸಂತೋಷಾಭಿಮಾನಗಳಿಂದ ಪ್ರೋತ್ಸಾಹಿಸಿ ಈ ಕಾರ್ಯವನ್ನು ಮಾಡಲೇ ಬೇಕೆಂದು ಹೇಳಿ ಹರಸಿದರು. ಅನುವಾದಕಾರ್ಯದಲ್ಲಿ ನನಗೆ ಕೆಲವು ತೊಡಕುಗಳು ಬಂದಾಗ ಅವುಗಳನ್ನು ಬಿಡಿಸಿ ನನಗೆ ಮಾರ್ಗದರ್ಶನ ಮಾಡಿದ್ದಾರೆ. ಅನುವಾದದ ಅನೇಕ ಭಾ ಳನ್ನು ಓದಿಸಿ ಕೇಳಿ ಭಾಷಾ ಶೈಲಿಯ ವಿಷಯದಲ್ಲಿ ಯೋಗ್ಯಸೂಚನೆ. ಳನ್ನು ಕೊಟ್ಟಿದ್ದಾರೆ. ಅವರ ಔದಾರ್ಯ ಅಭಿಮಾನಗಳನ್ನು ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತಿದ್ದೇನೆ.

ಬಾಲಕಾಂಡದ ಶ್ಲೋಕಗಳನ್ನು ಕನ್ನಡಲಿಪಿಯಲ್ಲಿ ಬರೆದು ಮುದ್ರಣಕ್ಕೆ ಸಿದ್ಧಪಡಿಸಿಕೊಟ್ಟವರು ಶ್ರೀರಾಮಮಂದಿರದ ಅಸೋಸಿಯೇಷನ್ನಿನ ಅಧ್ಯಕ್ಷ ರಾದ ಶ್ರೀ ಡಿ. ಸಿ. ಅನಂತರಾಮಯ್ಯನವರು. ಶ್ರೀಮಾನ್ ಅನಂತರಾಮಯ್ಯ ನವರಿಗೆ ಶ್ರೀಮದ್ರಾಮಾಯಣದಲ್ಲಿರುವ ಭಕ್ತಿ ಶ್ರದ್ಧೆ ಪ್ರೀತಿಗಳು ಅಸಾಧಾರಣ ವಾದವು. ಪ್ರಕಟನಕಾರ್ಯದಲ್ಲಿ ಅವರು ವಹಿಸಿದ ನಿರಂತರವಾದ ಪ್ರಯತ್ನ-

ಶ್ರಮಗಳಿಂದ ಈ ಗ್ರಂಥ ಈ ದಿನ ಕನ್ನಡಿಗರ ಕೈಗೆ ಬಂದಿದೆ. ಇದೇ ಅಸೋಸಿಯೇಷನ್ನಿನ ಗೌರವ ಕಾರ್ಯದರ್ಶಿಗಳಾದ ಶ್ರೀ ಎನ್. ಎನ್. ಮೂರ್ತಿಯವರು ಈ ಗ್ರಂಥದಲ್ಲಿ ಅತಿಶಯವಾದ ಆಸಕ್ತಿಯನ್ನು ವಹಿಸಿ ಬಹಳ ದುಡಿದಿದ್ದಾರೆ ನಿತ್ಯಕರ್ತವ್ಯವ್ರೋ ಎಂಬಂತೆ ಶ್ರದ್ಧೆಯಿಂದ ಪ್ರತಿಫಲಾಪೇಕ್ಷೆಯಿಲ್ಲದೆ ಸುಂದರಕಾಂಡದ ಪುಸ್ತಕಗಳನ್ನು ಮಾರಾಟಮಾಡಿ ಶ್ರೀರಾಮನ ಸೇವೆಗೈದಿದ್ದಾರೆ. ಸುಂದರಕಾಂಡದ ಪ್ರಚಾರಕ್ಕಾಗಿ–ಮಾರಾಟಕ್ಕಾಗಿ ಇವರು ನಿಃಸ್ಪೃಹತೆಯಿಂದ ನಡೆಸಿದ ಕಾರ್ಯಭಾರ ಶ್ರೀರಾಮಭಕ್ತರಿಗೆ ಅನುಕರಣೀಯವಾಗಿದೆ

ಅಲ್ಲದೆ ಈ ಅಸೋಸಿಯೇಷನ್ನಿನ ಎಲ್ಲ ಸದಸ್ಯರೂ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ರಾಮಾಯಣದ ಈ ಎರಡು ಕಾಂಡಗಳ ಪ್ರಕಾಶನಕ್ಕೂ ಬೆಂಬಲವಿತ್ತು ಪ್ರೋತ್ಸಾಹಿಸಿದ್ದಾರೆ ಈ ಮಹಾಶಯರೆಲ್ಲರ ಉದಾರ ಪ್ರೋತಾಹದಿಂದಲೇ ಈಗ ಬಾಲಕಾಂಡವು ಹೊರಗೆ ಬಂದಿದೆ ನಾನು ಇದರಲ್ಲಿ ನಿಮಿತ್ತಮಾತ್ರ

ಅನುವಾದದಲ್ಲಿ ನಾನು ಅನುಸರಿಸಿದ ವಿಧಾನವನ್ನು ಸುಂದರಕಾಂಡದ ಆರಂಭದಲ್ಲಿ ನಿವೇದಿಸಿಕೊಂಡಿದ್ದೇನೆ. ವಾಚಕರಿಗೆ ಸೌಲಭ್ಯವಾಗಲೆಂದು ಬಾಲಕಾಂಡದ ಕೆಲವು ಕಥಾಸಂದರ್ಭಗಳನ್ನು ವಿವರಿಸಿ ಕಡೆಯಲ್ಲಿ ಅನುಬಂಧವನ್ನು ಕೊಡಲಾಗಿದೆ ಈ ಗ್ರಂಥವನ್ನೋದಿದಾಗ ವಾಚಕರ ಚಿತ್ತಭೂಮಿಕೆಯಲ್ಲಿ ಸಂತೋಷದ ಲೇಶವಾದರೂ ಅಂಕುರಿಸಿದರೆ—ವಾಲ್ಮೀಕಿಮಹರ್ಷಿಗಳ ವಾಗ್ವಿಲಾಸದ ವೈಭವವನ್ನು ಸಂಸ್ಕೃತಮೂಲದಲ್ಲಿ ಅರಸಬೇಕೆಂಬ ಕುತೂಹಲವನ್ನು ಇದು ಕೆರಳಿಸಿದರೆ—ನಾನು ಧನ್ಯ; ನನ್ನ ಪ್ರಯತ್ನ ಸಾರ್ಥಕ. ಶ್ರೀರಾಮಚಂದ್ರನಿಗೆ ನನ್ನ ಒಂದು ಅಲ್ಪಸೇವೆ ಸಂದಿತೆಂದು ತೃಪ್ತನಾಗುತ್ತೇನೆ.

ಬೆಂಗಳೂರು
೨೫-೧-೧೯೬೬

**ಎನ್. ರಂಗನಾಥಶರ್ಮಾ**

# ಶ್ರೀಮದ್ರಾಮಾಯಣ ಪಾರಾಯಣ ವಿಧಿ

**ಸೂಚನೆ :** ಗುರೂಪದೇಶವನ್ನು ಪಡೆದು ಕ್ರಮಪೂರ್ವಕವಾಗಿ ಪಾರಾಯಣ ವನ್ನು ಆರಂಭಿಸುವುದು ಉತ್ತಮ.

ಆಚಮನ ಪ್ರಾಣಾಯಾಮ ಸಂಕಲ್ಪಗಳನ್ನು ಮಾಡಿ ಶ್ರೀಮದ್ರಾಮಾಯಣ ಪುಸ್ತಕದಲ್ಲಿ ಶ್ರೀರಾಮನನ್ನು ಆವಾಹಿಸಿ ಷೋಡಶೋಪಚಾರಗಳಿಂದ ಪೂಜಿಸಬೇಕು ಅನಂತರ ಮುಂದೆ ಹೇಳುವ ಶ್ಲೋಕಗಳನ್ನು ಪಠಿಸಿ ಪಾರಾಯಣವನ್ನು ಆರಂಭಿಸಬೇಕು ಆ ದಿನದ ಪಾರಾಯಣವು ಸಮಾಪ್ತ ವಾದಮೇಲೆ ಪುನಃ ಪೂಜೆ ಮಾಡಬೇಕು. ಪಾರಾಯಣ ಕ್ರಮದಲ್ಲಿರುವ ಮೂರು ಸಂಪ್ರದಾಯಗಳನ್ನು ಕೆಳಗೆ ಬರೆದಿದೆ. ೧ನೆಯ ಸಂಪ್ರದಾಯವನ್ನು ಸಕಲರೂ ಯಾವ ಭೇದವೂ ಇಲ್ಲವೆ ಅನುಸರಿಸಬಹುದು ಶ್ರೀವೈಷ್ಣವರೂ ಮಾಧ್ವರೂ ಅನುಸರಿಸುವ ವಿಧಾನವನ್ನು ೨ ಮತ್ತು ೩ನೆಯ ಸಂಪ್ರದಾಯ ಕ್ರಮದಲ್ಲಿ ತಿಳಿಸಿದೆ

ವಸಂತನವರಾತ್ರ ಮತ್ತು ಶರನ್ನವರಾತ್ರಗಳಲ್ಲಿ ಶ್ರೀಮದ್ರಾಮಾಯಣದ ಪಾರಾಯಣವು ಪ್ರಶಸ್ತ

## ವಿಶ್ರಾಮಸ್ಥಲಗಳು

| | | | |
|---|---|---|---|
| ೧ನೆಯ ದಿನ | ಬಾಲಕಾಂಡದ | ೭೭ನೆಯ | ಸರ್ಗ ಪೂರ್ತಿ |
| ೨ನೆಯ ದಿನ | ಅಯೋಧ್ಯಾಕಾಂಡದ | ೬೦ | ,, |
| ೩ನೆಯ ದಿನ | ,, | ೧೧೯ | ,, |
| ೪ನೆಯ ದಿನ | ಅರಣ್ಯಕಾಂಡದ | ೬೮ | ,, |
| ೫ನೆಯ ದಿನ | ಕಿಷ್ಕಿಂಧಾಕಾಂಡದ | ೪೯ | ,, |
| ೬ನೆಯ ದಿನ | ಸುಂದರಕಾಂಡದ | ೫೬ | ,, |
| ೭ನೆಯ ದಿನ | ಯುದ್ಧಕಾಂಡದ | ೫೦ನೆಯ | ಸರ್ಗ ಪೂರ್ತಿ |
| ೮ನೆಯ ದಿನ | ,, | ೧೧೧ | ,, |
| ೯ನೆಯ ದಿನ | ,, | ೧೩೧ | ,, |

೧೩೧ನೆಯ ಸರ್ಗದಲ್ಲಿ ಶ್ರೀರಾಮಪಟ್ಟಾಭಿಷೇಕ ಬರುತ್ತದೆ. ಈ ಸರ್ಗವನ್ನು ಮಾತ್ರ ಹತ್ತನೆಯ ದಿನದಲ್ಲಿ ಪುನಃ ಪಾರಾಯಣ ಮಾಡಿ ವಿಶೇಷ ಪೂಜೆಯನ್ನಾಚರಿಸುತ್ತಾರೆ. ಉತ್ತರಕಾಂಡಸಹಿತವಾಗಿ ರಾಮಾಯಣ ಪಾರಾಯಣ ಕ್ರಮವೂ ಉಂಟು ; ಅದು ನಮ್ಮಲ್ಲಿ ಬಳಕೆಯಲ್ಲಿಲ್ಲ.

೧

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ ।
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ॥ ೧

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಮ್ ॥ ೨

ದೋರ್ಭಿರ್ಯುಕ್ತಾ ಚತುರ್ಭಿಃ ಸ್ಫಟಿಕಮಣಿಮಯೀಮಕ್ಷಮಾಲಾಂ ದಧಾನಾ
ಹಸ್ತೇನೈಕೇನ ಪದ್ಮಂ ಸಿತಮಪಿ ಚ ಶುಕಂ ಪುಸ್ತಕಂ ಚಾಪರೇಣ ।
ಭಾಸಾ ಕುಂದೇಂದುಶಂಖಸ್ಫಟಿಕಮಣಿನಿಭಾ ಭಾಸಮಾನಾಽಸಮಾನಾ
ಸಾ ಮೇ ವಾಗ್ದೇವತೇಯಂ ನಿವಸತು ವದನೇ ಸರ್ವದಾ ಸುಪ್ರಸನ್ನಾ ॥ ೩

ಕೂಜಂತಂ ರಾಮ ರಾಮೇತಿ ಮಧುರಂ ಮಧುರಾಕ್ಷರಮ್ ।
ಆರುಹ್ಯ ಕವಿತಾಶಾಖಾಂ ವಂದೇ ವಾಲ್ಮೀಕಿಕೋಕಿಲಮ್ ॥ ೪

ವಾಲ್ಮೀಕೇರ್ಮುನಿಸಿಂಹಸ್ಯ ಕವಿತಾವನಚಾರಿಣಃ ॥
ಶೃಣ್ವನ್ ರಾಮಕಥಾನಾದಂ ಕೋ ನ ಯಾತಿ ಪರಾಂ ಗತಿಮ್ ॥ ೫

ಯಃ ಪಿಬನ್ ಸತತಂ ರಾಮಚರಿತಾಮೃತಸಾಗರಮ್ ।
ಅತೃಪ್ತಸ್ತಂ ಮುನಿಂ ವಂದೇ ಪ್ರಾಚೇತಸಮಕಲ್ಮಷಮ್ ॥ ೬

ಗೋಷ್ಪದೀಕೃತವಾರಾಶಿಂ ಮಶಕೀಕೃತರಾಕ್ಷಸಮ್ ।
ರಾಮಾಯಣಮಹಾಮಾಲಾರತ್ನಂ ವಂದೇಽನಿಲಾತ್ಮಜಮ್ ॥ ೭

ಅಂಜನಾನಂದನಂ ವೀರಂ ಜಾನಕೀಶೋಕನಾಶನಮ್ ।
ಕಪೀಶಮಕ್ಷಹಂತಾರಂ ವಂದೇ ಲಂಕಾಭಯಂಕರಮ್ ॥ ೮

ಉಲ್ಲಂಘ್ಯ ಸಿಂಧೋಃ ಸಲಿಲಂ ಸಲೀಲಂ ಯಃ ಶೋಕವಹ್ನಿಂ
ಜನಕಾತ್ಮಜಾಯಾಃ |
ಆದಾಯ ತೇನೈವ ದದಾಹ ಲಂಕಾಂ ನಮಾಮಿ ತಂ
ಪ್ರಾಂಜಲಿರಾಂಜನೇಯಮ್ || ೯

ಆಂಜನೇಯಮತಿಪಾಟಲಾನನಂ
ಕಾಂಚನಾದ್ರಿಕಮನೀಯವಿಗ್ರಹಮ್ |
ಪಾರಿಜಾತತರುಮೂಲವಾಸಿನಂ
ಭಾವಯಾಮಿ ಪವಮಾನನಂದನಮ್ || ೧೦

ಯತ್ರ ಯತ್ರ ರಘುನಾಥಕೀರ್ತನಂ
ತತ್ರ ತತ್ರ ಕೃತಮಸ್ತಕಾಂಜಲಿಮ್ |
ಬಾಷ್ಪವಾರಿಪರಿಪೂರ್ಣಲೋಚನಂ
ಮಾರುತಿಂ ನಮತ ರಾಕ್ಷಸಾಂತಕಮ್ || ೧೧

ಮನೋಜವಂ ಮಾರುತತುಲ್ಯವೇಗಂ
ಜಿತೇಂದ್ರಿಯಂ ಬುದ್ಧಿಮತಾಂ ವರಿಷ್ಠಮ್ |
ವಾತಾತ್ಮಜಂ ವಾನರಯೂಥಮುಖ್ಯಂ
ಶ್ರೀರಾಮದೂತಂ ಶಿರಸಾ ನಮಾಮಿ || ೧೨

ಯಃ ಕರ್ಣಾಂಜಲಿಸಂಪುಟೈರಹರಹಃ ಸಮ್ಯಕ್ಪಿಬತ್ಯಾದರಾ-
ದ್ವಾಲ್ಮೀಕೇರ್ವದನಾರವಿಂದಗಲಿತಂ ರಾಮಾಯಣಾಖ್ಯಂ ಮಧು |
ಜನ್ಮವ್ಯಾಧಿಜರಾವಿಪತ್ತಿಮರಣೈರತ್ಯಂತಸೋಪದ್ರವಂ
ಸಂಸಾರಂ ಸ ವಿಹಾಯ ಗಚ್ಛತಿ ಪುಮಾನ್ ವಿಷ್ಣೋಃ ಪದಂ
ಶಾಶ್ವತಮ್ || ೧೩

ತದುಪಗತಸಮಾಸಸಂಧಿಯೋಗಂ
ಸಮಮಧುರೋಪನತಾರ್ಥವಾಕ್ಯಬದ್ಧಮ್ |
ರಘುವರಚರಿತಂ ಮುನಿಪ್ರಣೀತಂ
ದಶಶಿರಸಶ್ಚ ವಧಂ ನಿಶಾಮಯಧ್ವಮ್ || ೧೪

ವಾಲ್ಮೀಕಿಗಿರಿಸಂಭೂತಾ ರಾಮಸಾಗರಗಾಮಿನೀ |
ಪುನಾತು ಭುವನಂ ಪುಣ್ಯಾ ರಾಮಾಯಣಮಹಾನದೀ || ೧೫

ಶ್ಲೋಕಸಾರಸಮಾಕೀರ್ಣಂ ಸರ್ಗಕಲ್ಲೋಲಸಂಕುಲಮ್ |
ಕಾಂಡಗ್ರಾಹಮಹಾಮೀನಂ ವಂದೇ ರಾಮಾಯಣಾರ್ಣವಮ್ || ೧೬

ವೇದವೇದ್ಯೇ ಪರೇ ಪುಂಸಿ ಜಾತೇ ದಶರಥಾತ್ಮಜೇ |
ವೇದಃ ಪ್ರಾಚೇತಸಾದಾಸೀತ್ಸಾಕ್ಷಾದ್ರಾಮಾಯಣಾತ್ಮನಾ || ೧೭

ವೈದೇಹೀಸಹಿತಂ ಸುರದ್ರುಮತಲೇ ಹೈಮೇ ಮಹಾಮಂಟಪೇ
ಮಧ್ಯೇಪುಷ್ಪಕಮಾಸನೇ ಮಣಿಮಯೇ ವೀರಾಸನೇ ಸುಸ್ಥಿತಮ್ |
ಅಗ್ರೇ ವಾಚಯತಿ ಪ್ರಭಂಜನಸುತೇ ತತ್ತ್ವಂ ಮುನಿಭ್ಯಃ ಪರಂ
ವ್ಯಾಖ್ಯಾಂತಂ ಭರತಾದಿಭಿಃ ಪರಿವೃತಂ ರಾಮಂ ಭಜೇ ಶ್ಯಾಮಲಮ್ || ೧೮
ವಾಮೇ ಭೂಮಿಸುತಾ ಪುರಶ್ಚ ಹನುಮಾನ್ ಪಶ್ಚಾತ್ ಸುಮಿತ್ರಾಸುತಃ
ಶತ್ರುಘ್ನೋ ಭರತಶ್ಚ ಪಾರ್ಶ್ವದಲಯೋರ್ವಾಯ್ವಾದಿಕೋಣೇಷು ಚ |
ಸುಗ್ರೀವಶ್ಚ ವಿಭೀಷಣಶ್ಚ ಯುವರಾಟ್ ತಾರಾಸುತೋ ಜಾಂಬವಾನ್
ಮಧ್ಯೇ ನೀಲಸರೋಜಕೋಮಲರುಚಿಂ ರಾಮಂ ಭಜೇ ಶ್ಯಾಮಲಮ್ || ೧೯

ನಮೋಽಸ್ತು ರಾಮಾಯ ಸಲಕ್ಷ್ಮಣಾಯ
ದೇವ್ಯೈ ಚ ತಸ್ಯೈ ಜನಕಾತ್ಮಜಾಯೈ |
ನಮೋಽಸ್ತು ರುದ್ರೇಂದ್ರಯಮಾನಿಲೇಭ್ಯೋ
ನಮೋಽಸ್ತು ಚಂದ್ರಾರ್ಕಮರುದ್ಗಣೇಭ್ಯಃ || ೨೦

ಮೇಲಿನ ಶ್ಲೋಕಗಳನ್ನು ಪಠಿಸಿದ ಮೇಲೆ ರಾಮಾಯಣ ಪಾರಾಯಣದ ಆರಂಭದಲ್ಲಿ ಮುಂದೆ ತಿಳಿಸುವ ಪ್ರಕಾರ ಮಂತ್ರನ್ಯಾಸಾದಿಗಳನ್ನು ಮಾಡಿಕೊಳ್ಳಬೇಕು ಅನಂತರ ಪ್ರತಿಯೊಂದು ಕಾಂಡಕ್ಕೂ ಪ್ರತ್ಯೇಕವಾಗಿ ಮಂತ್ರನ್ಯಾಸಾದಿಗಳನ್ನು ಮಾಡಿಕೊಳ್ಳುವ ಪದ್ಧತಿ ಕೆಲವರಲ್ಲಿದೆ. ಹಾಗಲ್ಲದೆ ಮೇಲ್ಕಂಡ ಶ್ಲೋಕಗಳನ್ನು ಪಠಿಸಿ ಮಂತ್ರನ್ಯಾಸಾದಿಗಳಿಲ್ಲದೆ ನೇರವಾಗಿ ಪಾರಾಯಣವನ್ನಾರಂಭಿಸುವ ಪದ್ಧತಿಯೂ ಉಂಟು.

ಅಸ್ಯ ಶ್ರೀವಾಲ್ಮೀಕಿರಾಮಾಯಣ ಮಹಾಮಂತ್ರಸ್ಯ | ಭಗವಾನ್ ವಾಲ್ಮೀಕಿಃ ಋಷಿಃ | ಅನುಷ್ಟುಭಾದಿ ಛಂದಃ | ಶ್ರೀರಾಮಃ ಪರಮಾತ್ಮಾ ದೇವತಾ | ಅಭಯಂ ಸರ್ವಭೂತೇಭ್ಯಃ ಇತಿ ಬೀಜಮ್ | ಅಂಗುಲ್ಯಗ್ರೇಣ ತಾನ್ ಹನ್ಯಾಮಿತಿಶಕ್ತಿಃ | ಏತದಸ್ತ್ರಬಲಂ ದಿವ್ಯಮಿತಿ ಕೀಲಕಮ್ |

ಮಮಾಭಿಷ್ಟಸಿದ್ಧ್ಯರ್ಥಂ ಜಪೇ ವಿನಿಯೋಗಃ | ಓಮ್ ಆಪದಾಮಪಹರ್ತಾರ ಮಿತ್ಯಂಗುಷ್ಠಿಕಾಭ್ಯಾಂ ನಮಃ | ದಾತಾರಮಿತಿ ತರ್ಜನೀಭ್ಯಾಂ ನಮಃ | ಸರ್ವಸಂಪದಾಮಿತಿ ಮಧ್ಯಮಾಭ್ಯಾಂ ನಮಃ | ಲೋಕಾಭಿರಾಮಮಿತ್ಯ ನಾಮಿಕಾಭ್ಯಾಂ ನಮಃ | ಶ್ರೀರಾಮಮಿತಿ ಕನಿಷ್ಠಿಕಾಭ್ಯಾಂ ನಮಃ | ಭೂಯೋ ಭೂಯೋನಮಾಮ್ಯಹಮಿತಿ ಕರತಲಕರಪೃಷ್ಠಾಭ್ಯಾಂ ನಮಃ || ಓಮ್ ಆಪದಾಮಪಹರ್ತಾರಮಿತಿ ಹೃದಯಾಯ ನಮಃ | ದಾತಾರಮಿತಿ ಶಿರಸೇ ಸ್ವಾಹಾ | ಸರ್ವಸಂಪದಾಮಿತಿ ಶಿಖಾಯೈ ವೌಷಟ್ | ಲೋಕಾಭಿರಾಮಮಿತಿ ಕವಚಾಯಹುಂ | ಶ್ರೀರಾಮಮಿತಿ ನೇತ್ರತ್ರಯಾಯ ವೌಷಟ್ | ಭೂಯೋ ಭೂಯೋ ನಮಾಮ್ಯಹಮಿತಿ ಅಸ್ತ್ರಾಯ ಫಟ್ || ಭೂರ್ಭುವಸ್ಸುವರೋಮಿತಿ ದಿಗ್ಬಂಧಃ ||

## ಅಥ ಧ್ಯಾನಮ್

ಆಪದಾಮಪಹರ್ತಾರಂ ದಾತಾರಂ ಸರ್ವಸಂಪದಾಮ್ |
ಲೋಕಾಭಿರಾಮಂ ಶ್ರೀರಾಮಂ ಭೂಯೋ ಭೂಯೋ ನಮಾಮ್ಯಹಮ್ ||

ಶ್ರೀರಾಮಚಂದ್ರಪರಬ್ರಹ್ಮಣೇ ನಮಃ

---

**ವಿ.ಸೂ.** : ಬಾಲಕಾಂಡದ ೭೩ನೆಯ ಸರ್ಗದಲ್ಲಿ ಸೀತಾವಿವಾಹ ಪ್ರಕರಣವು ಬರುತ್ತದೆ. ಅಲ್ಲಿ 'ಇಯಂ ಸೀತಾ ಮಮ ಸುತಾ . .' ಎಂಬ ಶ್ಲೋಕವನ್ನು ಪಠಿಸುವುದಕ್ಕೆ ಮೊದಲು ಧ್ಯಾನಾವಾಹನಾದಿ ನೀರಾಜನಾಂತವಾಗಿ ವಿಶೇಷಪೂಜೆಯನ್ನಾಚರಿಸಬೇಕು.

## ೨. ಶ್ರೀವೈಷ್ಣವಸಂಪ್ರದಾಯ

ಲಕ್ಷ್ಮೀನಾಥಸಮಾರಂಭಾಂ ನಾಥಯಾಮುನಮಧ್ಯಮಾಮ್ |
ಅಸ್ಮದಾಚಾರ್ಯಪರ್ಯಂತಾಂ ವಂದೇ ಗುರುಪರಂಪರಾಮ್ || ೧

ಯೋ ನಿತ್ಯಮಚ್ಯುತಪದಾಂಬುಜಯುಗ್ಮರುಕ್ಮ
ವ್ಯಾಮೋಹತಸ್ತದಿತರಾಣಿ ತೃಣಾಯ ಮೇನೇ |
ಅಸ್ಮದ್ಗುರೋರ್ಭಗವತೋಽಸ್ಯ ದಯೈಕಸಿಂಧೋಃ
ರಾಮಾನುಜಸ್ಯ ಚರಣೌ ಶರಣಂ ಪ್ರಪದ್ಯೇ || ೨

ಮಾತಾ ಪಿತಾ ಯುವತಯಸ್ತನಯಾ ವಿಭೂತಿಃ
ಸರ್ವಂ ಯದೇವ ನಿಯಮೇನ ಮದನ್ವಯಾನಾಮ್ |
ಆದ್ಯಸ್ಯ ನಃ ಕುಲಪತೇರ್ವಕುಲಾಭಿರಾಮಂ
ಶ್ರೀಮತ್ತದಂಘ್ರಿಯುಗಲಂ ಪ್ರಣಮಾಮಿ ಮೂರ್ಧ್ನಾ || ೩

ಭೂತಂ ಸರಶ್ಚ ಮಹದಾಹ್ವಯಭಟ್ಟನಾಥ
ಶ್ರೀಭಕ್ತಿಸಾರಕುಲಶೇಖರಯೋಗಿವಾಹಾನ್ |
ಭಕ್ತಾಂಘ್ರಿರೇಣು ಪರಕಾಲಯತೀಂದ್ರ ಮಿಶ್ರಾನ್
ಶ್ರೀಮತ್ಪರಾಂಕುಶಮುನಿಂ ಪ್ರಣತೋಽಸ್ಮಿ ನಿತ್ಯಮ್ || ೪

ಪಿತಾಮಹಸ್ಯಾಪಿ ಪಿತಾಮಹಾಯ
ಪ್ರಾಚೇತಸಾದೇಶಫಲಪ್ರದಾಯ |
ಶ್ರೀ ಭಾಷ್ಯಕಾರೋತ್ತಮದೇಶಿಕಾಯ
ಶ್ರೀಶೈಲಪೂರ್ಣಾಯ ನಮೋನಮಃ ಸ್ತಾತ್ || ೫

ಆಮೇಲೆ ತಮ್ಮ ಆಚಾರ್ಯಪ್ರಭೃತಿ ಶ್ರೀಮನ್ನಾರಾಯಣ ಪರ್ಯಂತವಾಗಿ ಸಾಂಪ್ರದಾಯಿಕ ಶ್ಲೋಕಗಳನ್ನು ಹೇಳಿಕೊಳ್ಳಬೇಕು. ಅನಂತರ—

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ |
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ || ೬

ಯಸ್ಯ ದ್ವಿರದವಕ್ತ್ರಾದ್ಯಾಃ ಪಾರಿಷದ್ಯಾಃ ಪರಃಶತಮ್ |
ವಿಘ್ನಂ ನಿಘ್ನಂತಿ ಸತತಂ ವಿಷ್ವಕ್ಸೇನಮುಪಾಸ್ಮಹೇ || ೭

ಜ್ಞಾನಾನಂದಮಯಂ ದೇವಂ ನಿರ್ಮಲಸ್ಫಟಿಕಾಕೃತಿಮ್ |
ಆಧಾರಂ ಸರ್ವವಿದ್ಯಾನಾಂ ಹಯಗ್ರೀವಮುಪಾಸ್ಮಹೇ || ೮

ಎಂದು ಪಠಿಸಿ ‘ ಕೂಜಂತಂ ರಾಮ ರಾಮೇತಿ ’ ಎಂದು ಆರಂಭಿಸಿ ಮುಂದಕ್ಕೆ ಗನೆಯ ಸಂಪ್ರದಾಯದಲ್ಲಿ ಹೇಳಿದ ಶ್ಲೋಕಗಳನ್ನು ಪಠಿಸಬೇಕು.

## ೩. ಮಾಧ್ವಸಂಪ್ರದಾಯ

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ ।
ಪ್ರಸನ್ನವದನಂ ಧ್ಯಾಯೇತ್ ಸರ್ವ ವಿಘ್ನೋಪಶಾಂತಯೇ ॥ ೧

ಲಕ್ಷ್ಮೀನಾರಾಯಣಂ ವಂದೇ ತದ್ಭಕ್ತಪ್ರವರೋ ಹಿ ಯಃ ।
ಶ್ರೀಮದಾನಂದತೀರ್ಥಾಖ್ಯೋ ಗುರುಸ್ತಂ ಚ ನಮಾಮ್ಯಹಮ್ ॥ ೨

ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ ।
ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ ॥ ೩

ಸರ್ವಸಿದ್ಧಿಪ್ರಶಮನಂ ಸರ್ವಸಿದ್ಧಿಕರಂ ಪರಮ್ ।
ಸರ್ವಜೀವಪ್ರಣೇತಾರಂ ವಂದೇ ವಿಜಯದಂ ಹರಿಮ್ ॥ ೪

ಸರ್ವಾಭೀಷ್ಟಪ್ರದಂ ರಾಮಂ ಸರ್ವಾರಿಷ್ಟನಿವಾರಕಮ್ ।
ಜಾನಕೀಜಾನಿಮನಿಶಂ ವಂದೇ ಮದ್ಗುರುವಂದಿತಮ್ ॥ ೫

ಅಭ್ರಮಂ ಭಂಗರಹಿತಮಜಡಂ ವಿಮಲಂ ಸದಾ ।
ಆನಂದತೀರ್ಥಮತುಲಂ ಭಜೇ ತಾಪತ್ರಯಾಪಹಮ್ ॥ ೬

ಭವತಿ ಯದನುಭಾವಾದೇಡಮೂಕೋಽಪಿ ವಾಗ್ಮೀ ।
ಜಡಮತಿರಪಿ ಜಂತುರ್ಜಾಯತೇ ಪ್ರಾಜ್ಞಮೌಲಿಃ ॥
ಸಕಲವಚನಚೇತೋದೇವತಾ ಭಾರತೀ ಸಾ ।
ಮಮ ವಚಸಿ ವಿಧತ್ತಾಂ ಸನ್ನಿಧಿಂ ಮಾನಸೇ ಚ ॥ ೭

ಮಿಥ್ಯಾಸಿದ್ಧಾಂತದುರ್ಧ್ವಾಂತವಿಧ್ವಂಸನವಿಚಕ್ಷಣಃ ।
ಜಯತೀರ್ಥಾಖ್ಯತರಣಿರ್ಭಾಸತಾಂ ನೋ ಹೃದಂಬುಜೇ ॥ ೮

ಚಿತ್ರೈಃ ಪದೈಶ್ಚ ಗಂಭೀರೈರ್ವಾಕ್ಯೈರ್ಮಾನೈರಖಂಡಿತೈಃ ।
ಗುರುಭಾವಂ ವ್ಯಂಜಯಂತೀ ಭಾತಿ ಶ್ರೀ ಜಯತೀರ್ಥವಾಕ್ ॥ ೯

ಅನಂತರ 'ಕೂಜಂತಂ ರಾಮರಾಮೇತಿ' ಎಂದು ಆರಂಭಿಸಿ ಮುಂದಕ್ಕೆ ೧ನೆಯ ಸಂಪ್ರದಾಯದಲ್ಲಿ ಹೇಳಿದ ಶ್ಲೋಕಗಳನ್ನು ಪಠಿಸಬೇಕು.

ಪಾರಾಯಣದ ಸಮಾಪ್ತಿಯಲ್ಲಿ ಪಠಿಸುವ ಶ್ಲೋಕಗಳು :

೧

ಸ್ವಸ್ತಿ ಪ್ರಜಾಭ್ಯಃ ಪರಿಪಾಲಯಂತಾಂ
ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ |
ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ
ಲೋಕಾಃ ಸಮಸ್ತಾಃ ಸುಖಿನೋ ಭವಂತು || ೧

ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ |
ದೇಶೋಽಯಂ ಕ್ಷೋಭರಹಿತೋ ಬ್ರಾಹ್ಮಣಾಃ ಸಂತು ನಿರ್ಭಯಾಃ ||

ಅಪುತ್ರಾಃ ಪುತ್ರಿಣಃ ಸಂತು ಪುತ್ರಿಣಃ ಸಂತು ಪೌತ್ರಿಣಃ |
ಅಧನಾಃ ಸಧನಾಃ ಸಂತು ಜೀವಂತು ಶರದಾಂ ಶತಮ್ || ೩

ಚರಿತಂ ರಘುನಾಥಸ್ಯ ಶತಕೋಟಿಪ್ರವಿಸ್ತರಮ್ |
ಏಕೈಕಮಕ್ಷರಂ ಪ್ರೋಕ್ತಂ ಮಹಾಪಾತಕನಾಶನಮ್ || ೪

ಶೃಣ್ವನ್ ರಾಮಾಯಣಂ ಭಕ್ತ್ಯಾ ಯಃ ಪಾದಂ ಪದಮೇವ ವಾ |
ಸ ಯಾತಿ ಬ್ರಹ್ಮಣಃ ಸ್ಥಾನಂ ಬ್ರಹ್ಮಣಾ ಪೂಜ್ಯತೇ ಸದಾ || ೫

ರಾಮಾಯ ರಾಮಭದ್ರಾಯ ರಾಮಚಂದ್ರಾಯ ವೇಧಸೇ |
ರಘುನಾಥಾಯ ನಾಥಾಯ ಸೀತಾಯಾಃ ಪತಯೇ ನಮಃ || ೬

ಯನ್ಮಂಗಲಂ ಸಹಸ್ರಾಕ್ಷೇ ಸರ್ವದೇವನಮಸ್ಕೃತೇ |
ವೃತ್ರನಾಶೇ ಸಮಭವತ್ತತ್ತೇ ಭವತು ಮಂಗಲಮ್ || ೭

ಮಂಗಲಂ ಕೋಸಲೇಂದ್ರಾಯ ಮಹನೀಯಗುಣಾತ್ಮನೇ |
ಚಕ್ರವರ್ತಿತನೂಜಾಯ ಸಾರ್ವಭೌಮಾಯ ಮಂಗಲಮ್ || ೮

ಯನ್ಮಂಗಲಂ ಸುಪರ್ಣಸ್ಯ ವಿನತಾಕಲ್ಪಯತ್ ಪುರಾ |
ಅಮೃತಂ ಪ್ರಾರ್ಥಯಾನಸ್ಯ ತತ್ತೇ ಭವತು ಮಂಗಲಮ್ || ೯

ಅಮೃತೋತ್ಪಾದನೇ ದೈತ್ಯಾನ್ ಘ್ನತೋ ವಜ್ರಧರಸ್ಯ ಯತ್ |
ಅದಿತಿರ್ಮಂಗಲಂ ಪ್ರಾದಾತ್ತತ್ತೇ ಭವತು ಮಂಗಲಮ್ || ೧೦

ತ್ರೀನ್ ವಿಕ್ರಮಾನ್ ಪ್ರಕ್ರಮತೋ ವಿಷ್ಣೋರಮಿತತೇಜಸಃ |
ಯದಾಸೀನ್ಮಂಗಲಂ ರಾಮ ತತ್ತೇ ಭವತು ಮಂಗಲಮ್ || ೧೧

ಋತವಃ ಸಾಗರಾ ದ್ವೀಪಾ ವೇದಾ ಲೋಕಾ ದಿಶಶ್ಚ ತೇ |
ಮಂಗಲಾನಿ ಮಹಾಬಾಹೋ ದಿಶಂತು ತವ ಸರ್ವದಾ || ೧೨

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್ |
ಕರೋಮಿ ಯದ್ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ || ೧೩

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ಚ ಯದ್ಭವೇತ್ |
ತತ್ಸರ್ವಂ ಕ್ಷಮ್ಯತಾಂ ದೇವ ಶ್ರೀರಾಘವ ನಮೋಽಸ್ತು ತೇ || ೧೪

ಅನೇನ ಶ್ರೀಮದ್ರಾಮಾಯಣ ಪಾರಾಯಣೇನ ಭಗವಾನ್ ಸರ್ವದೇವಾತ್ಮಕಃ
ಸೀತಾಲಕ್ಷ್ಮಣಭರತಶತ್ರುಘ್ನಹನೂಮತ್ಸಮೇತಃ ಶ್ರೀರಾಮಚಂದ್ರಃ
ಸುಪ್ರೀತಃ ಸುಪ್ರಸನ್ನೋ ವರದೋ ಭವತು

ಶ್ರೀರಾಮಚಂದ್ರಾರ್ಪಣಮಸ್ತು

## ೨. ಶ್ರೀವೈಷ್ಣವಸಂಪ್ರದಾಯ

ಏವಮೇತತ್ ಪುರಾವೃತ್ತಮಾಖ್ಯಾನಂ ಭದ್ರಮಸ್ತು ವಃ |
ಪ್ರವ್ಯಾಹರತ ವಿಸ್ರಬ್ಧಂ ಬಲಂ ವಿಷ್ಣೋಃ ಪ್ರವರ್ಧತಾಮ್ || ೧

ಲಾಭಸ್ತೇಷಾಂ ಜಯಸ್ತೇಷಾಂ ಕುತಸ್ತೇಷಾಂ ಪರಾಭವಃ |
ಯೇಷಾಮಿಂದೀವರಶ್ಯಾಮೋ ಹೃದಯೇ ಸುಪ್ರತಿಷ್ಠಿತಃ || ೨

ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ |
ದೇಶೋಽಯಂ ಕ್ಷೋಭರಹಿತೋ ಬ್ರಾಹ್ಮಣಾಃ ಸಂತು ನಿರ್ಭಯಾಃ|| ೩

ಕಾವೇರೀ ವರ್ಧತಾಂ ಕಾಲೇ ಕಾಲೇ ವರ್ಷತು ವಾಸವಃ |
ಶ್ರೀರಂಗನಾಥೋ ಜಯತು ಶ್ರೀರಂಗಶ್ರೀಶ್ಚ ವರ್ಧತಾಮ್|| ೪

ಸ್ವಸ್ತಿ ಪ್ರಜಾಭ್ಯಃ ಪರಿಪಾಲಯಂತಾಂ
ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ |
ಗೋಬ್ರಾಹ್ಮಣ್ಯೇಭ್ಯಃ ಶುಭಮಸ್ತು ನಿತ್ಯಂ
ಲೋಕಾಃ ಸಮಸ್ತಾಃ ಸುಖಿನೋ ಭವಂತು || ೫

ಮಂಗಲಂ ಕೋಸಲೇಂದ್ರಾಯ ಮಹನೀಯಗುಣಾಬ್ಧಯೇ |
ಚಕ್ರವರ್ತಿತನೂಜಾಯ ಸಾರ್ವಭೌಮಾಯ ಮಂಗಲಮ್ || ೬

ವೇದವೇದಾಂತವೇದ್ಯಾಯ ಮೇಘಶ್ಯಾಮಲಮೂರ್ತಯೇ |
ಪುಂಸಾಂ ಮೋಹನರೂಪಾಯ ಪುಣ್ಯಶ್ಲೋಕಾಯ ಮಂಗಲಮ್ || ೭

ವಿಶ್ವಾಮಿತ್ರಾಂತರಂಗಾಯ ಮಿಥಿಲಾನಗರೀಪತೇಃ |
ಭಾಗ್ಯಾನಾಂ ಪರಿಪಾಕಾಯ ಭವ್ಯರೂಪಾಯ ಮಂಗಲಮ್ || ೮

ಪಿತೃಭಕ್ತಾಯ ಸತತಂ ಭ್ರಾತೃಭಿಃ ಸಹ ಸೀತಯಾ |
ನಂದಿತಾಖಿಲಲೋಕಾಯ ರಾಮಭದ್ರಾಯ ಮಂಗಲಮ್ || ೯

ತ್ಯಕ್ತಸಾಕೇತವಾಸಾಯ ಚಿತ್ರಕೂಟವಿಹಾರಿಣೇ |
ಸೇವ್ಯಾಯ ಸರ್ವಯಮಿನಾಂ ಧೀರೋದಾರಾಯ ಮಂಗಲಮ್ || ೧೦

ಸೌಮಿತ್ರಿಣಾ ಚ ಜಾನಕ್ಯಾ ಚಾಪಬಾಣಾಸಿಧಾರಿಣೇ |
ಸಂಸೇವ್ಯಾಯ ಸದಾ ಭಕ್ತ್ಯಾ ಸ್ವಾಮಿನೇ ಮಮ ಮಂಗಲಮ್ || ೧೧

ದಂಡಕಾರಣ್ಯವಾಸಾಯ ಖಂಡಿತಾಮರಶತ್ರವೇ |
ಗೃಧ್ರರಾಜಾಯ ಭಕ್ತಾಯ ಮುಕ್ತಿದಾಯಾಸ್ತು ಮಂಗಲಮ್ || ೧೨

ಸಾದರಂ ಶಬರೀದತ್ತಫಲಮೂಲಾಭಿಲಾಷಿಣೇ |
ಸೌಲಭ್ಯಪರಿಪೂರ್ಣಾಯ ಸತ್ತ್ವೋದ್ರಿಕ್ತಾಯ ಮಂಗಲಮ್ || ೧೩

ಹನುಮತ್ಸಮವೇತಾಯ ಹರೀಶಾಭೀಷ್ಟದಾಯಿನೇ |
ವಾಲಿಪ್ರಮಥನಾಯಾಸ್ತು ಮಹಾಧೀರಾಯ ಮಂಗಲಮ್ || ೧೪

ಶ್ರೀಮತೇ ರಘುವೀರಾಯ ಸೇತೂಲ್ಲಂಘಿತಸಿಂಧವೇ |
ಜಿತರಾಕ್ಷಸರಾಜಾಯ ರಣಧೀರಾಯ ಮಂಗಲಮ್ || ೧೫

ಆಸಾದ್ಯ ನಗರೀಂ ದಿವ್ಯಾಮಭಿಷಿಕ್ತಾಯ ಸೀತಯಾ |
ರಾಜಾಧಿರಾಜರಾಜಾಯ ರಾಮಭದ್ರಾಯ ಮಂಗಲಮ್ || ೧೬

ಬ್ರಹ್ಮಾದಿದೇವಸೇವ್ಯಾಯ ಬ್ರಹ್ಮಣ್ಯಾಯ ಮಹಾತ್ಮನೇ |
ಜಾನಕೀಪ್ರಾಣನಾಥಾಯ ರಘುನಾಥಾಯ ಮಂಗಲಮ್ || ೧೭

ಮಂಗಲಾಶಾಸನಪರೈರ್ಮದಾಚಾರ್ಯಪುರೋಗಮೈಃ |
ಸರ್ವೈಶ್ಚ ಪೂರ್ವೈರಾಚಾರ್ಯೈಃ ಸತ್ಕೃತಾಯಾಸ್ತು ಮಂಗಲಮ್ || ೧೮

## ೩. ಮಾಧ್ವಸಂಪ್ರದಾಯ

ಸ್ವಸ್ತಿ ಪ್ರಜಾಭ್ಯಃ ಪರಿಪಾಲಯಂತಾಂ
ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ |
ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ
ಲೋಕಾಃ ಸಮಸ್ತಾಃ ಸುಖಿನೋ ಭವಂತು || ೧

ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ |
ದೇಶೋಽಯಂ ಕ್ಷೋಭರಹಿತೋ ಬ್ರಾಹ್ಮಣಾಃ ಸಂತು ನಿರ್ಭಯಾಃ ||

ಲಾಭಸ್ತೇಷಾಂ ಜಯಸ್ತೇಷಾಂ ಕುತಸ್ತೇಷಾಂ ಪರಾಭವಃ |
ಯೇಷಾಮಿಂದೀವರಶ್ಯಾಮೋ ಹೃದಯೇ ಸುಪ್ರತಿಷ್ಠಿತಃ || ೩

ಮಂಗಲಂ ಕೋಸಲೇಂದ್ರಾಯ ಮಹನೀಯಗುಣಾಬ್ಧಯೇ |
ಚಕ್ರವರ್ತಿತನೂಜಾಯ ಸಾರ್ವಭೌಮಾಯ ಮಂಗಲಮ್ || ೪

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್ |
ಕರೋಮಿ ಯದ್ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ || ೫

---

ಡಾ||



ಯಃ ಪೃಥ್ವೀಭರವಾರಣಾಯ ದಿವಿಜೈಃ ಸಂಪ್ರಾರ್ಥಿತಶ್ಚಿನ್ಮಯಃ
ಸಂಜಾತಃ ಪೃಥಿವೀತಲೇ ರವಿಕುಲೇ ಮಾಯಾಮನುಷ್ಯೋಽವ್ಯಯಃ |
ನಿಶ್ಚಕ್ರಂ ಹತರಾಕ್ಷಸಃ ಪುನರಗಾದ್ಬ್ರಹ್ಮತ್ವಮಾದ್ಯಂ ಸ್ಥಿರಾಂ
ಕೀರ್ತಿಂ ಪಾಪಹರಾಂ ವಿಧಾಯ ಜಗತಾಂ ತಂ ಜಾನಕೀಶಂ ಭಜೇ ||

—ಅಧ್ಯಾತ್ಮರಾಮಾಯಣ

೦ ೦ ೦

ರಾಮ ಇತ್ಯಭಿರಾಮೇಣ ವಪುಷಾ ತಸ್ಯ ಚೋದಿತಃ |
ನಾಮಧೇಯಂ ಗುರುಶ್ಚಕ್ರೇ ಜಗತ್ಪ್ರಥಮಮಂಗಲಮ್ ||

—ಕಾಳಿದಾಸ

೦ ೦ ೦

ಪಾಪ್ಮಭ್ಯಶ್ಚ ಪುನಾತಿ ವರ್ಧಯತಿ ಚ ಶ್ರೇಯಾಂಸಿ ಸೇಯಂ ಕಥಾ |
ಮಾಂಗಲ್ಯಾ ಚ ಮನೋಹರಾ ಚ ಜಗತಾಂ ಮಾತೇವ ಗಂಗೇವ ಚ ||

—ಭವಭೂತಿ

೦ ೦ ೦

ಜ್ಯೇಷ್ಠೋ ಜಯತಿ ವಾಲ್ಮೀಕಿಃ ಸರ್ಗಬಂಧೇ ಪ್ರಜಾಪತಿಃ |
ಯಃ ಸರ್ವಹೃದಯಾಲೀನಂ ಕಾವ್ಯಂ ರಾಮಾಯಣಂ ವ್ಯಧಾತ್ ||
ನಮಃ ಸರ್ವೋಪಜೀವ್ಯಂ ತಂ ಕವೀನಾಂ ಚಕ್ರವರ್ತಿನಮ್ |
ಯಸ್ಯೇಂದುಧವಲೈಃ ಶ್ಲೋಕೈರ್ಭೂಷಿತಾ ಭುವನತ್ರಯೀ ||

—ಕ್ಷೇಮೇಂದ್ರ



## ರಾಮಾಯಣ ಪ್ರಕಾಶನ ಸಮಿತಿ ಸದಸ್ಯರು

ಶ್ರೀಯುತರಾದ—

೧ ಹೆಚ್ ಎಸ್ ಕೃಷ್ಣಸ್ವಾಮಿ
೨ ಎಸ್. ಎಸ್. ಮೂರ್ತಿ
೩ ಹೆಚ್. ಸಿ ನಂಜುಂಡಭಟ್ಟ
೪ ಬಿ. ಕೆ ಅನಂತರಾಮಯ್ಯ
೫ ಟಿ. ಆರ್. ಶಾಮಣ್ಣ
೬ ಹೆಚ್ ವಿ. ಅಪ್ರಮೇಯ
೭ ಕೆ. ಸಿ. ಎಸ್. ರಾಮನ್
೮ ಎನ್. ರಂಗನಾಥಶರ್ಮಾ
೯ ಡಿ ಸಿ. ಅನಂತರಾಮಯ್ಯ (ಕಾರ್ಯದರ್ಶಿ)

# ಅನುಕ್ರಮಣಿಕೆ




| ಸರ್ಗ | ವಿಷಯ | ಪುಟ |
| --- | --- | --- |
| ೧ | ನಾರದವಾಕ್ಯಮ್ (ನಾರದರು ವಾಲ್ಮೀಕಿಮುನಿಗಳಿಗೆ ಶ್ರೀರಾಮನ ಚರಿತ್ರೆಯನ್ನು ಸಂಕ್ಷೇಪವಾಗಿ ತಿಳಿಸುವುದು) .. | ೧ |
| ೨ | ಬ್ರಹ್ಮಾಗಮನಮ್ (ಬ್ರಹ್ಮನು ಬಂದು ರಾಮಾಯಣವನ್ನು ರಚಿಸುವಂತೆ ವಾಲ್ಮೀಕಿಗಳಿಗೆ ಸೂಚಿಸುವುದು) | ೨೦ |
| ೩ | ಕಾವ್ಯಸಂಕ್ಷೇಪಃ (ರಾಮಾಯಣದಲ್ಲಿರುವ ವಿಷಯಗಳ ಸಂಗ್ರಹ) .... | ೨೯ |
| ೪ | ಅನುಕ್ರಮಣಿಕಾ (ಲವಕುಶರು ಶ್ರೀರಾಮನೆದುರಿಗೆ ರಾಮಾಯಣವನ್ನು ಹಾಡಿದುದು) | ೩೬ |
| ೫ | ಅಯೋಧ್ಯಾವರ್ಣನಾ (ಅಯೋಧ್ಯಾನಗರದ ವರ್ಣನೆ) .... | ೪೩ |
| ೬ | ರಾಜವರ್ಣನಾ (ದಶರಥನ ಮತ್ತು ಅವನ ಪ್ರಜೆಗಳ ವರ್ತನೆ) | ೪೮ |
| ೭ | ಅಮಾತ್ಯವರ್ಣನಾ (ದಶರಥನ ಅಮಾತ್ಯರ ವರ್ಣನೆ) .... | ೫೩ |
| ೮ | ಸುಮಂತ್ರವಾಕ್ಯಮ್ (ದಶರಥನೊಡನೆ ಸುಮಂತ್ರನ ಸಂಭಾಷಣೆ) | ೫೮ |
| ೯ | ಋಷ್ಯಶೃಂಗೋಪಾಖ್ಯಾನಮ್ (ಋಷ್ಯಶೃಂಗರ ಕಥೆ) .... | ೬೩ |
| ೧೦ | ಋಷ್ಯಶೃಂಗಸ್ಯಾಂಗದೇಶಾನಯನಪ್ರಕಾರಃ (ಋಷ್ಯಶೃಂಗರನ್ನು ರೋಮಪಾದನ ರಾಜ್ಯಕ್ಕೆ ಕರೆತಂದ ಬಗೆ) | ೬೭ |
| ೧೧ | ಋಷ್ಯಶೃಂಗಸ್ಯಾಯೋಧ್ಯಾಪ್ರವೇಶಃ (ಋಷ್ಯಶೃಂಗರು ಅಯೋಧ್ಯೆಗೆ ಬರುವುದು) | ೭೩ |
| ೧೨ | ಅಶ್ವಮೇಧಸಂಭಾರಃ (ಅಶ್ವಮೇಧಯಾಗವನ್ನು ಮಾಡಬೇಕೆಂದು ನಿರ್ಣಯಿಸುವುದು) | ೭೮ |
| ೧೩ | ಯಜ್ಞಶಾಲಾಪ್ರವೇಶಃ (ದಶರಥನು ಯಜ್ಞಶಾಲೆಯಲ್ಲಿ ದೀಕ್ಷೆಯನ್ನು ಸ್ವೀಕರಿಸುವುದು) . | ೮೨ |
| ೧೪ | ಅಶ್ವಮೇಧಃ (ಅಶ್ವಮೇಧಯಾಗ) . | ೮೯ |
| ೧೫ | ರಾವಣವಧೋಪಾಯಃ (ದೇವತೆಗಳು ಬ್ರಹ್ಮ ಮತ್ತು ವಿಷ್ಣುವಿನೊಡನೆ ರಾವಣನ ವಧೋಪಾಯವನ್ನು ಚಿಂತಿಸುವುದು) .... | ೧೦೦ |
| ೧೬ | ಪಾಯಸೋತ್ಪತ್ತಿಃ (ಪ್ರಾಜಾಪತ್ಯಪುರುಷನು ದಿವ್ಯಪಾಯಸವನ್ನು ದಶರಥನಿಗೆ ಕೊಡುವುದು) .... | ೧೦೬ |
| ೧೭ | ಋಕ್ಷವಾನರೋತ್ಪತ್ತಿಃ (ದೇವತೆಗಳು ವಾನರರನ್ನೂ ಭಲ್ಲೂಕಗಳನ್ನೂ ಪುತ್ರರನ್ನಾಗಿ ಸೃಜಿಸುವುದು) | ೧೧೨ |

೧೮ ಶ್ರೀರಾಮಾದ್ಯವತಾರಃ (ಶ್ರೀರಾಮ, ಲಕ್ಷ್ಮಣ, ಭರತ, ಶತ್ರುಘ್ನರ ಜನನ) ೧೧೮
೧೯ ವಿಶ್ವಾಮಿತ್ರವಾಕ್ಯಮ್ (ವಿಶ್ವಾಮಿತ್ರರು ಯಜ್ಞರಕ್ಷಣೆಗಾಗಿ ರಾಮನನ್ನು ಕಳುಹಿಸುವಂತೆ ಕೇಳುವುದು) .... ೧೨೯
೨೦ ದಶರಥವಾಕ್ಯಮ್ (ರಾಮನನ್ನು ಕಳಿಸಲಾರೆನೆಂದು ದಶರಥನು ನುಡಿಯುವುದು) ೧೩೩
೨೧ ವಸಿಷ್ಠವಾಕ್ಯಮ್ (ವಸಿಷ್ಠರು ದಶರಥನಿಗೆ ಹೇಳುವ ಬುದ್ಧಿವಾದ) ೧೩೮
೨೨ ವಿದ್ಯಾಪ್ರದಾನಮ್ (ರಾಮನಿಗೆ ಬಲಾ ಅತಿಬಲಾ ಎಂಬ ವಿದ್ಯೆಗಳನ್ನು ಉಪದೇಶಿಸುವುದು) ೧೪೨
೨೩ ಕಾಮಾಶ್ರಮವಾಸಃ (ಕಾಮಾಶ್ರಮದಲ್ಲಿ ವಾಸ) ೧೪೭
೨೪ ತಾಟಕಾವನಪ್ರವೇಶಃ (ವಿಶ್ವಾಮಿತ್ರರು ರಾಮಲಕ್ಷ್ಮಣರೊಡನೆ ತಾಟಕೆಯಿದ್ದ ವನಕ್ಕೆ ಹೋಗುವುದು) .... ೧೫೧
೨೫ ತಾಟಕಾವೃತ್ತಾಂತಃ (ತಾಟಕೆಯ ಪೂರ್ವಕಥೆ) .... ೧೫೬
೨೬ ತಾಟಕಾವಧಃ (ತಾಟಕೆಯ ವಧೆ) .... ೧೬೦
೨೭ ಅಸ್ತ್ರಗ್ರಾಮಪ್ರದಾನಮ್ (ಮಂತ್ರಾಸ್ತ್ರಗಳನ್ನು ರಾಮನಿಗೆ ಉಪದೇಶಿಸುವುದು) .... ೧೬೬
೨೮ ಅಸ್ತ್ರಸಂಹಾರಗ್ರಹಣಮ್ (ಅಸ್ತ್ರಗಳ ಉಪಸಂಹಾರಕ್ರಮವನ್ನು ಬೋಧಿಸಿ ಇನ್ನೂ ಕೆಲವು ಮಂತ್ರಾಸ್ತ್ರಗಳನ್ನು ಉಪದೇಶಿಸುವುದು) ೧೭೦
೨೯ ಸಿದ್ಧಾಶ್ರಮಃ (ಸಿದ್ಧಾಶ್ರಮದ ಪೂರ್ವಕಥೆ) .. ೧೭೪
೩೦ ಯಜ್ಞರಕ್ಷಣಮ್ (ರಾಮನು ಮಾರೀಚಾದಿ ರಾಕ್ಷಸರನ್ನು ನಿವಾರಿಸಿ ಯಜ್ಞವನ್ನು ರಕ್ಷಿಸುವುದು) ೧೮೦
೩೧ ಮಿಥಿಲಾಪ್ರಸ್ಥಾನಮ್ (ವಿಶ್ವಾಮಿತ್ರರು ರಾಮಲಕ್ಷ್ಮಣರೊಡನೆ ಮಿಥಿಲೆಗೆ ಪ್ರಯಾಣಮಾಡುವುದು.) .... ೧೮೫
೩೨ ಕುಶನಾಭಕನ್ಯೋಪಾಖ್ಯಾನಮ್ (ಕುಶನಾಭನ ಹೆಣ್ಣುಮಕ್ಕಳು ವಾಯುವಿನ ಪ್ರಭಾವದಿಂದ ಕುಬ್ಜೆಯರಾಗುವುದು) ೧೯೦
೩೩ ಬ್ರಹ್ಮದತ್ತವಿವಾಹಃ (ಬ್ರಹ್ಮದತ್ತನೊಡನೆ ಕುಶನಾಭಪುತ್ರಿಯರ ವಿವಾಹ) ೧೯೫
೩೪ ವಿಶ್ವಾಮಿತ್ರವಂಶವರ್ಣನಮ್ (ವಿಶ್ವಾಮಿತ್ರರ ಪೂರ್ವಜರ ವೃತ್ತಾಂತ) ೨೦೦
೩೫ ಉಮಾಗಂಗಾವೃತ್ತಾಂತಸಂಕ್ಷೇಪಃ (ಪಾರ್ವತೀ ಮತ್ತು ಗಂಗಾನದಿಗಳ ಸಂಕ್ಷಿಪ್ತ ಕಥೆ) .... ೨೦೪
೩೬ ಉಮಾಮಾಹಾತ್ಮ್ಯಮ್ (ಉಮಾಮಹೇಶ್ವರರ ವಿಹಾರ; ಉಮೆಯಿಂದ ದೇವತೆಗಳಿಗೂ ಭೂಮಿಗೂ ಬಂದ ಶಾಪ) .... ೨೦೮
೩೭ ಕುಮಾರೋತ್ಪತ್ತಿಃ (ಕಾರ್ತಿಕೇಯನ ಉತ್ಪತ್ತಿ) .... ೨೧೩
೩೮ ಸಗರಪುತ್ರಜನ್ಮ (ಸಗರನಿಗೆ ಪುತ್ರರ ಜನನ; ಯಜ್ಞಾರಂಭ) .... ೨೧೮

೩೯ ಪೃಥಿವೀವಿದಾರಣಮ್ (ಸಗರಪುತ್ರರು ಯಜ್ಞಾಶ್ವಕ್ಕಾಗಿ ಭೂಮಿಯನ್ನು ಅಗೆಯುವುದು) . ೨೨೨
೪೦ ಕಪಿಲದರ್ಶನಮ್ (ಸಗರಪುತ್ರರು ಕಪಿಲರನ್ನು ಕಾಣುವುದು; ಸಗರ ಪುತ್ರರ ಭಸ್ಮೀಭಾವ) . . ೨೨೬
೪೧ ಸಗರಯಜ್ಞಸಮಾಪ್ತಿಃ (ಅಂಶುಮಂತನು ಯಜ್ಞಾಶ್ವವನ್ನು ತಂದ ಮೇಲೆ ಯಜ್ಞಸಮಾಪ್ತಿ) . ೨೩೧
೪೨ ಭಗೀರಥವರಪ್ರದಾನಮ್ (ಭಗೀರಥನು ತಪಸ್ಸುಮಾಡಿ ಬ್ರಹ್ಮನಿಂದ ವರವನ್ನು ಪಡೆಯುವುದು) ... ೨೩೬
೪೩ ಗಂಗಾವತರಣಮ್ (ಗಂಗಾನದಿಯು ಇಳಿದು ಬಂದು ಸಗರಪುತ್ರರನ್ನು ಪವಿತ್ರಗೊಳಿಸುವುದು) .... ೨೪೧
೪೪ ಸಾಗರೋದ್ಧಾರಃ (ಬ್ರಹ್ಮನು ಭಗೀರಥನಿಗೆ ಸಗರಪುತ್ರರು ಉದ್ಧಾರ ವಾದರೆಂದು ತಿಳಿಸುವುದು) .... ೨೪೮
೪೫ ಅಮೃತೋತ್ಪತ್ತಿಃ (ಕ್ಷೀರಸಮುದ್ರದ ಮಥನ; ಅಮೃತೋತ್ಪತ್ತಿ) .... ೨೫೨
೪೬ ದಿತಿಗರ್ಭಭೇದಃ (ಇಂದ್ರನು ದಿತಿಯ ಗರ್ಭವನ್ನು ಭೇದಿಸುವುದು) .... ೨೬೦
೪೭ ವಿಶಾಲಾಗಮನಮ್ (ವಿಶ್ವಾಮಿತ್ರರು ರಾಮಲಕ್ಷ್ಮಣರೊಡನೆ ವಿಶಾಲ ನಗರಕ್ಕೆ ಆಗಮಿಸುವುದು) .... ೨೬೪
೪೮ ಶಕ್ರಾಹಲ್ಯಾಶಾಪಃ (ಗೌತಮರು ಇಂದ್ರನಿಗೂ ಅಹಲ್ಯೆಗೂ ಶಾಪ ವನ್ನಿತ್ತುದು) .... ೨೬೮
೪೯ ಅಹಲ್ಯಾಶಾಪಮೋಕ್ಷಃ (ಅಹಲ್ಯೆಗೆ ಶಾಪದಿಂದ ವಿಮೋಚನೆ) .... ೨೭೪
೫೦ ಜನಕಸಮಾಗಮಃ (ಜನಕರಾಜನ ಸಂದರ್ಶನ) .... ೨೭೯
೫೧ ವಿಶ್ವಾಮಿತ್ರವೃತ್ತಮ್ (ಶತಾನಂದರು ವಿಶ್ವಾಮಿತ್ರರ ಪೂರ್ವಕಥೆ ಯನ್ನು ಹೇಳಲಾರಂಭಿಸುವದು) .... ೨೮೩
೫೨ ವಸಿಷ್ಠಾತಿಥ್ಯಮ್ (ವಸಿಷ್ಠರು ವಿಶ್ವಾಮಿತ್ರರನ್ನು ಸತ್ಕರಿಸುವುದು) .... ೨೮೮
೫೩ ಶಬಲಾನಿಷ್ಕ್ರಯಃ (ಶಬಲೆಯನ್ನು ಕ್ರಯಕ್ಕೆ ಕೊಡುವಂತೆ ವಿಶ್ವಾಮಿತ್ರರು ಕೇಳುವುದು) .... ೨೯೨
೫೪ ಪಪ್ಲವಾದಿಸೃಷ್ಟಿಃ (ಶಬಲೆಯು ಪಪ್ಲವ ಮುಂತಾದ ಯೋಧರನ್ನು ಸೃಷ್ಟಿಸುವುದು) .... ೨೯೭
೫೫ ವಿಶ್ವಾಮಿತ್ರಧನುರ್ವೇದಾಧಿಗಮಃ (ವಿಶ್ವಾಮಿತ್ರರು ತಪಸ್ಸುಮಾಡಿ ದಿವ್ಯಾಸ್ತ್ರಗಳನ್ನು ಸಂಪಾದಿಸುವುದು) .... ೩೦೧
೫೬ ಬ್ರಹ್ಮತೇಜೋಬಲಮ್ (ಬ್ರಹ್ಮತೇಜಸ್ಸೇ ಬಲವತ್ತರವೆಂದು ನಿಶ್ಚಯಿಸಿ ವಿಶ್ವಾಮಿತ್ರರು ತಪಸ್ಸಿಗೆ ಹೊರಡುವುದು) ೩೦೬

೫೭ ತ್ರಿಶಂಕುಯಾಜನಪ್ರಾರ್ಥನಾ (ತ್ರಿಶಂಕುವು ವಿಶ್ವಾಮಿತ್ರರೊಡನೆ ಯಾಗವನ್ನು ಮಾಡಿಸಬೇಕೆಂದು ಪ್ರಾರ್ಥಿಸುವುದು) .... ೩ ೦

೫೮ ತ್ರಿಶಂಕುಶಾಪಃ (ವಸಿಷ್ಠಪುತ್ರರಿಂದ ತ್ರಿಶಂಕುವಿಗೆ ಬಂದ ಶಾಪ) . ೩೧೪

೫೯ ವಾಸಿಷ್ಠಶಾಪಃ (ವಿಶ್ವಾಮಿತ್ರರು ವಸಿಷ್ಠಪುತ್ರರನ್ನು ಶಪಿಸುವುದು) .. ೩೧೯

೬೦ ತ್ರಿಶಂಕುಸ್ವರ್ಗಃ (ತ್ರಿಶಂಕುವನ್ನು ಸ್ವರ್ಗಕ್ಕೆ ಕಳಿಸಿದ ವೃತ್ತಾಂತ) . ೩೨೩

೬೧ ಶುನಃಶೇಫವಿಕ್ರಯಃ (ಅಂಬರೀಷನು ಶುನಃಶೇಫನನ್ನು ಕ್ರಯಕ್ಕೆ ಪಡೆದ ವೃತ್ತಾಂತ) . ೩೨೯

೬೨ ಅಂಬರೀಷಯಜ್ಞಃ (ಅಂಬರೀಷನ ಯಾಗ, ಶುನಃಶೇಫನ ವಿಮೋಚನೆ) ೩೩೩

೬೩ ಮೇನಕಾನಿರ್ವಾಸಃ (ಮೇನಕೆಯ ಸಹವಾಸ, ವಿಶ್ವಾಮಿತ್ರರು ಮಹರ್ಷಿಯಾದದ್ದು) ... ೩೩೮

೬೪ ರಂಭಾಶಾಪಃ (ವಿಶ್ವಾಮಿತ್ರರು ರಂಭೆಯನ್ನು ಶಪಿಸಿದ್ದು) ... ೩೪೪

೬೫ ಬ್ರಹ್ಮರ್ಷಿತ್ವಪ್ರಾಪ್ತಿಃ (ವಿಶ್ವಾಮಿತ್ರರು ಬ್ರಹ್ಮರ್ಷಿಯಾದದ್ದು) ೩೪೮

೬೬ ಧನುಃಪ್ರಸಂಗಃ (ಶಿವಧನುಸ್ಸಿನ ವೃತ್ತಾಂತ) . ೩೫೫

೬೭ ಧನುರ್ಭಂಗಃ (ರಾಮನು ಧನುಸ್ಸನ್ನು ಹೆದೆಯೇರಿಸಿ ಮುರಿಯುವುದು) ೩೬೦

೬೮ ದಶರಥಾಹ್ವಾನಮ್ (ಜನಕನು ದಶರಥನಿಗೆ ಆಹ್ವಾನವನ್ನು ಕಳಿಸುವುದು) ೩೬೫

೬೯ ದಶರಥಜನಕಸಮಾಗಮಃ (ದಶರಥನು ಬಂದು ಜನಕನನ್ನು ಸಂದರ್ಶಿಸಿದ ವೃತ್ತಾಂತ) .... ೩೬೯

೭೦ ಕನ್ಯಾವರಣಮ್ (ದಶರಥನ ಪೂರ್ವಜರ ವೃತ್ತ ; ಕನ್ಯಾವರಣ) .... ೩೭೩

೭೧ ಕನ್ಯಾದಾನಪ್ರತಿಶ್ರವಃ (ಕನ್ಯೆಯರನ್ನು ಕೊಡುತ್ತೇನೆಂದು ಜನಕನ ವಾಗ್ದಾನ) .... ೩೮೧

೭೨ ಗೋದಾನಮಂಗಲಮ್ (ದಶರಥಪುತ್ರರ ಸಮಾವರ್ತನೆ) ೩೮೫

೭೩ ದಶರಥಪುತ್ರೋದ್ವಾಹಃ (ದಶರಥಪುತ್ರರ ವಿವಾಹ) ೩೯೦

೭೪ ಜಾಮದಗ್ನ್ಯಾಭಿಯೋಗಃ (ಪರಶುರಾಮನೊಡನೆ ಸೆಣಸುವುದು) .... ೩೯೭

೭೫ ವೈಷ್ಣವಧನುಃಪ್ರಶಂಸಾ (ವೈಷ್ಣವಧನುಸ್ಸಿನ ವೃತ್ತಾಂತ) .... ೪೦೨

೭೬ ಜಾಮದಗ್ನ್ಯಪ್ರತಿಷ್ಟಂಭಃ (ಪರಶುರಾಮನ ಪರಾಜಯ) ೪೦೭

೭೭ ಅಯೋಧ್ಯಾಪ್ರವೇಶಃ (ದಶರಥನು ಪುತ್ರರೊಂದಿಗೆ ಅಯೋಧ್ಯೆಯನ್ನು ಪ್ರವೇಶಿಸುವುದು) .... ೪೧೨

ಅನುಬಂಧ .... ೪೧೯





ಹನುಮಲ್ಲಕ್ಷ್ಮಣಸ್ಸೇವಿತಮಮರಮಜಂ ಕಿಮಪಿ ಜಾನಕೀಭಾಗ್ಯಮ್ ।
ಧ್ಯಾಯಾಮಿ ನಿಗಮವೇದ್ಯಂ ಮಾನುಷಭಾವಾಶ್ರಿತಂ ತತ್ತ್ವಮ್ ॥

॥ ಶ್ರೀಃ ॥

# ॥ ಶ್ರೀಮದ್ವಾಲ್ಮೀಕಿ ರಾಮಾಯಣಮ್ ॥

## ಬಾಲಕಾಂಡಃ

### ಪ್ರಥಮಃ ಸರ್ಗಃ

ನಾರದವಾಕ್ಯಮ್

**ತಪಃಸ್ವಾಧ್ಯಾಯನಿರತಂ ತಪಸ್ವೀ ವಾಗ್ವಿದಾಂ ವರಮ್ ।**
**ನಾರದಂ ಪರಿಪಪ್ರಚ್ಛ ವಾಲ್ಮೀಕಿರ್ಮುನಿಪುಂಗವಮ್ ॥** ೧

**ಕೋ ನ್ವಸ್ಮಿನ್ ಸಾಂಪ್ರತಂ ಲೋಕೇ ಗುಣವಾನ್ ಕಶ್ಚ ವೀರ್ಯವಾನ್**
**ಧರ್ಮಜ್ಞಶ್ಚ ಕೃತಜ್ಞಶ್ಚ ಸತ್ಯವಾಕ್ಯೋ ದೃಢವ್ರತಃ ॥** ೨

**ಚಾರಿತ್ರೇಣ ಚ ಕೋ ಯುಕ್ತಃ ಸರ್ವಭೂತೇಷು ಕೋ ಹಿತಃ ।**
**ವಿದ್ವಾನ್ ಕಃ ಕಃ ಸಮರ್ಥಶ್ಚ ಕಶ್ಚೈಕಪ್ರಿಯದರ್ಶನಃ ॥** ೩

## ಬಾಲಕಾಂಡ

### ಸರ್ಗ ೧

ನಾರದರು ವಾಲ್ಮೀಕಿಮುನಿಗಳಿಗೆ ಶ್ರೀರಾಮನ ಚರಿತ್ರೆಯನ್ನು ಸಂಕ್ಷೇಪವಾಗಿ ತಿಳಿಸುವುದು.

ತಪಸ್ಸು ಮತ್ತು ವೇದಾಧ್ಯಯನದಲ್ಲಿ ನಿರತರೂ ವಾಗ್ವಿಶಾರದರೂ ಆದ ನಾರದಮಹರ್ಷಿಗಳನ್ನು ಕುರಿತು ಒಂದು ದಿನ ವಾಲ್ಮೀಕಿಮುನಿಗಳು ಹೀಗೆ ಪ್ರಶ್ನೆಮಾಡಿದರು (೧): "ಪೂಜ್ಯರಾದ ನಾರದಮಹರ್ಷಿಗಳೆ, ಈಗ ಈ ಲೋಕದಲ್ಲಿ ಯಾವ ಪುರುಷನು ಗುಣವಂತನೂ ವೀರನೂ ಧರ್ಮಜ್ಞನೂ ಕೃತಜ್ಞನೂ ಸತ್ಯವಾದಿಯೂ ದೃಢಸಂಕಲ್ಪನೂ ಆಗಿದ್ದಾನೆ? (೨) ಯಾವಾತನು ಸದಾಚಾರನಿಷ್ಠನೂ ಸಕಲ ಪ್ರಾಣಿಗಳಿಗೂ ಹಿತವನ್ನು

**ಆತ್ಮವಾನ್ ಕೋ ಜಿತಕ್ರೋಧೋ ದ್ಯುತಿಮಾನ್ ಕೋಽನಸೂಯಕಃ**
**ಕಸ್ಯ ಬಿಭ್ಯತಿ ದೇವಾಶ್ಚ ಜಾತರೋಷಸ್ಯ ಸಂಯುಗೇ ॥** ೪

**ಏತದಿಚ್ಛಾಮ್ಯಹಂ ಶ್ರೋತುಂ ಪರಂ ಕೌತೂಹಲಂ ಹಿ ಮೇ ।**
**ಮಹರ್ಷೇ ತ್ವಂ ಸಮರ್ಥೋಽಸಿ ಜ್ಞಾತುಮೇವಂವಿಧಂ ನರಮ್ ॥**

**ಶ್ರುತ್ವಾ ಚೈತತ್ ತ್ರಿಲೋಕಜ್ಞೋ ವಾಲ್ಮೀಕೇರ್ನಾರದೋ ವಚಃ ।**
**ಶ್ರೂಯತಾಮಿತಿ ಚಾಮಂತ್ರ್ಯ ಪ್ರಹೃಷ್ಟೋ ವಾಕ್ಯಮಬ್ರವೀತ್ ॥**

**ಬಹವೋ ದುರ್ಲಭಾಶ್ಚೈವ ಯೇ ತ್ವಯಾ ಕೀರ್ತಿತಾ ಗುಣಾಃ ।**
**ಮುನೇ ವಕ್ಷ್ಯಾಮ್ಯಹಂ ಬುದ್ಧ್ವಾ ತೈರ್ಯುಕ್ತಃ ಶ್ರೂಯತಾಂ ನರಃ**

**ಇಕ್ಷ್ವಾಕುವಂಶಪ್ರಭವೋ ರಾಮೋ ನಾಮ ಜನೈಃ ಶ್ರುತಃ ।**
**ನಿಯತಾತ್ಮಾ ಮಹಾವೀರ್ಯೋ ದ್ಯುತಿಮಾನ್ ಧೃತಿಮಾನ್ ವಶೀ ॥**

---

ಬಯಸತಕ್ಕವನೂ ವಿದ್ವಾಂಸನೂ ಕಾರ್ಯದಕ್ಷನೂ ಜನರಿಗೆ ನೋಡುವುದಕ್ಕೆ ಆನಂದವನ್ನುಂಟುಮಾಡತಕ್ಕವನೂ ಆಗಿದ್ದಾನೆ? (೩). ಮತ್ತು ಯಾವ ಪುರುಷನು ಧೈರ್ಯಶಾಲಿಯೂ ಕ್ರೋಧವನ್ನು ಜಯಿಸಿದವನೂ ಕಾಂತಿಯುಕ್ತನೂ ಅಸೂಯೆಪಡದವನೂ ಆಗಿದ್ದಾನೆ? ಯುದ್ಧದಲ್ಲಿ ಮುನಿದು ನಿಂತರೆ ಯಾರಿಗೆ ದೇವತೆಗಳೂ ಕೂಡ ಹೆದರುತ್ತಾರೆ? ಮಹರ್ಷಿಗಳೆ, ಈ ವಿಷಯವನ್ನು ಕೇಳಿ ತಿಳಿದುಕೊಳ್ಳಬೇಕೆಂದು ನನಗೆ ಬಹಳ ಆಸೆಯಾಗಿದೆ. ಇಂಥ ಯಾವ ಪುರುಷನಿದ್ದಾನೆಂದು ತಿಳಿಯಲು ನೀವು ಸಮರ್ಥರು" (೪-೫). ವಾಲ್ಮೀಕಿಮುನಿಗಳ ಈ ಮಾತನ್ನು ಕೇಳಿ ತ್ರಿಲೋಕಜ್ಞರಾದ ನಾರದರು ಆನಂದದಿಂದ ಉಬ್ಬಿದರು ಅವರು "ವಾಲ್ಮೀಕಿಮುನಿಗಳೆ, ಕೇಳಿರಿ" ಎಂದು ನುಡಿದು, ಹೀಗೆ ಹೇಳತೊಡಗಿದರು: "ನೀವು ಹೇಳಿದ ಗುಣಗಳು ಬಹಳ. ಅವು ಒಬ್ಬನಲ್ಲಿ ದುರ್ಲಭ. ಆದರೂ ಮುನಿಗಳೆ, ಅಂಥ ಗುಣವಂತನಾದ ಪುರುಷನೊಬ್ಬನಿದ್ದಾನೆ. ಅವನ ವಿಷಯವನ್ನು ಹೇಳುತ್ತೇನೆ, ಕೇಳೋಣವಾಗಲಿ (೬-೭). ಇಕ್ಷ್ವಾಕುವಂಶದಲ್ಲಿ ಜನಿಸಿದ ಒಬ್ಬ ಪ್ರಸಿದ್ಧಪುರುಷನಿದ್ದಾನೆ. ಅವನ ಹೆಸರು ಶ್ರೀರಾಮ. ಅವನು ಮನೋಜಯವುಳ್ಳವನೂ ಮಹಾಪರಾಕ್ರಮಿಯೂ ಕಾಂತಿಯುಕ್ತನೂ ಧೀರನೂ

**ಬುದ್ಧಿಮಾನ್ ನೀತಿಮಾನ್ ವಾಗ್ಮೀ ಶ್ರೀಮಾನ್ ಶತ್ರುನಿಬರ್ಹಣಃ ।**
**ವಿಪುಲಾಂಸೋ ಮಹಾಬಾಹುಃ ಕಂಬುಗ್ರೀವೋ ಮಹಾಹನುಃ ॥ ೯**

**ಮಹೋರಸ್ಕೋ ಮಹೇಷ್ವಾಸೋ ಗೂಢಜತ್ರುರರಿಂದಮಃ ।**
**ಆಜಾನುಬಾಹುಃ ಸುಶಿರಾಃ ಸುಲಲಾಟಃ ಸುವಿಕ್ರಮಃ ॥ ೧೦**

**ಸಮಃ ಸಮವಿಭಕ್ತಾಂಗಃ ಸ್ನಿಗ್ಧವರ್ಣಃ ಪ್ರತಾಪವಾನ್ ।**
**ಪೀನವಕ್ಷಾ ವಿಶಾಲಾಕ್ಷೋ ಲಕ್ಷ್ಮೀವಾನ್ ಶುಭಲಕ್ಷಣಃ ॥ ೧೧**

**ಧರ್ಮಜ್ಞಃ ಸತ್ಯಸಂಧಶ್ಚ ಪ್ರಜಾನಾಂ ಚ ಹಿತೇ ರತಃ ।**
**ಯಶಸ್ವೀ ಜ್ಞಾನಸಂಪನ್ನಃ ಶುಚಿರ್ವಶ್ಯಃ ಸಮಾಧಿಮಾನ್ ॥ ೧೨**

**ಪ್ರಜಾಪತಿಸಮಃ ಶ್ರೀಮಾನ್ ಧಾತಾ ರಿಪುನಿಷೂದನಃ ।**
**ರಕ್ಷಿತಾ ಜೀವಲೋಕಸ್ಯ ಧರ್ಮಸ್ಯ ಪರಿರಕ್ಷಿತಾ ॥ ೧೩**

---

ಜಿತೇಂದ್ರಿಯನೂ ಆಗಿದ್ದಾನೆ ಅವನು ಬುದ್ಧಿವಂತ, ನೀತಿವಂತ, ವಾಗ್ಮಿ, ಐಶ್ವರ್ಯಶಾಲಿ, ಶತ್ರುವಿನಾಶಕ, ಅವನ ಹೆಗಲುಗಳೆರಡೂ ವಿಶಾಲವಾದವು. ಆ ಶ್ರೀರಾಮನಿಗೆ ಬಲಿಷ್ಠವಾದ ಬಾಹುಗಳು; ಶಂಖದಂತೆ ರೇಖಾತ್ರಯ ವಿರುವ ಕಂಠ; ಪುಷ್ಟವಾದ ಗಂಡಸ್ಥಲಗಳು (೮-೯) ಅವನ ಎದೆ ವಿಶಾಲ ವಾದದ್ದು; ಮಹತ್ತರವಾದ ಧನುಸ್ಸನ್ನು ಹಿಡಿಯತಕ್ಕವನು; ಆಜಾನುಬಾಹು. ಆತನ (ಭುಜಗಳು ತುಂಬಿಕೊಂಡಿರುವುದರಿಂದ) ಭುಜದ ಕೀಲುಗಳು ಕಾಣಿಸುವುದಿಲ್ಲ. ಲಕ್ಷಣಯುಕ್ತವಾದ ಶಿರಸ್ಸು; ಸುಂದರವಾದ ಹಣೆ; ಗಂಭೀರವಾದ ನಡಿಗೆ (೧೦) ಶ್ರೀರಾಮನ ಆಕೃತಿ ಬಹಳ ಎತ್ತರವೂ ಅಲ್ಲದೆ ಹ್ರಸ್ವವೂ ಅಲ್ಲದೆ ಸಮಕಟ್ಟಾಗಿದೆ ಅವಯವಗಳೆಲ್ಲವೂ ದೇಹಕ್ಕೆ ತಕ್ಕ ಅಳತೆಯಲ್ಲಿ ಹೊಂದಿಕೊಂಡಿವೆ ಮಿಂಚುವ ಮೈಬಣ್ಣ ಅವನು ಮಹಾ ಪ್ರತಾಪಶಾಲಿ. ವಕ್ಷಃಸ್ಥಲವು ಅಗಲವಾಗಿದೆ. ಅವನು ಸರ್ವಾಂಗಸುಂದರ. ಒಳ್ಳೆಯ ಲಕ್ಷಣವಂತ (೧೧) ಶ್ರೀರಾಮನು ಧರ್ಮಜ್ಞನೂ ಸತ್ಯಸಂಧನೂ ಪ್ರಜೆಗಳ ಹಿತದಲ್ಲಿ ಸದಾ ನಿರತನೂ ಆಗಿದ್ದಾನೆ. ಅವನು ಕೀರ್ತಿಶಾಲಿಯೂ ವಿವೇಕಿಯೂ ಪರಿಶುದ್ಧನೂ ಗುರುಹಿರಿಯರಿಗೆ ವಿಧೇಯನೂ ಪರತತ್ತ್ವದಲ್ಲಿ ಸಮಾಹಿತನೂ ಆಗಿದ್ದಾನೆ (೧೨) ಆತನು ಬ್ರಹ್ಮನಂತೆ ತೇಜಸ್ವಿ, ಪ್ರಜಾ ಪೋಷಕ; ಶತ್ರುಧ್ವಂಸಕ; ಜಗತ್ತಿನಲ್ಲಿರುವ ಸಕಲ ಜೀವರಾಶಿಗಳನ್ನು

ರಕ್ಷಿತಾ ಸ್ವಸ್ಯ ಧರ್ಮಸ್ಯ ಸ್ವಜನಸ್ಯ ಚ ರಕ್ಷಿತಾ ।
ವೇದವೇದಾಂಗತತ್ತ್ವಜ್ಞೋ ಧನುರ್ವೇದೇ ಚ ನಿಷ್ಠಿತಃ ॥ ೧೪

ಸರ್ವಶಾಸ್ತ್ರಾರ್ಥತತ್ತ್ವಜ್ಞಃ ಸ್ಮೃತಿಮಾನ್ ಪ್ರತಿಭಾನವಾನ್ ।
ಸರ್ವಲೋಕಪ್ರಿಯಃ ಸಾಧುರದೀನಾತ್ಮಾ ವಿಚಕ್ಷಣಃ ॥ ೧೫

ಸರ್ವದಾಭಿಗತಃ ಸದ್ಭಿಃ ಸಮುದ್ರ ಇವ ಸಿಂಧುಭಿಃ ।
ಆರ್ಯಃ ಸರ್ವಸಮಶ್ಚೈವ ಸದೈವ ಪ್ರಿಯದರ್ಶನಃ ॥ ೧೬

ಸ ಚ ಸರ್ವಗುಣೋಪೇತಃ ಕೌಸಲ್ಯಾನಂದವರ್ಧನಃ ।
ಸಮುದ್ರ ಇವ ಗಾಂಭೀರ್ಯೇ ಧೈರ್ಯೇಣ ಹಿಮವಾನಿವ ॥ ೧೭

ವಿಷ್ಣುನಾ ಸದೃಶೋ ವೀರ್ಯೇ ಸೋಮವತ್ ಪ್ರಿಯದರ್ಶನಃ ।
ಕಾಲಾಗ್ನಿಸದೃಶಃ ಕ್ರೋಧೇ ಕ್ಷಮಯಾ ಪೃಥಿವೀಸಮಃ ॥ ೧೮

---

ರಕ್ಷಿಸುವ ಸಾಮರ್ಥ್ಯ ಅವನಿಗಿದೆ ಧರ್ಮವನ್ನು ಪಾಲಿಸತಕ್ಕವನು. ಅವನು ಸ್ವಧರ್ಮವನ್ನು ಶ್ರದ್ಧೆಯಿಂದ ಅನುಷ್ಠಾನ ಮಾಡುತ್ತಾನೆ. ಶರಣಾಗತ ರಕ್ಷಕ. ಆತನು ವೇದವೇದಾಂಗಗಳ ರಹಸ್ಯವನ್ನು ಬಲ್ಲವನು. ಧನುರ್ವೇದ ದಲ್ಲಿ ಪಂಡಿತ (೧೩-೧೪). ಸಕಲ ಶಾಸ್ತ್ರಗಳ ತತ್ತ್ವವನ್ನು ತಿಳಿದಿದ್ದಾನೆ. ಶ್ರೀರಾಮನ ಸ್ಮರಣಶಕ್ತಿ ಅಸದೃಶವಾದದ್ದು ಅವನು ಒಳ್ಳೆಯ ಪ್ರತಿಭಾಶಾಲಿ. ಸಕಲರಿಗೂ ಅವನನ್ನು ಕಂಡರೆ ಪ್ರೀತಿ. ಜನರಲ್ಲಿ ಮೃದುವಾಗಿ ನಡೆದುಕೊಳ್ಳುತ್ತಾನೆ ಆದರೆ ಅತ್ಯಂತ ಗಂಭೀರ ಸ್ವಭಾವ. ಅವನು ಕಾರ್ಯದಕ್ಷ (೧೫). ನದಿಗಳು ಸಮುದ್ರದ ಬಳಿಗೆ ಹೋಗುವಂತೆ ಸಜ್ಜನರು ಯಾವಾಲೂ ರಾಮನ ಸನ್ನಿಧಿಗೆ ಹೋಗುತ್ತಿರುವರು. ಅವನು ಪೂಜ್ಯನೂ ಪಕ್ಷಪಾತವಿಲ್ಲದೆ ಎಲ್ಲರಲ್ಲಿಯೂ ವರ್ತಿಸತಕ್ಕವನೂ ಆಗಿದ್ದಾನೆ. ಯಾವಾಗ ಅವನನ್ನು ನೋಡಿದರೂ ಜನರಿಗೆ ಆನಂದವಾಗುವುದು (೧೬) ಸರ್ವ ಸದ್ಗುಣಗಳಿಂದ ಕೂಡಿದ ಶ್ರೀರಾಮನು ಕೌಸಲ್ಯಾದೇವಿಯ ನಲ್ಮೆಯ ಪುತ್ರ. ಗಾಂಭೀರ್ಯದಲ್ಲಿ ಸಮುದ್ರದಂತೆಯೂ ಧೈರ್ಯದಲ್ಲಿ ಹಿಮವಂತ ನಂತೆಯೂ ಇದ್ದಾನೆ. ವಿಷ್ಣುವಿನಂತೆ ಪರಾಕ್ರಮಶಾಲಿಯೂ ಚಂದ್ರನಂತೆ ಆನಂದಕಾರಿಯೂ ಆಗಿದ್ದಾನೆ. ಕೋಪ ಬಂದರೆ ಮಾತ್ರ ಅವನು ಕಾಲಾಗ್ನಿ

**ಧನದೇನ ಸಮಸ್ತ್ಯಾಗೇ ಸತ್ಯೇ ಧರ್ಮ ಇವಾಪರಃ ।**
**ತಮೇವಂ ಗುಣಸಂಪನ್ನಂ ರಾಮಂ ಸತ್ಯಪರಾಕ್ರಮಮ್ ॥ ೧೯**

**ಜ್ಯೇಷ್ಠಂ ಶ್ರೇಷ್ಠಗುಣೈರ್ಯುಕ್ತಂ ಪ್ರಿಯಂ ದಶರಥಃ ಸುತಮ್ ।**
**ಪ್ರಕೃತೀನಾಂ ಹಿತೈರ್ಯುಕ್ತಂ ಪ್ರಕೃತಿಪ್ರಿಯಕಾಮ್ಯಯಾ ॥ ೨೦**

**ಯೌವರಾಜ್ಯೇನ ಸಂಯೋಕ್ತುಮೈಚ್ಛತ್ ಪ್ರೀತ್ಯಾ ಮಹೀಪತಿಃ ।**
**ತಸ್ಯಾಭಿಷೇಕಸಂಭಾರಾನ್ ದೃಷ್ಟ್ವಾ ಭಾರ್ಯಾಥ ಕೈಕಯೀ ॥ ೨೧**

**ಪೂರ್ವಂ ದತ್ತವರಾ ದೇವೀ ವರಮೇನಮಯಾಚತ ।**
**ವಿವಾಸನಂ ಚ ರಾಮಸ್ಯ ಭರತಸ್ಯಾಭಿಷೇಚನಮ್ ॥ ೨೨**

**ಸ ಸತ್ಯವಚನಾದ್ರಾಜಾ ಧರ್ಮಪಾಶೇನ ಸಂಯತಃ ।**
**ವಿವಾಸಯಾಮಾಸ ಸುತಂ ರಾಮಂ ದಶರಥಃ ಪ್ರಿಯಮ್ ॥ ೨೩**

---

ಯಂತೆಯೇ. ತಾಳ್ಮೆಯಲ್ಲಿ ಭೂದೇವಿಯಂತೆ (೧೭-೧೮) ದಾನದಲ್ಲಿ ಕುಬೇರನ ಹಾಗೆ. ಸತ್ಯದಲ್ಲಿ ಸಾಕ್ಷಾತ್ ಧರ್ಮದೇವತೆಯ ಹಾಗೆ ಇಂಥ ಗುಣಶಾಲಿಯೂ ಸತ್ಯನಿಷ್ಠನೂ ಆದ ರಾಮನು ದಶರಥಮಹಾರಾಜನ ಜ್ಯೇಷ್ಠ ಪುತ್ರ ದಶರಥನಿಗೆ ರಾಮನಮೇಲೆ ಬಹಳ ಪ್ರೀತಿ ರಾಮನು ಪ್ರಜೆಗಳಿಗೆ ಅತ್ಯಂತಪ್ರಿಯನಾದ್ದರಿಂದ ಅವರಿಗೆ ಆನಂದವಾಗುತ್ತದೆಯೆಂದು ದಶರಥನು ಶ್ರೀರಾಮನಿಗೆ ಯುವರಾಜಪದವಿಯನ್ನು* ಕೊಟ್ಟು ಪಟ್ಟಾಭಿಷೇಕ ಮಾಡಲು ಅಪೇಕ್ಷಿಸಿದನು (೧೯-೨೧) ಪಟ್ಟಾಭಿಷೇಕಕ್ಕೆ ಸಿದ್ಧತೆಗಳಾಗುತ್ತಿರುವುದು ದಶರಥನ ಕಿರಿಯ ಹೆಂಡತಿಯಾದ ಕೈಕೇಯಿಗೆ ತಿಳಿಯಿತು. ಅವಳಿಗೆ ದಶರಥರಾಜನು ಹಿಂದೆ ಎರಡು ವರಗಳನ್ನು ಕೊಟ್ಟಿದ್ದನು (ಇದೇ ಸಮಯವೆಂದರಿತು) ಅವಳು ಹೀಗೆ ವರವನ್ನು ಬೇಡಿದಳು: ಏನೆಂದರೆ, 'ರಾಮನನ್ನು ರಾಜ್ಯದಿಂದ ಹೊರಕ್ಕೆ ಕಳಿಸಬೇಕು ಮತ್ತು ತನ್ನ ಮಗನಾದ ಭರತನಿಗೆ ಪಟ್ಟಾಭಿಷೇಕ ಮಾಡಬೇಕು' (೨೨). ರಾಜನು ಸತ್ಯಪರಾಯಣನಾದ್ದರಿಂದ ಧರ್ಮಪಾಶಕ್ಕೆ ಕಟ್ಟುಬಿದ್ದು ತನ್ನ ಪ್ರಿಯಪುತ್ರನಾದ ರಾಮನನ್ನು

* ತಂದೆಯು ಜೀವಿಸಿರುವಾಗಲೇ ಮಗನು ರಾಜ್ಯದ ಸರ್ವಾಧಿಕಾರವನ್ನು ವಹಿಸಿಕೊಳ್ಳುವುದು ಯುವರಾಜಪದವಿ.

ಸ ಜಗಾಮ ವನಂ ವೀರಃ ಪ್ರತಿಜ್ಞಾಮನುಪಾಲಯನ್ ।
ಪಿತುರ್ವಚನನಿರ್ದೇಶಾತ್ ಕೈಕೇಯ್ಯಾಃ ಪ್ರಿಯಕಾರಣಾತ್ ॥ ೨೪

ತಂ ವ್ರಜಂತಂ ಪ್ರಿಯೋ ಭ್ರಾತಾ ಲಕ್ಷ್ಮಣೋಽನುಜಗಾಮ ಹ ।
ಸ್ನೇಹಾದ್ವಿನಯಸಂಪನ್ನಃ ಸುಮಿತ್ರಾನಂದವರ್ಧನಃ ॥ ೨೫

ಭ್ರಾತರಂ ದಯಿತೋ ಭ್ರಾತುಃ ಸೌಭ್ರಾತ್ರಮನುದರ್ಶಯನ್ ।
ರಾಮಸ್ಯ ದಯಿತಾ ಭಾರ್ಯಾ ನಿತ್ಯಂ ಪ್ರಾಣಸಮಾ ಹಿತಾ ॥ ೨೬

ಜನಕಸ್ಯ ಕುಲೇ ಜಾತಾ ದೇವಮಾಯೇವ ನಿರ್ಮಿತಾ ।
ಸರ್ವಲಕ್ಷಣಸಂಪನ್ನಾ ನಾರೀಣಾಮುತ್ತಮಾ ವಧೂಃ ॥ ೨೭

ಸೀತಾಪ್ಯನುಗತಾ ರಾಮಂ ಶಶಿನಂ ರೋಹಿಣೀ ಯಥಾ ।
ಪೌರೈರನುಗತೋ ದೂರಂ ಪಿತ್ರಾ ದಶರಥೇನ ಚ ॥ ೨೮

ಶೃಂಗವೇರಪುರೇ ಸೂತಂ ಗಂಗಾಕೂಲೇ ವ್ಯಸರ್ಜಯತ್ ।
ಗುಹಮಾಸಾದ್ಯ ಧರ್ಮಾತ್ಮಾ ನಿಷಾದಾಧಿಪತಿಂ ಪ್ರಿಯಮ್ ॥ ೨೯

---

ರಾಜ್ಯದಿಂದ ಹೊರಕ್ಕೆ ಕಳಿಸಿದನು. ವೀರನಾದ ಶ್ರೀರಾಮನು ತಂದೆಯ ಮಾತನ್ನು ಮೀರುವುದಿಲ್ಲವೆಂಬ ತನ್ನ ಪ್ರತಿಜ್ಞೆಯನ್ನು ಪಾಲಿಸುವುದಕ್ಕಾಗಿಯೂ ತಾನು ಹೊರಟುಹೋದರೆ ಕೈಕೇಯಿಗೆ ಸಂತೋಷವಾಗುವುದೆಂಬ ನಂಬಿಕೆಯಿಂದಲೂ ತಂದೆಯ ಆಜ್ಞೆಯಂತೆ ಅರಣ್ಯಕ್ಕೆ ಹೋದನು (೨೩–೨೪). ಆಗ ಸುಮಿತ್ರಾದೇವಿಯ ಸಲ್ಮೆಯ ಪುತ್ರನೂ ರಾಮನ ಪ್ರೀತಿಯ ತಮ್ಮನೂ ವಿನೀತನೂ ಆದ ಲಕ್ಷ್ಮಣನು ಅಣ್ಣನಮೇಲಿನ ಸ್ನೇಹದಿಂದ ಅವನನ್ನು ಹಿಂಬಾಲಿಸಿ ತಾನೂ ಅರಣ್ಯಕ್ಕೆ ಹೊರಟುಬಿಟ್ಟನು ಅಣ್ಣತಮ್ಮಂದಿರಲ್ಲಿ ಇರಬೇಕಾದ ಸೌಭ್ರಾತ್ರಕ್ಕೆ ಲಕ್ಷ್ಮಣನು ನಿದರ್ಶನ (೨೫–೨೬). ಶ್ರೀರಾಮನಿಗೆ ಪ್ರಾಣದಂತೆ ಪ್ರಿಯಳಾದ ಪತ್ನಿ ಸೀತೆ ಗಂಡನ ಹಿತವನ್ನೇ ಬಯಸತಕ್ಕವಳು ಜನಕರಾಜನ ಪರಿಶುದ್ಧವಾದ ಕುಲದಲ್ಲಿ ಜನಿಸಿದವಳು. ದೇವಮಾಯೆಯೋ ಎಂಬಂತೆ ಪರಮಸುಂದರಿ. ಸರ್ವಲಕ್ಷಣಸಂಪನ್ನೆ. ಸ್ತ್ರೀಯರಲ್ಲಿ ಶ್ರೇಷ್ಠಳು. ಚಂದ್ರನನ್ನು ರೋಹಿಣಿಯು ಹಿಂಬಾಲಿಸುವಂತೆ ಅವಳೂ ಕೂಡ ರಾಮಚಂದ್ರನನ್ನು ಹಿಂಬಾಲಿಸಿ ಅರಣ್ಯಕ್ಕೆ ನಡೆದಳು (೨೭–೨೮). (ವಿಯೋಗವನ್ನು ಸಹಿಸಲಾರದೆ) ರಾಮನನ್ನು ಬಹುದೂರದ

**ಗುಹೇನ ಸಹಿತೋ ರಾಮೋ ಲಕ್ಷ್ಮಣೇನ ಚ ಸೀತಯಾ ।**
**ತೇ ವನೇನ ವನಂ ಗತ್ವಾ ನದೀಸ್ತೀರ್ತ್ವಾ ಬಹೂದಕಾಃ ॥ ೩೦**
**ಚಿತ್ರಕೂಟಮನುಪ್ರಾಪ್ಯ ಭರದ್ವಾಜಸ್ಯ ಶಾಸನಾತ್ ।**
**ರಮ್ಯಮಾವಸಥಂ ಕೃತ್ವಾ ರಮಮಾಣಾ ವನೇ ತ್ರಯಃ ॥ ೩೧**
**ದೇವಗಂಧರ್ವಸಂಕಾಶಾಸ್ತತ್ರ ತೇ ನ್ಯವಸನ್ ಸುಖಮ್ ।**
**ಚಿತ್ರಕೂಟಂ ಗತೇ ರಾಮೇ ಪುತ್ರಶೋಕಾತುರಸ್ತಥಾ ॥ ೩೨**
**ರಾಜಾ ದಶರಥಃ ಸ್ವರ್ಗಂ ಜಗಾಮ ವಿಲಪನ್ ಸುತಮ್ ।**
**ಮೃತೇ ತು ತಸ್ಮಿನ್ ಭರತೋ ವಸಿಷ್ಠಪ್ರಮುಖೈರ್ದ್ವಿಜೈಃ ॥ ೩೩**
**ನಿಯುಜ್ಯಮಾನೋ ರಾಜ್ಯಾಯ ನೈಚ್ಛದ್ರಾಜ್ಯಂ ಮಹಾಬಲಃ ।**
**ಸ ಜಗಾಮ ವನಂ ವೀರೋ ರಾಮಪಾದಪ್ರಸಾದಕಃ ॥ ೩೪**
**ಗತ್ವಾ ತು ಸ ಮಹಾತ್ಮಾನಂ ರಾಮಂ ಸತ್ಯಪರಾಕ್ರಮಮ್ ।**
**ಅಯಾಚದ್ಭ್ರಾತರಂ ರಾಮಮಾರ್ಯಭಾವಪುರಸ್ಕೃತಃ ॥ ೩೫**

---

ವರೆಗೆ ಪೌರರೂ ದಶರಥನೂ ಅನುಸರಿಸಿ ಹೋದರು. ಧರ್ಮಾತ್ಮನಾದ ರಾಮನು ಶೃಂಗವೇರಪುರಕ್ಕೆ ಹೋಗಿ, ಸೂತನಾಗಿ ಬಂದಿದ್ದ ಸುಮಂತ್ರನನ್ನು ಗಂಗಾತೀರದಲ್ಲಿ ಹಿಂದಕ್ಕೆ ಕಳಿಸಿದನು ಅಲ್ಲಿ ರಾಮಲಕ್ಷ್ಮಣಸೀತೆಯರಿಗೆ ರಾಮನ ಮಿತ್ರನೂ ನಿಷಾದರಾಜನೂ ಆದ ಗುಹನ ದರ್ಶನವಾಯಿತು (೨೯). ಶ್ರೀರಾಮ, ಸೀತೆ, ಲಕ್ಷ್ಮಣ—ಈ ಮೂವರೂ ಅನಂತರ ಅನೇಕ ಅಡವಿಗಳನ್ನೂ ನೀರಿನಿಂದ ತುಂಬಿ ಹರಿಯುತ್ತಿದ್ದ ನದಿಗಳನ್ನೂ ದಾಟುತ್ತ ಭರದ್ವಾಜ ಮುನಿಗಳ ಸೂಚನೆಯಂತೆ ಚಿತ್ರಕೂಟಕ್ಕೆ ಹೋದರು ಅಲ್ಲಿ ಒಂದು ಪರ್ಣಶಾಲೆಯನ್ನು ರಚಿಸಿಕೊಂಡು ದೇವಗಂಧರ್ವರಂತೆ ಸುಖವಾಗಿದ್ದರು (೩೦-೩೨). ಇತ್ತ ದಶರಥಮಹಾರಾಜನು ಪುತ್ರಶೋಕದಿಂದ ಕೊರಗುತ್ತ ರಾಮನನ್ನೇ ಹಂಬಲಿಸುತ್ತ ಸ್ವರ್ಗಸ್ಥನಾದನು. ಆಗ ವಸಿಷ್ಠರೇ ಮೊದಲಾದ ಬ್ರಾಹ್ಮಣರು ಭರತನಿಗೆ ರಾಜನಾಗುವಂತೆ ಸೂಚಿಸಿದರು ಆದರೆ ಮಹಾಬಲಶಾಲಿಯಾದ ಭರತನು ರಾಜನಾಗಲು ಒಪ್ಪಲೇ ಇಲ್ಲ. ಅವನು ಶ್ರೀರಾಮನ ಚರಣಾನುಗ್ರಹವನ್ನು ಸಂಪಾದಿಸಬೇಕೆಂದು ಅರಣ್ಯಕ್ಕೆ ಹೋಗಿ, ರಾಜ್ಯಕ್ಕೆ ಹಿಂದಿರುಗಬೇಕೆಂದು ಅಣ್ಣನನ್ನು ವಿನಯದಿಂದ ಬೇಡಿಕೊಂಡನು. ರಾಮನಾದರೋ

ತ್ವಮೇವ ರಾಜಾ ಧರ್ಮಜ್ಞ ಇತಿ ರಾಮಂ ವಚೋಽಬ್ರವೀತ್ ।
ರಾಮೋಽಪಿ ಪರಮೋದಾರಃ ಸುಮುಖಃ ಸುಮಹಾಯಶಾಃ ॥ ೩೬

ನ ಚೈಚ್ಛತ್ ಪಿತುರಾದೇಶಾದ್ರಾಜ್ಯಂ ರಾಮೋ ಮಹಾಬಲಃ ।
ಪಾದುಕೇ ಚಾಸ್ಯ ರಾಜ್ಯಾಯ ನ್ಯಾಸಂ ದತ್ತ್ವಾ ಪುನಃ ಪುನಃ ॥ ೩೭

ನಿವರ್ತಯಾಮಾಸ ತತೋ ಭರತಂ ಭರತಾಗ್ರಜಃ ।
ಸ ಕಾಮಮನವಾಪ್ಯೈವ ರಾಮಪಾದಾವುಪಸ್ಪೃಶನ್ ॥ ೩೮

ನಂದಿಗ್ರಾಮೇಽಕರೋದ್ರಾಜ್ಯಂ ರಾಮಾಗಮನಕಾಂಕ್ಷಯಾ ।
ಗತೇ ತು ಭರತೇ ಶ್ರೀಮಾನ್ ಸತ್ಯಸಂಧೋ ಜಿತೇಂದ್ರಿಯಃ ॥ ೩೯

ರಾಮಸ್ತು ಪುನರಾಲಕ್ಷ್ಯ ನಾಗರಸ್ಯ ಜನಸ್ಯ ಚ ।
ತತ್ರಾಗಮನಮೇಕಾಗ್ರೋ ದಂಡಕಾನ್ ಪ್ರವಿವೇಶ ಹ ॥ ೪೦

ಪ್ರವಿಶ್ಯ ತು ಮಹಾರಣ್ಯಂ ರಾಮೋ ರಾಜೀವಲೋಚನಃ ।
ವಿರಾಧಂ ರಾಕ್ಷಸಂ ಹತ್ವಾ ಶರಭಂಗಂ ದದರ್ಶ ಹ ॥ ೪೧

---

ಸತ್ಯನಿಷ್ಠ, ಮಹಾತ್ಮ (೩೩-೩೫) ಭರತನು "ಅಣ್ಣ, ನೀನು ಧರ್ಮಜ್ಞ (ಜ್ಯೇಷ್ಠನಾದ) ನೀನೇ ರಾಜ್ಯಕ್ಕೆ ಅರ್ಹನು" ಎಂದನು ಉದಾರ ಸ್ವಭಾವದವನೂ ಕೀರ್ತಿವಂತನೂ ಆದ ರಾಮನು ಭರತನ ಮಾತಿಗೆ ಪ್ರಸನ್ನನಾದರೂ ತಂದೆಯ ಮಾತಿಗೆ ವಿಧೇಯನಾಗಿ ರಾಜ್ಯವನ್ನು ಬಯಸಲಿಲ್ಲ ಭರತನಿಗೆ ತನ್ನ ಪಾದುಕೆಗಳನ್ನು ಪ್ರತಿನಿಧಿಯಾಗಿ ಕೊಟ್ಟು ಬಹುವಿಧದಿಂದ ಸಮಾಧಾನ ಹೇಳಿ ಅವನನ್ನು ಹಿಂದಕ್ಕೆ ಕಳಿಸಿದನು (೩೬-೩೮) ಭರತನ ಇಷ್ಟವು ನೆರವೇರಲಿಲ್ಲ ಅವನು ರಾಮನ ಪಾದಗಳಿಗೆ ವಂದಿಸಿ ಹಿಂದಿರುಗಿ ಬಂದು, ನಂದಿಗ್ರಾಮದಲ್ಲಿ ರಾಮನ ಆಗಮನವನ್ನು ಪ್ರತೀಕ್ಷೆ ಮಾಡುತ್ತ ರಾಜ್ಯಭಾರವನ್ನು ಮಾಡುತ್ತಿದ್ದನು (೩೯) ಭರತನು ಹೋದಮೇಲೆ ರಾಜ್ಯಲೋಭವಿಲ್ಲದೆ ಸತ್ಯಸಂಧನಾಗಿದ್ದ ಶ್ರೀರಾಮನು, ಮತ್ತೆ ಪುರಜನರು ಅಲ್ಲಿಗೆ ಬಂದಾರೆಂದು ಆಲೋಚಿಸಿ ಒಂದೇ ಮನಸ್ಸಿನಿಂದ ದಂಡಕಾರಣ್ಯವನ್ನು ಪ್ರವೇಶಿಸಿದನು (೪೦). ಆ ಮಹಾರಣ್ಯವನ್ನು ಪ್ರವೇಶಿಸಿ ಪದ್ಮನೇತ್ರನಾದ

**ಸುತೀಕ್ಷ್ಣಂ ಚಾಪ್ಯಗಸ್ತ್ಯಂ ಚ ಅಗಸ್ತ್ಯಭ್ರಾತರಂ ತಥಾ ।**
**ಅಗಸ್ತ್ಯವಚನಾಚ್ಚೈವ ಜಗ್ರಾಹೈಂದ್ರಂ ಶರಾಸನಮ್ ॥** ೪೨

**ಖಡ್ಗಂ ಚ ಪರಮಪ್ರೀತಸ್ತೂಣೀ ಚಾಕ್ಷಯಸಾಯಕೌ ।**
**ವಸತಸ್ತಸ್ಯ ರಾಮಸ್ಯ ವನೇ ವನಚರೈಃ ಸಹ ॥** ೪೩

**ಋಷಯೋಽಭ್ಯಾಗಮನ್ ಸರ್ವೇ ವಧಾಯಾಸುರರಕ್ಷಸಾಮ್ ।**
**ಸ ತೇಷಾಂ ಪ್ರತಿಶುಶ್ರಾವ ರಾಕ್ಷಸಾನಾಂ ತಥಾ ವನೇ ॥** ೪೪

**ಪ್ರತಿಜ್ಞಾತಶ್ಚ ರಾಮೇಣ ವಧಃ ಸಂಯತಿ ರಕ್ಷಸಾಮ್ ।**
**ಋಷೀಣಾಮಗ್ನಿಕಲ್ಪಾನಾಂ ದಂಡಕಾರಣ್ಯವಾಸಿನಾಮ್ ॥** ೪೫

**ತೇನ ತತ್ರೈವ ವಸತಾ ಜನಸ್ಥಾನನಿವಾಸಿನೀ ।**
**ವಿರೂಪಿತಾ ಶೂರ್ಪಣಖಾ ರಾಕ್ಷಸೀ ಕಾಮರೂಪಿಣೀ ॥** ೪೬

**ತತಃ ಶೂರ್ಪಣಖಾವಾಕ್ಯಾದುದ್ಯುಕ್ತಾನ್ ಸರ್ವರಾಕ್ಷಸಾನ್ ।**
**ಖರಂ ತ್ರಿಶಿರಸಂ ಚೈವ ದೂಷಣಂ ಚೈವ ರಾಕ್ಷಸಮ್ ॥** ೪೭

**ನಿಜಘಾನ ರಣೇ ರಾಮಸ್ತೇಷಾಂ ಚೈವ ಪದಾನುಗಾನ್ ।**
**ವನೇ ತಸ್ಮಿನ್ ನಿವಸತಾ ಜನಸ್ಥಾನನಿವಾಸಿನಾಮ್ ॥** ೪೮

---

ಶ್ರೀರಾಮನು ಶರಭಂಗ, ಸುತೀಕ್ಷ್ಣ, ಅಗಸ್ತ್ಯ, ಅಗಸ್ತ್ಯರ ಸೋದರ*— ಈ ಋಷಿಗಳನ್ನು ದರ್ಶನಮಾಡಿದನು. ಅಗಸ್ತ್ಯರ ಮಾತಿನಂತೆ ಶ್ರೀರಾಮನು ಅವರು ಕೊಟ್ಟ ಐಂದ್ರಧನುಸ್ಸನ್ನೂ ಖಡ್ಗವನ್ನೂ ಅಕ್ಷಯಾಸ್ತ್ರಗಳಿರುವ ಎರಡು ಬತ್ತಳಿಕೆಗಳನ್ನೂ ಸ್ವೀಕರಿಸಿದನು (೪೧-೪೩). ಹೀಗೆ ರಾಮನು ಅರಣ್ಯದಲ್ಲಿ ವಾಸವಾಗಿರಲು ಅವನಿಂದ ರಾಕ್ಷಸರನ್ನು ಸಂಹಾರಮಾಡಿಸುವುದಕ್ಕಾಗಿ ಅನೇಕ ಮಂದಿ ಋಷಿಗಳು ವನಚರರೊಡನೆ ಬಂದರು. ಅಗ್ನಿಯಂತೆ ಪರಮತೇಜಸ್ವಿಗಳಾದ ಆ ಋಷಿಗಳ ಸನ್ನಿಧಿಯಲ್ಲಿ ಶ್ರೀರಾಮನು ರಾಕ್ಷಸರನ್ನು ಯುದ್ಧದಲ್ಲಿ ಸಂಹರಿಸುತ್ತೇನೆಂದು ಮಾತುಕೊಟ್ಟನು (೪೪-೪೫). ಅವನು ದಂಡಕಾರಣ್ಯದಲ್ಲಿದ್ದಾಗ ಜನಸ್ಥಾನನಿವಾಸಿನಿಯೂ ಕಾಮರೂಪಿಣಿಯೂ ಆದ ಶೂರ್ಪಣಖಿಯನ್ನು (ಕಿವಿಮೂಗುಗಳನ್ನು ಕತ್ತರಿಸಿ) ವಿರೂಪಗೊಳಿಸಿದನು. ಆಗ ಅವಳು

* ಇವರ ಹೆಸರು ಮಾರ್ಕಾಂಡೇಯ ಪುರಾಣದಲ್ಲಿ ಇಧ್ಮವಾಹನ ಎಂದೂ ಸನತ್ಕುಮಾರಸಂಹಿತೆಯಲ್ಲಿ ಸುದರ್ಶನ ಎಂದೂ ಇದೆ.

**ರಕ್ಷಸಾಂ ನಿಹತಾನ್ಯಾಸನ್ ಸಹಸ್ರಾಣಿ ಚತುರ್ದಶ ।**
**ತತೋ ಜ್ಞಾತಿವಧಂ ಶ್ರುತ್ವಾ ರಾವಣಃ ಕ್ರೋಧಮೂರ್ಛಿತಃ ॥ ೪೯**

**ಸಹಾಯಂ ವರಯಾಮಾಸ ಮಾರೀಚಂ ನಾಮ ರಾಕ್ಷಸಮ್ ।**
**ವಾರ್ಯಮಾಣಃ ಸುಬಹುಶೋ ಮಾರೀಚೇನ ಸ ರಾವಣಃ ॥ ೫೦**

**ನ ವಿರೋಧೋ ಬಲವತಾ ಕ್ಷಮೋ ರಾವಣ ತೇನ ತೇ ।**
**ಅನಾದೃತ್ಯ ತು ತದ್ವಾಕ್ಯಂ ರಾವಣಃ ಕಾಲಚೋದಿತಃ ॥ ೫೧**

**ಜಗಾಮ ಸಹಮಾರೀಚಸ್ತಸ್ಯಾಶ್ರಮಪದಂ ತದಾ ।**
**ತೇನ ಮಾಯಾವಿನಾ ದೂರಮಪವಾಹ್ಯ ನೃಪಾತ್ಮಜಾ ॥ ೫೨**

**ಜಹಾರ ಭಾರ್ಯಾಂ ರಾಮಸ್ಯ ಗೃಧ್ರಂ ಹತ್ವಾ ಜಟಾಯುಷಮ್ ।**
**ಗೃಧ್ರಂ ಚ ನಿಹತಂ ದೃಷ್ಟ್ವಾ ಹೃತಾಂ ಶ್ರುತ್ವಾ ಚ ಮೈಥಿಲೀಮ್॥**
**ರಾಘವಃ ಶೋಕಸಂತಪ್ತೋ ವಿಲಲಾಪಾಕುಲೇಂದ್ರಿಯಃ ।**
**ತತಸ್ತೇನೈವ ಶೋಕೇನ ಗೃಧ್ರಂ ದಗ್ಧ್ವಾ ಜಟಾಯುಷಮ್ ॥ ೫೪**

---

ಎತ್ತಿಗಟ್ಟಿ ಕಳಿಸಿದ ಖರ, ದೂಷಣ, ತ್ರಿಶಿರ—ಎಂಬ ರಾಕ್ಷಸ ನಾಯಕರನ್ನೂ ಅವರೊಡನೆ ಬಂದ ಹದಿನಾಲ್ಕು ಸಾವಿರ ರಾಕ್ಷಸರ ಸೈನ್ಯವನ್ನೂ ರಾಮನು ಯುದ್ಧದಲ್ಲಿ ಸಂಹಾರಮಾಡಿದನು (೪೬-೪೯) ತನ್ನ ಬಂಧುಗಳ ವಧೆಯನ್ನು ಕೇಳಿ ರಾವಣನು ಕೋಪದಿಂದ ಸಿಡಿದೆದ್ದನು. ಅವನು ರಾಮನನ್ನು ವಂಚಿಸುವುದಕ್ಕಾಗಿ ಮಾರೀಚನ ಸಹಾಯವನ್ನು ಬೇಡಲು, ಮಾರೀಚನು "ರಾವಣ, ಬಲಿಷ್ಠನಾದ ರಾಮನೊಡನೆ ನಿನಗೆ ವಿರೋಧವು ಸಲ್ಲದು" ಎಂದು ಅನೇಕ ಬಗೆಯಲ್ಲಿ ಬುದ್ಧಿವಾದವನ್ನು ಹೇಳಿದನು. ಆದರೂ ರಾವಣನು ಕಾಲಗತಿಗೆ ಸಿಕ್ಕಿ ಮಾರೀಚನ ಹಿತೋಪದೇಶವನ್ನು ಧಿಕ್ಕರಿಸಿದನು (೫೦-೫೧). ಕೊನೆಗೆ ರಾವಣನು ಮಾರೀಚನೊಡನೆ ರಾಮನ ಆಶ್ರಮವಿದ್ದ ಸ್ಥಳಕ್ಕೆ ಹೋದನು ಅಲ್ಲಿ ಮಾಯಾವಿಯಾದ ಮಾರೀಚನ ಮೂಲಕ ರಾಮಲಕ್ಷ್ಮಣರು ಆಶ್ರಮದಿಂದ ದೂರ ಹೋಗುವಂತೆ ಮಾಡಿಸಿ, ರಾವಣನು ರಾಮಪತ್ನಿಯಾದ ಸೀತೆಯನ್ನು ಅಪಹರಿಸಿದನು ದಾರಿಯಲ್ಲಿ (ಅಡ್ಡಬಂದ) ಜಟಾಯುವೆಂಬ ಗೃಧ್ರರಾಜನನ್ನು ಸಾಯುವಂತೆ ಗಾಯಗೊಳಿಸಿದನು (೫೨-೫೩). ಇತ್ತ ಶ್ರೀರಾಮನು ಸೀತಾವಿರಹದಿಂದ ದುಃಖಿತ

**ಮಾರ್ಗಮಾಣೋ ವನೇ ಸೀತಾಂ ರಾಕ್ಷಸಂ ಸಂದದರ್ಶ ಹ ।**
**ಕಬಂಧಂ ನಾಮ ರೂಪೇಣ ವಿಕೃತಂ ಘೋರದರ್ಶನಮ್ ॥ ೫೫**

**ತಂ ನಿಹತ್ಯ ಮಹಾಬಾಹುರ್ದದಾಹ ಸ್ವರ್ಗತಶ್ಚ ಸಃ ।**
**ಸ ಚಾಪಿ ಕಥಯಾಮಾಸ ಶಬರೀಂ ಧರ್ಮಚಾರಿಣೀಮ್ ॥ ೫೬**

**ಶ್ರಮಣೀಂ ಧರ್ಮನಿಪುಣಾಮಭಿಗಚ್ಛೇತಿ ರಾಘವಮ್ ।**
**ಸೋಽಭ್ಯಗಚ್ಛನ್ಮಹಾತೇಜಾಃ ಶಬರೀಂ ಶತ್ರುಸೂದನಃ ॥ ೫೭**

**ಶಬರ್ಯಾ ಪೂಜಿತಃ ಸಮ್ಯಗ್ರಾಮೋ ದಶರಥಾತ್ಮಜಃ ।**
**ಪಂಪಾತೀರೇ ಹನುಮತಾ ಸಂಗತೋ ವಾನರೇಣ ಹ ॥ ೫೮**

**ಹನುಮದ್ವಚನಾಚ್ಚೈವ ಸುಗ್ರೀವೇಣ ಸಮಾಗತಃ ।**
**ಸುಗ್ರೀವಾಯ ಚ ತತ್ಸರ್ವಂ ಶಂಸದ್ರಾಮೋ ಮಹಾಬಲಃ ॥ ೫೯**

---

ನಾಗಿರಲು, ಮೈಥಿಲಿಯು ಅಪಹೃತಳಾದಳೆಂಬ ಸುದ್ದಿಯನ್ನು ಮರಣೋನ್ಮುಖನಾದ ಜಟಾಯುವಿನಿಂದ ಕೇಳಿದನು ಆಗ ಶ್ರೀರಾಮನು ಶೋಕಪರವಶನಾಗಿ ಗಳಗಳನೆ ಅಳತೊಡಗಿದನು. ಅನಂತರ ಮೃತನಾದ ಜಟಾಯುವನ್ನು ಶೋಕಿಸುತ್ತಲೇ ದಹಿಸಿ, ಸೀತೆಯನ್ನು ಅರಸುತ್ತ ಹೋಗುತ್ತಿರಲು, ದಾರಿಯಲ್ಲಿ ಒಬ್ಬ ರಾಕ್ಷಸನನು ಕಾಣಿಸಿಕೊಂಡನು ಅವನ ಹೆಸರು ಕಬಂಧ; ನೋಡುವುದಕ್ಕೆ ವಿಕಾರಿ; ಭಯಂಕರ (೫೪–೫೫) ರಾಮನು ಆ ಕಬಂಧನನ್ನು ವಧಿಸಿ ಅಗ್ನಿಯಲ್ಲಿ ದಹಿಸಲು ಅವನು (ಗಂಧರ್ವನಾಗಿ) ಸ್ವರ್ಗಲೋಕಕ್ಕೆ ಹೋದನು. ಹೋಗುವಾಗ ಆತನು ರಾಮನನ್ನು ಉದ್ದೇಶಿಸಿ "ರಾಮ, (ಸ್ವಲ್ಪ ದೂರದಲ್ಲಿ) ಧರ್ಮನಿರತಳಾದ ಶಬರಿ ಎಂಬ ತಾಪಸಿ ಇದ್ದಾಳೆ. ಅವಳ ಬಳಿಗೆ ಹೋಗು" ಎಂದನು. ಆಮೇಲೆ ಶತ್ರುಸಂಹಾರಕನಾದ ರಾಮನು ಶಬರಿಯ ಬಳಿಗೆ ಹೋದನು (೫೬–೫೭) ಅಲ್ಲಿ ಶಬರಿಯು ಶ್ರೀರಾಮನನ್ನು ಭಕ್ತಿಯಿಂದ ಪೂಜಿಸಿ ಸತ್ಕರಿಸಿದಳು. ಅನಂತರ (ಲಕ್ಷ್ಮಣಸಹಿತನಾಗಿ ಸೀತಾನ್ವೇಷಣೆ ಮಾಡುತ್ತಾ ಮುಂದೆ ಹೋಗುತ್ತಿರಲು) ಪಂಪಾಸರೋವರದ ತೀರದಲ್ಲಿ ರಾಮನಿಗೆ ಹನುಮಂತನೆಂಬ ವಾನರನ ದರ್ಶನವಾಯಿತು (೫೮). ಮಹಾಬಲಶಾಲಿಯಾದ ರಾಮನು ಹನುಮಂತನ

**ಆದಿತಸ್ತದ್ಯಥಾವೃತ್ತಂ ಸೀತಾಯಾಶ್ಚ ವಿಶೇಷತಃ ।**
**ಸುಗ್ರೀವಶ್ಚಾಪಿ ತತ್ಸರ್ವಂ ಶ್ರುತ್ವಾ ರಾಮಸ್ಯ ವಾನರಃ ॥ ೬೦**
**ಚಕಾರ ಸಖ್ಯಂ ರಾಮೇಣ ಪ್ರೀತಶ್ಚೈವಾಗ್ನಿಸಾಕ್ಷಿಕಮ್ ।**
**ತತೋ ವಾನರರಾಜೇನ ವೈರಾನುಕಥನಂ ಪ್ರತಿ ॥ ೬೧**
**ರಾಮಾಯಾವೇದಿತಂ ಸರ್ವಂ ಪ್ರಣಯಾದ್ದುಃಖಿತೇನ ಚ ।**
**ಪ್ರತಿಜ್ಞಾತಂ ಚ ರಾಮೇಣ ತದಾ ವಾಲಿವಧಂ ಪ್ರತಿ ॥ ೬೨**
**ವಾಲಿನಶ್ಚ ಬಲಂ ತತ್ರ ಕಥಯಾಮಾಸ ವಾನರಃ ।**
**ಸುಗ್ರೀವಃ ಶಂಕಿತಶ್ಚಾಸೀನ್ನಿತ್ಯಂ ವೀರ್ಯೇಣ ರಾಘವೇ ॥ ೬೩**
**ರಾಘವಪ್ರತ್ಯಯಾರ್ಥಂ ತು ದುಂದುಭೇಃ ಕಾಯಮುತ್ತಮಮ್ ।**
**ದರ್ಶಯಾಮಾಸ ಸುಗ್ರೀವೋ ಮಹಾಪರ್ವತಸಂನಿಭಮ್ ॥ ೬೪**
**ಉತ್ಸ್ಮಯಿತ್ವಾ ಮಹಾಬಾಹುಃ ಪ್ರೇಕ್ಷ್ಯ ಚಾಸ್ಥಿ ಮಹಾಬಲಃ ।**
**ಪಾದಾಂಗುಷ್ಠೇನ ಚಿಕ್ಷೇಪ ಸಂಪೂರ್ಣಂ ದಶಯೋಜನಮ್ ॥ ೬೫**

---

ಮಾತಿನಂತೆ ಸುಗ್ರೀವನನ್ನು ಕಂಡು, ಅವನಿಗೆ ತನ್ನ ವೃತ್ತಾಂತವನ್ನು ಮೊದಲಿನಿಂದ ಹೇಳಿ ಸೀತಾಪಹರಣವನ್ನು ವಿವರಿಸಿ ತಿಳಿಸಿದನು. ಸುಗ್ರೀವನು ರಾಮನ ವೃತ್ತಾಂತವನ್ನು ಕೇಳಿದಮೇಲೆ ಅವನೊಡನೆ ಸಂತೋಷದಿಂದ ಅಗ್ನಿಸಾಕ್ಷಿಕವಾಗಿ ಸಖ್ಯವನ್ನು ಮಾಡಿಕೊಂಡನು (೫೯-೬೧) ಅನಂತರ ಕಪಿನಾಯಕನಾದ ಸುಗ್ರೀವನು ಶೋಕಸಂತಪ್ತನಾಗಿ ತನಗೂ ವಾಲಿಗೂ ವೈರವು ಹೇಗೆ ಉದ್ಭವಿಸಿತೆಂಬುದನ್ನು ರಾಮನಿಗೆ ಸ್ನೇಹದಿಂದ ನಿವೇದಿಸಿ ಕೊಂಡನು ಆಗ ರಾಮನು "ನಾನು ವಾಲಿಯನ್ನು ವಧಿಸುತ್ತೇನೆ" ಎಂದು ಪ್ರತಿಜ್ಞೆಮಾಡಿದನು. ಸುಗ್ರೀವನು ವಾಲಿಯ ಪರಾಕ್ರಮವನ್ನು ರಾಮನಿಗೆ ವರ್ಣಿಸಿ ಹೇಳತೊಡಗಿದನು. ಏಕೆಂದರೆ, ರಾಮನ ಸಾಮರ್ಥ್ಯದ ವಿಷಯ ದಲ್ಲಿ ಸುಗ್ರೀವನಿಗೆ ಬಲವಾದ ಸಂಶಯವಿತ್ತು (೬೨-೬೩). ವಾಲಿಯ ಪರಾಕ್ರಮಕ್ಕೆ ನಿದರ್ಶನವಾಗಿ ಅವನು ಮಹಾಪರ್ವತಾಕಾರವಾಗಿದ್ದ ದುಂದುಭಿಯ ಕಳೇಬರವನ್ನು ತೋರಿಸಿದನು. ಆಗ ಮಹಾಬಲಶಾಲಿಯೂ ಆಜಾನುಬಾಹುವೂ ಆದ ಶ್ರೀರಾಮನು ದುಂದುಭಿಯ ಅಸ್ಥಿಪಂಜರವನ್ನು ನೋಡಿ ಅಸಡ್ಡೆಯಿಂದ ನಕ್ಕು, ಕಾಲಿನ ಹೆಬ್ಬೆರಳಿನಿಂದ ಅದನ್ನು ಹತ್ತು

**ಬಿಭೇದ ಚ ಪುನಃ ಸಾಲಾನ್ ಸಪ್ತೈಕೇನ ಮಹೇಷುಣಾ ।**
**ಗಿರಿಂ ರಸಾತಲಂ ಚೈವ ಜನಯನ್ ಪ್ರತ್ಯಯಂ ತದಾ ॥ ೬೬**

**ತತಃ ಪ್ರೀತಮನಾಸ್ತೇನ ವಿಶ್ವಸ್ತಃ ಸ ಮಹಾಕಪಿಃ ।**
**ಕಿಷ್ಕಿಂಧಾಂ ರಾಮಸಹಿತೋ ಜಗಾಮ ಚ ಗುಹಾಂ ತದಾ ॥ ೬೭**

**ತತೋಽಗರ್ಜದ್ಧರಿವರಃ ಸುಗ್ರೀವೋ ಹೇಮಪಿಂಗಲಃ ।**
**ತೇನ ನಾದೇನ ಮಹತಾ ನಿರ್ಜಗಾಮ ಹರೀಶ್ವರಃ ॥ ೬೮**

**ಅನುಮಾನ್ಯ ತದಾ ತಾರಾಂ ಸುಗ್ರೀವೇಣ ಸಮಾಗತಃ ।**
**ನಿಜಘಾನ ಚ ತತ್ರೈನಂ ಶರೇಣೈಕೇನ ರಾಘವಃ ॥ ೬೯**

**ತತಃ ಸುಗ್ರೀವವಚನಾದ್ಧತ್ವಾ ವಾಲಿನಮಾಹವೇ ।**
**ಸುಗ್ರೀವಮೇವ ತದ್ರಾಜ್ಯೇ ರಾಘವಃ ಪ್ರತ್ಯಪಾದಯತ್ ॥ ೭೦**

**ಸ ಚ ಸರ್ವಾನ್ ಸಮಾನೀಯ ವಾನರಾನ್ ವಾನರರ್ಷಭಃ ।**
**ದಿಶಃ ಪ್ರಸ್ಥಾಪಯಾಮಾಸ ದಿದೃಕ್ಷುರ್ಜನಕಾತ್ಮಜಾಮ್ ॥ ೭೧**

---

ಯೋಜನ ದೂರ ಹೋಗಿ ಬೀಳುವಂತೆ ಮೀಟಿದನು (೬೪-೬೫) ಮತ್ತೆ ಒಂದು ಮಹಾಸ್ತ್ರವನ್ನು ಪ್ರಯೋಗಿಸಲು ಅದು ಏಳು ತಾಲವೃಕ್ಷಗಳನ್ನು ಕತ್ತರಿಸಿ ಸಮೀಪದಲ್ಲಿದ್ದ ಬೆಟ್ಟವನ್ನು ಭೇದಿಸಿ ರಸಾತಲಕ್ಕೆ* ನುಗ್ಗಿತು (೬೬) ಆಗ ಸುಗ್ರೀವನು ರಾಮನ ಸಾಮರ್ಥ್ಯದ ವಿಷಯದಲ್ಲಿ ಪೂರ್ಣ ವಿಶ್ವಾಸವನ್ನು ತಳೆದು ಸಂತುಷ್ಟನಾಗಿ ಅವನೊಡನೆ ಕಿಷ್ಕಿಂಧೆಯೆಂಬ ಗುಹಾಸದೃಶವಾದ ಪಟ್ಟಣಕ್ಕೆ ಹೋದನು. ಅಲ್ಲಿ ಹೊಂಬಣ್ಣದಿಂದ ವಿರಾಜಿಸುತ್ತಿದ್ದ ಆ ಕಪೀಶ್ವರನು ಗರ್ಜಿಸಲು, ಆ ಮಹಾಗರ್ಜನೆಯನ್ನು ಕೇಳಿ ವಾಲಿಯು ಕ್ರುದ್ಧನಾದನು. ಅವನು ತಾರೆಗೆ ಸಮಾಧಾನವನ್ನು ಹೇಳಿ ಹೊರಗೆ ಬಂದು ಸುಗ್ರೀವನೊಡನೆ ಯುದ್ಧಕ್ಕೆ ನಿಂತನು ಆಗ ರಾಮನು ಒಂದು ಬಾಣವನ್ನು ಪ್ರಯೋಗಿಸಿ ವಾಲಿಯನ್ನು ಸಂಹರಿಸಿದನು (೬೭-೬೯). ಹೀಗೆ ಸುಗ್ರೀವನ ಮಾತಿನಂತೆ ಯುದ್ಧದಲ್ಲಿ ವಾಲಿಯನ್ನು ಶ್ರೀರಾಮನು ನಿಗ್ರಹಿಸಿ ಕಿಷ್ಕಿಂಧಾರಾಜ್ಯದಲ್ಲಿ ಸುಗ್ರೀವನನ್ನೇ ಸ್ಥಾಪಿಸಿದನು ಅನಂತರ ಸುಗ್ರೀವನು

* ಭೂಲೋಕದ ಕೆಳಗೆ ಅತಲ, ವಿತಲ, ಸುತಲ, ತಲಾತಲ, ಮಹಾತಲ, ರಸಾತಲ, ಪಾತಾಲ ಎಂದು ಏಳು ಲೋಕಗಳು. ರಸಾತಲವು ಆರನೆಯ ಲೋಕ.

ತತೋ ಗೃಧ್ರಸ್ಯ ವಚನಾತ್ ಸಂಪಾತೇರ್ಹನುಮಾನ್ ಬಲೀ ।
ಶತಯೋಜನವಿಸ್ತೀರ್ಣಂ ಪುಪ್ಲುವೇ ಲವಣಾರ್ಣವಮ್ ॥ ೭೨

ತತ್ರ ಲಂಕಾಂ ಸಮಾಸಾದ್ಯ ಪುರೀಂ ರಾವಣಪಾಲಿತಾಮ್ ।
ದದರ್ಶ ಸೀತಾಂ ಧ್ಯಾಯಂತೀಮಶೋಕವನಿಕಾಂ ಗತಾಮ್ ॥ ೭೩

ನಿವೇದಯಿತ್ವಾಭಿಜ್ಞಾನಂ ಪ್ರವೃತ್ತಿಂ ಚ ನಿವೇದ್ಯ ಚ ।
ಸಮಾಶ್ವಾಸ್ಯ ಚ ವೈದೇಹೀಂ ಮರ್ದಯಾಮಾಸ ತೋರಣಮ್ ॥

ಪಂಚ ಸೇನಾಗ್ರಗಾನ್ ಹತ್ವಾ ಸಪ್ತ ಮಂತ್ರಿಸುತಾನಪಿ ।
ಶೂರಮಕ್ಷಂ ಚ ನಿಷ್ಪಿಷ್ಯ ಗ್ರಹಣಂ ಸಮುಪಾಗಮತ್ ॥ ೭೫

ಅಸ್ತ್ರೇಣೋನ್ಮುಕ್ತಮಾತ್ಮಾನಂ ಜ್ಞಾತ್ವಾ ಪೈತಾಮಹಾದ್ವರಾತ್ ।
ಮರ್ಷಯನ್ ರಾಕ್ಷಸಾನ್ ವೀರೋ ಯಂತ್ರಿಣಸ್ತಾನ್ ಯದೃಚ್ಛಯಾ ॥

---

ಸಕಲ ವಾನರಬಲವನ್ನು ಬರಮಾಡಿಕೊಂಡು ಜನಕಸುತೆಯನ್ನು ಹುಡುಕುವುದಕ್ಕಾಗಿ ಅವರೆಲ್ಲರನ್ನೂ ದಿಕ್ಕುದಿಕ್ಕಿಗೆ ಕಳಿಸಿದನು (೭೦-೭೧) ಕಡೆಗೆ ಬಲಶಾಲಿಯಾದ ಹನುಮಂತನು ಸಂಪಾತಿಯೆಂಬ ಗೃಧ್ರದ ಮಾತಿನಂತೆ (ಸೀತೆಯು ಲಂಕೆಯಲ್ಲಿರುವಳೆಂದು ತಿಳಿದು) ಶತಯೋಜನ ವಿಸ್ತಾರವಾದ ಮಹಾಸಾಗರವನ್ನು ಲಂಘಿಸಿದನು ಅವನು ರಾವಣನ ರಕ್ಷಣೆಗೆ ಒಳಪಟ್ಟ ಲಂಕಾನಗರವನ್ನು ನೇರಿ ಅಶೋಕವನದಲ್ಲಿ ಶ್ರೀರಾಮನನ್ನೇ ಧ್ಯಾನಿಸುತ್ತಿದ್ದ ಸೀತಾದೇವಿಯನ್ನು ಕಂಡನು (೭೨-೭೩). ಹನುಮಂತನು ಅವಳಿಗೆ ಶ್ರೀರಾಮನ ವೃತ್ತಾಂತವನ್ನು ನಿವೇದಿಸಿ ರಾಮನ ಅಂಗುಲೀಯಕವನ್ನು ಗುರುತಾಗಿ ಕೊಟ್ಟು ಸಮಾಶ್ವಾಸನ ಮಾಡಿದನು. ಅನಂತರ ಹನುಮಂತನು ಅಶೋಕವನದ ಬಹಿರ್ದ್ವಾರವನ್ನು ಮುರಿದು ಹಾಕಿ, ಯುದ್ಧಕ್ಕೆ ಬಂದ ಐವರು ಸೇನಾಪತಿಗಳನ್ನೂ ಏಳ್ವರು ಮಂತ್ರಿಪುತ್ರರನ್ನೂ ವಧಿಸಿ ಶೂರನಾದ ಅಕ್ಷಕುಮಾರನನ್ನು ಬಡಿದು ಕೊಂದು ಕೊನೆಯಲ್ಲಿ (ಇಂದ್ರಜಿತ್ತಿನ ಬ್ರಹ್ಮಾಸ್ತ್ರಕ್ಕೆ) ಸೆರೆಸಿಕ್ಕಿದನು (೭೪-೭೫) ಬ್ರಹ್ಮನ ವರಬಲದಿಂದ ತಾನು ಬ್ರಹ್ಮಾಸ್ತ್ರಕ್ಕೆ ಬದ್ಧನಾಗಿಲ್ಲವೆಂದು ತಿಳಿದರೂ ಆ ವೀರನು ತನ್ನನ್ನು ಎಳೆದೊಯ್ಯುತ್ತಿದ್ದ ರಾಕ್ಷಸರನ್ನು ಬೇಕೆಂತಲೇ ಕೊಲ್ಲದೆ ತಾಳ್ಮೆಯಿಂದಿದ್ದನು.

ತತೋ ದಗ್ಧ್ವಾ ಪುರೀಂ ಲಂಕಾಮೃತೇ ಸೀತಾಂ ಚ ಮೈಥಿಲೀಮ್
ರಾಮಾಯ ಪ್ರಿಯಮಾಖ್ಯಾತುಂ ಪುನರಾಯಾನ್ಮಹಾಕಪಿಃ ॥ ೭೭

ಸೋಽಭಿಗಮ್ಯ ಮಹಾತ್ಮಾನಂ ಕೃತ್ವಾ ರಾಮಂ ಪ್ರದಕ್ಷಿಣಮ್ ।
ನ್ಯವೇದಯದಮೇಯಾತ್ಮಾ ದೃಷ್ಟಾ ಸೀತೇತಿ ತತ್ತ್ವತಃ ॥ ೭೮

ತತಃ ಸುಗ್ರೀವಸಹಿತೋ ಗತ್ವಾ ತೀರಂ ಮಹೋದಧೇಃ ।
ಸಮುದ್ರಂ ಕ್ಷೋಭಯಾಮಾಸ ಶರೈರಾದಿತ್ಯಸಂನಿಭೈಃ ॥ ೭೯

ದರ್ಶಯಾಮಾಸ ಚಾತ್ಮಾನಂ ಸಮುದ್ರಃ ಸರಿತಾಂ ಪತಿಃ ।
ಸಮುದ್ರವಚನಾಚ್ಚೈವ ನಲಂ ಸೇತುಮಕಾರಯತ್ ॥ ೮೦

ತೇನ ಗತ್ವಾ ಪುರೀಂ ಲಂಕಾಂ ಹತ್ವಾ ರಾವಣಮಾಹವೇ ।
ರಾಮಃ ಸೀತಾಮನುಪ್ರಾಪ್ಯ ಪರಾಂ ವ್ರೀಡಾಮುಪಾಗಮತ್ ॥ ೮೧

---

ಕಡೆಯಲ್ಲಿ ಮೈಥಿಲಿಯೋರ್ವಳನ್ನು ಬಿಟ್ಟು ಇಡೀ ಲಂಕಾನಗರವನ್ನೇ ಸುಟ್ಟು ಹಾಕಿ, ರಾಮನಿಗೆ ಸಂತೋಷದ ಸುದ್ದಿಯನ್ನು ಹೇಳುವುದಕ್ಕೋಸ್ಕರ ಆ ಮಹಾಕಪಿಯು ಹಿಂದಿರುಗಿ ಬಂದನು (೭೬–೭೭) ಮಹಾಸಾಹಸಿಯಾದ ಹನುಮಂತನು ಮಹಾತ್ಮನಾದ ಶ್ರೀರಾಮನ ಬಳಿಗೆ ಹೋಗಿ ಪ್ರದಕ್ಷಿಣ ನಮಸ್ಕಾರವನ್ನು ಮಾಡಿ, " ಸೀತಾದೇವಿಯನ್ನು ನೋಡಿ ಬಂದೆನು " ಎಂದು ಸತ್ಯವನ್ನರುಹಿದನು (೭೮) ಅನಂತರ ಶ್ರೀರಾಮನು ಸುಗ್ರೀವಸಹಿತನಾಗಿ ಮಹಾಸಾಗರದ ತೀರವನ್ನು ಸೇರಿ, ಸೂರ್ಯನಂತೆ ಜ್ವಲಿಸುವ ತನ್ನ ಶರಗಳಿಂದ ಸಮುದ್ರವನ್ನು ಕಂಗೆಡಿಸಿದನು. ಆಗ ಸಮುದ್ರರಾಜನು ಪ್ರತ್ಯಕ್ಷನಾಗಿ ತನ್ನ ಮೇಲೆ ಸೇತುವೆಯನ್ನು ಕಟ್ಟುವಂತೆ ಹೇಳಲಾಗಿ, ಅದರಂತೆ ನಳನಿಂದ ರಾಮನು ಸೇತುವೆಯನ್ನು ಕಟ್ಟಿಸಿದನು (೭೯–೮೦). ಆಮೇಲೆ ಆ ಸೇತುವೆಯ ಮಾರ್ಗವಾಗಿ ಲಂಕೆಗೆ ಹೋಗಿ ಸಮರದಲ್ಲಿ ರಾವಣನನ್ನು ಸಂಹರಿಸಿದನು. ತರುವಾಯ ಸೀತಾದೇವಿಯನ್ನು ಪಡೆದರೂ ಶ್ರೀರಾಮನ ಮನಸ್ಸಿನಲ್ಲಿ (ರಾಕ್ಷಸ ಗೃಹದಲ್ಲಿದ್ದವಳನ್ನು ಸ್ವೀಕರಿಸಿದರೆ ಜನರು ಏನು ಆಡಿಕೊಳ್ಳುವರೋ ಎಂದು) ಒಂದು ಬಗೆಯ ಲಜ್ಜೆಯುಂಟಾಯಿತು (೮೧).

ತಾಮುವಾಚ ತತೋ ರಾಮಃ ಪರುಷಂ ಜನಸಂಸದಿ ।
ಅಮೃಷ್ಯಮಾಣಾ ಸಾ ಸೀತಾ ವಿವೇಶ ಜ್ವಲನಂ ಸತೀ ॥ ೮೨
ತತೋಽಗ್ನಿವಚನಾತ್ ಸೀತಾಂ ಜ್ಞಾತ್ವಾ ವಿಗತಕಲ್ಮಷಾಮ್ ।
ಬಭೌ ರಾಮಃ ಸಂಪ್ರಹೃಷ್ಟಃ ಪೂಜಿತಃ ಸರ್ವದೈವತೈಃ ॥ ೮೩
ಕರ್ಮಣಾ ತೇನ ಮಹತಾ ತ್ರೈಲೋಕ್ಯಂ ಸಚರಾಚರಮ್ ।
ಸದೇವರ್ಷಿಗಣಂ ತುಷ್ಟಂ ರಾಘವಸ್ಯ ಮಹಾತ್ಮನಃ ॥ ೮೪
ಅಭಿಷಿಚ್ಯ ಚ ಲಂಕಾಯಾಂ ರಾಕ್ಷಸೇಂದ್ರಂ ವಿಭೀಷಣಮ್ ।
ಕೃತಕೃತ್ಯಸ್ತದಾ ರಾಮೋ ವಿಜ್ವರಃ ಪ್ರಮುಮೋದ ಹ ॥ ೮೫
ದೇವತಾಭ್ಯೋ ವರಂ ಪ್ರಾಪ್ಯ ಸಮುತ್ಥಾಪ್ಯ ಚ ವಾನರಾನ್ ।
ಅಯೋಧ್ಯಾಂ ಪ್ರಸ್ಥಿತೋ ರಾಮಃ ಪುಷ್ಪಕೇಣ ಸುಹೃದ್ವೃತಃ ॥
ಭರದ್ವಾಜಾಶ್ರಮಂ ಗತ್ವಾ ರಾಮಃ ಸತ್ಯಪರಾಕ್ರಮಃ ।
ಭರತಸ್ಯಾಂತಿಕಂ ರಾಮೋ ಹನೂಮಂತಂ ವ್ಯಸರ್ಜಯತ್ ॥ ೮೭

---

ಆಗ ಅವನು ಜನಗಳೆದುರಿಗೆ ಸೀತೆಯನ್ನುದ್ದೇಶಿಸಿ ಕಠೋರವಾದ ಮಾತನ್ನಾಡಲು, ಅದನ್ನು ಸಹಿಸಲಾರದೆ ಆ ಪತಿವ್ರತೆಯು ಅಗ್ನಿಪ್ರವೇಶ ಮಾಡಿದಳು (೮೨). ಅನಂತರ ಅಗ್ನಿದೇವನ ನುಡಿಯಿಂದ ಸೀತೆಯು ಸರ್ವಥಾ ನಿರ್ದೋಷಳೆಂದರಿತು ಅವಳನ್ನು ರಾಮನು ಸ್ವೀಕರಿಸಿದನು. ಮಹಾಪುರುಷನಾದ ರಾಮನ ಆ ಅದ್ಭುತಕಾರ್ಯಗಳನ್ನು ನೋಡಿ ಚರಾಚರಾತ್ಮಕವಾದ ಮೂರು ಲೋಕವೂ ದೇವರ್ಷಿಗಳೂ ಆನಂದಿಸಿದರು. ಸಕಲ ದೇವತೆಗಳಿಂದಲೂ ಪೂಜಿತನಾಗಿ ಶ್ರೀರಾಮನು ಹರ್ಷದಿಂದ ವಿರಾಜಿಸುತ್ತಿದ್ದನು (೮೩–೮೪) ಅನಂತರ ಶ್ರೀರಾಮನು ವಿಭೀಷಣನನ್ನು ಲಂಕೆಯಲ್ಲಿ ರಾಕ್ಷಸೇಶ್ವರನೆಂದು ಪಟ್ಟಾಭಿಷೇಕ ಮಾಡಿಸಿ, ತನ್ನ ಕರ್ತವ್ಯವನ್ನು ಮಾಡಿದ್ದಾಯಿತೆಂದು ನಿಶ್ಚಿಂತನಾದನು. ಯುದ್ಧದಲ್ಲಿ ಹತರಾಗಿದ್ದ ವಾನರರೆಲ್ಲರನ್ನೂ ದೇವತೆಗಳ ವರದಿಂದ ಬದುಕಿಸಿ, ಮಿತ್ರವೃಂದಪರಿವೃತನಾಗಿ ಪುಷ್ಪಕ ವಿಮಾನದಲ್ಲಿ ಕುಳಿತು ರಾಮನು ಅಯೋಧ್ಯಾಭಿಮುಖನಾಗಿ ಪ್ರಯಾಣ ಮಾಡಿದನು (೮೫–೮೬). ಸತ್ಯನಿಷ್ಠನಾದ ಆತನು ಮಾರ್ಗದಲ್ಲಿ ಭರದ್ವಾಜಾಶ್ರಮದಲ್ಲಿಳಿದು ಅಲ್ಲಿಂದ ಹನುಮಂತನನ್ನು ಭರತನ ಬಳಿಗೆ

**ಪುನರಾಖ್ಯಾಯಿಕಾಂ ಜಲ್ಪನ್ ಸುಗ್ರೀವಸಹಿತಸ್ತದಾ ।**
**ಪುಷ್ಪಕಂ ತತ್ ಸಮಾರುಹ್ಯ ನಂದಿಗ್ರಾಮಂ ಯಯೌ ತದಾ ॥ ೮೮**

**ನಂದಿಗ್ರಾಮೇ ಜಟಾಂ ಹಿತ್ವಾ ಭ್ರಾತೃಭಿಃ ಸಹಿತೋಽನಘಃ ।**
**ರಾಮಃ ಸೀತಾಮನುಪ್ರಾಪ್ಯ ರಾಜ್ಯಂ ಪುನರವಾಪ್ತವಾನ್ ॥ ೮೯**

**ಪ್ರಹೃಷ್ಟಮುದಿತೋ ಲೋಕಸ್ತುಷ್ಟಃ ಪುಷ್ಟಃ ಸುಧಾರ್ಮಿಕಃ ।**
**ನಿರಾಮಯೋ ಹ್ಯರೋಗಶ್ಚ ದುರ್ಭಿಕ್ಷಭಯವರ್ಜಿತಃ ॥ ೯೦**

**ನ ಪುತ್ರಮರಣಂ ಕೇಚಿದ್ದ್ರಕ್ಷ್ಯಂತಿ ಪುರುಷಾಃ ಕ್ವಚಿತ್ ।**
**ನಾರ್ಯಶ್ಚಾವಿಧವಾ ನಿತ್ಯಂ ಭವಿಷ್ಯಂತಿ ಪತಿವ್ರತಾಃ ॥ ೯೧**

**ನ ಚಾಗ್ನಿಜಂ ಭಯಂ ಕಿಂಚಿನ್ನಾಪ್ಸು ಮಜ್ಜಂತಿ ಜಂತವಃ ।**
**ನ ವಾತಜಂ ಭಯಂ ಕಿಂಚಿನ್ನಾಪಿ ಜ್ವರಕೃತಂ ತಥಾ ॥ ೯೨**

**ನ ಚಾಪಿ ಕ್ಷುದ್ಭಯಂ ತತ್ರ ನ ತಸ್ಕರಭಯಂ ತಥಾ ।**
**ನಗರಾಣಿ ಚ ರಾಷ್ಟ್ರಾಣಿ ಧನಧಾನ್ಯಯುತಾನಿ ಚ ॥ ೯೩**

---

ಕಳಿಸಿದನು ಪುನಃ ಪುಷ್ಪಕವಿಮಾನವನ್ನೇರಿ ಸುಗ್ರೀವಾದಿಗಳೊಡನೆ ಪೂರ್ವ ಕಥೆಯನ್ನು ಕುರಿತು ಸಲ್ಲಾಪಿಸುತ್ತ ನಂದಿಗ್ರಾಮಕ್ಕೆ ತೆರಳಿದನು (೮೭-೮೮). ಅಲ್ಲಿ ತನ್ನ ತಮ್ಮಂದಿರೊಡನೆ ತಾನೂ ಜಟೆಯನ್ನು ತೆಗೆಯಿಸಿ, ಸೀತಾದೇವಿಯೊಡನೆ ಪಟ್ಟಾಭಿಷಿಕ್ತನಾಗಿ ರಾಜ್ಯವನ್ನು ಪುನಃ ಸ್ವೀಕರಿಸಿದನು (೮೯). ರಾಮರಾಜ್ಯದಲ್ಲಿ ಪ್ರಜೆಗಳು ಧನಧಾನ್ಯ ಸಮೃದ್ಧಿಯಿಂದ ಹೃಷ್ಟಚಿತ್ತರೂ ಮಾನಸಕ್ಷೋಭೆಯಿಲ್ಲದ ಆನಂದಿತಕ್ಕವರೂ ಇಷ್ಟಲಾಭದಿಂದ ಸಂತುಷ್ಟರೂ ದಾರಿದ್ರ್ಯವಿಲ್ಲದೆ ಪುಷ್ಟರೂ ಆಗಿದ್ದಾರೆ. ಅವರು ಧರ್ಮಾಚರಣೆಯಲ್ಲಿ ನಿರತರು ಅವರಿಗೆ ಮಾನಸಿಕವಾದ ಮತ್ತು ದೈಹಿಕವಾದ ರೋಗಗಳಾವುವೂ ಇಲ್ಲ. ದುರ್ಭಿಕ್ಷದ ಭಯವಿಲ್ಲ (೯೦). ಅವರ ಕಣ್ಣೆದುರಿಗೆ ಮಕ್ಕಳು ಸಾಯುತ್ತಾರೆ ಎಂಬುದೇ ಇಲ್ಲ ಸ್ತ್ರೀಯರೆಲ್ಲರೂ ಪತಿವ್ರತೆಯರು ಅವರು ಅಕಾಲದಲ್ಲಿ ಎಂದಿಗೂ ವಿಧವೆಯರಾಗುವುದಿಲ್ಲ. ರಾಮರಾಜ್ಯದಲ್ಲಿ ಬಿರುಗಾಳಿಯ ಭಯವಾಗಲಿ ಜ್ವರಾದಿರೋಗಗಳ ಭಯವಾಗಲಿ ಇಲ್ಲ. ಯಾವ ಪ್ರಜೆಯೂ ಹಸಿವಿನಿಂದ ಒಳಲುವ ಸಂದರ್ಭವಿಲ್ಲ. ಕಳ್ಳಕಾಕರ ಹೆದರಿಕೆ ಇಲ್ಲ ಪಟ್ಟಣಗಳೂ ಗ್ರಾಮಾಂತರ ಪ್ರದೇಶಗಳೂ ಧನಧಾನ್ಯಗಳಿಂದ

ನಿತ್ಯಂ ಪ್ರಮುದಿತಾಃ ಸರ್ವೇ ಯಥಾ ಕೃತಯುಗೇ ತಥಾ ।
ಅಶ್ವಮೇಧಶತೈರಿಷ್ಟ್ವಾ ತಥಾ ಬಹುಸುವರ್ಣಕೈಃ ॥ ೯೪

ಗವಾಂ ಕೋಟ್ಯಯುತಂ ದತ್ವಾ ವಿದ್ವದ್ಭ್ಯೋ ವಿಧಿಪೂರ್ವಕಮ್ ।
ಅಸಂಖ್ಯೇಯಂ ಧನಂ ದತ್ವಾ ಬ್ರಾಹ್ಮಣೇಭ್ಯೋ ಮಹಾಯಶಾಃ ॥

ರಾಜವಂಶಾನ್ ಶತಗುಣಾನ್ ಸ್ಥಾಪಯಿಷ್ಯತಿ ರಾಘವಃ ।
ಚಾತುರ್ವರ್ಣ್ಯಂ ಚ ಲೋಕೇಽಸ್ಮಿನ್ ಸ್ವೇಸ್ವೇ ಧರ್ಮೇ ನಿಯೋಕ್ಷ್ಯತಿ

ದಶ ವರ್ಷಸಹಸ್ರಾಣಿ ದಶ ವರ್ಷಶತಾನಿ ಚ ।
ರಾಮೋ ರಾಜ್ಯಮುಪಾಸಿತ್ವಾ ಬ್ರಹ್ಮಲೋಕಂ ಪ್ರಯಾಸ್ಯತಿ ॥ ೯೭

ಇದಂ ಪವಿತ್ರಂ ಪಾಪಘ್ನಂ ಪುಣ್ಯಂ ವೇದೈಶ್ಚ ಸಂಮಿತಮ್ ।
ಯಃ ಪಠೇದ್ರಾಮಚರಿತಂ ಸರ್ವಪಾಪೈಃ ಪ್ರಮುಚ್ಯತೇ ॥ ೯೮

ಏತದಾಖ್ಯಾನಮಾಯುಷ್ಯಂ ಪಠನ್ ರಾಮಾಯಣಂ ನರಃ ।
ಸಪುತ್ರಪೌತ್ರಃ ಸಗಣಃ ಪ್ರೇತ್ಯ ಸ್ವರ್ಗೇ ಮಹೀಯತೇ ॥ ೯೯

---

ತುಂಬಿರುತ್ತವೆ. ಕೃತಯುಗದಲ್ಲಿದ್ದಂತೆ ಸಕಲರೂ ಆನಂದದಿಂದ ಇದ್ದಾರೆ (೯೧-೯೪). ಆ ರಘುನಾಥನು ನೂರಾರು ಅಶ್ವಮೇಧಯಾಗಗಳನ್ನು ಅನಂತ ಸುವರ್ಣನಾಣ್ಯಗಳ ವ್ಯಯದಿಂದ ಮಾಡಿ, ವಿದ್ವಾಂಸರಾದ ಬ್ರಾಹ್ಮಣರಿಗೆ ವಿಧಿಪೂರ್ವಕವಾಗಿ ಕೋಟಿಗಟ್ಟಲೆ ಗೋವುಗಳನ್ನೂ ಲೆಕ್ಕವಿಲ್ಲದಷ್ಟು ಹಣವನ್ನೂ ದಾನಮಾಡುವನು. ನೂರಾರುಮಂದಿ ಕ್ಷತ್ರಿಯ ವಂಶದ ರಾಜರನ್ನು (ಧರ್ಮಪಾಲನೆಗಾಗಿ) ಅಲ್ಲಲ್ಲಿ ಸ್ಥಾಪಿಸುವನು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣದವರೂ ತಮ್ಮ ತಮ್ಮ ಧರ್ಮಗಳನ್ನು ಪಾಲಿಸುತ್ತ ಇರುವಂತೆ ನಿಯಮಿಸುವನು (೯೫-೯೬). ಶ್ರೀರಾಮನು ಹನ್ನೊಂದು ಸಾವಿರ ವರ್ಷಗಳ ಕಾಲ ರಾಜ್ಯಭಾರವನ್ನು ಮಾಡಿ ಬ್ರಹ್ಮಲೋಕವನ್ನೈದುವನು * (೯೭). ಈ ರಾಮಚರಿತ್ರೆಯು ಚಿತ್ತಶುದ್ಧಿಕರವೂ ಪಾಪಹಾರಿಯೂ ಪುಣ್ಯಸಾಧನವೂ ಆಗಿದೆ. ಆದ್ದರಿಂದ ಇದು ವೇದಸಮಾನವಾದದ್ದು. ಇದನ್ನು ಪಠಿಸತಕ್ಕವನು ಸರ್ವಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ. ಆಯುಷ್ಕರವಾದ ಈ ರಾಮಾಯಣವನ್ನು ಪಠಿಸತಕ್ಕ ಪುರುಷನು ಇಹಲೋಕ

* ಬ್ರಹ್ಮಲೋಕ = ಸ್ವಸ್ಥಾನವಾದ ವೈಕುಂಠ.

**ಪಠನ್ ದ್ವಿಜೋ ವಾಗೃಷಭತ್ವಮೀಯಾತ್**
**ಸ್ಯಾತ್ ಕ್ಷತ್ರಿಯೋ ಭೂಮಿಪತಿತ್ವಮೀಯಾತ್ ।**
**ವಣಿಗ್ಜನಃ ಪಣ್ಯಫಲತ್ವಮೀಯಾ-**
**ಜ್ಜನಶ್ಚ ಶೂದ್ರೋಽಪಿ ಮಹತ್ವಮೀಯಾತ್ ॥* ೧೦೦**

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ
ಚತುರ್ವಿಂಶತಿ ಸಹಸ್ರಿಕಾಯಾಂ ಸಂಹಿತಾಯಾಂ ಬಾಲಕಾಂಡೇ
ಪ್ರಥಮಃ ಸರ್ಗಃ



ದಲ್ಲಿ ಪುತ್ರ ಪೌತ್ರರೊಡನೆಯೂ ಭೃತ್ಯವರ್ಗದೊಡನೆಯೂ ಸುಖದಿಂದಿದ್ದು ಮರಣಾನಂತರ ಸ್ವರ್ಗಲೋಕದಲ್ಲಿ ದೇವತೆಗಳಿಂದ ಸತ್ಕೃತನಾಗಿ ಆನಂದ ದಿಂದಿರುವನು (೯೮-೯೯) ಶ್ರೀಮದ್ರಾಮಾಯಣವನ್ನು ಪಠಿಸುವ ಬ್ರಾಹ್ಮಣನು ಶಬ್ದಬ್ರಹ್ಮದಲ್ಲಿ ಪಾರಂಗತನಾಗಿ ವಾಗ್ವಿಶಾರದನಾಗುವನು. ಕ್ಷತ್ರಿಯನು ಭೂಪಾಲನಾಗುವನು ವೈಶ್ಯನು ವಾಣಿಜ್ಯದ ಫಲವಾಗಿ ಐಶ್ವರ್ಯವನ್ನು ಗಳಿಸುವನು. ಶೂದ್ರನು (ಸತ್ಯ, ಶೌಚ, ಸದಾಚಾರ ಮುಂತಾದ ಗುಣಗಳಿಂದ) ಜನರ ಗೌರವಕ್ಕೆ ಪಾತ್ರನಾಗುವನು (೧೦೦).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಒಂದನೆಯ ಸರ್ಗ



---

* ಈ ನೂರು ಶ್ಲೋಕಗಳಿಗೆ ಬಾಲರಾಮಾಯಣವೆಂದೂ ಸಂಕ್ಷೇಪರಾಮಾಯಣ ವೆಂದೂ ಹೆಸರು. ಇದು ತಕಾರದಿಂದ ಆರಂಭವಾಗಿ 'ಯಾತ್' ಎಂದು ಮುಗಿಯು ವುದರಿಂದ ಇದರಲ್ಲಿ ಗಾಯತ್ರೀಮಂತ್ರಾರ್ಥವು ಅಡಕವಾಗಿದೆಯೆಂದು ಹೇಳುತ್ತಾರೆ.

## ದ್ವಿತೀಯಃ ಸರ್ಗಃ

### ಬ್ರಹ್ಮಾಗಮನಮ್

**ನಾರದಸ್ಯ ತು ತದ್ವಾಕ್ಯಂ ಶ್ರುತ್ವಾ ವಾಕ್ಯವಿಶಾರದಃ ।**
**ಪೂಜಯಾಮಾಸ ಧರ್ಮಾತ್ಮಾ ಸಹಶಿಷ್ಯೋ ಮಹಾಮುನಿಃ ॥** ೧

**ಯಥಾವತ್ ಪೂಜಿತಸ್ತೇನ ದೇವರ್ಷಿರ್ನಾರದಸ್ತದಾ ।**
**ಆಪೃಚ್ಛೈವಾಭ್ಯನುಜ್ಞಾತಃ ಸ ಜಗಾಮ ವಿಹಾಯಸಮ್ ॥** ೨

**ಸ ಮುಹೂರ್ತಂ ಗತೇ ತಸ್ಮಿನ್ ದೇವಲೋಕಂ ಮುನಿಸ್ತದಾ ।**
**ಜಗಾಮ ತಮಸಾತೀರಂ ಜಾಹ್ನವ್ಯಾಸ್ತ್ವವಿದೂರತಃ ॥** ೩

**ಸ ತು ತೀರಂ ಸಮಾಸಾದ್ಯ ತಮಸಾಯಾ ಮುನಿಸ್ತದಾ ।**
**ಶಿಷ್ಯಮಾಹ ಸ್ಥಿತಂ ಪಾರ್ಶ್ವೇ ದೃಷ್ಟ್ವಾ ತೀರ್ಥಮಕರ್ದಮಮ್ ॥**

## ಸರ್ಗ ೨

ವಾಲ್ಮೀಕಿಮುನಿಗಳು ಸ್ನಾನಕ್ಕಾಗಿ ತಮಸಾನದಿಗೆ ಹೋಗುವುದು. ಒಬ್ಬ
ವ್ಯಾಧನು ಕ್ರೌಂಚಪಕ್ಷಿಯನ್ನು ಬಾಣದಿಂದ ಹೊಡೆಯಲು ವಾಲ್ಮೀಕಿಗಳ
ಮುಖದಿಂದ ಛಂದೋಮಯವಾದ ವಾಣಿಯು ಹೊರಡುವುದು
ಬ್ರಹ್ಮನು ರಾಮಾಯಣವನ್ನು ವಿರಚಿಸುವಂತೆ
ವಾಲ್ಮೀಕಿಗಳಿಗೆ ಸೂಚಿಸುವುದು.

ನಾರದಮಹರ್ಷಿಗಳು ಹೇಳಿದ ಶ್ರೀರಾಮಚರಿತ್ರೆಯನ್ನು ಕೇಳಿ ವಾಲ್ಮೀಕಿಮುನಿಗಳು ಶಿಷ್ಯಸಮೇತರಾಗಿ ಅವರನ್ನು ಶ್ಲಾಘಿಸಿ ಸತ್ಕರಿಸಿದರು. ಅನಂತರ ನಾರದರು ಹೋಗಿಬರುತ್ತೇನೆಂದು ಹೇಳಿ ವಾಲ್ಮೀಕಿಗಳ ಸಮ್ಮತಿಯನ್ನು ಪಡೆದು ಆಕಾಶಮಾರ್ಗವಾಗಿ ತೆರಳಿದರು (೧-೨). ಅವರು ದೇವಲೋಕಕ್ಕೆ ಹೊರಟುಹೋಗಲು ವಾಲ್ಮೀಕಿ ಋಷಿಗಳು ಒಂದು ಮುಹೂರ್ತ ಕಾಲ ಆಶ್ರಮದಲ್ಲಿದ್ದು ಗಂಗಾನದಿಯ ಸಮೀಪದಲ್ಲಿರುವ ತಮಸಾನದಿಯ ತೀರಕ್ಕೆ ಸ್ನಾನಾಹ್ನಿಕಗಳನ್ನು ಮಾಡಲು ಹೊರಟರು. ಅವರು ತಮಸಾ ತೀರವನ್ನು ಸೇರಿ ಪರಿಶುದ್ಧವಾದ ತೀರ್ಥವನ್ನು ನೋಡುತ್ತ, ಒಳಿಯಲ್ಲಿದ್ದ

ಅಕರ್ದಮಮಿದಂ ತೀರ್ಥಂ ಭರದ್ವಾಜ ನಿಶಾಮಯ ।
ರಮಣೀಯಂ ಪ್ರಸನ್ನಾಂಬು ಸನ್ಮನುಷ್ಯಮನೋ ಯಥಾ ॥ ೫

ನ್ಯಸ್ಯತಾಂ ಕಲಶಸ್ತಾತ ದೀಯತಾಂ ವಲ್ಕಲಂ ಮಮ ।
ಇದಮೇವಾವಗಾಹಿಷ್ಯೇ ತಮಸಾತೀರ್ಥಮುತ್ತಮಮ್ ॥ ೬

ಏವಮುಕ್ತೋ ಭರದ್ವಾಜೋ ವಾಲ್ಮೀಕೇನ ಮಹಾತ್ಮನಾ ।
ಪ್ರಾಯಚ್ಛತ ಮುನೇಸ್ತಸ್ಯ ವಲ್ಕಲಂ ನಿಯತೋ ಗುರೋಃ ॥ ೭

ಸ ಶಿಷ್ಯಹಸ್ತಾದಾದಾಯ ವಲ್ಕಲಂ ನಿಯತೇಂದ್ರಿಯಃ ।
ವಿಚಚಾರ ಹ ಪಶ್ಯಂಸ್ತತ್ ಸರ್ವತೋ ವಿಪುಲಂ ವನಮ್ ॥ ೮

ತಸ್ಯಾಭ್ಯಾಶೇ ತು ಮಿಥುನಂ ಚರಂತಮನಪಾಯಿನಮ್ ।
ದದರ್ಶ ಭಗವಾಂಸ್ತತ್ರ ಕ್ರೌಂಚಯೋಶ್ಚಾರುನಿಃಸ್ವನಮ್ ॥ ೯

ತಸ್ಮಾತ್ತು ಮಿಥುನಾದೇಕಂ ಪುಮಾಂಸಂ ಪಾಪನಿಶ್ಚಯಃ ।
ಜಘಾನ ವೈರನಿಲಯೋ ನಿಷಾದಸ್ತಸ್ಯ ಪಶ್ಯತಃ ॥ ೧೦

---

ಶಿಷ್ಯರನ್ನು ಕುರಿತು ಹೀಗೆಂದರು. (೩-೪) "ಭರದ್ವಾಜ, ಸ್ವಚ್ಛವಾದ ಈ ತೀರ್ಥವನ್ನು ನೋಡು. ತಿಳಿನೀರಿನಿಂದ ತುಂಬಿದ ಇದು ಸಜ್ಜನರ ಮನಸ್ಸಿನಂತೆ ಎಷ್ಟು ರಮಣೀಯವಾಗಿದೆ! ಮಗು, ಕಮಂಡಲವನ್ನು ಕೆಳಗಿಟ್ಟು ನನ್ನ ವಲ್ಕಲವನ್ನು ಕೊಡು ಉತ್ತಮವಾದ ಈ ತಮಸಾತೀರ್ಥದಲ್ಲಿಯೇ ಸ್ನಾನಮಾಡುವೆನು" ಆಗ ಶುಶ್ರೂಷಾಪರನಾದ ಭರದ್ವಾಜನು ವಲ್ಕಲವನ್ನು ಗುರುಗಳಿಗೆ ಕೊಟ್ಟನು (೫-೭). ಆಗ ಜಿತೇಂದ್ರಿಯರಾದ ವಾಲ್ಮೀಕಿಮುನಿಗಳು ಶಿಷ್ಯನ ಕೈಯಿಂದ ಆ ನಾರುಬಟ್ಟೆಯನ್ನು ತೆಗೆದುಕೊಂಡು ಸುತ್ತಲೂ ಇದ್ದ ವಿಶಾಲವಾದ ವನರಾಜಿಯನ್ನು ನೋಡುತ್ತಾ ತಿರುಗಾಡತೊಡಗಿದರು. ಅಲ್ಲಿ ಇಂಪಾಗಿ ಧ್ವನಿಗೈಯುತ್ತಾ ಒಂದನ್ನೊಂದು ಬಿಡದೆ ಹಾರಾಡುತ್ತಿದ್ದ ಕ್ರೌಂಚಪಕ್ಷಿಗಳ ಒಂದು ಜೋಡಿಯನ್ನು ಆ ಮಹಾತ್ಮರು ಕಂಡರು (೮-೯). ಅವರು ನೋಡುತ್ತಿದ್ದ ಹಾಗೆಯೇ ವೈರಬುದ್ಧಿಯ ಪಾಪಿ ಬೇಡನೊಬ್ಬನು ಆ ಜೋಡಿಯಲ್ಲಿ ಗಂಡುಹಕ್ಕಿಯನ್ನು

ತಂ ಶೋಣಿತಪರೀತಾಂಗಂ ವೇಷ್ಟಮಾನಂ ಮಹೀತಲೇ ।
ಭಾರ್ಯಾ ತು ನಿಹತಂ ದೃಷ್ಟ್ವಾ ರುರಾವ ಕರುಣಾಂ ಗಿರಮ್ ॥

ವಿಯುಕ್ತಾ ಪತಿನಾ ತೇನ ದ್ವಿಜೇನ ಸಹಚಾರಿಣಾ ।
ತಾಮ್ರಶೀರ್ಷೇಣ ಮತ್ತೇನ ಪತ್ರಿಣಾ ಚ ಹಿತೇನ ವೈ ॥ ೧೨

ತಥಾವಿಧಂ ದ್ವಿಜಂ ದೃಷ್ಟ್ವಾ ನಿಷಾದೇನ ನಿಪಾತಿತಮ್ ।
ಋಷೇರ್ಧರ್ಮಾತ್ಮನಸ್ತಸ್ಯ ಕಾರುಣ್ಯಂ ಸಮಪದ್ಯತ ॥ ೧೩

ತತಃ ಕರುಣವೇದಿತ್ವಾದಧರ್ಮೋಽಯಮಿತಿ ದ್ವಿಜಃ ।
ನಿಶಾಮ್ಯ ರುದತೀಂ ಕ್ರೌಂಚೀಮಿದಂ ವಚನಮಬ್ರವೀತ್ ॥ ೧೪

ಮಾ ನಿಷಾದ ಪ್ರತಿಷ್ಠಾಂ ತ್ವಮಗಮಃ ಶಾಶ್ವತೀಃ ಸಮಾಃ ।
ಯತ್ಕ್ರೌಂಚಮಿಥುನಾದೇಕಮವಧೀಃ ಕಾಮಮೋಹಿತಮ್ ॥ ೧೫

---

ಬಾಣದಿಂದ ಹೊಡೆದುಬಿಟ್ಟನು. ಆಗ ಮೈಯೆಲ್ಲಾ ರಕ್ತಮಯವಾಗಿ ಆ ಹಕ್ಕಿಯು ನೆಲದಮೇಲೆ ಹೊರಳಾಡತೊಡಗಿತು. ಅದನ್ನು ನೋಡಿ ಹೆಣ್ಣು ಹಕ್ಕಿಯು ದೀನಸ್ವರದಿಂದ ಗೋಳಿಟ್ಟು ಕೂಗಲಾರಂಭಿಸಿತು . (೧೦-೧೧). ಕೆಂಪು ತಲೆಯ ಆ ಗಂಡುಹಕ್ಕಿ ಹೆಣ್ಣುಹಕ್ಕಿಯ ಪತಿ, ಜೊತೆಗಾರ; ಕಾಮ ದಿಂದ ಮದಿಸಿತ್ತು. ಹೆಣ್ಣುಹಕ್ಕಿಯು ಅಂಥ ಪತಿಯನ್ನು ಕಳೆದುಕೊಂಡಿತು. ಅದನ್ನು ನೋಡಿ ಧರ್ಮಾತ್ಮರಾದ ವಾಲ್ಮೀಕಿಋಷಿಗಳಿಗೆ ಮರುಕವು ಉಕ್ಕಿ ಬಂದಿತು. ಹೆಣ್ಣುಹಕ್ಕಿಯು ಅರಚಿಕೊಳ್ಳುವುದನ್ನು ನೋಡುತ್ತ ಶೋಕಾಕುಲ ರಾದ ವಾಲ್ಮೀಕಿಗಳಿಗೆ ವ್ಯಾಧನು ಮಾಡಿದ ಕೆಲಸ ಅಧರ್ಮವೆಂದು * ತೋರಿತು. ಕೂಡಲೇ ಅವರ ಬಾಯಿಂದ ಈ ಮಾತು ಹೊರಟಿತು (೧೨-೧೪). “ ಎಲೈ ವ್ಯಾಧ, ನೀನು ಬಹಳ ವರ್ಷ ಬದುಕಬಾರದು. ಈ ಕ್ರೌಂಚಪಕ್ಷಿಗಳ ಜೋಡಿಯಲ್ಲಿ ಕಾಮಮೋಹಿತವಾಗಿದ್ದ ಗಂಡುಹಕ್ಕಿಯನ್ನು ನೀನು

---

* ವ್ಯಾಧನು ಮೃಗಪಕ್ಷಿಗಳನ್ನು ಕೊಲ್ಲುವುದು ಸ್ವಧರ್ಮವಾದರೂ ಅವು ಕಾಮಭೋಗದಲ್ಲಿದ್ದಾಗ ಕೊಲ್ಲುವುದು ಅಪರಾಧ

**ತಸ್ಯೈವಂ ಬ್ರುವತಶ್ಚಿಂತಾ ಬಭೂವ ಹೃದಿ ವೀಕ್ಷತಃ ।**
**ಶೋಕಾರ್ತೇನಾಸ್ಯ ಶಕುನೇಃ ಕಿಮಿದಂ ವ್ಯಾಹೃತಂ ಮಯಾ ॥ ೧೬**
**ಚಿಂತಯನ್ ಸ ಮಹಾಪ್ರಾಜ್ಞಶ್ಚಕಾರ ಮತಿಮಾನ್ ಮತಿಮ್ ।**
**ಶಿಷ್ಯಂ ಚೈವಾಬ್ರವೀದ್ವಾಕ್ಯಮಿದಂ ಸ ಮುನಿಪುಂಗವಃ ॥ ೧೭**
**ಪಾದಬದ್ಧೋಽಕ್ಷರಸಮಸ್ತಂತ್ರೀಲಯಸಮನ್ವಿತಃ ।**
**ಶೋಕಾರ್ತಸ್ಯ ಪ್ರವೃತ್ತೋ ಮೇ ಶ್ಲೋಕೋ ಭವತು ನಾನ್ಯಥಾ ॥**
**ಶಿಷ್ಯಸ್ತು ತಸ್ಯ ಬ್ರುವತೋ ಮುನೇರ್ವಾಕ್ಯಮನುತ್ತಮಮ್ ।**
**ಪ್ರತಿಜಗ್ರಾಹ ಸಂಹೃಷ್ಟಸ್ತಸ್ಯ ತುಷ್ಟೋಽಭವದ್ಗುರುಃ ॥ ೧೯**

---

ಕೊಂದುಹಾಕಿದ್ದೀಯ" * (೧೫). ಹೀಗೆ ಹೇಳಿ ಸ್ವಲ್ಪ ಆಲೋಚಿಸುತ್ತಿರಲು, ವಾಲ್ಮೀಕಿಮುನಿಗಳ ಮನಸ್ಸಿನಲ್ಲಿ ಒಂದು ಚಿಂತೆ ಉದ್ಭವಿಸಿತು: "ಎಲಾ, ಈ ಪಕ್ಷಿಯನ್ನು ನೋಡಿ ಶೋಕಪರವಶನಾದ ನಾನು ಏನು ಹೇಳಿಬಿಟ್ಟೆ!" ಅನಂತರ ತತ್ವಜ್ಞರಾದ ಆ ಮುನಿಶ್ರೇಷ್ಠರು ಒಂದು ನಿಶ್ಚಯಕ್ಕೆ ಬಂದು ಶಿಷ್ಯನನ್ನು ಕುರಿತು ಹೀಗೆಂದರು: (೧೬-೧೭). "ಭರದ್ವಾಜ, ಶೋಕಾರ್ತನಾಗಿ ನಾನು ಹೇಳಿದ ಈ ವಾಕ್ಯವು ಪಾದಚತುಷ್ಟಯಗಳಿಂದ ಕೂಡಿ, (ಗುರು ಲಘು ಮುಂತಾದ) ಅಕ್ಷರಗಳಿಂದ ಸಮವಾಗಿ ವೀಣೆಯಲ್ಲಿ ಲಯದಿಂದ (ವಾದ್ಯಗಳೊಡನೆ) ಹಾಡಲು ಯೋಗ್ಯವಾದ ಶ್ಲೋಕವಾಗಿ ಉಳಿಯಲಿ. ಬೇರ ರೀತಿ ಆಗದಿರಲಿ" ಆಗ ಭರದ್ವಾಜನು ಹಾಗೆಯೇ ಆಗಲೆಂದು ಹೇಳಿ, ಗುರುಗಳು ಹೇಳಿದ "ಮಾನಿಷಾದ ." ಎಂಬ ಉತ್ತಮವಾದ ಶ್ಲೋಕ

---

* ಈ ಶ್ಲೋಕಕ್ಕೆ ಅರ್ಥಾಂತರವನ್ನೂ ಹೇಳುತ್ತಾರೆ:

"ಮಾನಿಷಾದ = ಲಕ್ಷ್ಮೀದೇವಿಗೆ ಆಶ್ರಯನಾದ ಮಹಾವಿಷ್ಣುವೆ, ತ್ವಂ = ನೀನು, ಶಾಶ್ವತೀಃ = ಅಸಂಖ್ಯಾತವಾದ, ಸಮಾಃ = ವರ್ಷಗಳವರೆಗೆ, ಪ್ರತಿಷ್ಠಾಂ = ಕೀರ್ತಿಯನ್ನು, ಅಗಮಃ = ಪಡೆದೆ, ಯತ್ = ಏಕೆಂದರೆ, ಕ್ರೌಂಚಮಿಥುನಾತ್ = ಕುಟಿಲರಾದ ರಾಕ್ಷಸ ದಂಪತಿಗಳಲ್ಲಿ (ರಾವಣ ಮಂಡೋದರಿಯರಲ್ಲಿ), ಕಾಮಮೋಹಿತಂ = ಕಾಮವಶದಿಂದ ತಪ್ಪುಮಾಡಿದ, ಏಕಂ = ಒಬ್ಬನಾದ ರಾವಣನನ್ನು, ಅವಧೀಃ = ಸಂಹಾರಮಾಡಿರುವೆ.

ಇದರಿಂದ ಶ್ರೀರಾಮನು ರಾವಣನನ್ನು ವಧಿಸಿದ ಕಥಾವೃತ್ತಾಂತವೂ ಭಗವಂತನ ನಾಮಸ್ಮರಣರೂಪವಾದ ಮಂಗಲವೂ ಸೂಚಿತವಾಗುತ್ತದೆ."

**ಸೋಽಭಿಷೇಕಂ ತತಃ ಕೃತ್ವಾ ತೀರ್ಥೇ ತಸ್ಮಿನ್ ಯಥಾವಿಧಿ ।**
**ತಮೇವ ಚಿಂತಯನ್ನರ್ಥಮುಪಾವರ್ತತ ವೈ ಮುನಿಃ ॥ ೨೦**

**ಭರದ್ವಾಜಸ್ತತಃ ಶಿಷ್ಯೋ ವಿನೀತಃ ಶ್ರುತವಾನ್ ಗುರೋಃ ।**
**ಕಲಶಂ ಪೂರ್ಣಮಾದಾಯ ಪೃಷ್ಠತೋಽನುಜಗಾಮ ಹ ॥ ೨೧**

**ಸ ಪ್ರವಿಶ್ಯಾಶ್ರಮಪದಂ ಶಿಷ್ಯೇಣ ಸಹ ಧರ್ಮವಿತ್ ।**
**ಉಪವಿಷ್ಟಃ ಕಥಾಶ್ಚಾನ್ಯಾಶ್ಚಕಾರ ಧ್ಯಾನಮಾಸ್ಥಿತಃ ॥ ೨೨**

**ಆಜಗಾಮ ತತೋ ಬ್ರಹ್ಮಾ ಲೋಕಕರ್ತಾ ಸ್ವಯಂಪ್ರಭುಃ ।**
**ಚತುರ್ಮುಖೋ ಮಹಾತೇಜಾ ದ್ರಷ್ಟುಂ ತಂ ಮುನಿಪುಂಗವಮ್॥**

**ವಾಲ್ಮೀಕಿರಥ ತಂ ದೃಷ್ಟ್ವಾ ಸಹಸೋತ್ಥಾಯ ವಾಗ್ಯತಃ ।**
**ಪ್ರಾಂಜಲಿಃ ಪ್ರಣತೋ ಭೂತ್ವಾ ತಸ್ಥೌ ಪರಮವಿಸ್ಮಿತಃ ॥ ೨೪**

**ಪೂಜಯಾಮಾಸ ತಂ ದೇವಂ ಪಾದ್ಯಾರ್ಘ್ಯಾಸನವಂದನೈಃ ।**
**ಪ್ರಣಮ್ಯ ವಿಧಿವಚ್ಚೈನಂ ಪೃಷ್ಟ್ವಾ ಚೈವಾಪ್ಯನಾಮಯಮ್ ॥ ೨೫**

ವನ್ನು ಕಂಠಪಾಠ ಮಾಡಿದನು ಅದರಿಂದ ವಾಲ್ಮೀಕಿಗಳಿಗೆ ಸಂತೋಷವಾಯಿತು (೧೮-೧೯). ಅನಂತರ ವಾಲ್ಮೀಕಿಮುನಿಗಳು ತಮಸಾತೀರ್ಥದಲ್ಲಿ ವಿಧಿವತ್ತಾಗಿ ಸ್ನಾನಮಾಡಿ, ತಮ್ಮ ನುಡಿಯು ಅಕಸ್ಮಾತ್ತಾಗಿ ಒಂದು ಶ್ಲೋಕವಾದುದನ್ನೇ ಪರ್ಯಾಲೋಚಿಸುತ್ತ ಆಶ್ರಮಕ್ಕೆ ಹಿಂದಿರುಗಿದರು ವಿದ್ವಾಂಸನಾದ ಶಿಷ್ಯ ಭರದ್ವಾಜನು ಕಮಂಡಲುವಿನಲ್ಲಿ ನೀರನ್ನು ತುಂಬಿಕೊಂಡು ವಿನೀತನಾಗಿ ಗುರುಗಳ ಹಿಂದೆಯೇ ಬಂದನು (೨೦-೨೧). ವಾಲ್ಮೀಕಿಮುನಿಗಳು ಶಿಷ್ಯನೊಡನೆ ಆಶ್ರಮವನ್ನು ಪ್ರವೇಶಿಸಿ ಸುಖಾಸನದಲ್ಲಿ ಕುಳಿತುಕೊಂಡು ಬೇರೆ ಬೇರೆ ಪುರಾಣಾದಿ ಕಥಾ ಪ್ರಸಂಗದಲ್ಲಿ (ನಿತ್ಯದಂತೆ) ನಿರತರಾದರು ಅವರ ಮನಸ್ಸು ಮಾತ್ರ 'ಮಾ ನಿಷಾದ' ಎಂಬ ಶ್ಲೋಕದ ಕಡೆಗೇ ಇದ್ದಿತು (೨೨) ಆ ಸಮಯದಲ್ಲಿ ಸಕಲ ಲೋಕಗಳ ಸೃಷ್ಟಿಕರ್ತನೂ ಲೋಕನಾಥನೂ ಮಹಾತೇಜಸ್ವಿಯೂ ಆದ ಸಾಕ್ಷಾತ್ ಚತುರ್ಮುಖ ಬ್ರಹ್ಮನು ಅಲ್ಲಿಗೆ ಬಂದನು. ಆಗ ವಾಲ್ಮೀಕಿಗಳು ಆಶ್ಚರ್ಯಚಕಿತರಾಗಿ ಮಾತಾಡಲು ತೋರದೆ ಥಟ್ಟನೆ ಎದ್ದು ವಿನಯದಿಂದ ಕೈಮುಗಿದುಕೊಂಡು ನಿಂತರು. ಅವರು ಬ್ರಹ್ಮನಿಗೆ ವಿಧಿವತ್ತಾಗಿ ಪಾದ್ಯ, ಅರ್ಘ್ಯ, ಪೀಠಗಳನ್ನು

ಅಥೋಪವಿಶ್ಯ ಭಗವಾನಾಸನೇ ಪರಮಾರ್ಚಿತೇ ।
ವಾಲ್ಮೀಕಯೇ ಚ ಋಷಯೇ ಸಂದಿದೇಶಾಸನಂ ತತಃ ॥ ೨೬

ಬ್ರಹ್ಮಣಾ ಸಮನುಜ್ಞಾತಃ ಸೋಽಪ್ಯುಪಾವಿಶದಾಸನೇ ।
ಉಪವಿಷ್ಟೇ ತದಾ ತಸ್ಮಿನ್ ಸಾಕ್ಷಾಲ್ಲೋಕಪಿತಾಮಹೇ ॥ ೨೭

ತದ್ಗತೇನೈವ ಮನಸಾ ವಾಲ್ಮೀಕಿರ್ಧ್ಯಾನಮಾಸ್ಥಿತಃ ।
ಪಾಪಾತ್ಮನಾ ಕೃತಂ ಕಷ್ಟಂ ವೈರಗ್ರಹಣಬುದ್ಧಿನಾ ॥ ೨೮

ಯಸ್ತಾದೃಶಂ ಚಾರುರವಂ ಕ್ರೌಂಚಂ ಹನ್ಯಾದಕಾರಣಾತ್ ।
ಶೋಚನ್ನೇವ ಮುಹುಃ ಕ್ರೌಂಚೀಮುಪಶ್ಲೋಕಮಿಮಂ ಪುನಃ ॥

ಜಗಾವಂತರ್ಗತಮನಾ ಭೂತ್ವಾ ಶೋಕಪರಾಯಣಃ ।
ತಮುವಾಚ ತತೋ ಬ್ರಹ್ಮಾ ಪ್ರಹಸ್ಯ ಮುನಿಪುಂಗವಮ್ ॥ ೩೦

ಶ್ಲೋಕ ಏವ ತ್ವಯಾ ಬದ್ಧೋ ನಾತ್ರ ಕಾರ್ಯಾ ವಿಚಾರಣಾ ।
ಮಚ್ಛಂದಾದೇವ ತೇ ಬ್ರಹ್ಮನ್ ಪ್ರವೃತ್ತೇಯಂ ಸರಸ್ವತೀ ॥ ೩೧

---

ನಮರ್ಿಸಿ ಸ್ತೋತ್ರಪೂರ್ವಕವಾಗಿ ನಮಸ್ಕಾರಮಾಡಿ ಕುಶಲವನ್ನು ಕೇಳಿದರು (೨೩-೨೫) ಆಗ ಭಗವಾನ್ ಬ್ರಹ್ಮದೇವನು ಉತ್ತಮವಾದ ಆಸನದಲ್ಲಿ ಕುಳಿತುಕೊಂಡು ವಾಲ್ಮೀಕಿಮುನಿಗಳಿಗೆ ಕುಳಿತುಕೊಳ್ಳುವಂತೆ ಹೇಳಿದನು ಲೋಕಪಿತಾಮಹನಾದ ಬ್ರಹ್ಮನು ಕುಳಿತಮೇಲೆ ಆತನ ಆದೇಶದಂತೆ ವಾಲ್ಮೀಕಿಮುನಿಗಳು ಕುಳಿತುಕೊಂಡರು (೨೬–೨೭) ವಾಲ್ಮೀಕಿಗಳ ಮನಸ್ಸು ಕ್ರೌಂಚಪಕ್ಷಿಯ ಕಡೆಗೆ ಧಾವಿಸಿತ್ತು "ಪಾಪಾತ್ಮನಾದ ಬೇಡನು ಎಂತಹ ಕೆಲಸವನ್ನು ಮಾಡಿಬಿಟ್ಟನು ಇಂಪಾಗಿ ಧ್ವನಿಗೈಯುತ್ತಿದ್ದ ಆ ಕ್ರೌಂಚ ಪಕ್ಷಿಯನ್ನು ನಿಷ್ಕಾರಣವಾಗಿ ಕೊಂದುಬಿಟ್ಟನಲ್ಲ. ಹೆಣ್ಣುಹಕ್ಕಿಗೆ ಎಂತಹ ಕಷ್ಟಬಂದಿತು!" ಎಂದು ಶೋಕಿಸುತ್ತ 'ಮಾನಿಷಾದ ಪ್ರತಿಷ್ಠಾಂ ತ್ವಂ...' ಎಂದು ಮನಸ್ಸಿನಲ್ಲಿಯೇ ಹಾಡಿಕೊಂಡರು (೨೮–೨೯). ಆಗ ಬ್ರಹ್ಮನು ಮುಗುಳ್ನಗೆಯನ್ನು ಬೀರುತ್ತ ನುಡಿದನು: "ಮಹರ್ಷಿಯೆ, ನೀನು ಹೇಳಿದ ವಾಕ್ಯವು ಛಂದೋಬದ್ಧವಾದ ಶ್ಲೋಕವೇ ಹೌದು. ನನ್ನ ಇಚ್ಛೆಯಿಂದಲೇ ಈ ವಾಣಿಯು ನಿನ್ನ ಮುಖದಿಂದ ಹೊರಬಂದಿತು. ಶ್ರೀರಾಮನ ಚರಿತ್ರೆ

ರಾಮಸ್ಯ ಚರಿತಂ ಕೃತ್ಸ್ನಂ ಕುರು ತ್ವಮೃಷಿಸತ್ತಮ ।
ಧರ್ಮಾತ್ಮನೋ ಗುಣವತೋ ಲೋಕೇ ರಾಮಸ್ಯ ಧೀಮತಃ ॥ ೩೨
ವೃತ್ತಂ ಕಥಯ ವೀರಸ್ಯ ಯಥಾ ತೇ ನಾರದಾಚ್ಛ್ರುತಮ್ ।
ರಹಸ್ಯಂ ಚ ಪ್ರಕಾಶಂ ಚ ಯದ್ವೃತ್ತಂ ತಸ್ಯ ಧೀಮತಃ ॥ ೩೩
ರಾಮಸ್ಯ ಸಹಸೌಮಿತ್ರೇ ರಾಕ್ಷಸಾನಾಂ ಚ ಸರ್ವಶಃ ।
ವೈದೇಹ್ಯಾಶ್ಚೈವ ಯದ್ವೃತ್ತಂ ಪ್ರಕಾಶಂ ಯದಿ ವಾ ರಹಃ ॥ ೩೪
ಯಚ್ಚಾಪ್ಯವಿದಿತಂ ಸರ್ವಂ ವಿದಿತಂ ತೇ ಭವಿಷ್ಯತಿ ।
ನ ತೇ ವಾಗನೃತಾ ಕಾವ್ಯೇ ಕಾಚಿದತ್ರ ಭವಿಷ್ಯತಿ ॥ ೩೫
ಕುರು ರಾಮಕಥಾಂ ಪುಣ್ಯಾಂ ಶ್ಲೋಕಬದ್ಧಾಂ ಮನೋರಮಾಮ್
ಯಾವತ್ ಸ್ಥಾಸ್ಯಂತಿ ಗಿರಯಃ ಸರಿತಶ್ಚ ಮಹೀತಲೇ ॥ ೩೬
ತಾವದ್ರಾಮಾಯಣಕಥಾ ಲೋಕೇಷು ಪ್ರಚರಿಷ್ಯತಿ ।
ಯಾವದ್ರಾಮಾಯಣಕಥಾ ತ್ವತ್ಕೃತಾ ಪ್ರಚರಿಷ್ಯತಿ ॥ ೩೭
ತಾವದೂರ್ಧ್ವಮಧಶ್ಚ ತ್ವಂ ಮಲ್ಲೋಕೇಷು ನಿವತ್ಸ್ಯಸಿ ।
ಇತ್ಯುಕ್ತ್ವಾ ಭಗವಾನ್ ಬ್ರಹ್ಮಾ ತತ್ರೈವಾಂತರಧೀಯತ ॥ ೩೮

---

ಯನ್ನು ನೀನು ಸಂಪೂರ್ಣವಾಗಿ ವಿರಚಿಸು ಆತನು ಧರ್ಮಾತ್ಮನೂ ಗುಣಶಾಲಿಯೂ ಆಗಿದ್ದಾನೆ. ಅವನು ಮಹಾಪ್ರಾಜ್ಞ, ಧೀರ ನಾರದನು ತಿಳಿಸಿದಂತೆ ಈ ಲೋಕದಲ್ಲಿ ಶ್ರೀರಾಮನು ನಡೆಸಿದ ಚರಿತ್ರೆಯನ್ನು ವರ್ಣಿಸು (೩೦-೩೩) ಶ್ರೀರಾಮ, ಸೀತೆ, ಲಕ್ಷ್ಮಣ ಮತ್ತು ರಾವಣಾದಿ ರಾಕ್ಷಸರು— ಇವರ ಚರಿತ್ರೆಯು ಏಕಾಂತದಲ್ಲಾಗಲಿ ಬಹಿರಂಗದಲ್ಲಾಗಲಿ ನಡೆದ ಬಗೆಯಂತೆ ನಿನಗೆ ಗೋಚರಿಸಲಿ. ನಾರದನು ಹೇಳದಿರುವ ಸಂದರ್ಭವೂ ನಿನಗೆ ತಿಳಿಯಲಿ. ನೀನು ವಿರಚಿಸುವ ಕಾವ್ಯದಲ್ಲಿ ಯಾವ ಮಾತೂ ಸುಳ್ಳಾಗಲಾರದು (೩೪-೩೫) ವಾಲ್ಮೀಕಿ, ಶ್ರೀರಾಮನ ಪುಣ್ಯಕಥೆಯನ್ನು ಶ್ಲೋಕಗಳಿಂದ ಮನೋಹರವಾಗಿ ಚಿತ್ರಿಸು. ಈ ಪೃಥ್ವಿಯಲ್ಲಿ ಪರ್ವತಗಳೂ ನದಿಗಳೂ ಎಲ್ಲಿಯವರೆಗೆ ಇರುವುವೋ ಅಲ್ಲಿಯವರೆಗೆ ನಿನ್ನ ರಾಮಾಯಣವು ಪ್ರಚಾರದಲ್ಲಿರುವುದು. ಇದು ಪ್ರಚಾರದಲ್ಲಿರುವವರೆಗೆ ನೀನು ನನ್ನ ಬ್ರಹ್ಮಲೋಕದಲ್ಲಿ ಮೇಲೆ ಕೆಳಗೆ ಎಲ್ಲೆಲ್ಲಿಯೂ ವಿಹರಿಸಿಕೊಂಡು ವಾಸ

ತತಃ ಸಶಿಷ್ಯೋ ಭಗವಾನ್ ಮುನಿರ್ವಿಸ್ಮಯಮಾಯಯೌ ।
ತಸ್ಯ ಶಿಷ್ಯಾಸ್ತತಃ ಸರ್ವೇ ಜಗುಃ ಶ್ಲೋಕಮಿಮಂ ಪುನಃ ॥ ೩೯

ಮುಹುರ್ಮುಹುಃ ಪ್ರೀಯಮಾಣಾಃ ಪ್ರಾಹುಶ್ಚ ಭೃಶವಿಸ್ಮಿತಾಃ ।
ಸಮಾಕ್ಷರೈಶ್ಚತುರ್ಭಿರ್ಯಃ ಪಾದೈರ್ಗೀತೋ ಮಹರ್ಷಿಣಾ ॥ ೪೦

ಸೋಽನುವ್ಯಾಹರಣಾದ್ಭೂಯಃ ಶೋಕಃ ಶ್ಲೋಕತ್ವಮಾಗತಃ ।
ತಸ್ಯ ಬುದ್ಧಿರಿಯಂ ಜಾತಾ ವಾಲ್ಮೀಕೇರ್ಭಾವಿತಾತ್ಮನಃ ॥ ೪೧

ಕೃತ್ಸ್ನಂ ರಾಮಾಯಣಂ ಕಾವ್ಯಮೀದೃಶೈಃ ಕರವಾಣ್ಯಹಮ್ ॥

ಉದಾರವೃತ್ತಾರ್ಥಪದೈರ್ಮನೋರಮೈ-
ಸ್ತತಃ ಸ ರಾಮಸ್ಯ ಚಕಾರ ಕೀರ್ತಿಮಾನ್ ।
ಸಮಾಕ್ಷರೈಃ ಶ್ಲೋಕಶತೈರ್ಯಶಸ್ವಿನೋ
ಯಶಸ್ಕರಂ ಕಾವ್ಯಮುದಾರಧೀರ್ಮುನಿಃ ॥ ೪೨

---

ಮಾಡುವೆ". ಹೀಗೆ ಹೇಳಿ ಭಗವಾನ್ ಬ್ರಹ್ಮನು ಅಲ್ಲಿಯೇ ಅಂತರ್ಧಾನ ಹೊಂದಿದನು (೩೬-೩೮). ವಾಲ್ಮೀಕಿಮುನಿಗಳೂ ಶಿಷ್ಯರೂ ವಿಸ್ಮಿತರಾದರು. ಅನಂತರ ಶಿಷ್ಯರು ಆನಂದ ವಿಸ್ಮಯಗಳಲ್ಲಿ ಮುಳುಗಿ ಏಳುತ್ತ 'ಮಾನಿಷಾದ ಪ್ರತಿಷ್ಠಾಂ ತ್ವಂ..' ಎಂಬ ಶ್ಲೋಕವನ್ನು ಮತ್ತೆ ಮತ್ತೆ ಹಾಡಿಕೊಳ್ಳಲಾರಂಭಿಸಿದರು. ಮಹರ್ಷಿಗಳು ಶೋಕಾವೇಶದಿಂದ ನುಡಿದ ಮಾತಿನಲ್ಲಿ ಗುರು ಲಘು ಮುಂತಾದ ಸಮಾಕ್ಷರಗಳಿಂದ ಕೂಡಿದ ನಾಲ್ಕು ಪಾದಗಳಿದ್ದವು. ಅದನ್ನೇ ಮತ್ತೆ ಮತ್ತೆ ಹಾಡಿದ್ದರಿಂದ, ಶೋಕಮಯವಾದ ಮಾತು ಶ್ಲೋಕರೂಪವಾಗಿ ನಿಂತಿತು (೩೯-೪೦) ಆಗ ಪರಮಾತ್ಮಧ್ಯಾನದಲ್ಲಿ ತೊಡಗಿದ್ದ ವಾಲ್ಮೀಕಿಮುನಿಗಳಿಗೆ ಶ್ರೀಮದ್ರಾಮಾಯಣವನ್ನು ಸಂಪೂರ್ಣವಾಗಿ ಇದೇ ಬಗೆಯಲ್ಲಿ ಹಾಡಲು ಯೋಗ್ಯವಾದ ಶ್ಲೋಕಗಳಿಂದ ವಿರಚಿಸಬೇಕೆಂಬ ಬುದ್ಧಿಯುಂಟಾಯಿತು. ಅನಂತರ ಪ್ರತಿಭಾಶಾಲಿಗಳಾದ ಆ ವಾಲ್ಮೀಕಿಮುನಿಗಳು ಕೀರ್ತಿಶಾಲಿಯಾದ ಶ್ರೀರಾಮನ ಯಶಸ್ಕರವಾದ ಕಾವ್ಯವನ್ನು ಅನೇಕ ಶ್ಲೋಕಗಳಿಂದ ವಿರಚಿಸಿದರು. ಆ ಶ್ಲೋಕಗಳಲ್ಲಿ ದೋಷರಹಿತವಾದ ವರ್ಣವಿನ್ಯಾಸವಿದೆ. ಶ್ಲೋಕಗಳು ರಸಭಾವಗಳಿಗೆ ಅನುರೂಪವಾದ ಶಬ್ದಾರ್ಥ

ತದುಪಗತಸಮಾಸಸಂಧಿಯೋಗಂ
ಸಮಮಧುರೋಪನತಾರ್ಥವಾಕ್ಯಬದ್ಧಮ್ ।
ರಘುವರಚರಿತಂ ಮುನಿಪ್ರಣೀತಂ
ದಶಶಿರಸಶ್ಚ ವಧಂ ನಿಶಾಮಯಧ್ವಮ್ ॥ ೪೩

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ದ್ವಿತೀಯಃ ಸರ್ಗಃ



ಗಳಿಂದ ಮನೋಹರವಾದವು (೪೧-೪೨) ವಾಲ್ಮೀಕಿಮುನಿಗಳು ರಚಿಸಿದ ಈ ರಾಮಾಯಣಕಾವ್ಯದಲ್ಲಿ ರಘುನಾಥನ ಚರಿತ್ರೆಯಿದೆ ರಾವಣನನ್ನು ವಧಿಸಿದ ವೃತ್ತಾಂತವಿದೆ ವ್ಯಾಕರಣಮರ್ಯಾದೆಯನ್ನನುಸರಿಸಿ ಸಂಧಿ ಸಮಾಸಗಳ ಸಂಘಟನೆಯಿದೆ. ಸಮತಾ, ಮಾಧುರ್ಯ, ಅರ್ಥವ್ಯಕ್ತಿ ಮುಂತಾದ ಕಾವ್ಯಗುಣಗಳಿವೆ ಈ ರಾಮಾಯಣವನ್ನು ನೀವೆಲ್ಲರೂ ಕೇಳಬೇಕು (೪೩).

ಇಲ್ಲಿಗೆ ಶ್ರೀಮದ್ರಾಮಯಣದ ಬಾಲಕಾಂಡದಲ್ಲಿ ಎರಡನೆಯ ಸರ್ಗ



## ತೃತೀಯಃ ಸರ್ಗಃ

### ಕಾವ್ಯಸಂಕ್ಷೇಪಃ

ಶ್ರುತ್ವಾ ವಸ್ತು ಸಮಗ್ರಂ ತದ್ಧರ್ಮಾತ್ಮಾ ಧರ್ಮಸಂಹಿತಮ್ ।
ವ್ಯಕ್ತಮನ್ವೇಷತೇ ಭೂಯೋ ಯದ್ವೃತ್ತಂ ತಸ್ಯ ಧೀಮತಃ ॥ ೧

ಉಪಸ್ಪೃಶ್ಯೋದಕಂ ಸಮ್ಯಙ್ಮುನಿಃ ಸ್ಥಿತ್ವಾ ಕೃತಾಂಜಲಿಃ ।
ಪ್ರಾಚೀನಾಗ್ರೇಷು ದರ್ಭೇಷು ಧರ್ಮೇಣಾನ್ವೇಕ್ಷತೇ ಗತಿಮ್ ॥ ೨

ರಾಮಲಕ್ಷ್ಮಣಸೀತಾಭೀ ರಾಜ್ಞಾ ದಶರಥೇನ ಚ ।
ಸಭಾರ್ಯೇಣ ಸರಾಷ್ಟ್ರೇಣ ಯತ್ ಪ್ರಾಪ್ತಂ ತತ್ರ ತತ್ತ್ವತಃ ॥ ೩

ಹಸಿತಂ ಭಾಷಿತಂ ಚೈವ ಗತಿರ್ಯಾ ಯಚ್ಚ ಚೇಷ್ಟಿತಮ್ ।
ತತ್ಸರ್ವಂ ಧರ್ಮವೀರ್ಯೇಣ ಯಥಾವತ್ ಸಂಪ್ರಪಶ್ಯತಿ ॥ ೪

ಸ್ತ್ರೀತೃತೀಯೇನ ಚ ತಥಾ ಯತ್ಪ್ರಾಪ್ತಂ ಚರತಾ ವನೇ ।
ಸತ್ಯಸಂಧೇನ ರಾಮೇಣ ತತ್ಸರ್ವಂ ಚಾನ್ವವೇಕ್ಷಿತಮ್ ॥ ೫

## ಸರ್ಗ ೩

### ರಾಮಾಯಣದಲ್ಲಿರುವ ವಿಷಯಗಳ ಸಂಗ್ರಹ

ವಾಲ್ಮೀಕಿಮುನಿಗಳು ನಾರದರಿಂದ ಧರ್ಮಾರ್ಥಸಹಿತವಾದ ರಾಮಚರಿತವನ್ನು ಸಮಗ್ರವಾಗಿ ಕೇಳಿ, ಶ್ರೀರಾಮನಿಗೆ ಸಂಬಂಧಿಸಿದ ಇತರ ವೃತ್ತಾಂತವೇನಾದರೂ ಇದೆಯೆ ಎಂಬುದನ್ನು ಪರ್ಯಾಲೋಚಿಸಿದರು ಅವರು ವಿಧಿವತ್ತಾಗಿ ಆಚಮನಮಾಡಿ ಪೂರ್ವಾಭಿಮುಖವಾಗಿ ಹರಡಿದ ದರ್ಭೆಗಳಮೇಲೆ ನಿಂತು ಕೈ ಮುಗಿದುಕೊಂಡು ಧರ್ಮಾನ್ವೇಷಿಯಾದ ಜ್ಞಾನ ದೃಷ್ಟಿಯಿಂದ ಶ್ರೀರಾಮನ ಚರಿತವನ್ನೆಲ್ಲ ವಿಶದವಾಗಿ ನೋಡಿದರು (೧-೨). ಶ್ರೀರಾಮ, ಲಕ್ಷ್ಮಣ, ಸೀತೆ, ದಶರಥಮಹಾರಾಜ, ಅವನ ಪತ್ನಿಯರು ಮತ್ತು ಪ್ರಜೆಗಳಿಗೆ ಸಂಬಂಧಿಸಿದ ಎಲ್ಲ ವೃತ್ತಾಂತಗಳೂ ಅವರು ನಕ್ಕದ್ದು, ಮಾತನಾಡಿದ್ದು, ಹೋದದ್ದು, ಮಾಡಿದ್ದು ಇವೆಲ್ಲವೂ ಅವರಿಗೆ ತಪೋಬಲ ದಿಂದ ಯಥಾವತ್ತಾಗಿ ಗೋಚರಿಸಿತು (೩-೪) ಸತ್ಯಸಂಧನಾದ ಶ್ರೀರಾಮನು ಸೀತಾಲಕ್ಷ್ಮಣರೊಡನೆ ದಂಡಕಾರಣ್ಯದಲ್ಲಿ ಸಂಚರಿಸುತ್ತ ಯಾವ ಯಾವ

ತತಃ ಪಶ್ಯತಿ ಧರ್ಮಾತ್ಮಾ ತತ್ ಸರ್ವಂ ಯೋಗಮಾಸ್ಥಿತಃ ।
ಪುರಾ ಯತ್ತತ್ರ ನಿರ್ವೃತ್ತಂ ಪಾಣಾವಾಮಲಕಂ ಯಥಾ ॥ ೬

ತತ್ಸರ್ವಂ ತತ್ತ್ವತೋ ದೃಷ್ಟ್ವಾ ಧರ್ಮೇಣ ಸ ಮಹಾದ್ಯುತಿಃ ।
ಅಭಿರಾಮಸ್ಯ ರಾಮಸ್ಯ ಚರಿತಂ ಕರ್ತುಮುದ್ಯತಃ ॥ ೭

ಕಾಮಾರ್ಥಗುಣಸಂಯುಕ್ತಂ ಧರ್ಮಾರ್ಥಗುಣವಿಸ್ತರಮ್ ।
ಸಮುದ್ರಮಿವ ರತ್ನಾಢ್ಯಂ ಸರ್ವಶ್ರುತಿಮನೋಹರಮ್ ॥ ೮

ಸ ಯಥಾಕಥಿತಂ ಪೂರ್ವಂ ನಾರದೇನ ಮಹರ್ಷಿಣಾ ।
ರಘುವಂಶಸ್ಯ ಚರಿತಂ ಚಕಾರ ಭಗವಾನೃಷಿಃ ॥ ೯

ಜನ್ಮ ರಾಮಸ್ಯ ಸುಮಹದ್ವೀರ್ಯಂ ಸರ್ವಾನುಕೂಲತಾಮ್ ।
ಲೋಕಸ್ಯ ಪ್ರಿಯತಾಂ ಕ್ಷಾಂತಿಂ ಸೌಮ್ಯತಾಂ ಸತ್ಯಶೀಲತಾಮ್ ॥

ನಾನಾಚಿತ್ರಕಥಾಶ್ಚಾನ್ಯಾ ವಿಶ್ವಾಮಿತ್ರಸಮಾಗಮೇ ।
ಜಾನಕ್ಯಾಶ್ಚ ವಿವಾಹಂ ಚ ಧನುಷಶ್ಚ ವಿಭೇದನಮ್ ॥ ೧೧

---

ಕಾರ್ಯವನ್ನು ನಡೆಸಿದನೋ ಅದೆಲ್ಲವೂ ಗೋಚರಿಸಿತು. ಹೀಗೆ ಧರ್ಮಾತ್ಮರಾದ ವಾಲ್ಮೀಕಿಋಷಿಗಳು ಸಮಾಧಿಸ್ಥರಾಗಿ ಹಿಂದೆ ನಡೆದ ಶ್ರೀರಾಮನ ವೃತ್ತಾಂತವೆಲ್ಲವನ್ನೂ ಅಂಗೈಯಲ್ಲಿರುವ ನೆಲ್ಲಿಕಾಯಿಯಂತೆ ವಿಶದವಾಗಿ ಕಂಡರು (೫-೬). ಆ ಮಹಾಪ್ರಾಜ್ಞರು ಶ್ರೀರಾಮನ ಚರಿತೆಯನ್ನು ಯಥಾವತ್ತಾಗಿ ತಿಳಿದುಕೊಂಡು ರಾಮಾಯಣವನ್ನು ರಚಿಸಲಾರಂಭಿಸಿದರು (೭). ಈ ಕಾವ್ಯವು ಧರ್ಮಾರ್ಥಕಾಮಗಳೆಂಬ ಪುರುಷಾರ್ಥವನ್ನು ಕೊಡತಕ್ಕದ್ದೂ ಸರ್ವವೇದಾರ್ಥಗಳೆಂಬ ರತ್ನಗಳಿಗೆ ಸಮುದ್ರವೆನಿಸಿ ಮೋಕ್ಷ ಫಲವನ್ನು ಕೊಡತಕ್ಕದ್ದೂ ಆಗಿದೆ (೮-೯). ನಾರದರು ಹೇಳಿದಂತೆ ವಾಲ್ಮೀಕಿ ಮುನಿಗಳು ರಘುನಾಥನ ಕಥೆಯನ್ನು ವಿಸ್ತರಿಸಿ ಬರೆದರು. ಶ್ರೀರಾಮನ ಮಹತ್ತ್ವಪೂರ್ಣವಾದ ಜನನ, ಅವನ ಪರಾಕ್ರಮ, ಸರ್ವರಿಗೂ ಹಿತಕರವಾದ ಪ್ರವೃತ್ತಿ, ಜನಪ್ರಿಯತೆ, ತಾಳ್ಮೆ, ಶಾಂತಸ್ವಭಾವ, ಸತ್ಯಸಂಧತೆ ಮುಂತಾದ ಸದ್ಗುಣಗಳನ್ನು ಚಿತ್ರಿಸಿದರು ಶ್ರೀರಾಮನು ವಿಶ್ವಾಮಿತ್ರಮುನಿಗಳೊಡನೆ ಹೋದಾಗ ಪ್ರಸ್ತುತವಾದ ಅನೇಕ ವಿಚಿತ್ರಕಥೆಗಳನ್ನೂ ಶಿವಧನುರ್ಭಂಗ

ರಾಮರಾಮವಿವಾದಂ ಚ ಗುಣಾನ್ ದಾಶರಥೇಸ್ತಥಾ ।
ತಥಾ ರಾಮಾಭಿಷೇಕಂ ಚ ಕೈಕೇಯ್ಯಾ ದುಷ್ಟಭಾವತಾಮ್ ॥ ೧೨

ವಿಘಾತಂ ಚಾಭಿಷೇಕಸ್ಯ ರಾಮಸ್ಯ ಚ ವಿವಾಸನಮ್ ।
ರಾಜ್ಞಃ ಶೋಕವಿಲಾಪಂ ಚ ಪರಲೋಕಸ್ಯ ಚಾಶ್ರಯಮ್ ॥ ೧೩

ಪ್ರಕೃತೀನಾಂ ವಿಷಾದಂ ಚ ಪ್ರಕೃತೀನಾಂ ವಿಸರ್ಜನಮ್ ।
ನಿಷಾದಾಧಿಪಸಂವಾದಂ ಸೂತೋಪಾವರ್ತನಂ ತಥಾ ॥ ೧೪

ಗಂಗಾಯಾಶ್ಚಾಪಿ ಸಂತಾರಂ ಭರದ್ವಾಜಸ್ಯ ದರ್ಶನಮ್ ।
ಭರದ್ವಾಜಾಭ್ಯನುಜ್ಞಾನಾಚ್ಚಿತ್ರಕೂಟಸ್ಯ ದರ್ಶನಮ್ ॥ ೧೫

ವಾಸ್ತುಕರ್ಮನಿವೇಶಂ ಚ ಭರತಾಗಮನಂ ತಥಾ ।
ಪ್ರಸಾದನಂ ಚ ರಾಮಸ್ಯ ಪಿತುಶ್ಚ ಸಲಿಲಕ್ರಿಯಾಮ್ ॥ ೧೬

---

ಸೀತಾ ವಿವಾಹಗಳನ್ನೂ ವರ್ಣಿಸಿದರು (೧೦-೧೧) ಶ್ರೀರಾಮನಿಗೂ ಪರುಶುರಾಮನಿಗೂ ಸಂಭವಿಸಿದ ವಿವಾದವನ್ನೂ ಶ್ರೀರಾಮನ ವಿನಯ ವಿಜಯಾದಿಗುಣಗಳನ್ನೂ ಅವನ ಪಟ್ಟಾಭಿಷೇಕದ ಪ್ರಯತ್ನವನ್ನೂ ಕೈಕೇಯಿಯ ದುಷ್ಟಸ್ವಭಾವವನ್ನೂ ವಿವರಿಸಿದರು. ಅನಂತರ ಪಟ್ಟಾಭಿಷೇಕಕ್ಕೆ ಸಂಭವಿಸಿದ ವಿಘ್ನ, ರಾಮನ ರಾಜ್ಯಭ್ರಂಶ, ದಶರಥನ ಶೋಕವಿಲಾಪಗಳು, ದಶರಥನು ಸ್ವರ್ಗಸ್ಥನಾದ ವೃತ್ತಾಂತ—ಇವುಗಳನ್ನು ಬರೆದರು (೧೨-೧೩) ಅನಂತರ ವಾಲ್ಮೀಕಿಮುನಿಗಳು ಪ್ರಜೆಗಳ ದುಃಖ, ಜೊತೆಗೆ ಬಂದ ಪ್ರಜೆಗಳನ್ನು ಶ್ರೀರಾಮನು ಹಿಂದಕ್ಕೆ ಕಳಿಸುವುದು, ಗುಹನೊಡನೆ ಸಂಭಾಷಣೆ, ಸಾರಥಿಯಾದ ಸುಮಂತ್ರನು ನಗರಕ್ಕೆ ಹಿಂದಿರುಗುವುದು, ರಾಮಲಕ್ಷ್ಮಣಸೀತೆಯರು ಗಂಗಾನದಿಯನ್ನು ದಾಟುವುದು, ಭರದ್ವಾಜರನ್ನು ಕಂಡು ಅವರ ಅನುಮತಿಯಿಂದ ಚಿತ್ರಕೂಟಕ್ಕೆ ಪ್ರಯಾಣ ಬೆಳೆಸುವುದು—ಇವುಗಳನ್ನು ಉಪವರ್ಣಿಸಿದರು (೧೪-೧೫). ರಾಘವನು ಚಿತ್ರಕೂಟದಲ್ಲಿ ಪರ್ಣಶಾಲೆಯನ್ನು ನಿರ್ಮಿಸಿಕೊಂಡು ವಾಸ ಮಾಡುವುದನ್ನೂ ಭರತನು ಬಂದು ಶ್ರೀರಾಮನನ್ನು ಒಲಿಸಿಕೊಂಡ ಬಗೆಯನ್ನೂ ಸ್ವರ್ಗಸ್ಥನಾದ ದಶರಥನಿಗೆ ರಾಮನು ತರ್ಪಣಕೊಟ್ಟುದನ್ನೂ

ಪಾದುಕಾಗ್ರ್ಯಾಭಿಷೇಕಂ ಚ ನಂದಿಗ್ರಾಮನಿವಾಸನಮ್ ।
ದಂಡಕಾರಣ್ಯಗಮನಂ ವಿರಾಧಸ್ಯ ವಧಂ ತಥಾ ॥ ೧೭

ದರ್ಶನಂ ಶರಭಂಗಸ್ಯ ಸುತೀಕ್ಷ್ಣೇನ ಸಮಾಗಮಮ್ ।
ಅನಸೂಯಾಸಹಾಸ್ಯಾಂ ಚ ಅಂಗರಾಗಸ್ಯ ಚಾರ್ಪಣಮ್ ॥ ೧೮

ದರ್ಶನಂ ಚಾಪ್ಯಗಸ್ತ್ಯಸ್ಯ ಧನುಷೋ ಗ್ರಹಣಂ ತಥಾ ।
ಶೂರ್ಪಣಖ್ಯಾಶ್ಚ ಸಂವಾದಂ ವಿರೂಪಕರಣಂ ತಥಾ ॥ ೧೯

ವಧಂ ಖರತ್ರಿಶಿರಸೋರುತ್ಥಾನಂ ರಾವಣಸ್ಯ ಚ ।
ಮಾರೀಚಸ್ಯ ವಧಂ ಚೈವ ವೈದೇಹ್ಯಾ ಹರಣಂ ತಥಾ ॥ ೨೦

ರಾಘವಸ್ಯ ವಿಲಾಪಂ ಚ ಗೃಧ್ರರಾಜನಿಬರ್ಹಣಮ್ ।
ಕಬಂಧದರ್ಶನಂ ಚೈವ ಪಂಪಾಯಾಶ್ಚಾಪಿ ದರ್ಶನಮ್ ॥ ೨೧

ಶಬರೀದರ್ಶನಂ ಚೈವ ಹನುಮದ್ದರ್ಶನಂ ತಥಾ ।
ವಿಲಾಪಂ ಚೈವ ಪಂಪಾಯಾಂ ರಾಘವಸ್ಯ ಮಹಾತ್ಮನಃ ॥ ೨೨

---

ವರ್ಣಿಸಿ ಹೇಳಿದರು. ಆಮೇಲೆ ಭರತನು ಶ್ರೀರಾಮನ ಪಾದುಕೆಗಳಿಗೆ ಮಾಡಿದ ಅಭಿಷೇಕ ಮತ್ತು ನಂದಿಗ್ರಾಮ ವಾಸ—ಇವುಗಳನ್ನು ವಿವರಿಸಿ, ಶ್ರೀರಾಮನು ದಂಡಕಾರಣ್ಯಕ್ಕೆ ಹೋಗಿ ವಿರಾಧನನ್ನು ವಧಿಸಿದ ಪ್ರಕರಣವನ್ನು ತಿಳಿಸಿದರು (೧೬-೧೭) ಶರಭಂಗ ಮತ್ತು ಸುತೀಕ್ಷ್ಣಮುನಿಗಳ ದರ್ಶನ, ಸೀತೆಯು ಅನಸೂಯೆಯೊಡನೆ ಸಂಭಾಷಿಸಿದ ವೃತ್ತಾಂತ, ಅನಸೂಯೆಯು ಸೀತೆಗೆ ಚಂದನಾದಿಯಾದ ಅಂಗರಾಗವನ್ನು ಕೊಟ್ಟದ್ದು, ಅಗಸ್ತ್ಯರ ದರ್ಶನ, ಅವರು ಕೊಟ್ಟ ಧನುಸ್ಸನ್ನು ಸ್ವೀಕರಿಸಿದ್ದು —ಇವುಗಳೆಲ್ಲಾ ಅನಂತರ ವರ್ಣಿಸಲ್ಪಟ್ಟವು ಆಮೇಲೆ ಶೂರ್ಪಣಖೆಯೊಡನೆ ಸಂವಾದ, ಅವಳನ್ನು ವಿಕಾರಗೊಳಿಸಿದ ಬಗೆ, ಖರತ್ರಿಶಿರರ ಸಂಹಾರ, ರಾವಣನು ಲಂಕೆಯಿಂದ ಹೊರಡುವ ಸಂದರ್ಭ, ಮಾರೀಚನ ವಧೆ, ಸೀತಾಪಹಾರಗಳು ಚಿತ್ರಿಸಲ್ಪಟ್ಟವು (೧೮-೨೦) ಅನಂತರ ಶ್ರೀರಾಮನ ವಿಲಾಪ, ರಾವಣನಿಂದ ಜಟಾಯುವಿನ ಸಂಹಾರ, ಕಬಂಧ ದರ್ಶನ, ಶಬರೀ ದರ್ಶನ, ಅವಳು ಅರ್ಪಿಸಿದ ಫಲಮೂಲಗಳ ಸ್ವೀಕಾರ, ಪಂಪಾಸರೋಗಮನ, ಅದರ ತೀರದಲ್ಲಿ

ಋಷ್ಯಮೂಕಸ್ಯ ಗಮನಂ ಸುಗ್ರೀವೇಣ ಸಮಾಗಮಮ್ ।
ಪ್ರತ್ಯಯೋತ್ಪಾದನಂ ಸಖ್ಯಂ ವಾಲಿಸುಗ್ರೀವವಿಗ್ರಹಮ್ ॥ ೨೩
ವಾಲಿಪ್ರಮಥನಂ ಚೈವ ಸುಗ್ರೀವಪ್ರತಿಪಾದನಮ್ ।
ತಾರಾವಿಲಾಪಂ ಸಮಯಂ ವರ್ಷರಾತ್ರನಿವಾಸನಮ್ ॥ ೨೪
ಕೋಪಂ ರಾಘವಸಿಂಹಸ್ಯ ಬಲಾನಾಮುಪಸಂಗ್ರಹಮ್ ।
ದಿಶಃ ಪ್ರಸ್ಥಾಪನಂ ಚೈವ ಪೃಥಿವ್ಯಾಶ್ಚ ನಿವೇದನಮ್ ॥ ೨೫
ಅಂಗುಲೀಯಕದಾನಂ ಚ ಋಕ್ಷಸ್ಯ ಬಿಲದರ್ಶನಮ್ ।
ಪ್ರಾಯೋಪವೇಶನಂ ಚಾಪಿ ಸಂಪಾತೇಶ್ಚೈವ ದರ್ಶನಮ್ ॥ ೨೬
ಪರ್ವತಾರೋಹಣಂ ಚೈವ ಸಾಗರಸ್ಯ ಚ ಲಂಘನಮ್ ।
ಸಮುದ್ರವಚನಾಚ್ಚೈವ ಮೈನಾಕಸ್ಯಾಪಿ ದರ್ಶನಮ್ ॥ ೨೭
ರಾಕ್ಷಸೀತರ್ಜನಂ ಚೈವ ಛಾಯಾಗ್ರಾಹಸ್ಯ ದರ್ಶನಮ್ ।
ಸಿಂಹಿಕಾಯಾಶ್ಚ ನಿಧನಂ ಲಂಕಾಮಲಯದರ್ಶನಮ್ ॥ ೨೮

---

ಶ್ರೀರಾಮನ ಶೋಕ, ಹನುಮಂತನ ದರ್ಶನ—ಇವು ವಿವರಿಸಲ್ಪಟ್ಟವು (೨೧-೨೨). ಆಮೇಲೆ ಶ್ರೀರಾಮನು ಋಷ್ಯಮೂಕಕ್ಕೆ ಹೋಗಿ ಸುಗ್ರೀವನೊಡನೆ ಸೇರಿ ಅವನಿಗೆ ತನ್ನ ಸಾಮರ್ಥ್ಯವನ್ನು ತೋರಿಸಿ ನಂಬಿಕೆಯನ್ನುಂಟುಮಾಡಿದ ವಿಷಯ, ತಾರಾವಿಲಾಪ, ಮಳೆಗಾಲ ಕಳೆದಮೇಲೆ ಸೀತೆಯನ್ನು ಹುಡುಕಬೇಕೆಂಬ ನಿರ್ಣಯ, ಮಳೆಗಾಲವನ್ನು ಕಳೆದುದು, ಆಗಲೂ ಸುಗ್ರೀವನು ಸಹಾಯಕ್ಕೆ ಬರದೇ ಇದ್ದುದಕ್ಕಾಗಿ ಶ್ರೀರಾಮನಿಗೆ ಉಂಟಾದ ಕ್ರೋಧ, ಸುಗ್ರೀವನು ವಾನರಬಲವನ್ನು ಬರಮಾಡಿಕೊಳ್ಳುವುದು, ವಾನರರಿಗೆ ಭೂಮಂಡಲದ ಪರಿಚಯವನ್ನು ಹೇಳಿ ದಿಕ್ಕುದಿಕ್ಕುಗಳಿಗೆ ಕಳಿಸುವುದು—ಇವುಗಳನ್ನು ವಾಲ್ಮೀಕಿಮುನಿಗಳು ವರ್ಣಿಸಿದರು (೨೩-೨೫). ಶ್ರೀರಾಮನು ಹನುಮಂತನಿಗೆ ಅಂಗುಲೀಯಕವನ್ನು ಕೊಟ್ಟದ್ದು, ಸ್ವಯಂಪ್ರಭಾಗುಹೆಗೆ ಕಪಿಗಳು ಹೋದದ್ದು, ಕಪಿಗಳ ಪ್ರಾಯೋಪವೇಶ, ಸಂಪಾತಿದರ್ಶನ, ಹನುಮಂತನು ಮಹೇಂದ್ರಪರ್ವತವನ್ನು ಆರೋಹಿಸಿ ಸಮುದ್ರಲಂಘನ ಮಾಡಿದುದು, ಸಮುದ್ರರಾಜನ ಮಾತಿನಂತೆ ಮೈನಾಕನು ಕಾಣಿಸಿಕೊಂಡುದು—ಇವುಗಳನ್ನು ವರ್ಣಿಸಿ ಹೇಳಿದರು (೨೬-೨೭). ಅನಂತರ ಸುರಸೆಯು ಹನುಮಂತನನ್ನು ಗದರಿಸಿದ ವೃತ್ತಾಂತ, ಸಿಂಹಿಕೆಯು

ರಾತ್ರೌ ಲಂಕಾಪ್ರವೇಶಂ ಚ ಏಕಸ್ಯಾಥ ವಿಚಿಂತನಮ್ ।
ಆಪಾನಭೂಮಿಗಮನಮವರೋಧಸ್ಯ ದರ್ಶನಮ್ ॥ ೨೯

ದರ್ಶನಂ ರಾವಣಸ್ಯಾಪಿ ಪುಷ್ಪಕಸ್ಯ ಚ ದರ್ಶನಮ್ ।
ಅಶೋಕವನಿಕಾಯಾನಂ ಸೀತಾಯಾಶ್ಚಾಪಿ ದರ್ಶನಮ್ ॥ ೩೦

ಅಭಿಜ್ಞಾನಪ್ರದಾನಂ ಚ ಸೀತಾಯಾಶ್ಚಾಭಿಭಾಷಣಮ್ ।
ರಾಕ್ಷಸೀತರ್ಜನಂ ಚೈವ ತ್ರಿಜಟಾಸ್ವಪ್ನದರ್ಶನಮ್ ॥ ೩೧

ಮಣಿಪ್ರದಾನಂ ಸೀತಾಯಾ ವೃಕ್ಷಭಂಗಂ ತಥೈವ ಚ ।
ರಾಕ್ಷಸೀವಿದ್ರವಂ ಚೈವ ಕಿಂಕರಾಣಾಂ ನಿಬರ್ಹಣಮ್ ॥ ೩೨

ಗ್ರಹಣಂ ವಾಯುಸೂನೋಶ್ಚ ಲಂಕಾದಾಹಾಭಿಗರ್ಜನಮ್ ।
ಪ್ರತಿಪ್ಲವನಮೇವಾಥ ಮಧೂನಾಂ ಹರಣಂ ತಥಾ ॥ ೩೩

ರಾಘವಾಶ್ವಾಸನಂ ಚೈವ ಮಣಿನಿರ್ಯಾತನಂ ತಥಾ ।
ಸಂಗಮಂ ಚ ಸಮುದ್ರೇಣ ನಲಸೇತೋಶ್ಚ ಬಂಧನಮ್ ॥ ೩೪

---

ದರ್ಶನ, ಅವಳ ಸಂಹಾರ, ಹನುಮಂತನು ಲಂಕಾನಗರದ ಪರ್ವತ ಭಾಗವನ್ನು ನೋಡಿದುದು, ಲಂಕಾಪ್ರವೇಶ, ಹನುಮಂತನ ಚಿಂತೆ, ಸೀತಾನ್ವೇಷಣಕ್ಕಾಗಿ ರಾವಣನ ಪಾನಭೂಮಿಗೆ ಹೋಗಿ ಅಂತಃಪುರವನ್ನು ಶೋಧಿಸಿದ ಸಂಗತಿಗಳು ಚಿತ್ರಿತವಾದವು (೨೮-೨೯) ಹನುಮಂತನು ರಾವಣನನ್ನು ಕಂಡು, ಪುಷ್ಪಕದಲ್ಲಿ ಹುಡುಕಿ, ಅಶೋಕವನಕ್ಕೆ ಹೋಗಿ, ಸೀತೆಯ ದರ್ಶನಮಾಡಿ, ಅಂಗುಲೀಯಕವನ್ನು ಕೊಟ್ಟು ಅವಳೊಡನೆ ಸಂಭಾಷಿಸಿದ ವೃತ್ತಗಳೂ ರಾಕ್ಷಸಿಯರು ಸೀತೆಯನ್ನು ಹೆದರಿಸಿದಾಗ ತ್ರಿಜಟೆಯು ತನ್ನ ಸ್ವಪ್ನವೃತ್ತಾಂತವನ್ನು ಹೇಳಿದ ವಿಚಾರವೂ ಆಮೇಲೆ ವಿವರಿಸಲ್ಪಟ್ಟವು (೩೦-೩೧). ಸೀತೆಯು ಹನುಮಂತನಿಗೆ ಚೂಡಾಮಣಿಯನ್ನು ಕೊಟ್ಟದ್ದು, ಅಶೋಕವನದ ವೃಕ್ಷಗಳನ್ನು ಹನುಮಂತನು ನಾಶಗೊಳಿಸಿದ್ದು, ರಾಕ್ಷಸಿಯರು ಓಡಿಹೋಗಲಾಗಿ ಕಿಂಕರರೆಂಬ ರಾಕ್ಷಸರನ್ನು ನಾಶಬಡಿದದ್ದು, ಹನುಮಂತನು ಸೆರೆಸಿಕ್ಕಿದ್ದು, ಲಂಕಾದಹನದಿಂದಾದ ರಾಕ್ಷಸರ ಹಾಹಾಕಾರ, ಹನುಮಂತನು ಸಮುದ್ರವನ್ನು ಪುನಃ ಲಂಘಿಸಿ ಹಿಂದೆ ಬಂದದ್ದು, ಮಧುವನದ ಸೂರೆ—ಇವುಗಳು ವಿವರಿಸಲ್ಪಟ್ಟವು (೩೨-೩೩). ಆಮೇಲೆ ಶ್ರೀರಾಮನನ್ನು ಸಮಾಧಾನಪಡಿಸಿ ಅವನಿಗೆ ಹನುಮಂತನಿಂದ ಚೂಡಾಮಣಿ

**ಪ್ರತಾರಂ ಚ ಸಮುದ್ರಸ್ಯ ರಾತ್ರೌ ಲಂಕಾವರೋಧನಮ್ ।**
**ವಿಭೀಷಣೇನ ಸಂಸರ್ಗಂ ವಧೋಪಾಯನಿವೇದನಮ್ ॥ ೩೫**
**ಕುಂಭಕರ್ಣಸ್ಯ ನಿಧನಂ ಮೇಘನಾದನಿಬರ್ಹಣಮ್ ।**
**ರಾವಣಸ್ಯ ವಿನಾಶಂ ಚ ಸೀತಾವಾಪ್ತಿಮರೇಃ ಪುರೇ ॥ ೩೬**
**ವಿಭೀಷಣಾಭಿಷೇಕಂ ಚ ಪುಷ್ಪಕಸ್ಯ ನಿವೇದನಮ್ ।**
**ಅಯೋಧ್ಯಾಯಾಶ್ಚ ಗಮನಂ ಭರತೇನ ಸಮಾಗಮಮ್ ॥ ೩೭**
**ರಾಮಾಭಿಷೇಕಾಭ್ಯುದಯಂ ಸರ್ವಸೈನ್ಯವಿಸರ್ಜನಮ್ ।**
**ಸ್ವರಾಜ್ಯರಂಜನಂ ಚೈವ ವೈದೇಹ್ಯಾಶ್ಚ ವಿಸರ್ಜನಮ್ ॥ ೩೮**
**ಅನಾಗತಂ ಚ ಯತ್ಕಿಂಚಿದ್ರಾಮಸ್ಯ ವಸುಧಾತಲೇ ।**
**ತಚ್ಚಕಾರೋತ್ತರೇ ಕಾವ್ಯೇ ವಾಲ್ಮೀಕಿರ್ಭಗವಾನೃಷಿಃ ॥ ೩೯**

**ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ತೃತೀಯಃ ಸರ್ಗಃ**

---

ಪ್ರದಾನ, ಸಮುದ್ರದ ಕಡೆಗೆ ಪ್ರಯಾಣ, ನಲನಿಂದ ಸೇತುಬಂಧನ, ಸಮುದ್ರವನ್ನು ದಾಟಿ ರಾತ್ರಿಯಲ್ಲಿ ಲಂಕಾನಗರದ ಮುತ್ತಿಗೆ, ವಿಭೀಷಣ ನೊಡನೆ ಸಮಾಗಮ, ಇಂದ್ರಜಿತ್ತು ಮುಂತಾದವರ ವಧೋಪಾಯಕಥನ, ಕುಂಭಕರ್ಣ ಮತ್ತು ಇಂದ್ರಜಿತ್ತುಗಳ ಸಂಹಾರ, ರಾವಣನ ವಧೆ, ಇವು ಗಳಾದಮೇಲೆ ಸೀತೆಯ ಪ್ರಾಪ್ತಿ—ಇವು ವಿವೃತವಾದವು (೩೪-೩೬). ಅನಂತರ ಲಂಕೆಯಲ್ಲಿ ವಿಭೀಷಣನಿಗೆ ಪಟ್ಟಾಭಿಷೇಕ, ಪುಷ್ಪಕವಿಮಾನದ ಸಮರ್ಪಣೆ, ಶ್ರೀರಾಮನು ಅಯೋಧ್ಯಾಭಿಮುಖವಾಗಿ ಹೊರಟು ಭರದ್ವಾಜ ರನ್ನು ಸಂದರ್ಶನ ಮಾಡಿದ ಕಥೆ—ಇವು ವರ್ಣಿಸಲ್ಪಟ್ಟವು (೩೭). ಅನಂತರ ಹನುಮಂತನನ್ನು ಕಳಿಸಲು ಅವನು ಭರತನನ್ನು ಕಂಡದ್ದು, ಶ್ರೀರಾಮನ ಪಟ್ಟಾಭಿಷೇಕ, ಸಕಲ ವಾನರಸೇನೆಯನ್ನು ತಮ್ಮತಮ್ಮ ಸ್ಥಳಕ್ಕೆ ಕಳಿಸಿ ಶ್ರೀರಾಮನು ರಾಜ್ಯಭಾರ ಮಾಡುತ್ತ ಪ್ರಜಾರಂಜನೆ ಮಾಡಿದ ವಿಧಾನ— ಇವುಗಳನ್ನು ವಾಲ್ಮೀಕಿಮುನಿಗಳು ವರ್ಣಿಸಿದರು (೩೮). ಆಮೇಲೆ ಉತ್ತರ ಕಾಂಡದಲ್ಲಿ ಸೀತಾಪರಿತ್ಯಾಗವನ್ನೂ ಮುಂದೆ ರಾಮನು ನಡೆಸಲಿರುವ ಅಶ್ವಮೇಧಾದಿ ವೃತ್ತಾಂತವನ್ನೂ ಭಗವಾನ್ ವಾಲ್ಮೀಕಿಋಷಿಗಳು ವರ್ಣಿಸಿದರು (೩೯).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಮೂರನೆಯ ಸರ್ಗ

*

## ಚತುರ್ಥಃ ಸರ್ಗಃ

### ಅನುಕ್ರಮಣಿಕಾ

ಪ್ರಾಪ್ತರಾಜಸ್ಯ ರಾಮಸ್ಯ ವಾಲ್ಮೀಕಿರ್ಭಗವಾನೃಷಿಃ ।
ಚಕಾರ ಚರಿತಂ ಕೃತ್ಸ್ನಂ ವಿಚಿತ್ರಪದಮಾತ್ಮವಾನ್ ॥ ೧

ಚತುರ್ವಿಂಶತ್ಸಹಸ್ರಾಣಿ ಶ್ಲೋಕಾನಾಮುಕ್ತವಾನೃಷಿಃ ।
ತಥಾ ಸರ್ಗಶತಾನ್ ಪಂಚ ಷಟ್ ಕಾಂಡಾನಿ ತಥೋತ್ತರಮ್ ॥ ೨

ಕೃತ್ವಾಪಿ ತನ್ಮಹಾಪ್ರಾಜ್ಞಃ ಸಭವಿಷ್ಯಂ ಸಹೋತ್ತರಮ್ ।
ಚಿಂತಯಾಮಾಸ ಕೋ ನ್ವೇತತ್ ಪ್ರಯುಂಜೀಯಾದಿತಿ ಪ್ರಭುಃ ॥

ತಸ್ಯ ಚಿಂತಯಮಾನಸ್ಯ ಮಹರ್ಷೇರ್ಭಾವಿತಾತ್ಮನಃ ।
ಅಗೃಹ್ಣೀತಾಂ ತತಃ ಪಾದೌ ಮುನಿವೇಷೌ ಕುಶೀಲವೌ ॥ ೪

### ಸರ್ಗ ೪

ಲವಕುಶರು ಶ್ರೀರಾಮನೆದುರಿಗೆ ರಾಮಾಯಣವನ್ನು ಹಾಡಿದುದು.

ಶ್ರೀರಾಮನಿಗೆ ಅಯೋಧ್ಯೆಯಲ್ಲಿ ಪಟ್ಟಾಭಿಷೇಕವಾದಮೇಲೆ ವಾಲ್ಮೀಕಿ ಮುನಿಗಳು ವಿಸ್ಮಯಕರವಾದ ಮಧುರಪದಗಳಿಂದ ಶ್ರೀರಾಮಚರಿತೆಯನ್ನು ವಿರಚಿಸಿದರು (೧). ಮೊದಲು (ಪಟ್ಟಾಭಿಷೇಕಪರ್ಯಂತವಾಗಿ) ಆರು ಕಾಂಡಗಳನ್ನೂ ಅವುಗಳಲ್ಲಿ ಇಪ್ಪತ್ತುನಾಲ್ಕು ಸಾವಿರ ಶ್ಲೋಕಗಳನ್ನೂ ಹೇಳಿದರು. ಅನಂತರ ಏಳನೆಯ ಉತ್ತರಕಾಂಡವನ್ನು ರಚಿಸಿದರು * (೨). ಆ ಮಹಾಪ್ರಾಜ್ಞರು (ಅಶ್ವಮೇಧಯಾಗವಾದಮೇಲೆ ನಡೆಯುವ) ಮುಂದಿನ ವೃತ್ತಾಂತಸಹಿತವಾಗಿ ಉತ್ತರಕಾಂಡವನ್ನು ವಿರಚಿಸಿ ಈ ಕಾವ್ಯವನ್ನು ಕಲಿತು ಯಾರು ಹಾಡಬಲ್ಲರು ಎಂದು ಆಲೋಚಿಸುತ್ತಿದ್ದರು (೩). ಪರಿಶುದ್ಧಾತ್ಮರಾದ ವಾಲ್ಮೀಕಿಮುನಿಗಳು ಹೀಗೆ ಆಲೋಚಿಸುತ್ತಿರುವಾಗ ಮುನಿವೇಷವನ್ನು ಧರಿಸಿದ ಕುಶ, ಲವ ಎಂಬ ಕುಮಾರರು ಬಂದು ಪಾದ

* ಅನುಬಂಧವನ್ನು ನೋಡಿ.

ಕುಶೀಲವೌ ತು ಧರ್ಮಜ್ಞೌ ರಾಜಪುತ್ರೌ ಯಶಸ್ವಿನೌ ।
ಭ್ರಾತರೌ ಸ್ವರಸಂಪನ್ನೌ ದದರ್ಶಾಶ್ರಮವಾಸಿನೌ ॥ ೫

ಸ ತು ಮೇಧಾವಿನೌ ದೃಷ್ಟ್ವಾ ವೇದೇಷು ಪರಿನಿಷ್ಠಿತೌ ।
ವೇದೋಪಬೃಂಹಣಾರ್ಥಾಯ ತಾವಗ್ರಾಹಯತ ಪ್ರಭುಃ ॥ ೬

ಕಾವ್ಯಂ ರಾಮಾಯಣಂ ಕೃತ್ಸ್ನಂ ಸೀತಾಯಾಶ್ಚರಿತಂ ಮಹತ್ ।
ಪೌಲಸ್ತ್ಯವಧಮಿತ್ಯೇವ ಚಕಾರ ಚರಿತವ್ರತಃ ॥ ೭

ಪಾಠ್ಯೇ ಗೇಯೇ ಚ ಮಧುರಂ ಪ್ರಮಾಣೈಸ್ತ್ರಿಭಿರನ್ವಿತಮ್ ।
ಜಾತಿಭಿಃ ಸಪ್ತಭಿರ್ಬದ್ಧಂ ತಂತ್ರೀಲಯಸಮನ್ವಿತಮ್ ॥ ೮

ರಸೈಃ ಶೃಂಗಾರ ಕರುಣ ಹಾಸ್ಯ ರೌದ್ರಭಯಾನಕೈಃ ।
ವೀರಾದಿಭಿಶ್ಚ ಸಂಯುಕ್ತಂ ಕಾವ್ಯಮೇತದಗಾಯತಾಮ್ ॥ ೯

ತೌ ತು ಗಾಂಧರ್ವತತ್ತ್ವಜ್ಞೌ ಮೂರ್ಛನಾಸ್ಥಾನಕೋವಿದೌ ।
ಭ್ರಾತರೌ ಸ್ವರಸಂಪನ್ನಾವಶ್ವಿನಾವಿವ ರೂಪಿಣೌ ॥ ೧೦

---

ಗಳನ್ನು ಮುಟ್ಟಿ ಅಭಿವಾದನೆ ಮಾಡಿದರು (೪). ರಾಜಪುತ್ರರಾದ ಆ ಕುಶಲವರು ಅಣ್ಣತಮ್ಮಂದಿರು ಅವರು ಧರ್ಮಜ್ಞರೂ ವಿದ್ಯಾರ್ಜನೆ ಮಾಡಿ ಕೀರ್ತಿವಂತರೂ ಉತ್ತಮವಾದ ಕಂಠಧ್ವನಿಯುಳ್ಳವರೂ ಆಶ್ರಮವಾಸಿಗಳೂ ಆಗಿದ್ದರು (೫). ಮೇಧಾವಿಗಳೂ ವೇದಪಾರಂಗತರೂ ಆದ ಆ ಕುಮಾರರನ್ನು ನೋಡಿ ವಾಲ್ಮೀಕಿಮುನಿಗಳು ವೇದಾರ್ಥಪ್ರತಿಪಾದಕವಾದ ರಾಮಾಯಣವನ್ನು ಅವರಿಗೆ ಕಲಿಸಿದರು (೬). ಈ ರಾಮಾಯಣಕಾವ್ಯವಾದರೋ ಶ್ರೀರಾಮಚಂದ್ರನ ಸಮಗ್ರ ವೃತ್ತಾಂತದಿಂದಲೂ ಸೀತಾದೇವಿಯ ಮಹತ್ವಪೂರ್ಣವಾದ ಚರಿತ್ರದಿಂದಲೂ ರಾವಣನ ವಧೆಯ ಸಂದರ್ಭದಿಂದಲೂ ಉತ್ತಮವಾದ ಕಾವ್ಯವೆನಿಸಿದೆ (೭). ಇದು ಓದುವುದಕ್ಕೂ ಹಾಡುವುದಕ್ಕೂ ಮಧುರವಾಗಿದೆ. ದ್ರುತ, ಮಧ್ಯಮ, ವಿಲಂಬಿತಗಳೆಂಬ ಮೂರು ವೃತ್ತಿಗಳಿಂದ ಷಡ್ಜಾದಿ ಸಪ್ತಸ್ವರಗಳಲ್ಲಿ ಹಾಡಲು ಯೋಗ್ಯವಾಗಿದೆ. ವೀಣೆಯಲ್ಲಿ ಲಯವಿಶಿಷ್ಟವಾಗಿ ನುಡಿಸಬಹುದಾಗಿದೆ. ಶೃಂಗಾರ, ವೀರ, ಕರುಣ, ಅದ್ಭುತ, ಹಾಸ್ಯ, ಭಯಾನಕ, ಬೀಭತ್ಸ, ರೌದ್ರ, ಶಾಂತಗಳೆಂಬ ನವರಸಗಳಿಂದ ತುಂಬಿದೆ. ಇಂಥ ಈ ರಾಮಾಯಣ ಕಾವ್ಯವನ್ನು ಆ ಕುಮಾರರು ಕಲಿತು ಹಾಡುತ್ತಿದ್ದರು (೮–೯). ಆ ಲವಕುಶರು ಸಂಗೀತ ಶಾಸ್ತ್ರದಲ್ಲಿ

ರೂಪಲಕ್ಷಣಸಂಪನ್ನೌ ಮಧುರಸ್ವರಭಾಷಿಣೌ ।
ಬಿಂಬಾದಿವೋತ್ಥಿತೌ ಬಿಂಬೌ ರಾಮದೇಹಾತ್ತಥಾಪರೌ ॥ ೧೧

ತೌ ರಾಜಪುತ್ರೌ ಕಾರ್ತ್ಸ್ನ್ಯೇನ ಧರ್ಮ್ಯಮಾಖ್ಯಾನಮುತ್ತಮಮ್ ।
ವಾಚೋವಿಧೇಯಂ ತತ್ ಸರ್ವಂ ಕೃತ್ವಾ ಕಾವ್ಯಮನಿಂದಿತೌ ॥ ೧೨

ಋಷೀಣಾಂ ಚ ದ್ವಿಜಾತೀನಾಂ ಸಾಧೂನಾಂ ಚ ಸಮಾಗಮೇ ।
ಯಥೋಪದೇಶಂ ತತ್ತ್ವಜ್ಞೌ ಜಗತುಸ್ತೌ ಸಮಾಹಿತೌ ॥ ೧೩

ಮಹಾತ್ಮಾನೌ ಮಹಾಭಾಗೌ ಸರ್ವಲಕ್ಷಣಲಕ್ಷಿತೌ ।
ತೌ ಕದಾಚಿತ್ ಸಮೇತಾನಾಮೃಷೀಣಾಂ ಭಾವಿತಾತ್ಮನಾಮ್ ॥ ೧೪

ಆಸೀನಾನಾಂ ಸಮೀಪಸ್ಥಾವಿದಂ ಕಾವ್ಯಮಗಾಯತಾಮ್ ।
ತಚ್ಛ್ರುತ್ವಾ ಮುನಯಃ ಸರ್ವೇ ಬಾಷ್ಪಪರ್ಯಾಕುಲೇಕ್ಷಣಾಃ ॥

ಸಾಧುಸಾಧ್ವಿತಿ ತಾವೂಚುಃ ಪರಂ ವಿಸ್ಮಯಮಾಗತಾಃ ।
ತೇ ಪ್ರೀತಮನಸಃ ಸರ್ವೇ ಮುನಯೋ ಧರ್ಮವತ್ಸಲಾಃ ॥ ೧೬

---

ವಿಶಾರದರೂ ಸ್ವರೋತ್ಪತ್ತಿಸ್ಥಾನವನ್ನೂ ವೀಣಾದಿ ವಾದ್ಯಗಳನ್ನೂ ಬಲ್ಲವರೂ ಉತ್ತಮವಾದ ಶಾರೀರವುಳ್ಳವರೂ ಆಗಿದ್ದರು. ಆ ಅಣ್ಣತಮ್ಮಂದಿರು ಗಂಧರ್ವರಂತೆ ರೂಪವಂತರು. ಸಾಮುದ್ರಿಕ ಶಾಸ್ತ್ರೋಕ್ತವಾದ ಲಕ್ಷಣವುಳ್ಳವರು. ಇಂಪಾಗಿ ಮಾತನಾಡತಕ್ಕವರು. ಶ್ರೀರಾಮನ ಪ್ರತಿಬಿಂಬಗಳಂತೆ ಇದ್ದರು (೧೦-೧೧). ಬುದ್ಧಿಶಾಲಿಗಳೂ ಗೌರವಾರ್ಹರೂ ಆದ ಆ ರಾಜಪುತ್ರರು ಈ ಧರ್ಮಕಾವ್ಯವನ್ನು ಪೂರ್ಣವಾಗಿ ಕಂಠಪಾಠ ಮಾಡಿ ಋಷಿಗಳೂ ಬ್ರಾಹ್ಮಣರೂ ಮಹಾಜನರೂ ಸೇರಿದ ಸ್ಥಳಗಳಲ್ಲಿ ಸಾವಧಾನವಾಗಿ ಗುರುಗಳು ಕಲಿಸಿದಂತೆ ಹಾಡುತ್ತಿದ್ದರು (೧೨-೧೩). ಹೀಗಿರಲು ಒಂದು ಸಲ ಮಹಾತ್ಮರಾದ ಋಷಿಗಳು ನೆರೆದಿದ್ದ ಸಭೆಯಲ್ಲಿ ಅವರಿಬ್ಬರೂ ಒಟ್ಟಾಗಿ ಶ್ರೀಮದ್ರಾಮಾಯಣವನ್ನು ಹಾಡಿದರು. ಅದನ್ನು ಕೇಳಿ ಋಷಿಗಳೆಲ್ಲರೂ ಆಶ್ಚರ್ಯಪಟ್ಟು ಆನಂದಬಾಷ್ಪಗಳನ್ನು ಸುರಿಸುತ್ತ "ಬಹಳ ಸೊಗಸಾಗಿದೆ. ಆಹಾ! ಆಹಾ!" ಎಂದು ಕೊಂಡಾಡಿದರು (೧೪-೧೫). ಧರ್ಮವತ್ಸಲರಾದ ಆ ಋಷಿಗಳು ಕುಶಲವರನ್ನು ಪ್ರಶಂಸೆ ಮಾಡಿದರು: "ಗಾನವು ಎಷ್ಟು

ಪ್ರಶಶಂಸುಃ ಪ್ರಶಸ್ತವ್ಯೌ ಗಾಯಂತೌ ತೌ ಕುಶೀಲವೌ ।
ಅಹೋ ಗೀತಸ್ಯ ಮಾಧುರ್ಯಂ ಶ್ಲೋಕಾನಾಂ ಚ ವಿಶೇಷತಃ ॥
ಚಿರನಿರ್ವೃತ್ತಮಪ್ಯೇತತ್ ಪ್ರತ್ಯಕ್ಷಮಿವ ದರ್ಶಿತಮ್ ।
ಪ್ರವಿಶ್ಯ ತಾವುಭೌ ಸುಷ್ಠು ತಥಾಭಾವಮಗಾಯತಾಮ್ ॥ ೧೮
ಸಹಿತೌ ಮಧುರಂ ರಕ್ತಂ ಸಂಪನ್ನಂ ಸ್ವರಸಂಪದಾ ।
ಏವಂ ಪ್ರಶಸ್ಯಮಾನೌ ತೈಸ್ತಪಃಶ್ಲಾಘ್ಯೈರ್ಮಹರ್ಷಿಭಿಃ ॥ ೧೯
ಸಂರಕ್ತತರಮತ್ಯರ್ಥಂ ಮಧುರಂ ತಾವಗಾಯತಾಮ್ ।
ಪ್ರೀತಃ ಕಶ್ಚಿನ್ಮುನಿಸ್ತಾಭ್ಯಾಮುತ್ಥಿತಃ ಕಲಶಂ ದದೌ ॥ ೨೦
ಪ್ರಸನ್ನೋ ವಲ್ಕಲಂ ಕಶ್ಚಿದ್ದದೌ ತಾಭ್ಯಾಂ ಮಹಾಯಶಾಃ ।
ಅನ್ಯಃ ಕೃಷ್ಣಾಜಿನಂ ಪ್ರಾದಾನ್ಮೌಂಜೀಮನ್ಯೋ ಮಹಾಮುನಿಃ ॥
ಕಶ್ಚಿತ್ ಕಮಂಡಲುಂ ಪ್ರಾದಾದ್ಯಜ್ಞಸೂತ್ರಮಥಾಪರಃ ।
ಔದುಂಬರೀಂ ಬೃಸೀಮನ್ಯೋ ಜಪಮಾಲಾಮಥಾಪರಃ ॥ ೨೧
ಬೃಸೀಮನ್ಯಸ್ತದಾ ಪ್ರಾದಾತ್ ಕೌಪೀನಮಪರೋ ಮುನಿಃ ।
ತಾಭ್ಯಾಂ ದದೌ ತದಾ ಹೃಷ್ಟಃ ಕುಠಾರಮಪರೋ ಮುನಿಃ ॥ ೨೩

ಇಂಪಾಗಿದೆ! ಶ್ಲೋಕಗಳು ಎಷ್ಟು ಸುಂದರವಾಗಿವೆ! ಈ ರಾಮಚರಿತ್ರೆಯು ಬಹಳ ಹಿಂದೆ ನಡೆದಿದ್ದರೂ ಈಗ ನಮ್ಮ ಕಣ್ಣಿಗೆ ಕಟ್ಟಿದಂತಾಯಿತು ಇವರಿಬ್ಬರೂ ಮಧುರವಾದ ಕಂಠದಿಂದ ಭಾವಪೂರ್ಣವಾಗಿ ಹಾಡುತ್ತಾರೆ." (೧೬-೧೮) ಹೀಗೆ ಆ ತಪಸ್ವಿಗಳು ಹೊಗಳುತ್ತಿರಲು ಕುಶಲವರು ಇನ್ನೂ ಮಧುರವಾಗಿ ಹಾಡಲಾರಂಭಿಸಿದರು. ಆಗ ಒಬ್ಬ ಋಷಿಯು ಸಂತೋಷ ದಿಂದ ಎದ್ದು ಬಂದು ಕಲಶವೊಂದನ್ನು ಆ ಕುಮಾರರಿಗೆ ಪಾರಿತೋಷಿಕವಾಗಿ ಕೊಟ್ಟನು ಇನ್ನೊಬ್ಬ ಮುನಿಯು ಪ್ರಸನ್ನನಾಗಿ ನಾರುಮಡಿಯನ್ನು ನೀಡಿದನು. ಮತ್ತೊಬ್ಬನು ಕೃಷ್ಣಾಜಿನವನ್ನೂ ಮಗದೊಬ್ಬನು ಮುಂಜೀದಾರ ವನ್ನೂ ಕೊಟ್ಟರು (೧೯-೨೧). ಹಾಗೆಯೇ ಒಬ್ಬ ಮುನಿಯು ಕಮಂಡಲು ವನ್ನೂ ಇನ್ನೊಬ್ಬ ಮುನಿಯು ಯಜ್ಞೋಪವೀತವನ್ನೂ ಮತ್ತೊಬ್ಬ ಮುನಿಯು ಋಷಿಗಳು ಕುಳಿತುಕೊಳ್ಳುವ ಆಸನವನ್ನೂ ಪಾರಿತೋಷಿಕವಾಗಿ ಅರ್ಪಿಸಿದರು. ಇನ್ನೊಬ್ಬ ಮುನಿಯು ಕೌಪೀನವನ್ನು ಕೊಟ್ಟನು (೨೨). ಒಬ್ಬ ಮುನಿಯು (ಸಮಿತ್ತನ್ನು ಒಡೆಯುವ) ಕೊಡಲಿಯನ್ನೂ ಇನ್ನೊಬ್ಬನು

**ಕಾಷಾಯಮುಪರೋ ವಸ್ತ್ರಂ ಚೀರಮನ್ಯೋ ದದೌ ಮುನಿಃ ।**
**ಜಟಾಬಂಧನಮನ್ಯಸ್ತು ಕಾಷ್ಠರಜ್ಜುಂ ಮುದಾನ್ವಿತಃ ॥ ೨೪**

**ಯಜ್ಞಭಾಂಡಮೃಷಿಃ ಕಶ್ಚಿತ್ ಕಾಷ್ಠಭಾರಂ ತಥಾಪರಃ ।**
**ಆಯುಷ್ಯಮುಪರೇ ಪ್ರಾಹುರ್ಮುದಾ ತತ್ರ ಮಹರ್ಷಯಃ ॥ ೨೫**

**ದದುಶ್ಚೈವ ವರಾನ್ ಸರ್ವೇ ಮುನಯಃ ಸತ್ಯವಾದಿನಃ ।**
**ಆಶ್ಚರ್ಯಮಿದಮಾಖ್ಯಾನಂ ಮುನಿನಾ ಸಂಪ್ರಕೀರ್ತಿತಮ್ ॥ ೨೬**

**ಪರಂ ಕವೀನಾಮಾಧಾರಂ ಸಮಾಪ್ತಂ ಚ ಯಥಾಕ್ರಮಮ್ ।**
**ಅಭಿಗೀತಮಿದಂ ಗೀತಂ ಸರ್ವಗೀತೇಷು ಕೋವಿದೌ ॥ ೨೭**

**ಆಯುಷ್ಯಂ ಪುಷ್ಟಿಜನನಂ ಸರ್ವಶ್ರುತಿಮನೋಹರಮ್ ।**
**ಪ್ರಶಸ್ಯಮಾನೌ ಸರ್ವತ್ರ ಕದಾಚಿತ್ತತ್ರ ಗಾಯಕೌ ॥ ೨೮**

**ರಥ್ಯಾಸು ರಾಜಮಾರ್ಗೇಷು ದದರ್ಶ ಭರತಾಗ್ರಜಃ ।**
**ಸ್ವವೇಶ್ಮ ಚಾನೀಯ ತತೋ ಭ್ರಾತರೌ ಚ ಕುಶೀಲವೌ ॥ ೨೯**

---

ಕಾಷಾಯವಸ್ತ್ರವನ್ನೂ ಕೊಟ್ಟರು. ಆಗ ಮತ್ತೊಬ್ಬ ಮುನಿಯು ತನ್ನಲ್ಲಿದ್ದ ಹರಕುಬಟ್ಟೆಯನ್ನೇ ಕಾಣಿಕೆಯಾಗಿ ಒಪ್ಪಿಸಿದನು. ಒಬ್ಬ ಋಷಿಯು ಜಟೆಯನ್ನು ಕಟ್ಟಲು ಅನುಕೂಲಿಸುವ ನಾರಿನ ಹಗ್ಗವನ್ನೂ ಇನ್ನೊಬ್ಬನು ಯಜ್ಞಪಾತ್ರೆಯನ್ನೂ ಕೊಡಲಾಗಿ ಒಬ್ಬ ಋಷಿಯು ಸಮಿತ್ತಿನ ಕಟ್ಟನ್ನು ಕೊಟ್ಟನು. ಒಬ್ಬ ಮುನಿಯು ಅತ್ತಿಮರದಿಂದ ಮಾಡಿದ ಒಂದು ಮಣೆಯನ್ನು ಅರ್ಪಿಸಿದನು ಲವಕುಶರು ದೀರ್ಘಾಯುಷ್ಕರಾಗಿ ಬಾಳಲೆಂದು ಇತರ ಮುನಿಗಳು ಹರಸಿದರು. ಸತ್ಯವನ್ನೇ ನುಡಿಯತಕ್ಕ ಆ ಮುನಿಗಳೆಲ್ಲರೂ ಬಾಲಕರಿಗೆ ಶ್ರೇಯಸ್ಸಾಗಲೆಂದು ಆಶೀರ್ವದಿಸಿದರು (೨೪–೨೫). ಅವರು "ಎಲೈ ಬಾಲಕರೆ, ನೀವು ಸಂಗೀತದಲ್ಲಿ ನಿಷ್ಣಾತರು. ವಾಲ್ಮೀಕಿಮುನಿಗಳು ಅದ್ಭುತವಾದ ರೀತಿಯಲ್ಲಿ ಈ ಕಾವ್ಯವನ್ನು ರಚಿಸಿದ್ದಾರೆ. ಇದು ಸಕಲ ಕವಿಗಳಿಗೂ ಆದರ್ಶವಾಗಿದೆ. ಕ್ರಮಬದ್ಧವಾಗಿ ರಾಮಚರಿತ್ರೆಯು ವರ್ಣಿಸಲ್ಪಟ್ಟಿದೆ. ನೀವು ಬಹಳ ಇಂಪಾಗಿ ಹಾಡಿದಿರಿ. ಈ ಗ್ರಂಥವು ಆಯುಷ್ಕರವೂ ಅಭ್ಯುದಯಕಾರಿಯೂ ಆದದ್ದು" ಎಂದು ಹೊಗಳಿದರು (೨೬–೨೭). ಅಯೋಧ್ಯಾನಗರದಲ್ಲಿ ಈ ಕುಮಾರರ ಕೀರ್ತಿ ಹರಡಿತು. ಬೀದಿ ಬೀದಿಗಳಲ್ಲಿ ಎಲ್ಲರೂ ಇವರನ್ನು ಹೊಗಳುತ್ತಿದ್ದರು. ಹೀಗಿರಲು ಒಂದು ದಿನ ಈ ಬಾಲಕರು ಶ್ರೀರಾಮನ

ಪೂಜಯಾಮಾಸ ಪೂಜಾರ್ಹೌ ರಾಮಃ ಶತ್ರುನಿಬರ್ಹಣಃ ।
ಆಸೀನಃ ಕಾಂಚನೇ ದಿವ್ಯೇ ಸ ಚ ಸಿಂಹಾಸನೇ ಪ್ರಭುಃ ॥ ೩೦
ಉಪೋಪವಿಷ್ಟಃ ಸಚಿವೈರ್ಭ್ರಾತೃಭಿಶ್ಚ ಪರಂತಪಃ ।
ದೃಷ್ಟ್ವಾ ತು ರೂಪಸಂಪನ್ನೌ ತಾವುಭೌ ನಿಯತಸ್ತದಾ ॥ ೩೧
ಉವಾಚ ಲಕ್ಷ್ಮಣಂ ರಾಮಃ ಶತ್ರುಘ್ನಂ ಭರತಂ ತಥಾ ।
ಶ್ರೂಯತಾಮಿದಮಾಖ್ಯಾನಮನಯೋರ್ದೇವವರ್ಚಸೋಃ ॥ ೩೨
ವಿಚಿತ್ರಾರ್ಥಪದಂ ಸಮ್ಯಗ್ಗಾಯಕೌ ಸಮಚೋದಯತ್ ।
ತೌ ಚಾಪಿ ಮಧುರಂ ವ್ಯಕ್ತಂ ಸ್ವಂಚಿತಾಯತನಿಃಸ್ವನಮ್ ॥ ೩೩
ತಂತ್ರೀಲಯವದತ್ಯರ್ಥಂ ವಿಶ್ರುತಾರ್ಥಮಗಾಯತಾಮ್ ।
ಹ್ಲಾದಯತ್ಸರ್ವಗಾತ್ರಾಣಿ ಮನಾಂಸಿ ಹೃದಯಾನಿ ಚ ॥ ೩೪
ಶ್ರೋತ್ರಾಶ್ರಯಸುಖಂ ಗೇಯಂ ತದ್ಬಭೌ ಜನಸಂಸದಿ ॥
ಇಮೌ ಮುನೀ ಪಾರ್ಥಿವಲಕ್ಷಣಾನ್ವಿತೌ
ಕುಶೀಲವೌ ಚೈವ ಮಹಾತಪಸ್ವಿನೌ ।

---

ದೃಷ್ಟಿಗೆ ಗೋಚರಿಸಿದರು. ಅವನು ಇವರನ್ನು ತನ್ನ ಅರಮನೆಗೆ ಕರೆಯಿಸಿ ಸತ್ಕಾರ ಮಾಡಿದನು. ಶ್ರೀರಾಮನು ದಿವ್ಯವಾದ ರತ್ನಸಿಂಹಾಸದಲ್ಲಿ ಕುಳಿತು ಕೊಳ್ಳಲಾಗಿ ಅಮಾತ್ಯರೂ ಭರತ ಲಕ್ಷ್ಮಣ ಶತ್ರುಘ್ನರೂ ಸಮೀಪದಲ್ಲಿ ಪೀಠಗಳಮೇಲೆ ಕುಳಿತುಕೊಂಡರು. ಆಗ ಶ್ರೀರಾಮನು ತನ್ನ ತಮ್ಮಂದಿರನ್ನು ಕುರಿತು "ಈ ಬಾಲಕರು ದೇವತೆಗಳಂತೆ ಕಂಗೊಳಿಸುತ್ತಿದ್ದಾರೆ. ಇವರು ಹಾಡುವ ಅದ್ಭುತವಾದ ಈ ಕಾವ್ಯವನ್ನು ಕೇಳಿರಿ" ಎಂದು ನುಡಿದು ಅದನ್ನು ಹಾಡುವಂತೆ ಲವಕುಶರಿಗೆ ತಿಳಿಸಿದನು (೨೮-೩೨). ಆಗ ಲವಕುಶರು ಶ್ರೋತೃಗಳಿಗೆ ಹಿತಕರವಾಗಿಯೂ ವೀಣೆಯ ತಂತಿಯ ನಾದದಂತೆ ಮಧುರವಾಗಿಯೂ ಇರುವ ಕಂಠದಿಂದ ಸುಲಭವಾಗಿ ಅರ್ಥವಾಗುವ ಹಾಗೆ ರಾಮಾಯಣವನ್ನು ಹಾಡಲಾರಂಭಿಸಿದರು. ಅದನ್ನು ಕೇಳಿ ಶ್ರೋತೃಗಳಿಗೆ ರೋಮಾಂಚವಾಗುತ್ತಿತ್ತು. ಅವರ ಮನಸ್ಸು ಆನಂದದಿಂದ ಹಿಗ್ಗಿ ಗಾನದಲ್ಲಿ ತಲ್ಲೀನವಾಯಿತು. ಹೃದಯಕ್ಕೆ ಆಪ್ಯಾಯನವಾಯಿತು. ಗಾನವು ಸಭೆಯಲ್ಲಿದ್ದವರಿಗೆ ಶ್ರವಣಾನಂದವನ್ನುಂಟುಮಾಡುತ್ತ ಹೃದಯವನ್ನು ಸೂರೆಗೊಂಡಿತು (೩೩-೩೪). ಶ್ರೀರಾಮನು ಲಕ್ಷ್ಮಣ ಮುಂತಾದವರನ್ನು ಕುರಿತು

ಮಮಾಪಿ ತದ್ಭೂತಿಕರಂ ಪ್ರಚಕ್ಷತೇ
ಮಹಾನುಭಾವಂ ಚರಿತಂ ನಿಬೋಧತ ॥ ೩೫

ತತಸ್ತು ತೌ ರಾಮವಚಃಪ್ರಚೋದಿತಾ-
ವಗಾಯತಾಂ ಮಾರ್ಗವಿಧಾನಸಂಪದಾ ।
ಸ ಚಾಪಿ ರಾಮಃ ಪರಿಷದ್ಗತಃ ಶನೈ-
ರ್ಬುಭೂಷಯಾ ಸಕ್ತಮನಾ ಬಭೂವ ಹ ॥ ೩೬

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಚತುರ್ಥಃ ಸರ್ಗಃ



" ಈ ಬಾಲಕರು ಮುನಿವೇಷಧಾರಿಗಳಾಗಿದ್ದರೂ ರಾಜಲಕ್ಷಣಗಳಿಂದ ಒಪ್ಪು ತ್ತಿದ್ದಾರೆ. ಇವರು ಮಹಾತಪಸ್ವಿಗಳು. ಇವರು ಹಾಡುವ ಕಾವ್ಯವು ನನ್ನ ಚರಿತೆಯೇ ಆಗಿದ್ದರೂ ಇದು ಶ್ರೇಯಸ್ಕರವೆಂದೂ ಮಹಾವೈಭವಶಾಲಿಯೆಂದೂ ಹಿರಿಯರು ಹೇಳುತ್ತಾರೆ. ಆದ್ದರಿಂದ ಇದನ್ನು ಕೇಳಿರಿ " ಎಂದು ಹೇಳಿದನು (೩೫). ಶ್ರೀರಾಮನ ಪ್ರೇರಣೆಯಂತೆ ಲವಕುಶರು ಮಾರ್ಗಕ್ರಮದಿಂದ* ಹಾಡುತ್ತಿದ್ದರು. ಸಭೆಯಲ್ಲಿ ಕುಳಿತು ಕೇಳುತ್ತಿದ್ದ ಶ್ರೀರಾಮಚಂದ್ರನು ಕರ್ಣಾನಂದವನ್ನು ಅನುಭವಿಸುವ ಇಚ್ಛೆಯಿಂದ ಮೆಲ್ಲಮೆಲ್ಲನೆ ಕಥೆಯಲ್ಲಿ ಆಸಕ್ತನಾದನು (೩೬).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ನಾಲ್ಕನೆಯ ಸರ್ಗ



* ಗಾನವು ಮಾರ್ಗ, ದೇಶಿ—ಎಂದು ಎರಡು ವಿಧ.

# ಪಂಚಮಃ ಸರ್ಗಃ

## ಅಯೋಧ್ಯಾವರ್ಣನಾ

ಸರ್ವಾ ಪೂರ್ವಮಿಯಂ ಯೇಷಾಮಾಸೀತ್ ಕೃತ್ಸ್ನಾ ವಸುಂಧರಾ।
ಪ್ರಜಾಪತಿಮುಪಾದಾಯ ನೃಪಾಣಾಂ ಜಯಶಾಲಿನಾಮ್ ॥ ೧

ಯೇಷಾಂ ಸ ಸಗರೋ ನಾಮ ಸಾಗರೋ ಯೇನ ಖಾನಿತಃ ।
ಷಷ್ಟಿಃ ಪುತ್ರಸಹಸ್ರಾಣಿ ಯಂ ಯಾಂತಂ ಪರ್ಯವಾರಯನ್ ॥ ೨

ಇಕ್ಷ್ವಾಕೂಣಾಮಿದಂ ತೇಷಾಂ ರಾಜ್ಞಾಂ ವಂಶೇ ಮಹಾತ್ಮನಾಮ್
ಮಹದುತ್ಪನ್ನಮಾಖ್ಯಾನಂ ರಾಮಾಯಣಮಿತಿ ಶ್ರುತಮ್ ॥ ೩

ತದಿದಂ ವರ್ತಯಿಷ್ಯಾಮಿ ಸರ್ವಂ ನಿಖಿಲಮಾದಿತಃ ।
ಧರ್ಮಕಾಮಾರ್ಥಸಹಿತಂ ಶ್ರೋತವ್ಯಮನಸೂಯಯಾ ॥ ೪

## ಸರ್ಗ ೫

### ಅಯೋಧ್ಯಾನಗರದ ವರ್ಣನೆ.

ಈ ಸಮಸ್ತ ಭೂಮಂಡಲವನ್ನು ಮನುಚಕ್ರವರ್ತಿಯಿಂದ ಆರಂಭಿಸಿ ಮಹಾತ್ಮರಾದ ಇಕ್ಷ್ವಾಕುವಂಶದ ಮಹಾರಾಜರು ಅಪೂರ್ವ ವೈಭವದಿಂದ ಆಳಿಕೊಂಡು ಬರುತ್ತಿದ್ದರು. ಆ ವಂಶದಲ್ಲಿ ಹುಟ್ಟಿದ ಸಗರ ಚಕ್ರವರ್ತಿಯು ಸಮುದ್ರವನ್ನು ಅಗೆಯಿಸಿ ಅದಕ್ಕೆ 'ಸಾಗರ' ಎಂದು ಹೆಸರು ಬರಲು ಕಾರಣನಾದನು. ಆತನು ಅರುವತ್ತುಸಾವಿರ ಮಕ್ಕಳ ಪರಿವಾರದೊಡನೆ ಶೋಭಿಸುತ್ತಿದ್ದನು. ಸರ್ವಶ್ರೇಷ್ಠರಾದ ಆ ಇಕ್ಷ್ವಾಕು ವಂಶದ ರಾಜರ ಪರಂಪರೆಯಲ್ಲಿ ಶ್ರೀಮದ್ರಾಮಾಯಣವೆಂದು ಪೂಜ್ಯವಾದ ಈ ಕಥಾಪ್ರಸಂಗವು ನಡೆಯಿತು (೧-೩). ಇದನ್ನು ಆದಿಯಿಂದ ಯಾವುದನ್ನೂ ಬಿಡದಂತೆ ಸಂಪೂರ್ಣವಾಗಿ ವಿವರಿಸುವೆನು. ಈ ರಾಮಾಯಣ ಕಾವ್ಯವು ಧರ್ಮಾರ್ಥಕಾಮಗಳೆಂಬ ಪುರುಷಾರ್ಥಗಳನ್ನು ಕೊಡತಕ್ಕದ್ದಾಗಿದೆ. ಅಸೂಯೆಯಿಲ್ಲದೆ ಶ್ರದ್ಧೆಯಿಂದ

ಕೋಸಲೋ ನಾಮ ಮುದಿತಃ ಸ್ಫೀತೋ ಜನಪದೋ ಮಹಾನ್ ।
ನಿವಿಷ್ಟಃ ಸರಯೂತೀರೇ ಪ್ರಭೂತಧನಧಾನ್ಯವಾನ್ ॥ ೫

ಅಯೋಧ್ಯಾ ನಾಮ ನಗರೀ ತತ್ರಾಸೀಲ್ಲೋಕವಿಶ್ರುತಾ ।
ಮನುನಾ ಮಾನವೇಂದ್ರೇಣ ಯಾ ಪುರೀ ನಿರ್ಮಿತಾ ಸ್ವಯಮ್ ॥

ಆಯತಾ ದಶ ಚ ದ್ವೇ ಚ ಯೋಜನಾನಿ ಮಹಾಪುರೀ ।
ಶ್ರೀಮತೀ ತ್ರೀಣಿ ವಿಸ್ತೀರ್ಣಾ ಸುವಿಭಕ್ತಮಹಾಪಥಾ ॥ ೭

ರಾಜಮಾರ್ಗೇಣ ಮಹತಾ ಸುವಿಭಕ್ತೇನ ಶೋಭಿತಾ ।
ಮುಕ್ತಪುಷ್ಪಾವಕೀರ್ಣೇನ ಜಲಸಿಕ್ತೇನ ನಿತ್ಯಶಃ ॥ ೮

ತಾಂ ತು ರಾಜಾ ದಶರಥೋ ಮಹಾರಾಷ್ಟ್ರವಿವರ್ಧನಃ ।
ಪುರೀಮಾವಾಸಯಾಮಾಸ ದಿವಂ ದೇವಪತಿರ್ಯಥಾ ॥ ೯

ಕವಾಟತೋರಣವತೀಂ ಸುವಿಭಕ್ತಾಂತರಾಪಣಾಮ್ ।
ಸರ್ವಯಂತ್ರಾಯುಧವತೀಮುಷಿತಾಂ ಸರ್ವಶಿಲ್ಪಿಭಿಃ ॥ ೧೦

---

ಇದನ್ನು ಕೇಳಬೇಕು (೪). ಸರಯೂ ನದೀತೀರದಲ್ಲಿ ಧನಧಾನ್ಯಗಳಿಂದ ಸಮೃದ್ಧವಾದ ಕೋಸಲವೆಂಬ ವಿಶಾಲವಾದ ರಾಜ್ಯವಿದೆ ಅಲ್ಲಿರುವ ಪ್ರಜೆಗಳು ಉತ್ತರೋತ್ತರ ಅಭಿವೃದ್ಧಿಯನ್ನು ಪಡೆಯುತ್ತ ಆನಂದದಿಂದ ಇದ್ದರು. ಅಯೋಧ್ಯೆ ಎಂಬ ಲೋಕಪ್ರಸಿದ್ಧವಾದ ನಗರವು ಅದರ ರಾಜಧಾನಿ. ಮನುಚಕ್ರವರ್ತಿಯೇ ಆ ನಗರವನ್ನು ನಿರ್ಮಿಸಿದ್ದನು (೫-೬). ಆ ಮಹಾನಗರವು ಹನ್ನೆರಡು ಯೋಜನ ಉದ್ದವಾಗಿಯೂ ಮೂರು ಯೋಜನ ಅಗಲವಾಗಿಯೂ ಇತ್ತು. ದೊಡ್ಡದೊಡ್ಡ ರಸ್ತೆಗಳು ನಗರದಲ್ಲಿ ಹರಡಿದ್ದವು. ಅಚ್ಚುಕಟ್ಟಾದ ರಾಜಬೀದಿಗಳನ್ನು ನಿತ್ಯವೂ ಸ್ವಚ್ಛಗೊಳಿಸಿ ನೀರನ್ನು ಚಿಮುಕಿಸಿ ಹೂಗಳನ್ನು ಹರಡುತ್ತಿದ್ದರು (೭-೮) ದಶರಥ ಮಹಾರಾಜನು ಆ ದೊಡ್ಡ ರಾಷ್ಟ್ರವನ್ನು ಪರಿಪಾಲಿಸುತ್ತ, ಸ್ವರ್ಗದಲ್ಲಿ ದೇವೇಂದ್ರನಿರುವಂತೆ, ಅಯೋಧ್ಯಾನಗರದಲ್ಲಿ ವಾಸವಾಗಿದ್ದನು (೯). ಅಯೋಧ್ಯಾನಗರವು ಪ್ರಶಸ್ತವಾದ ದಿಡ್ಡಿಯ ಬಾಗಿಲುಗಳಿಂದಲೂ ತೋರಣಗಳಿಂದಲೂ ರಂಜಿಸುತ್ತಿತ್ತು. ನಗರದೊಳಗಿದ್ದ ಅಂಗಡಿಗಳು ಕ್ರಮಬದ್ಧವಾಗಿ ವಿಂಗಡಿಸಲ್ಪಟ್ಟಿದ್ದವು. ಯುದ್ಧೋಪಯುಕ್ತವಾದ ಅನೇಕ ಬಗೆಯ ಯಂತ್ರಗಳೂ ಆಯುಧಗಳೂ

ಸೂತಮಾಗಧಸಂಬಾಧಾಂ ಶ್ರೀಮತೀಮತುಲಪ್ರಭಾಮ್ ।
ಉಚ್ಚಾಟ್ಟಾಲಧ್ವಜವತೀಂ ಶತಘ್ನೀಶತಸಂಕುಲಾಮ್ ॥ ೧೧

ವಧೂನಾಟಕಸಂಘೈಶ್ಚ ಸಂಯುಕ್ತಾಂ ಸರ್ವತಃ ಪುರೀಮ್ ।
ಉದ್ಯಾನಾಮ್ರವಣೋಪೇತಾಂ ಮಹತೀಂ ಸಾಲಮೇಖಲಾಮ್ ॥

ದುರ್ಗಗಂಭೀರಪರಿಖಾಂ ದುರ್ಗಾಮನ್ಯೈರ್ದುರಾಸದಾಮ್ ।
ವಾಜಿವಾರಣಸಂಪೂರ್ಣಾಂ ಗೋಭಿರುಷ್ಟ್ರೈಃ ಖರೈಸ್ತಥಾ ॥ ೧೩

ಸಾಮಂತರಾಜಸಂಘೈಶ್ಚ ಬಲಿಕರ್ಮಭಿರಾವೃತಾಮ್ ।
ನಾನಾದೇಶನಿವಾಸೈಶ್ಚ ವಣಿಗ್ಭಿರುಪಶೋಭಿತಾಮ್ ॥ ೧೪

ಪ್ರಾಸಾದೈ ರತ್ನವಿಕೃತೈಃ ಪರ್ವತೈರುಪಶೋಭಿತಾಮ್ ।
ಕೂಟಾಗಾರೈಶ್ಚ ಸಂಪೂರ್ಣಾಮಿಂದ್ರಸ್ಯೇವಾಮರಾವತೀಮ್ ॥ ೧೫

ಚಿತ್ರಾಮಷ್ಟಾಪದಾಕಾರಾಂ ವರನಾರೀಗಣೈರ್ಯುತಾಮ್ ।
ಸರ್ವರತ್ನಸಮಾಕೀರ್ಣಾಂ ವಿಮಾನಗೃಹಶೋಭಿತಾಮ್ ॥ ೧೬

---

ತುಂಬಿದ್ದವು. ನಾನಾ ಕುಶಲಕಲೆಗಳಲ್ಲಿ ನಿಪುಣರಾದ ಶಿಲ್ಪಿಗಳು ವಾಸವಾಗಿದ್ದರು (೧೦). ಅಯೋಧ್ಯೆಯು ಸೂತಮಾಗಧರುಗಳಿಂದಲೂ ಉನ್ನತವಾದ ಉಪ್ಪರಿಗೆಯ ಮನೆಗಳಿಂದಲೂ ಶತಘ್ನಿಗಳೆಂಬ ನೂರಾರು ಆಯುಧಗಳಿಂದಲೂ ತುಂಬಿ ಅತ್ಯಂತ ರಮಣೀಯವಾಗಿ ಒಪ್ಪುತ್ತಿದ್ದಿತು. ಅಲ್ಲಿ ಸ್ತ್ರೀಯರ ನೃತ್ಯಶಾಲೆಗಳೂ ಮಾವಿನ ತೋಪುಗಳೂ ಇದ್ದವು. ನಗರದ ಸುತ್ತಲೂ ವಿಶಾಲವಾದ ಪ್ರಾಕಾರವಿದ್ದಿತು (೧೧-೧೨). ಪ್ರಾಕಾರದ ಆಚೆಗೆ ವಿಸ್ತಾರವೂ ಅಗಾಧವೂ ಆದ ಪರಿಖೆ ಇದ್ದುದರಿಂದ ಪರರಿಗೆ ನಗರದೊಳಕ್ಕೆ ನುಗ್ಗುವುದು ಅಸಾಧ್ಯವಾಗಿತ್ತು. ಆ ನಗರದಲ್ಲಿ ಆನೆ, ಕುದುರೆ, ಹಸು, ಎತ್ತು, ಒಂಟೆ, ಕತ್ತೆ ಮುಂತಾದ ಪ್ರಾಣಿಗಳನ್ನು ವಿಶೇಷವಾಗಿ ಸಾಕಿದ್ದರು. ಕಪ್ಪಕಾಣಿಕೆಗಳನ್ನು ತಂದು ದಶರಥಮಹಾರಾಜನಿಗೆ ಒಪ್ಪಿಸುವುದಕ್ಕಾಗಿ ಸಾಮಂತರಾಜರು ಕಾದಿರುತ್ತಿದ್ದರು. ವ್ಯಾಪಾರಕ್ಕಾಗಿ ನಾನಾ ದೇಶಗಳಿಂದ ವಣಿಜರು ಬಂದು ತುಂಬಿದ್ದರು (೧೩-೧೪). ಪರ್ವತಗಳಂತೆ ಉನ್ನತವಾದ ರತ್ನಖಚಿತ ಪ್ರಾಸಾದಗಳಿಂದಲೂ ಕ್ರೀಡಾಗೃಹಗಳಿಂದಲೂ ಇಂದ್ರನ ಅಮರಾವತಿಯಂತೆ ಅಯೋಧ್ಯೆಯು ವಿರಾಜಿಸುತ್ತಿದ್ದಿತು. ವಿಸ್ಮಯಾವಹವಾದ

**ಗೃಹಗಾಢಾಮವಿಚ್ಛಿದ್ರಾಂ ಸಮಭೂಮಿನಿವೇಶಿತಾಮ್ ।**
**ಶಾಲಿತಂಡುಲಸಂಪೂರ್ಣಾಮಿಕ್ಷುಕಾಂಡರಸೋದಕಾಮ್ ॥ ೧೭**

**ದುಂದುಭೀಭಿರ್ಮೃದಂಗೈಶ್ಚ ವೀಣಾಭಿಃ ಪಣವೈಸ್ತಥಾ ।**
**ನಾದಿತಾಂ ಭೃಶಮತ್ಯರ್ಥಂ ಪೃಥಿವ್ಯಾಂ ತಾಮನುತ್ತಮಾಮ್ ॥ ೧೮**

**ವಿಮಾನಮಿವ ಸಿದ್ಧಾನಾಂ ತಪಸಾಧಿಗತಂ ದಿವಿ ।**
**ಸುನಿವೇಶಿತವೇಶ್ಮಾಂತಾಂ ನರೋತ್ತಮಸಮಾವೃತಾಮ್ ॥ ೧೯**

**ಯೇ ಚ ಬಾಣೈರ್ನ ವಿಧ್ಯಂತಿ ವಿವಿಕ್ತಮಪರಾವರಮ್ ।**
**ಶಬ್ದವೇಧ್ಯಂ ಚ ವಿತತಂ ಲಘುಹಸ್ತಾ ವಿಶಾರದಾಃ ॥ ೨೦**

**ಸಿಂಹವ್ಯಾಘ್ರವರಾಹಾಣಾಂ ಮತ್ತಾನಾಂ ನರ್ದತಾಂ ವನೇ ।**
**ಹಂತಾರೋ ನಿಶಿತೈರ್ಬಾಣೈರ್ಬಲಾದ್ಬಾಹುಬಲೈರಪಿ ॥ ೨೧**

---

ಆ ನಗರವನ್ನು ಪಗಡೆಯ ಮಣೆಯ ಆಕಾರದಲ್ಲಿ ಕಟ್ಟಲಾಗಿತ್ತು ಸುಂದರ ಸ್ತ್ರೀಯರ ಸಂಚಾರ, ನವರತ್ನಗಳ ಪ್ರಸಾರ, ಏಳು ಅಂತಸ್ತುಗಳಿರುವ ವಿಮಾನವೆಂಬ ಗೃಹಗಳ ಸಮುದಾಯಗಳಿಂದ ಅಯೋಧ್ಯೆಯು ಮನೋಹರ ವಾಗಿತ್ತು (೧೫-೧೬) ಪ್ರಜೆಗಳ ಮನೆಗಳಿಂದ ನಿಬಿಡವಾದ ಆ ನಗರವನ್ನು ಕೊರಕುಗಳೂ ಹಳ್ಳತಿಟ್ಟುಗಳೂ ಇಲ್ಲದ ಸಮಭೂಮಿಯಲ್ಲಿ ಕಟ್ಟಲಾಗಿತ್ತು. ಶುಭ್ರವಾದ ಬಿಳಿಯ ಅಕ್ಕಿಯು ಸಮೃದ್ಧವಾಗಿ ದೊರೆಯುತ್ತಿತ್ತು. ಆ ಪಟ್ಟಣ ದಲ್ಲಿ ಕಬ್ಬಿನ ಹಾಲಿನಂತೆ ಸಿಹಿಯಾದ ನೀರು ಯಥೇಚ್ಛವಾಗಿ ದೊರಕುತ್ತಿತ್ತು ಯಾವಾಗಲೂ ದುಂದುಭಿ, ಮೃದಂಗ, ವೀಣೆ, ಮದ್ದಲೆ—ಮುಂತಾದ ವಾದ್ಯಗಳ ಮಧುರವಾದ ಧ್ವನಿಯಿಂದ ತುಂಬಿದ್ದ ಅಯೋಧ್ಯಾಪುರಿಯು ಪೃಥಿವಿಯಲ್ಲಿಯೇ ಅತ್ಯುತ್ತಮ ನಗರವೆನಿಸಿತ್ತು (೧೭-೧೮) ಸಿದ್ಧಪುರುಷರು ತಪೋಬಲದಿಂದ ಸಂಪಾದಿಸಿದ ವಿಮಾನಪಂಕ್ತಿಗಳೋ ಎಂಬಂತೆ ಸಜ್ಜನರು ವಾಸಮಾಡುವ ಗೃಹಪಂಕ್ತಿಗಳಿಂದ ಅಯೋಧ್ಯೆಯು ಕಂಗೊಳಿಸುತ್ತಿತ್ತು. ಆ ನಗರವು ಶಸ್ತ್ರಾಸ್ತ್ರವಿಶಾರದರೂ ಮಹಾರಥರೂ ಆದ ವೀರಯೋಧರಿಂದ ತುಂಬಿದ್ದಿತು ಅವರು ಶತ್ರುವಾದರೂ ಏಕಾಕಿಯನ್ನೂ ಬಂಧುಬಳಗವಿಲ್ಲದ ಅಸಹಾಯನನ್ನೂ ಮರೆಯಲ್ಲಿ ಅಡಗಿದವನನ್ನೂ ಹೆದರಿ ಓಡತಕ್ಕವನನ್ನೂ ಎಂದಿಗೂ ಬಾಣಗಳಿಂದ ಹೊಡೆಯುತ್ತಿರಲಿಲ್ಲ (೧೯-೨೦). ಆ ಪರಾಕ್ರಮ ಶಾಲಿಗಳು ಅರಣ್ಯದಲ್ಲಿ ಮದೋದ್ರೇಕದಿಂದ ಗರ್ಜಿಸುತ್ತ ಸಂಚರಿಸುವ ಸಿಂಹ,

ತಾದೃಶಾನಾಂ ಸಹಸ್ರೈಸ್ತಾಮಭಿಪೂರ್ಣಾಂ ಮಹಾರಥೈಃ ।
ಪುರೀಮಾವಾಸಯಾಮಾಸ ರಾಜಾ ದಶರಥಸ್ತದಾ ॥ ೨೨

ತಾಮಗ್ನಿಮದ್ಭಿರ್ಗುಣವದ್ಭಿರಾವೃತಾಂ
ದ್ವಿಜೋತ್ತಮೈರ್ವೇದಷಡಂಗಪಾರಗೈಃ ।
ಸಹಸ್ರದೈಃ ಸತ್ಯರತೈರ್ಮಹಾತ್ಮಭಿ-
ರ್ಮಹರ್ಷಿಕಲ್ಪೈರೃಷಿಭಿಶ್ಚ ಕೇವಲೈಃ ॥ ೨೩

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಪಂಚಮಃ ಸರ್ಗಃ



ಹುಲಿ, ಕಾಡುಹಂದಿ—ಮುಂತಾದ ಕ್ರೂರಜಂತುಗಳನ್ನು ಹರಿತವಾದ ಆಯುಧಗಳಿಂದ ಸಂಹರಿಸುತ್ತಿದ್ದರು ಸಮಯಬಂದರೆ ಮಲ್ಲಯುದ್ಧದಿಂದಲೇ ಕೊಂದು ಹಾಕುತ್ತಿದ್ದರು (೨೧-೨೨). ಆ ನಗರದಲ್ಲಿ ಆಹಿತಾಗ್ನಿಗಳೂ ಶಮದಮಾದಿ ಗುಣಶಾಲಿಗಳೂ ವೇದವೇದಾಂಗಗಳಲ್ಲಿ ಪಾರಂಗತರೂ ದಾನಶೀಲರೂ ಸತ್ಯಸಂಧರೂ ಆದ ಬ್ರಾಹ್ಮಣ ಶ್ರೇಷ್ಠರೂ ಋಷಿಗಳೂ ಮಹರ್ಷಿಗಳೂ ವಾಸವಾಗಿದ್ದರು. ಅಂಥ ಅಯೋಧ್ಯೆಯಲ್ಲಿ ದಶರಥಮಹಾರಾಜನು ರಾಜ್ಯಭಾರ ಮಾಡುತ್ತಿದ್ದನು (೨೩)

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಐದನೆಯ ಸರ್ಗ



## ಷಷ್ಠಃ ಸರ್ಗಃ

### ರಾಜವರ್ಣನಾ

ತಸ್ಯಾಂ ಪುರ್ಯಾಮಯೋಧ್ಯಾಯಾಂ ವೇದವಿತ್ ಸರ್ವಸಂಗ್ರಹಃ।
ದೀರ್ಘದರ್ಶೀ ಮಹಾತೇಜಾಃ ಪೌರಜಾನಪದಪ್ರಿಯಃ ॥ ೧

ಇಕ್ಷ್ವಾಕೂಣಾಮತಿರಥೋ ಯಜ್ವಾ ಧರ್ಮರತೋ ವಶೀ ।
ಮಹರ್ಷಿಕಲ್ಪೋ ರಾಜರ್ಷಿಸ್ತ್ರಿಷು ಲೋಕೇಷು ವಿಶ್ರುತಃ ॥ ೨

ಬಲವಾನ್ನಿಹತಾಮಿತ್ರೋ ಮಿತ್ರವಾನ್ ವಿಜಿತೇಂದ್ರಿಯಃ ।
ಧನೈಶ್ಚ ಸಂಚಯೈಶ್ಚಾನ್ಯೈಃ ಶಕ್ರವೈಶ್ರವಣೋಪಮಃ ॥ ೩

ಯಥಾ ಮನುರ್ಮಹಾತೇಜಾ ಲೋಕಸ್ಯ ಪರಿರಕ್ಷಿತಾ ।
ತಥಾ ದಶರಥೋ ರಾಜಾ ವಸನ್ ಜಗದಪಾಲಯತ್ ॥ ೪

## ಸರ್ಗ ೬

### ದಶರಥನ ರಾಜ್ಯದಲ್ಲಿ ಪ್ರಜೆಗಳ ವರ್ತನೆ

ಆ ದಶರಥಮಹಾರಾಜನು ವೇದವೇದಾರ್ಥಗಳನ್ನು ಬಲ್ಲವನೂ ವಿದ್ವಾಂಸರನ್ನೂ ಶೂರರನ್ನೂ ಸಂಗ್ರಹಿಸತಕ್ಕ ಸ್ವಭಾವದವನೂ ದೀರ್ಘದರ್ಶಿಯೂ ತೇಜಸ್ವಿಯೂ ಸಕಲಪ್ರಜೆಗಳಿಗೆ ಪ್ರೀತಿಪಾತ್ರನೂ ಆಗಿದ್ದನು. ಅವನು ಅತಿರಥ *; ಯಜ್ಞಯಾಗಗಳನ್ನು ಮಾಡತಕ್ಕವನು; ಧರ್ಮಶೀಲ; ಸರ್ವವನ್ನೂ ತನ್ನ ಸ್ವಾಧೀನದಲ್ಲಿ ಇಟ್ಟುಕೊಂಡವನು; ಅವನು ಮಹರ್ಷಿಗಳಿಗೆ ಸಮಾನನಾದ ಒಬ್ಬ ರಾಜರ್ಷಿ; ಮೂರು ಲೋಕಗಳಲ್ಲಿಯೂ ಪ್ರಸಿದ್ಧನು (೧-೨). ದಶರಥನ ಬಳಿ ಚತುರಂಗ ಸೇನೆಯಿತ್ತು. ಅವನು ಶತ್ರುನಿಗ್ರಹವನ್ನೂ ಮಿತ್ರಸಂಗ್ರಹವನ್ನೂ ಮಾಡತಕ್ಕವನು. ದೇವೇಂದ್ರನಂತೆಯೂ ಕುಬೇರನಂತೆಯೂ ಅವನು ಧನಕನಕಸಮೃದ್ಧಿಯುಳ್ಳವನಾದರೂ ಜಿತೇಂದ್ರಿಯ. ಹಿಂದೆ ಮಹಾತೇಜಸ್ವಿಯಾದ ಮನುಚಕ್ರವರ್ತಿಯು ಹೇಗೆ ಪ್ರಜೆಗಳನ್ನು ಧರ್ಮದಿಂದ ಪಾಲಿಸುತ್ತಿದ್ದನೋ ಹಾಗೆ ದಶರಥನು ಪ್ರಜೆಗಳನ್ನು

* ಹತ್ತುಸಾವಿರ ಮಹಾರಥರೊಡನೆ ಏಕಾಕಿಯಾಗಿ ಯುದ್ಧಮಾಡಬಲ್ಲವನು.

ತೇನ ಸತ್ಯಾಭಿಸಂಧೇನ ತ್ರಿವರ್ಗಮನುತಿಷ್ಠತಾ ।
ಪಾಲಿತಾ ಸಾ ಪುರೀ ಶ್ರೇಷ್ಠಾ ಇಂದ್ರೇಣೇವಾಮರಾವತೀ ॥ ೫

ತಸ್ಮಿನ್ ಪುರವರೇ ಹೃಷ್ಟಾ ಧರ್ಮಾತ್ಮಾನೋ ಬಹುಶ್ರುತಾಃ ।
ನರಾಸ್ತುಷ್ಟಾ ಧನೈಃ ಸ್ವೈಃ ಸ್ವೈರಲುಬ್ಧಾಃ ಸತ್ಯವಾದಿನಃ ॥ ೬

ನಾಲ್ಪಸಂನಿಚಯಃ ಕಶ್ಚಿದಾಸೀತ್ತಸ್ಮಿನ್ ಪುರೋತ್ತಮೇ ।
ಕುಟುಂಬೀ ಯೋ ಹ್ಯಸಿದ್ಧಾರ್ಥೋಽಗವಾಶ್ವಧನಧಾನ್ಯವಾನ್ ॥ ೭

ಕಾಮೀ ವಾ ನ ಕದರ್ಯೋ ವಾ ನೃಶಂಸಃ ಪುರುಷಃ ಕ್ವಚಿತ್ ।
ದ್ರಷ್ಟುಂ ಶಕ್ಯಮಯೋಧ್ಯಾಯಾಂ ನಾವಿದ್ವಾನ್ನ ಚ ನಾಸ್ತಿಕಃ ॥ ೮

ಸರ್ವೇ ನರಾಶ್ಚ ನಾರ್ಯಶ್ಚ ಧರ್ಮಶೀಲಾಃ ಸುಸಂಯತಾಃ ।
ಉದಿತಾಃ ಶೀಲವೃತ್ತಾಭ್ಯಾಂ ಮಹರ್ಷಯ ಇವಾಮಲಾಃ ॥ ೯

ನಾಕುಂಡಲೀ ನಾಮಕುಟೀ ನಾಸ್ರಗ್ವೀ ನಾಲ್ಪಭೋಗವಾನ್ ।
ನಾಮೃಷ್ಟೋ ನಾನುಲಿಪ್ತಾಂಗೋ ನಾಸುಗಂಧಶ್ಚ ವಿದ್ಯತೇ ॥ ೧೦

---

ಪಾಲಿಸುತ್ತಿದ್ದನು (೩-೪) ಸತ್ಯದಲ್ಲಿಯೂ ಧರ್ಮಾರ್ಥಕಾಮಗಳಲ್ಲಿಯೂ ನಿರತನಾದ ಆ ದಶರಥನು, ಇಂದ್ರನು ಅಮರಾವತಿಯನ್ನು ರಕ್ಷಿಸುವಂತೆ ಅಯೋಧ್ಯೆಯನ್ನು ರಕ್ಷಿಸುತ್ತಿದ್ದನು (೫) ಆ ನಗರದಲ್ಲಿದ್ದ ಪ್ರಜೆಗಳು ಧರ್ಮಾತ್ಮರೂ ವಿದ್ವಾಂಸರೂ ಸತ್ಯವಾದಿಗಳೂ ಆಗಿದ್ದರು. ಅವರು ತಮ್ಮ ತಮ್ಮ ಧನದಿಂದ ತೃಪ್ತರಾಗಿದ್ದರೇ ಹೊರತು ಇನ್ನೊಬ್ಬರ ಧನಕ್ಕೆ ಆಸೆಪಟ್ಟವರಲ್ಲ ಸ್ವಲ್ಪಮಾತ್ರವೇ ಹಣಕಾಸುಳ್ಳ ಯಾವ ಗೃಹಸ್ಥನೂ ಅಲ್ಲಿ ಇರಲಿಲ್ಲ. ಇಷ್ಟಾರ್ಥವು ಸಿದ್ಧಿಸದೆ ಆಶಾಭಂಗಹೊಂದಿದವನಾಗಲಿ, ಹಸು ಕುದುರೆ ಧನ ಧಾನ್ಯಗಳು ಇಲ್ಲದವನಾಗಲಿ ಇರಲಿಲ್ಲ. ಆ ಪಟ್ಟಣದಲ್ಲಿ ಕಾಮುಕನಾಗಲಿ, ಜಿಪುಣನಾಗಲಿ, ಕ್ರೂರಿಯಾಗಲಿ, ವಿದ್ಯಾವಿಹೀನನಾಗಲಿ ಅಥವಾ ನಾಸ್ತಿಕನಾಗಲಿ—ಹುಡುಕಿದರೂ ಎಲ್ಲಿಯೂ ಸಿಗುತ್ತಿರಲಿಲ್ಲ (೬-೮). ಎಲ್ಲ ಸ್ತ್ರೀಪುರುಷರೂ ಧರ್ಮಶೀಲರೂ ಇಂದ್ರಿಯಗಳನ್ನು ಹಿಡಿತದಲ್ಲಿಟ್ಟುಕೊಂಡವರೂ ಸೌಜನ್ಯ ಸದಾಚಾರಗಳಲ್ಲಿಯೇ ಸಂತೋಷಪಡತಕ್ಕವರೂ ಮುನಿಗಳಂತೆ ಪರಿಶುದ್ಧಹೃದಯರೂ ಆಗಿದ್ದರು. ಪ್ರತಿಯೊಬ್ಬರಿಗೂ ಕಿವಿಯಲ್ಲಿ ಕುಂಡಲಗಳಿದ್ದವು. ತಲೆಯಲ್ಲಿ ಶಿರೋಭೂಷಣ, ಕೊರಳಲ್ಲಿ ಹಾರಗಳಿದ್ದವು.

ನಾಮೃಷ್ಟಭೋಜೀ ನಾದಾತಾ ನಾಪ್ಯನಂಗದನಿಷ್ಕಧೃಕ್ ।
ನಾಹಸ್ತಾಭರಣೋ ವಾಪಿ ದೃಶ್ಯತೇ ನಾಪ್ಯನಾತ್ಮವಾನ್ ॥ ೧೧
ನಾನಾಹಿತಾಗ್ನಿರ್ನಾಯಜ್ವಾ ನ ಕ್ಷುದ್ರೋ ವಾ ನ ತಸ್ಕರಃ ।
ಕಶ್ಚಿದಾಸೀದಯೋಧ್ಯಾಯಾಂ ನ ಚಾವೃತ್ತೋ ನ ಸಂಕರಃ ॥ ೧೨
ಸ್ವಕರ್ಮನಿರತಾ ನಿತ್ಯಂ ಬ್ರಾಹ್ಮಣಾ ವಿಜಿತೇಂದ್ರಿಯಾಃ ।
ದಾನಾಧ್ಯಯನಶೀಲಾಶ್ಚ ಸಂಯತಾಶ್ಚ ಪ್ರತಿಗ್ರಹೇ ॥ ೧೩
ನ ನಾಸ್ತಿಕೋ ನಾನೃತಕೋ ನ ಕಶ್ಚಿದಬಹುಶ್ರುತಃ ।
ನಾಸೂಯಕೋ ನ ಚಾಶಕ್ತೋ ನಾವಿದ್ವಾನ್ ವಿದ್ಯತೇ ತದಾ ॥
ನಾಷಡಂಗವಿದತ್ರಾಸ್ತಿ ನಾವ್ರತೋ ನಾಸಹಸ್ರದಃ ।
ನ ದೀನಃ ಕ್ಷಿಪ್ತಚಿತ್ತೋ ವಾ ವ್ಯಥಿತೋ ವಾಪಿ ಕಶ್ಚನ ॥ ೧೪

---

ಅಲ್ಪಭೋಗವನ್ನು ಮಾತ್ರವೇ ಅನುಭವಿಸತಕ್ಕವರು ಅಲ್ಲಿರಲಿಲ್ಲ. ಪ್ರತಿಯೊಬ್ಬರೂ ಸ್ನಾನಮಾಡಿ ಶುಭ್ರವಾದ ಉಡಿಗೆಯನ್ನು ಉಡುತ್ತಿದ್ದರು. ಪ್ರತಿಯೊಬ್ಬರೂ ಚಂದನಾದಿ ಸುಗಂಧದ್ರವ್ಯಗಳನ್ನು ಲೇಪಿಸಿಕೊಳ್ಳುತ್ತಿದ್ದರು (೯-೧೦). ಆ ನಗರದಲ್ಲಿ ದಿನವೂ ಮೃಷ್ಟಾನ್ನ ಭೋಜನ ಮಾಡದೆ ಇರತಕ್ಕವನಾಗಲಿ, ದಾನ ಮಾಡದಿರುವವನಾಗಲಿ, ಸುವರ್ಣನಿರ್ಮಿತವಾದ ಬಾಹುಭೂಷಣವನ್ನೂ ಉರೋಭೂಷಣವನ್ನೂ ಹಸ್ತಾಭರಣವನ್ನೂ ಧರಿಸದೆ ಇರುವವನಾಗಲಿ ಮನೋಜಯವಿಲ್ಲದವನಾಗಲಿ ಇರಲಿಲ್ಲ (೧೧). ಆಹಿತಾಗ್ನಿಯಲ್ಲದವನೂ ಯಜ್ಞಮಾಡದಿರುವವನೂ ಅಲ್ಪಸ್ವಭಾವದವನೂ ಕಳ್ಳನೂ ಜಾತಿಸಾಂಕರ್ಯಮಾಡತಕ್ಕವನೂ ಅಲ್ಲಿ ಇರಲಿಲ್ಲ ಅಯೋಧ್ಯೆಯಲ್ಲಿ ವಾಸವಾಗಿದ್ದ ಬ್ರಾಹ್ಮಣರು ನಿತ್ಯವೂ ತಮ್ಮ ಅನುಷ್ಠಾನದಲ್ಲಿ ನಿರತರೂ ಜಿತೇಂದ್ರಿಯರೂ ದಾನ ಅಧ್ಯಯನಗಳಲ್ಲಿ ಆಸಕ್ತರೂ ಆಗಿದ್ದರು. ಅವರು ಪ್ರತಿಗ್ರಹಕ್ಕೆ ಹಿಂದೆಗೆಯತಕ್ಕವರಾಗಿದ್ದರು (೧೨-೧೩). ಅವರಲ್ಲೊಬ್ಬನೂ ನಾಸ್ತಿಕನಲ್ಲ. ಒಬ್ಬನೂ ಸುಳ್ಳುಗಾರನಲ್ಲ ಒಬ್ಬನೂ ಅಲ್ಪವಿದ್ಯಾವಂತನಲ್ಲ. ಒಬ್ಬನೂ ಹೊಟ್ಟೆಕಿಚ್ಚುಪಡತಕ್ಕವನಲ್ಲ. ಒಬ್ಬನೂ ಅಶಕ್ತನಲ್ಲ ಒಬ್ಬನೂ ದಡ್ಡನಲ್ಲ (೧೪). ಪ್ರತಿಯೊಬ್ಬನೂ ಶಿಕ್ಷಾವ್ಯಾಕರಣಾದಿ ಷಟ್‌ಶಾಸ್ತ್ರಗಳಲ್ಲಿ ಪಂಡಿತ. ಪ್ರತಿಯೊಬ್ಬನೂ ವ್ರತನಿಯಮಗಳನ್ನಿಟ್ಟುಕೊಂಡು ಸಾವಿರಗಟ್ಟಲೆ

**ಕಶ್ಚಿನ್ನರೋ ವಾ ನಾರೀ ವಾ ನಾಶ್ರೀಮಾನ್ನಾಪ್ಯರೂಪವಾನ್ ।**
**ದ್ರಷ್ಟುಂ ಶಕ್ಯಮಯೋಧ್ಯಾಯಾಂ ನಾಪಿ ರಾಜನ್ಯಭಕ್ತಿಮಾನ್ ॥**

**ವರ್ಣೇಷ್ವಗ್ರ್ಯಚತುರ್ಥೇಷು ದೇವತಾತಿಥಿಪೂಜಕಾಃ ।**
**ಕೃತಜ್ಞಾಶ್ಚ ವದಾನ್ಯಾಶ್ಚ ಶೂರಾ ವಿಕ್ರಮಸಂಯುತಾಃ ॥** ೧೭

**ದೀರ್ಘಾಯುಷೋ ನರಾಃ ಸರ್ವೇ ಧರ್ಮಂ ಸತ್ಯಂ ಚ ಸಂಶ್ರಿತಾಃ।**
**ಸಹಿತಾಃ ಪುತ್ರಪೌತ್ರೈಶ್ಚ ನಿತ್ಯಂ ಸ್ತ್ರೀಭಿಃ ಪುರೋತ್ತಮೇ ॥** ೧೮

**ಕ್ಷತ್ರಂ ಬ್ರಹ್ಮಮುಖಂ ಚಾಸೀದ್ವೈಶ್ಯಾಃ ಕ್ಷತ್ರಮನುವ್ರತಾಃ ।**
**ಶೂದ್ರಾಃ ಸ್ವಧರ್ಮನಿರತಾಸ್ತ್ರೀನ್ ವರ್ಣಾನುಪಚಾರಿಣಃ ॥** ೧೯

**ಸಾ ತೇನೇಕ್ಷ್ವಾಕುನಾಥೇನ ಪುರೀ ಸುಪರಿರಕ್ಷಿತಾ ।**
**ಯಥಾ ಪುರಸ್ತಾನ್ಮನುನಾ ಮಾನವೇಂದ್ರೇಣ ಧೀಮತಾ ॥** ೨೦

**ಯೋಧಾನಾಮಗ್ನಿಕಲ್ಪಾನಾಂ ಪೇಶಲಾನಾಮಮರ್ಷಿಣಾಮ್ ।**
**ಸಂಪೂರ್ಣಾ ಕೃತವಿದ್ಯಾನಾಂ ಗುಹಾ ಕೇಸರಿಣಾಮಿವ ॥** ೨೧

---

ದಾನಮಾಡತಕ್ಕವನು. ಪ್ರತಿಯೊಬ್ಬನೂ ದೈನ್ಯರಹಿತನೂ ಸ್ಥಿರಚಿತ್ತನೂ ನಿಶ್ಚಿಂತನೂ ಆಗಿದ್ದನು (೧೫). ಎಲ್ಲ ಸ್ತ್ರೀಪುರುಷರೂ ಶ್ರೀಮಂತರೂ ಸುಂದರರೂ ಆಗಿದ್ದರು ರಾಜಭಕ್ತಿಯಿಲ್ಲದ ಒಬ್ಬ ಮನುಷ್ಯನನ್ನೂ ಅಯೋಧ್ಯೆಯಲ್ಲಿ ನೋಡಲು ಶಕ್ಯವಿರಲಿಲ್ಲ ಬ್ರಾಹ್ಮಣಾದಿ ಸಕಲ ವರ್ಣದವರೂ ದೇವತಾರ್ಚನೆ ಅತಿಥಿಸತ್ಕಾರಗಳಲ್ಲಿ ನಿರತರಾಗಿದ್ದರು ಅವರೆಲ್ಲರೂ ಕೃತಜ್ಞರೂ ದಾನಶೀಲರೂ ತಮ್ಮ ತಮ್ಮ ಕರ್ತವ್ಯಗಳಲ್ಲಿ ಶೂರರೂ ಆಗಿದ್ದರು (೧೬-೧೭). ಸರ್ವಪ್ರಜೆಗಳೂ ದೀರ್ಘಾಯುಗಳು; ಸತ್ಯಧರ್ಮಗಳನ್ನು ನಂಬಿದವರು; ಹೆಂಡತಿ, ಮಕ್ಕಳು, ಮೊಮ್ಮಕ್ಕಳೊಡನೆ ಸುಖದಿಂದ ಇರತಕ್ಕವರು. ಬ್ರಾಹ್ಮಣರನ್ನು ಕ್ಷತ್ರಿಯರೂ, ಕ್ಷತ್ರಿಯರನ್ನು ವೈಶ್ಯರೂ, ಈ ಮೂರು ವರ್ಣದವರನ್ನು ಶೂದ್ರರೂ ಅನುಸರಿಸಿ ಹೊಂದಿಕೊಂಡು ನಡೆದುಕೊಳ್ಳುತ್ತಿದ್ದರು (೧೮-೧೯) ಧೀಮಂತನಾದ ಮನುಚಕ್ರವರ್ತಿಯಂತೆ ದಶರಥನು ಅಯೋಧ್ಯೆಯನ್ನು ಚೆನ್ನಾಗಿ ಪರಿಪಾಲಿಸಿಕೊಂಡಿದ್ದನು ಅವನ ಸೈನಿಕರು ಅಗ್ನಿಯಂತೆ ತೇಜಸ್ವಿಗಳು. ಆದರೆ ಜನರಲ್ಲಿ ಸೌಜನ್ಯದಿಂದ ವರ್ತಿಸತಕ್ಕವರು. ಅವಮಾನವನ್ನು ಎಂದಿಗೂ ಸಹಿಸದ ಅಭಿಮಾನಶಾಲಿಗಳು. ಯುದ್ಧತಂತ್ರ

ಕಾಂಭೋಜವಿಷಯೇ ಜಾತೈರ್ಬಾಹ್ಲೀಕೈಶ್ಚ ಹಯೋತ್ತಮೈಃ ।
ವನಾಯುಜೈರ್ನದೀಜೈಶ್ಚ ಪೂರ್ಣಾ ಹರಿಹಯೋತ್ತಮೈಃ ॥ ೨೨

ವಿಂಧ್ಯಪರ್ವತಜೈರ್ಮತ್ತೈಃ ಪೂರ್ಣಾ ಹೈಮವತೈರಪಿ ।
ಮದಾನ್ವಿತೈರತಿಬಲೈರ್ಮಾತಂಗೈಃ ಪರ್ವತೋಪಮೈಃ ॥ ೨೩

ಐರಾವತಕುಲೀನೈಶ್ಚ ಮಹಾಪದ್ಮಕುಲೈಸ್ತಥಾ ।
ಅಂಜನಾದಪಿ ನಿಷ್ಪನ್ನೈರ್ವಾಮನಾದಪಿ ಚ ದ್ವಿಪೈಃ ॥ ೨೪

ಭದ್ರೈರ್ಮಂದ್ರೈರ್ಮೃಗೈಶ್ಚೈವ ಭದ್ರಮಂದ್ರಮೃಗೈಸ್ತಥಾ ।
ಭದ್ರಮಂದ್ರೈರ್ಭದ್ರಮೃಗೈರ್ಮೃಗಮಂದ್ರೈಶ್ಚ ಸಾ ಪುರೀ ॥ ೨೫

ನಿತ್ಯಮತ್ತೈಃ ಸದಾ ಪೂರ್ಣಾ ನಾಗೈರಚಲಸಂನಿಭೈಃ ।
ಸಾ ಯೋಜನೇ ಚ ದ್ವೇ ಭೂಯಃ ಸತ್ಯನಾಮಾ ಪ್ರಕಾಶತೇ ॥ ೨೬

ತಾಂ ಪುರೀಂ ಸ ಮಹಾತೇಜಾ ರಾಜಾ ದಶರಥೋ ಮಹಾನ್ ।
ಶಶಾಸ ಶಮಿತಾಮಿತ್ರೋ ನಕ್ಷತ್ರಾಣೀವ ಚಂದ್ರಮಾಃ ॥ ೨೭

---

ದಲ್ಲಿ ಪಾರಂಗತರು. ಗುಹೆಯಲ್ಲಿರುವ ಸಿಂಹಗಳಂತೆ ಅಯೋಧ್ಯಾನಗರದಲ್ಲಿ ವಾಸವಾಗಿದ್ದರು (೨೦–೨೧). ದಶರಥನ ವಶದಲ್ಲಿ ಕಂಭೋಜ, ಬಾಹ್ಲೀಕ, ವನಾಯು ಮತ್ತು ಸಿಂಧು ದೇಶಗಳಲ್ಲಿ ಜನಿಸಿದ ಉತ್ತಮಾಶ್ವಗಳು ಉಚ್ಚೈಃ-ಶ್ರವಸ್ಸಿನಂತೆ ಒಪ್ಪುತ್ತಿದ್ದವು ಅವನ ಬಳಿಯಲ್ಲಿ ಮಹಾಬಲಶಾಲಿಗಳಾದ ಪರ್ವತಾಕಾರದ ಮದ್ದಾನೆಗಳು ಹೇರಳವಾಗಿದ್ದವು. ಅವುಗಳಲ್ಲಿ ಕೆಲವು ವಿಂಧ್ಯಪರ್ವತದಲ್ಲಿಯೂ ಹಿಮವತ್ಪರ್ವತದಲ್ಲಿಯೂ ಹುಟ್ಟಿದವು. ಕೆಲವು ಐರಾವತ, ಪುಂಡರೀಕ, ಅಂಜನ, ವಾಮನ ಎಂಬ ದಿಗ್ಗಜಗಳ ವಂಶದಲ್ಲಿ ಹುಟ್ಟಿದವು (೨೨–೨೪). ಆ ಮದ್ದಾನೆಗಳಲ್ಲಿ ಕೆಲವು ಭದ್ರ, ಮಂದ್ರ, ಮೃಗ ಎಂಬ ವಿಭಿನ್ನ ಜಾತಿಗಳಿಗೆ ಸೇರಿದವು. ಇನ್ನು ಕೆಲವು ಇವುಗಳ ಮಿಶ್ರ ಜಾತಿಗೆ ಸೇರಿದವು (೨೫). ಅಯೋಧ್ಯೆಗೆ ಸತ್ಯನಗರ ಎಂಬ ಹೆಸರು ಬಳಕೆಯಾಗಿತ್ತು ಅದು ಎರಡು ಯೋಜನ ದೂರದಿಂದಲೇ ಕಣ್ಣಿಗೆ ಕಾಣಿಸುತ್ತಿತ್ತು. ಮಹಾತೇಜಸ್ವಿಯಾದ ದಶರಥಮಹಾರಾಜನು ಶತ್ರುಗಳ ದರ್ಪವನ್ನಡಗಿಸಿ, ನಕ್ಷತ್ರಗಳ ಮಧ್ಯದಲ್ಲಿರುವ ಚಂದ್ರನಂತೆ ಪ್ರಜೆಗಳಿಗೆ ಆಹ್ಲಾದವನ್ನುಂಟುಮಾಡುತ್ತ ಅಯೋಧ್ಯೆಯಲ್ಲಿ ರಾಜ್ಯಭಾರ ಮಾಡುತ್ತಿದ್ದನು

ತಾಂ ಸತ್ಯನಾಮಾಂ ದೃಢತೋರಣಾರ್ಗಲಾಂ
ಗೃಹೈರ್ವಿಚಿತ್ರೈರುಪಶೋಭಿತಾಂ ಶಿವಾಮ್ ।
ಪುರೀಮಯೋಧ್ಯಾಂ ನೃಪಸಿಂಹಸಂಕುಲಾಂ
ಶಶಾಸ ವೈ ಶಕ್ರಸಮೋ ಮಹೀಪತಿಃ ॥ ೨೮

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಷಷ್ಠಃ ಸರ್ಗಃ

---

## ಸಪ್ತಮಃ ಸರ್ಗಃ

### ಅಮಾತ್ಯವರ್ಣನಾ

ತಸ್ಯಾಮಾತ್ಯಾ ಗುಣೈರಾಸನ್ನಿಕ್ಷ್ವಾಕೋಸ್ತು ಮಹಾತ್ಮನಃ ।
ಮಂತ್ರಜ್ಞಾಶ್ಚೇಂಗಿತಜ್ಞಾಶ್ಚ ನಿತ್ಯಂ ಪ್ರಿಯಹಿತೇ ರತಾಃ ॥ ೧
ಅಷ್ಟೌ ಬಭೂವುರ್ವೀರಸ್ಯ ತಸ್ಯಾಮಾತ್ಯಾ ಯಶಸ್ವಿನಃ ।
ಶುಚಯಶ್ಚಾನುರಕ್ತಾಶ್ಚ ರಾಜಕೃತ್ಯೇಷು ನಿತ್ಯಶಃ ॥ ೨

---

(೨೬-೨೭) ಗಟ್ಟಿಯಾದ ದಿಡ್ಡಿಯ ಬಾಗಿಲು ಅಗಳಿಗಳಿಂದ ಭದ್ರವಾದ ಆ ನಗರಕ್ಕೆ ಅಯೋಧ್ಯೆ ಎಂಬ ಹೆಸರು ಅನ್ವರ್ಥವಾಗಿತ್ತು.* ನಾನಾ ಬಗೆಯ ಗೃಹಗಳಿಂದ ಅದು ಮಂಗಳಕರವಾಗಿ ರಂಜಿಸುತ್ತಿತ್ತು. ಜನಸಂದಣಿಯಿಂದ ಕಿಕ್ಕಿರಿದ ಆ ನಗರದಲ್ಲಿ ದಶರಥನು ದೇವೇಂದ್ರನಂತೆ ರಾಜ್ಯಪಾಲನೆ ಮಾಡಿಕೊಂಡಿದ್ದನು (೨೮).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಆರನೆಯ ಸರ್ಗ

---

## ಸರ್ಗ ೭

### ದಶರಥನ ಅಮಾತ್ಯರ ವರ್ಣನೆ　ರಾಜ್ಯಭಾರಕ್ರಮ.

ಆ ದಶರಥನಿಗೆ ಗುಣಶಾಲಿಗಳೂ ರಾಜಕಾರ್ಯದಕ್ಷರೂ ಆದ ಎಂಟು ಮಂದಿ ಅಮಾತ್ಯರಿದ್ದರು ಅವರು ಪರರ ಇಂಗಿತವನ್ನರಿಯುವುದರಲ್ಲಿ ನಿಪುಣರೂ ರಾಜನಿಗೆ ಪ್ರಿಯವೂ ಹಿತಕರವೂ ಆದ ಕಾರ್ಯದಲ್ಲಿ ನಿರತರೂ

---

* ಅಯೋಧ್ಯೆ = ಯುದ್ಧ ಮಾಡಿ ಗೆಲ್ಲಲು ಅಸಾಧ್ಯವಾದದ್ದು.

ಧೃಷ್ಟಿರ್ಜಯಂತೋ ವಿಜಯಃ ಸಿದ್ಧಾರ್ಥೋ ಹ್ಯರ್ಥಸಾಧಕಃ ।
ಅಶೋಕೋ ಮಂತ್ರಪಾಲಶ್ಚ ಸುಮಂತ್ರಶ್ಚಾಷ್ಟಮೋಽಭವತ್ ॥ ೩

ಋತ್ವಿಜೌ ದ್ವಾವಭಿಮತೌ ತಸ್ಯಾಸ್ತಾಮೃಷಿಸತ್ತಮೌ ।
ವಸಿಷ್ಠೋ ವಾಮದೇವಶ್ಚ ಮಂತ್ರಿಣಶ್ಚ ತಥಾಪರೇ ॥ ೪

ಸುಯಜ್ಞೋಽಪ್ಯಥ ಜಾಬಾಲಿಃ ಕಾಶ್ಯಪೋಽಪ್ಯಥ ಗೌತಮಃ ।
ಮಾರ್ಕಂಡೇಯಸ್ತು ದೀರ್ಘಾಯುಸ್ತಥಾ ಕಾತ್ಯಾಯನೋ ದ್ವಿಜಃ

ಏತೈರ್ಬ್ರಹ್ಮರ್ಷಿಭಿರ್ನಿತ್ಯಮೃತ್ವಿಜಸ್ತಸ್ಯ ಪೌರ್ವಕಾಃ ।
ವಿದ್ಯಾವಿನೀತಾ ಹ್ರೀಮಂತಃ ಕುಶಲಾ ನಿಯತೇಂದ್ರಿಯಾಃ ॥ ೬

ಪರಸ್ಪರಾನುರಕ್ತಾಶ್ಚ ನೀತಿಮಂತೋ ಬಹುಶ್ರುತಾಃ ।
ಶ್ರೀಮಂತಶ್ಚ ಮಹಾತ್ಮಾನಃ ಶಾಸ್ತ್ರಜ್ಞಾ ದೃಢವಿಕ್ರಮಾಃ ॥ ೭

ಕೀರ್ತಿಮಂತಃ ಪ್ರಣಿಹಿತಾ ಯಥಾವಚನಕಾರಿಣಃ ।
ತೇಜಃಕ್ಷಮಾಯಶಃಪ್ರಾಪ್ತಾಃ ಸ್ಮಿತಪೂರ್ವಾಭಿಭಾಷಿಣಃ ॥ ೮

---

ಆಗಿದ್ದರು. ಅವರೆಲ್ಲರೂ ಮಹಾರಾಜನಲ್ಲಿ ಕಪಟವಿಲ್ಲದೆ ಅನುರಕ್ತರಾಗಿ ರಾಜಕಾರ್ಯವನ್ನು ನೆರವೇರಿಸುತ್ತಿದ್ದರು (೧-೨) ಆ ಎಂಟು ಮಂದಿ ಅಮಾತ್ಯರು ಯಾರೆಂದರೆ—ಧೃಷ್ಟಿ, ಜಯಂತ, ವಿಜಯ, ಸಿದ್ಧಾರ್ಥ, ಅರ್ಥಸಾಧಕ, ಅಶೋಕ, ಮಂತ್ರಪಾಲ ಮತ್ತು ಸುಮಂತ್ರ. ದಶರಥನಿಗೆ ವಸಿಷ್ಠ, ವಾಮದೇವ ಎಂಬಿಬ್ಬರು ಮುಖ್ಯ ಪುರೋಹಿತರು. ಇವರಲ್ಲದೆ ಸುಯಜ್ಞ, ಜಾಬಾಲಿ, ಕಾಶ್ಯಪ, ಗೌತಮ, ಮಾರ್ಕಂಡೇಯ, ದೀರ್ಘಾಯು, ಕಾತ್ಯಾಯನರೆಂಬ ಋತ್ವಿಜರೂ ಇದ್ದರು (೩-೫). ದಶರಥನ ಪೂರ್ವಜರಿಗೂ ವಸಿಷ್ಠರೇ ಮೊದಲಾದ ಬ್ರಹ್ಮರ್ಷಿಗಳೇ ಋತ್ವಿಜರಾಗಿದ್ದರು. ಮೇಲೆ ಹೇಳಿದ ಎಂಟು ಮಂದಿ ಅಮಾತ್ಯರಲ್ಲದೆ ಇನ್ನೂ ಅನೇಕ ಮಂತ್ರಿಗಳಿದ್ದರು. ಅವರೆಲ್ಲರೂ ವಿದ್ಯಾವಿನಯಸಂಪನ್ನರು; ಜನಾಪವಾದಕ್ಕೆ ಲಜ್ಜಿಸತಕ್ಕವರು; ಕಾರ್ಯದಕ್ಷರು; ಜಿತೇಂದ್ರಿಯರು; ಅನ್ಯೋನ್ಯವಾಗಿ ಪ್ರೀತಿಯುಳ್ಳವರು; ನೀತಿವಂತರು; ವಿದ್ವಾಂಸರು. ಅವರು ತೇಜಸ್ವಿಗಳೂ ಮಹಾತ್ಮರೂ ಶಾಸ್ತ್ರಜ್ಞರೂ ದೃಢನಿಶ್ಚಯವುಳ್ಳವರೂ ಆಗಿದ್ದರು (೬-೭). ಅವರು ಕೀರ್ತಿಶಾಲಿಗಳೂ ರಾಜಕಾರ್ಯಗಳಲ್ಲಿ ಎಚ್ಚರಿಕೆಯಿಂದ ನಡೆಯತಕ್ಕವರೂ ರಾಜಾಜ್ಞೆಯನ್ನು

**ಕ್ರೋಧಾತ್ ಕಾಮಾರ್ಥಹೇತೋರ್ವಾ ನ ಬ್ರೂಯುರನೃತಂ ವಚಃ**
**ತೇಷಾಮವಿದಿತಂ ಕಿಂಚಿತ್ ಸ್ವೇಷು ನಾಸ್ತಿ ಪರೇಷು ವಾ ॥ ೯**

**ಕ್ರಿಯಮಾಣಂ ಕೃತಂ ವಾಪಿ ಚಾರೇಣಾಪಿ ಚಿಕೀರ್ಷಿತಮ್ ।**
**ಕುಶಲಾ ವ್ಯವಹಾರೇಷು ಸೌಹೃದೇಷು ಪರೀಕ್ಷಿತಾಃ ॥ ೧೦**

**ಪ್ರಾಪ್ತಕಾಲಂ ಯಥಾ ದಂಡಂ ಧಾರಯೇಯುಃ ಸುತೇಷ್ವಪಿ ।**
**ಕೋಶಸಂಗ್ರಹಣೇ ಯುಕ್ತಾ ಬಲಸ್ಯ ಚ ಪರಿಗ್ರಹೇ ॥ ೧೧**

**ಅಹಿತಂ ಚಾಪಿ ಪುರುಷಂ ನ ಹಿಂಸ್ಯುರವಿದೂಷಕಮ್ ।**
**ವೀರಾಶ್ಚ ನಿಯತೋತ್ಸಾಹಾ ರಾಜಶಾಸ್ತ್ರಮನುವ್ರತಾಃ ॥ ೧೨**

**ಶುಚೀನಾಂ ರಕ್ಷಿತಾರಶ್ಚ ನಿತ್ಯಂ ವಿಷಯವಾಸಿನಾಮ್ ।**
**ಬ್ರಹ್ಮಕ್ಷತ್ರಮಹಿಂಸಂತಸ್ತೇ ಕೋಶಂ ಸಮಪೂರಯನ್ ॥ ೧೩**

---

ಕ್ರಮವರಿತು ನಡೆಸತಕ್ಕವರೂ ಆಗಿದ್ದರು. ಆ ಮಂತ್ರಿಗಳು ಕ್ಷಮಾಶೀಲರು ; ಜನರೊಡನೆ ನಸುನಗುತ್ತ ಸಂಭಾಷಿಸತಕ್ಕವರು ಕಾಮಕ್ರೋಧಗಳಿಂದಲಾಗಲಿ, ಸ್ವಾರ್ಥಕ್ಕಾಗಲಿ ಎಂದಿಗೂ ಸುಳ್ಳು ಹೇಳತಕ್ಕವರಲ್ಲ. ಸ್ವರಾಷ್ಟ್ರದಲ್ಲಾಗಲಿ ಪರರಾಷ್ಟ್ರದಲ್ಲಾಗಲಿ ನಡೆಯತಕ್ಕ ಯಾವ ವಿಷಯವೂ ಅವರಿಗೆ ಗೋಚರಿಸದೆ ಇರುತ್ತಿರಲಿಲ್ಲ ಗೂಢಚಾರರ ಮೂಲಕ ಎಲ್ಲವನ್ನೂ ಅವರು ತಿಳಿದುಕೊಳ್ಳುತ್ತಿದ್ದರು (೮-೯) ವ್ಯವಹಾರದಕ್ಷರಾದ ಆ ಮಂತ್ರಿಗಳೆಲ್ಲರ ಸೌಹಾರ್ದವನ್ನೂ ರಾಜನು ಪರೀಕ್ಷಿಸಿ ವಿಶ್ವಾಸಯೋಗ್ಯರೆಂದು ನಿಶ್ಚಯಿಸಿಕೊಂಡಿದ್ದನು. ಅವರು ತಮ್ಮ ಮಕ್ಕಳನ್ನೂ ಕೂಡ ಅಪರಾಧಿಗಳಾಗಿದ್ದರೆ ಶಿಕ್ಷಿಸದೆ ಬಿಡುತ್ತಿರಲಿಲ್ಲ. ಅವರು ರಾಜಭಂಡಾರವನ್ನು ವರ್ಧಿಸುತ್ತ ಚತುರಂಗ ಬಲವನ್ನು ಬಿಗಿವಡಿಸುವುದರಲ್ಲಿ ಉದ್ಯುಕ್ತರಾಗಿದ್ದರು (೧೦-೧೧) ಅಪರಾಧಿಯಲ್ಲದಿದ್ದರೆ ಶತ್ರುವನ್ನು ಕೂಡ ಹಿಂಸೆವಡಿಸುತ್ತಿರಲಿಲ್ಲ. ಆ ಮಂತ್ರಿಗಳು ವೀರರೂ ಉತ್ಸಾಹಶಾಲಿಗಳೂ ರಾಜ್ಯಶಾಸ್ತ್ರದಲ್ಲಿ ಪಳಗಿದವರೂ ಆಗಿದ್ದರು (೧೨). ರಾಜ್ಯದಲ್ಲಿ ಸತ್ಪ್ರಜೆಗಳನ್ನು ರಕ್ಷಿಸುವುದರಲ್ಲಿ ನಿರತರಾಗಿದ್ದರು. ಆ ಮಂತ್ರಿಗಳು ಬ್ರಾಹ್ಮಣ ಕ್ಷತ್ರಿಯರಿಗೆ ಹಿಂಸೆಯನ್ನು ಕೊಡದೆ, ಜನರ ಅಪರಾಧದ ತಾರತಮ್ಯಕ್ಕೆ ಅನುಗುಣವಾಗಿ ದಂಡವನ್ನು ವಿಧಿಸುತ್ತ ರಾಜ್ಯದ

**ಸುತೀಕ್ಷ್ಣದಂಡಾಃ ಸಂಪ್ರೇಕ್ಷ್ಯ ಪುರುಷಸ್ಯ ಬಲಾಬಲಮ್ ।**
**ಶುಚೀನಾಮೇಕಬುದ್ಧೀನಾಂ ಸರ್ವೇಷಾಂ ಸಂಪ್ರಜಾನತಾಮ್ ॥**

**ನಾಸೀತ್ ಪುರೇ ವಾ ರಾಷ್ಟ್ರೇ ವಾ ಮೃಷಾವಾದೀ ನರಃ ಕ್ವಚಿತ್ ।**
**ಕಶ್ಚಿನ್ನ ದುಷ್ಟಸ್ತತ್ರಾಸೀತ್ ಪರದಾರರತೋ ನರಃ ॥** ೧೫

**ಪ್ರಶಾಂತಂ ಸರ್ವಮೇವಾಸೀದ್ರಾಷ್ಟ್ರಂ ಪುರವರಂ ಚ ತತ್ ।**
**ಸುವಾಸಸಃ ಸುವೇಷಾಶ್ಚ ತೇ ಚ ಸರ್ವೇ ಶುಚಿವ್ರತಾಃ ॥** ೧೬

**ಹಿತಾರ್ಥಾಶ್ಚ ನರೇಂದ್ರಸ್ಯ ಜಾಗ್ರತೋ ನಯಚಕ್ಷುಷಾ ।**
**ಗುರೋರ್ಗುಣಗೃಹೀತಾಶ್ಚ ಪ್ರಖ್ಯಾತಾಶ್ಚ ಪರಾಕ್ರಮೈಃ ॥** ೧೭

**ವಿದೇಶೇಷ್ವಪಿ ವಿಜ್ಞಾತಾಃ ಸರ್ವತೋಬುದ್ಧಿನಿಶ್ಚಯಾಃ ।**
**ಅಭಿತೋ ಗುಣವಂತಶ್ಚ ನ ಚಾಸನ್ ಗುಣವರ್ಜಿತಾಃ ॥** ೧೮

**ಸಂಧಿವಿಗ್ರಹತತ್ತ್ವಜ್ಞಾಃ ಪ್ರಕೃತ್ಯಾ ಸಂಪದಾನ್ವಿತಾಃ ।**
**ಮಂತ್ರಸಂವರಣೇ ಶಕ್ತಾಃ ಶ್ಲಕ್ಷ್ಣಾಃ ಸೂಕ್ಷ್ಮಾಸು ಬುದ್ಧಿಷು ॥** ೧೯

---

ಆದಾಯವನ್ನು ಹೆಚ್ಚಿಸುತ್ತಿದ್ದರು. ಅವರು ಮನೋವಾಕ್ಕಾಯಗಳಿಂದ ಪರಿಶುದ್ಧರಾಗಿ ಐಕಮತ್ಯದಿಂದ ರಾಜಕಾರ್ಯವನ್ನು ನೋಡಿಕೊಳ್ಳುತ್ತಿರಲಾಗಿ, ಅಯೋಧ್ಯೆಯಲ್ಲಿಯೂ ಕೋಸಲರಾಜ್ಯದಲ್ಲಿಯೂ ಸುಳ್ಳು ಹೇಳತಕ್ಕವನೊಬ್ಬನೂ ಇರಲಿಲ್ಲ ಪರಸ್ತ್ರೀಯರನ್ನು ಬಯಸುವ ಒಬ್ಬ ದುಷ್ಟನೂ ಅಲ್ಲಿರಲಿಲ್ಲ (೧೩-೧೫). ನಿಖಿಲರಾಷ್ಟ್ರವೂ ರಾಜಧಾನಿಯೂ ಪ್ರಶಾಂತವಾಗಿತ್ತು. ಆ ಮಂತ್ರಿಗಳ ಉಡಿಗೆಯೂ ಶುದ್ಧ, ತೊಡಿಗೆಯೂ ಶುದ್ಧ, ಆಚಾರವೂ ಶುದ್ಧ ರಾಜನ ಹಿತದಲ್ಲಿಯೇ ಆಸಕ್ತರಾಗಿದ್ದ ಅವರ ರಾಜನೀತಿಯೆಂಬ ನೇತ್ರವು ಸದಾ ಜಾಗರೂಕವಾಗಿತ್ತು. ಅವರು ಗುರುಹಿರಿಯರ ಗುಣಗಳನ್ನು ಮಾತ್ರ ಗ್ರಹಿಸತಕ್ಕವರು ಪರಾಕ್ರಮಿಗಳೆಂದು ಪ್ರಖ್ಯಾತರು (೧೬-೧೭). ಬುದ್ಧಿಶಾಲಿಗಳೆಂದು ವಿದೇಶಗಳಲ್ಲಿಯೂ ಹೆಸರು ಪಡೆದಿದ್ದರು. ಸಂಧಿಮಾಡಿಕೊಳ್ಳುವುದು, ಯುದ್ಧಮಾಡುವುದು—ಇವುಗಳ ತತ್ತ್ವವನ್ನು ಅವರು ಬಲ್ಲರು ಅವರೆಲ್ಲರೂ ದೊಡ್ಡ ಸ್ವಭಾವದವರು. ಆ ಮಂತ್ರಿಗಳು ಮಂತ್ರಾಲೋಚನೆಯನ್ನು ರಹಸ್ಯವಾಗಿಡುವುದರಲ್ಲಿ ಗಟ್ಟಿಗರು. ಸೂಕ್ಷ್ಮರಾಜಕಾರ್ಯಗಳನ್ನು ಕೂಡಲೇ ಬಗೆಹರಿಸುವ ಪ್ರತಿಭಾ

ನೀತಿಶಾಸ್ತ್ರವಿಶೇಷಜ್ಞಾಃ ಸತತಂ ಪ್ರಿಯವಾದಿನಃ ।
ಈದೃಶೈಸ್ತೈರಮಾತ್ಯೈಶ್ಚ ರಾಜಾ ದಶರಥೋಽನಘಃ ॥ ೨೦

ಉಪಪನ್ನೋ ಗುಣೋಪೇತೈರನ್ವಶಾಸದ್ವಸುಂಧರಾಮ್ ।
ಅವೇಕ್ಷಮಾಣಶ್ಚಾರೇಣ ಪ್ರಜಾ ಧರ್ಮೇಣ ರಂಜಯನ್ ॥ ೨೧

ಪ್ರಜಾನಾಂ ಪಾಲನಂ ಕುರ್ವನ್ನಧರ್ಮಂ ಪರಿವರ್ಜಯನ್ ।
ವಿಶ್ರುತಸ್ತ್ರಿಷು ಲೋಕೇಷು ವದಾನ್ಯಃ ಸತ್ಯಸಂಗರಃ ॥ ೨೨

ಸ ತತ್ರ ಪುರುಷವ್ಯಾಘ್ರಃ ಶಶಾಸ ಪೃಥಿವೀಮಿಮಾಮ್ ।
ನಾಧ್ಯಗಚ್ಛದ್ವಿಶಿಷ್ಟಂ ವಾ ತುಲ್ಯಂ ವಾ ಶತ್ರುಮಾತ್ಮನಃ ॥ ೨೩

ಮಿತ್ರವಾನ್ನತಸಾಮಂತಃ ಪ್ರತಾಪಹತಕಂಟಕಃ ।
ಸ ಶಶಾಸ ಜಗದ್ರಾಜಾ ದಿವಂ ದೇವಪತಿರ್ಯಥಾ ॥ ೨೪

ತೈರ್ಮಂತ್ರಿಭಿರ್ಮಂತ್ರಹಿತೇ ನಿಯುಕ್ತೈ-
ರ್ವೃತೋಽನುರಕ್ತೈಃ ಕುಶಲೈಃ ಸಮರ್ಥೈಃ ।

---

ಶಾಲಿಗಳು (೧೬-೧೯) ಸಕಲ ನೀತಿಶಾಸ್ತ್ರಗಳನ್ನು ಕಲಿತವರು. ಎಲ್ಲಾ ಸಮಯದಲ್ಲಿಯೂ ಪ್ರಿಯವಾದ ಮಾತನ್ನೇ ಆಡತಕ್ಕವರು ಇಂಥ ಗುಣಶಾಲಿಗಳಾದ ಅಮಾತ್ಯರಿಂದೊಡಗೂಡಿ ದಶರಥಮಹಾರಾಜನು ಭೂಮಿಯನ್ನು ಪಾಲಿಸುತ್ತಿದ್ದನು (೨೦-೨೧) ಅವನು ಸ್ವದೇಶ ಮತ್ತು ಪರದೇಶಗಳ ವೃತ್ತಾಂತವನ್ನು ಚಾರರ ಮೂಲಕ ತಿಳಿದುಕೊಳ್ಳುತ್ತ, ಪ್ರಜೆಗಳು ಧರ್ಮಕ್ಕೆ ವಿರುದ್ಧವಾಗಿ ಹೋಗದಂತೆ ನೋಡಿಕೊಳ್ಳುತ್ತ ಧರ್ಮದಿಂದ ಅವರನ್ನು ಸಂರಕ್ಷಿಸುತ್ತಿದ್ದನು ಅವನು ದಾನಶೌಂಡನೆಂದೂ ಸತ್ಯಸಂಧನೆಂದೂ ಮೂರು ಲೋಕಗಳಲ್ಲಿಯೂ ಪ್ರಸಿದ್ಧಿಯಾಗಿತ್ತು ಆತನಿಗೆ ರಾಜರಲ್ಲಿ ಅನೇಕರು ಮಿತ್ರರಾಗಿದ್ದರು ಸಾಮಂತರು ವಿಧೇಯರಾಗಿದ್ದರು. ದಶರಥನ ಪರಾಕ್ರಮದಿಂದ ಶತ್ರುಗಳು ನಾಶಹೊಂದಿದ್ದರು. ಅವನಿಗೆ ಸದೃಶನಾದ ಅಥವಾ ಇನ್ನೂ ಬಲಶಾಲಿಯಾದ ಶತ್ರುವೇ ಇರಲಿಲ್ಲ ಅವನು ಸ್ವರ್ಗದಲ್ಲಿರುವ ದೇವೇಂದ್ರನಂತೆ ಕಂಗೊಳಿಸುತ್ತಿದ್ದನು (೨೨-೨೪) ಆ ದಶರಥಮಹಾರಾಜನು ಹಿಂದೆ ಹೇಳಿದಂತೆ ಮಂತ್ರಾಲೋಚನೆಯಲ್ಲಿ ತತ್ಪರರೂ ಅನುರಕ್ತರೂ ಕರ್ತವ್ಯ

ಸ ಪಾರ್ಥಿವೋ ದೀಪ್ತಿಮವಾಪ ಯುಕ್ತ-
ಸ್ತೇಜೋಮಯೈರ್ಗೋಭಿರಿವೋದಿತೋಽರ್ಕಃ ॥ ೨೫

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಸಪ್ತಮಃ ಸರ್ಗಃ

---

## ಅಷ್ಟಮಃ ಸರ್ಗಃ

### ಸುಮಂತ್ರವಾಕ್ಯಮ್

**ತಸ್ಯ ತ್ವೇವಂಪ್ರಭಾವಸ್ಯ ಧರ್ಮಜ್ಞಸ್ಯ ಮಹಾತ್ಮನಃ ।**
**ಸುತಾರ್ಥಂ ತಪ್ಯಮಾನಸ್ಯ ನಾಸೀದ್ವಂಶಕರಃ ಸುತಃ ॥ ೧**

**ಚಿಂತಯಾನಸ್ಯ ತಸ್ಯೈವಂ ಬುದ್ಧಿರಾಸೀನ್ಮಹಾತ್ಮನಃ ।**
**ಸುತಾರ್ಥಂ ವಾಜಿಮೇಧೇನ ಕಿಮರ್ಥಂ ನ ಯಜಾಮ್ಯಹಮ್ ॥ ೨**

**ಸ ನಿಶ್ಚಿತಾಂ ಮತಿಂ ಕೃತ್ವಾ ಯಷ್ಟವ್ಯಮಿತಿ ಬುದ್ಧಿಮಾನ್ ।**
**ಮಂತ್ರಿಭಿಃ ಸಹ ಧರ್ಮಾತ್ಮಾ ಸರ್ವೈರೇವ ಕೃತಾತ್ಮಭಿಃ ॥ ೩**

---

ನಿಷ್ಠರೂ ತೇಜಸ್ವಿಗಳೂ ಆದ ಮಂತ್ರಿಗಳಿಂದ ಪರಿವೃತನಾಗಿ, ತೇಜೋಮಯ ಕಿರಣಗಳೊಡನೆ ಉದಿಸಿದ ಸೂರ್ಯನಂತೆ ವಿರಾಜಿಸುತ್ತಿದ್ದನು (೨೫).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಏಳನೆಯ ಸರ್ಗ

---

## ಸರ್ಗ ೮

ದಶರಥನು ತನಗೆ ಸಂತತಿಯಿಲ್ಲದುದಕ್ಕಾಗಿ ಸುಮಂತ್ರನೊಡನೆ ನಡೆಸಿದ ಸಂಭಾಷಣೆ. ಅಶ್ವಮೇಧಯಾಗವನ್ನು ಮಾಡಬೇಕೆಂದು ನಿಶ್ಚಯಿಸಿ ಅಶ್ವವನ್ನು ಬಿಡುವುದು.

ಹೀಗೆ ಪ್ರಭಾವಶಾಲಿಯಾಗಿದ್ದ ದಶರಥಮಹಾರಾಜನಿಗೆ ವಂಶವನ್ನು ಉದ್ಧರಿಸುವ ಪುತ್ರನು ಜನಿಸಲಿಲ್ಲ ಎಂಬುದು ದೊಡ್ಡ ಚಿಂತೆಯಾಗಿತ್ತು. ಒಂದುಸಲ ಆತನಿಗೆ "ನಾನು ಸಂತತಿಗೋಸ್ಕರ ಅಶ್ವಮೇಧಯಾಗವನ್ನು ಏಕೆ ಮಾಡಬಾರದು?" ಎಂಬ ಆಲೋಚನೆ ಹುಟ್ಟಿತು (೧-೨). ಅವನು ತನ್ನ ಮಂತ್ರಿಗಳೊಡನೆ ಸಮಾಲೋಚನೆ ಮಾಡಿ ಅಶ್ವಮೇಧಯಾಗವನ್ನು

ತತೋಽಬ್ರವೀದಿದಂ ರಾಜಾ ಸುಮಂತ್ರಂ ಮಂತ್ರಿಸತ್ತಮಮ್ ।
ಶೀಘ್ರಮಾನಯ ಮೇ ಸರ್ವಾನ್ ಗುರೂಂಸ್ತಾನ್ ಸಪುರೋಹಿತಾನ್ ॥

ತತಃ ಸುಮಂತ್ರಸ್ತ್ವರಿತಂ ಗತ್ವಾ ತ್ವರಿತವಿಕ್ರಮಃ ।
ಸಮಾನಯತ್ ಸ ತಾನ್ ಸರ್ವಾನ್ ಸಮಸ್ತಾನ್ ವೇದಪಾರಗಾನ್

ಸುಯಜ್ಞಂ ವಾಮದೇವಂ ಚ ಜಾಬಾಲಿಮಥ ಕಾಶ್ಯಪಮ್ ।
ಪುರೋಹಿತಂ ವಸಿಷ್ಠಂ ಚ ಯೇ ಚಾನ್ಯೇ ದ್ವಿಜಸತ್ತಮಾಃ ॥ ೬

ತಾನ್ ಪೂಜಯಿತ್ವಾ ಧರ್ಮಾತ್ಮಾ ರಾಜಾ ದಶರಥಸ್ತದಾ ।
ಇದಂ ಧರ್ಮಾರ್ಥಸಹಿತಂ ಶ್ಲಕ್ಷ್ಣಂ ವಚನಮಬ್ರವೀತ್ ॥ ೭

ಮಮ ಲಾಲಪ್ಯಮಾನಸ್ಯ ಪುತ್ರಾರ್ಥಂ ನಾಸ್ತಿ ವೈ ಸುಖಮ್ ।
ತದರ್ಥಂ ಹಯಮೇಧೇನ ಯಕ್ಷ್ಯಾಮೀತಿ ಮತಿರ್ಮಮ ॥ ೮

ತದಹಂ ಯಷ್ಟುಮಿಚ್ಛಾಮಿ ಶಾಸ್ತ್ರದೃಷ್ಟೇನ ಕರ್ಮಣಾ ।
ಕಥಂ ಪ್ರಾಪ್ಸ್ಯಾಮ್ಯಹಂ ಕಾಮಂ ಬುದ್ಧಿರತ್ರ ವಿಚಾರ್ಯತಾಮ್ ॥

ತತಃ ಸಾಧ್ವಿತಿ ತದ್ವಾಕ್ಯಂ ಬ್ರಾಹ್ಮಣಾಃ ಪ್ರತ್ಯಪೂಜಯನ್ ।
ವಸಿಷ್ಠಪ್ರಮುಖಾಃ ಸರ್ವೇ ಪಾರ್ಥಿವಸ್ಯ ಮುಖಾಚ್ಚ್ಯುತಮ್ ॥

---

ಮಾಡಬೇಕೆಂದು ನಿರ್ಣಯಿಸಿದನು. ಅನಂತರ ಸುಮಂತ್ರನನ್ನು ಕುರಿತು ರಾಜಗುರುಗಳಾದ ಎಲ್ಲಾ ಪುರೋಹಿತರನ್ನು ಕರೆತರಬೇಕೆಂದು ಹೇಳಲು, ಅವನು ವೇದಪಾರಂಗತರಾದ ಅವರೆಲ್ಲರನ್ನು ಆದರದಿಂದ ಕರೆತಂದನು (೩-೫). ಸುಯಜ್ಞ, ವಾಮದೇವ, ಜಾಬಾಲಿ, ಕಾಶ್ಯಪ, ವಸಿಷ್ಠರೇ ಮೊದಲಾದ ಆ ಬ್ರಾಹ್ಮಣೋತ್ತಮರೆಲ್ಲರನ್ನೂ ಸತ್ಕರಿಸಿ, ದಶರಥನು ಧರ್ಮಾರ್ಥಯುಕ್ತವಾದ ಈ ಮಾತನ್ನು ವಿನಯದಿಂದ ಹೇಳಿದನು: "ಪೂಜ್ಯರೆ, ಮಕ್ಕಳಿಗಾಗಿ ಹಂಬಲಿಸುತ್ತಿರುವ ನನಗೆ ಸುಖವೆಂಬುದೇ ಇಲ್ಲವಾಗಿದೆ. ಆದ್ದರಿಂದ ಅಶ್ವಮೇಧ ಯಾಗವನ್ನು ಮಾಡಬೇಕೆಂದು ನನಗೆ ಅಪೇಕ್ಷೆಯಾಗಿದೆ. ಶಾಸ್ತ್ರಪೂರ್ವಕವಾಗಿ ಈ ಕಾರ್ಯವನ್ನು ನಾನು ಮಾಡಬೇಕು. ನನ್ನ ಇಷ್ಟವು ನೆರವೇರುವ ಬಗೆ ಹೇಗೆ ಎಂಬುದನ್ನು ತಾವು ಆಲೋಚಿಸಬೇಕು" (೬-೯). ಆಗ ವಸಿಷ್ಠರೇ ಮೊದಲಾದ ಬ್ರಾಹ್ಮಣರೆಲ್ಲರೂ ರಾಜನು ಹೇಳಿದ ಮಾತು ಬಹಳ ಯೋಗ್ಯ

**ಊಚುಶ್ಚ ಪರಮಪ್ರೀತಾಃ ಸರ್ವೇ ದಶರಥಂ ವಚಃ ।**
**ಸರಯ್ವಾಶ್ಚೋತ್ತರೇ ತೀರೇ ಯಜ್ಞಭೂಮಿರ್ವಿಧೀಯತಾಮ್ ॥**

**ಸಂಭಾರಾಃ ಸಂಭ್ರಿಯಂತಾಂ ತೇ ತುರಗಶ್ಚ ವಿಮುಚ್ಯತಾಮ್ ।**
**ಸರ್ವಥಾ ಪ್ರಾಪ್ಸ್ಯಸೇ ಪುತ್ರಾನಭಿಪ್ರೇತಾಂಶ್ಚ ಪಾರ್ಥಿವ ॥ ೧೨**

**ಯಸ್ಯ ತೇ ಧಾರ್ಮಿಕೀ ಬುದ್ಧಿರಿಯಂ ಪುತ್ರಾರ್ಥಮಾಗತಾ ।**
**ತತಸ್ತುಷ್ಟೋಽಭವದ್ರಾಜಾ ಶ್ರುತ್ವೈತದ್ ದ್ವಿಜಭಾಷಿತಮ್ ॥ ೧೩**

**ಅಮಾತ್ಯಾಂಶ್ಚಾಬ್ರವೀದ್ರಾಜಾ ಹರ್ಷಪರ್ಯಾಕುಲೇಕ್ಷಣಃ ।**
**ಸಂಭಾರಾಃ ಸಂಭ್ರಿಯಂತಾಂ ಮೇ ಗುರೂಣಾಂ ವಚನಾದಿಹ ॥ ೧೪**

**ಸಮರ್ಥಾಧಿಷ್ಠಿತಶ್ಚಾಶ್ವಃ ಸೋಪಾಧ್ಯಾಯೋ ವಿಮುಚ್ಯತಾಮ್ ।**
**ಸರಯ್ವಾಶ್ಚೋತ್ತರೇ ತೀರೇ ಯಜ್ಞಭೂಮಿರ್ವಿಧೀಯತಾಮ್ ॥**

---

ವಾಗಿದೆಯೆಂದು ಮೆಚ್ಚಿದರು ಅವರು ಸಂತುಷ್ಟರಾಗಿ ದಶರಥನನ್ನು ಕುರಿತು "ಮಹಾರಾಜ, ಯಾಗಕ್ಕೆ ಬೇಕಾದ ಸಾಮಗ್ರಿಗಳನ್ನು ಸಿದ್ಧಪಡಿಸಿ ಯಜ್ಞಾಶ್ವವನ್ನು ವಿಜಯಯಾತ್ರೆಗಾಗಿ ಬಿಡೋಣವಾಗಲಿ ಸರಯೂನದಿಯ ಉತ್ತರತೀರದಲ್ಲಿ ಯಾಗಶಾಲೆಯ ನಿರ್ಮಾಣವಾಗಲಿ ನಿನಗೆ ಪುತ್ರರು ಜನಿಸುವರು ಇಷ್ಟಾರ್ಥವು ನೆರವೇರುವುದು ಸಂದೇಹವಿಲ್ಲ. ಪುತ್ರಾರ್ಥವಾಗಿ ಈ ಧರ್ಮಕಾರ್ಯವನ್ನು ಮಾಡಬೇಕೆಂಬ ನಿನ್ನ ಉದ್ದೇಶವು ಪ್ರಶಂಸನೀಯ" ಎಂದರು. ಅದನ್ನು ಕೇಳಿ ರಾಜನು ಆನಂದದಿಂದ ಹಿಗ್ಗಿದನು (೧೦-೧೩). ಅವನ ಕಣ್ಣುಗಳಲ್ಲಿ ಆನಂದಬಾಷ್ಪವು ತುಂಬಿತು ತನ್ನ ಮಂತ್ರಿಗಳನ್ನು ಕರೆದು "ನನ್ನ ಗುರುಗಳು ಅಪ್ಪಣೆಮಾಡಿದಂತೆ ಎಲ್ಲ ಯಜ್ಞಸಾಮಗ್ರಿಗಳನ್ನೂ ಸಿದ್ಧಪಡಿಸಿರಿ. ಸಮರ್ಥರಾದ ರಾಜಪುತ್ರರ ಕಾವಲಿನಲ್ಲಿ ಯಜ್ಞಾಶ್ವವು ಬಿಡಲ್ಪಡಲಿ. ಅದರೊಡನೆ ಅಧ್ವರ್ಯು ಮೊದಲಾದ ಋತ್ವಿಜರೂ*

* 'ಚತುಃಶತಾ ರಕ್ಷಂತಿ' ಎಂಬ ಶ್ರುತಿಯ ವಚನದಂತೆ ನಾನೂರು ಮಂದಿ ಕ್ಷತ್ರಿಯರು ಯಜ್ಞಾಶ್ವವನ್ನು ರಕ್ಷಿಸುತ್ತಿರಬೇಕು. 'ಅಶ್ವಸ್ಯ ಮೇಧ್ಯಸ್ಯ ಪದೇ ಪದೇ ಜುಹೋತಿ' ಎಂಬ ವಚನದಂತೆ ಹೋಮವನ್ನು ನಿರ್ವಹಿಸಲು ಅಶ್ವದೊಡನೆ ಋತ್ವಿಜರೂ ಹೋಗಬೇಕು.

**ಶಾಂತಯಶ್ಚಾಪಿ ವರ್ಧಂತಾಂ ಯಥಾಕಲ್ಪಂ ಯಥಾವಿಧಿ ।**
**ಶಕ್ಯಃ ಪ್ರಾಪ್ತುಮಯಂ ಯಜ್ಞಃ ಸರ್ವೇಣಾಪಿ ಮಹೀಕ್ಷಿತಾ ॥ ೧೬**
**ನಾಪರಾಧೋ ಭವೇತ್ ಕಷ್ಟೋ ಯದ್ಯಸ್ಮಿನ್ ಕ್ರತುಸತ್ತಮೇ ।**
**ಛಿದ್ರಂ ಹಿ ಮೃಗಯಂತೇಽತ್ರ ವಿದ್ವಾಂಸೋ ಬ್ರಹ್ಮರಾಕ್ಷಸಾಃ ॥ ೧೭**
**ನಿಹತಸ್ಯ ಚ ಯಜ್ಞಸ್ಯ ಸದ್ಯಃ ಕರ್ತಾ ವಿನಶ್ಯತಿ ।**
**ತದ್ಯಥಾ ವಿಧಿಪೂರ್ವಂ ಮೇ ಕ್ರತುರೇಷ ಸಮಾಪ್ಯತೇ ॥ ೧೮**
**ತಥಾ ವಿಧಾನಂ ಕ್ರಿಯತಾಂ ಸಮರ್ಥಾಃ ಕರಣೇಷ್ವಿಹ ।**
**ತಥೇತಿ ಚಾಬ್ರುವನ್ ಸರ್ವೇ ಮಂತ್ರಿಣಃ ಪ್ರತಿಪೂಜಿತಾಃ ॥ ೧೯**
**ಪಾರ್ಥಿವೇಂದ್ರಸ್ಯ ತದ್ವಾಕ್ಯಂ ಯಥಾಜ್ಞಪ್ತಂ ನಿಶಮ್ಯ ತೇ ।**
**ತಥಾ ದ್ವಿಜಾಸ್ತೇ ಧರ್ಮಜ್ಞಾ ವರ್ಧಯಂತೋ ನೃಪೋತ್ತಮಮ್॥**
**ಅನುಜ್ಞಾತಾಸ್ತತಃ ಸರ್ವೇ ಪುನರ್ಜಗ್ಮುರ್ಯಥಾಗತಮ್ ।**
**ವಿಸರ್ಜಯಿತ್ವಾ ತಾನ್ ವಿಪ್ರಾನ್ ಸಚಿವಾನಿದಮಬ್ರವೀತ್ ॥ ೨೧**

---

ಹೋಗಲಿ ಸರಯೂನದಿಯ ಉತ್ತರತೀರದಲ್ಲಿ* ಯಜ್ಞಭೂಮಿಯ ನಿರ್ಮಾಣವಾಗಬೇಕು (೧೪-೧೫). ಶಾಸ್ತ್ರೋಕ್ತವಾಗಿ ಶಾಂತಿಕರ್ಮಗಳನ್ನು ನಡೆಸಬೇಕು ಅಶ್ವಮೇಧಯಾಗವನ್ನು ನಡೆಸಲು ಎಲ್ಲ ರಾಜರಿಗೂ ಶಕ್ಯವಾದೀತೆ? ಇದರಲ್ಲಿ ಮಹಾಪ್ರಾಯಶ್ಚಿತ್ತಾರ್ಹವಾದ ಮಂತ್ರಕ್ರಿಯಾಲೋಪಗಳು ಆಗುವ ಸಂಭವ ಹೆಚ್ಚು. ಅದಿಲ್ಲದಿದ್ದರೆ ಯಾವ ರಾಜನಾದರೂ ಈ ಯಾಗವನ್ನು ನಡೆಸಿಯಾನು ವಿದ್ವಾಂಸರಾದ ಬ್ರಹ್ಮರಾಕ್ಷಸರು ಇದರಲ್ಲಿ ಲೋಪವನ್ನೇ ಹುಡುಕುತ್ತಾ ಇರುತ್ತಾರೆ (೧೬-೧೭). ಯಜ್ಞವನ್ನು ವಿಧಿವತ್ತಾಗಿ ಮಾಡದೆ ಕೆಡಿಸಿದರೆ ಯಜಮಾನನು ನಾಶವಾಗುತ್ತಾನೆ ಆದ್ದರಿಂದ ನನಗೆ ಈ ಯಾಗವು ವಿಧಿಪೂರ್ವಕವಾಗಿ ಸಮಾಪ್ತಿಯಾಗುವಂತೆ ಏರ್ಪಡಿಸಿರಿ ಈ ಕೆಲಸದಲ್ಲಿ ನೀವು ಸಮರ್ಥರು" ಎಂದನು ಆಗ ಮಂತ್ರಿಗಳೆಲ್ಲರೂ ಹಾಗೆಯೇ ಆಗಲೆಂದು ಒಪ್ಪಿದರು ಮಹಾರಾಜನ ಈ ಮಾತುಗಳನ್ನೆಲ್ಲಾ ಆಲೈಸಿದ ವಸಿಷ್ಠಾದಿಗಳು ಅವನಿಗೆ ಆಶೀರ್ವಾದಮಾಡಿ ಅವನ ಅನುಮತಿಯಂತೆ ಹೊರಟುಹೋದರು (೧೮-೨೦) ಅನಂತರ ದಶರಥನು

* ಸರಯೂನದಿಯ ದಕ್ಷಿಣತೀರದಲ್ಲಿ ಅಯೋಧ್ಯಾನಗರವಿತ್ತು.

ಋತ್ವಿಗ್ಭಿರುಪದಿಷ್ಟೋಽಯಂ ಯಥಾವತ್ ಕ್ರತುರಾಪ್ಯತಾಮ್ ।
ತಾವದ್ಯೋಯಂ ಚ ಭವಥ ಸಮರ್ಥಾಃ ಕರಣೇಷ್ವಿಹ ॥ ೨೨

ಇತ್ಯುಕ್ತ್ವಾ ನೃಪಶಾರ್ದೂಲಃ ಸಚಿವಾನ್ ಸಮುಪಸ್ಥಿತಾನ್ ।
ವಿಸರ್ಜಯಿತ್ವಾ ಸ್ವಂ ವೇಶ್ಮ ಪ್ರವಿವೇಶ ಮಹಾದ್ಯುತಿಃ ॥ ೨೩

ತತಃ ಸ ಗತ್ವಾ ತಾಃ ಪತ್ನೀರ್ನರೇಂದ್ರೋ ಹೃದಯಪ್ರಿಯಾಃ ।
ಉವಾಚ ದೀಕ್ಷಾಂ ವಿಶತ ಯಕ್ಷ್ಯೇಽಹಂ ಸುತಕಾರಣಾತ್ ॥ ೨೪

ತಾಸಾಂ ತೇನಾತಿಕಾಂತೇನ ವಚನೇನ ಸುವರ್ಚಸಾಮ್ ।
ಮುಖಪದ್ಮಾನ್ಯಶೋಭಂತ ಪದ್ಮಾನೀವ ಹಿಮಾತ್ಯಯೇ ॥ ೨೫

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಅಷ್ಟಮಃ ಸರ್ಗಃ



ಮತ್ತೆ ಮಂತ್ರಿಗಳನ್ನುದ್ದೇಶಿಸಿ "ಈ ಋತ್ವಿಜರು ಹೇಳುವ ಕ್ರಮದಲ್ಲಿ ಅಶ್ವಮೇಧ ಯಾಗದ ಕಾರ್ಯಭಾರವನ್ನು ನಡೆಸಬೇಕು" ಎಂದು ಹೇಳಿ ಅವರನ್ನು ಬೀಳ್ಕೊಟ್ಟು ತನ್ನ ಅರಮನೆಯನ್ನು ಪ್ರವೇಶಿಸಿದನು (೨೧-೨೩). ಅಲ್ಲಿ ದಶರಥನು ತನ್ನ ಪತ್ನಿಯರನ್ನು ಕುರಿತು "ನಾನು ಪುತ್ರಾರ್ಥವಾಗಿ ಅಶ್ವಮೇಧವನ್ನು ಆಚರಿಸಬೇಕೆಂದು ಸಂಕಲ್ಪಿಸಿದ್ದೇನೆ ನೀವು ಅದಕ್ಕಾಗಿ ದೀಕ್ಷೆಯನ್ನು ವಹಿಸಬೇಕು" ಎಂದನು. ಆ ರಮಣಿಯರು ಅತ್ಯಂತ ಪ್ರಿಯವಾದ ಈ ಮಾತನ್ನು ಕೇಳಿ ಹಿಗ್ಗಿದರು. ಹಿಮವು ಕಳೆದಾಗ ವಸಂತಕಾಲದಲ್ಲಿ ತಾವರೆಗಳು ಶೋಭಿಸುವಂತೆ ಅವರ ಮುಖಗಳು ಕಳೆಯೇರಿದವು (೨೪-೨೫).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಎಂಟನೆಯ ಸರ್ಗ



## ನವಮಃ ಸರ್ಗಃ

ಋಷ್ಯಶೃಂಗೋಪಾಖ್ಯಾನಮ್

ಏತಚ್ಛ್ರುತ್ವಾ ರಹಃ ಸೂತೋ ರಾಜಾನಮಿದಮಬ್ರವೀತ್ ।
ಶ್ರೂಯತಾಂ ತತ್ ಪುರಾವೃತ್ತಂ ಪುರಾಣೇ ಚ ಮಯಾ ಶ್ರುತಮ್

ಋತ್ವಿಗ್ಭಿರುಪದಿಷ್ಟೋಽಯಂ ಪುರಾವೃತ್ತೋ ಮಯಾ ಶ್ರುತಃ ।
ಸನತ್ಕುಮಾರೋ ಭಗವಾನ್ ಪೂರ್ವಂ ಕಥಿತವಾನ್ ಕಥಾಮ್ ॥ ೨

ಋಷೀಣಾಂ ಸಂನಿಧೌ ರಾಜಂಸ್ತವ ಪುತ್ರಾಗಮಂ ಪ್ರತಿ ।
ಕಾಶ್ಯಪಸ್ಯ ತು ಪುತ್ರೋಽಸ್ತಿ ವಿಭಾಂಡಕ ಇತಿ ಶ್ರುತಃ ॥ ೩

ಋಷ್ಯಶೃಂಗ ಇತಿ ಖ್ಯಾತಸ್ತಸ್ಯ ಪುತ್ರೋ ಭವಿಷ್ಯತಿ ।
ಸ ವನೇ ನಿತ್ಯಸಂವೃದ್ಧೋ ಮುನಿರ್ವನಚರಃ ಸದಾ ॥ ೪

## ಸರ್ಗ ೯

ದಶರಥಸುಮಂತ್ರರ ಸಂವಾದ ; ಋಷ್ಯಶೃಂಗರ ಕಥೆ.

ದಶರಥನ ನಿಶ್ಚಯವನ್ನು ತಿಳಿದು ಸಾರಥಿಯಾದ* ಸುಮಂತ್ರನು ಅವನ ಸನ್ನಿಧಿಗೆ ಹೋಗಿ ಏಕಾಂತದಲ್ಲಿ ಹೀಗೆ ಹೇಳಿದನು: “ಮಹಾರಾಜ, ಪುತ್ರಾರ್ಥವಾಗಿ ಅಶ್ವಮೇಧಯಾಗವನ್ನು ಮಾಡಬೇಕೆಂದು ಋತ್ವಿಜರು ಹೇಳಿದರಷ್ಟೆ. ಇದರ ವಿಷಯದಲ್ಲಿ ಒಂದು ಕಥೆಯನ್ನು ನಾನು ಕೇಳಿದ್ದೇನೆ. ಇದನ್ನು ಭಗವಾನ್ ಸನತ್ಕುಮಾರರು ಹೇಳಿದ್ದಾರೆ. ಒಂದುಸಲ ಋಷಿಗಳೆದುರಿಗೆ ನಿನಗೆ ಸಂತಾನಪ್ರಾಪ್ತಿಯಾಗುವ ವಿಷಯವು ಪ್ರಸ್ತುತವಾಯಿತು. ಆಗ ಸನತ್ಕುಮಾರರು ಹೀಗೆಂದರು (೧-೨). ‘ಕಾಶ್ಯಪನಿಗೆ ವಿಭಾಂಡಕನೆಂಬ ಪುತ್ರನಿದ್ದಾನೆ. ಆತನಿಗೆ ಋಷ್ಯಶೃಂಗನೆಂದು† ಪ್ರಸಿದ್ಧನಾದ ಪುತ್ರನೊಬ್ಬನು ಜನಿಸುವನು. ಅವನು ಅರಣ್ಯದಲ್ಲಿಯೇ ಪೋಷಿಸಲ್ಪಟ್ಟು ಯಾವಾಗಲೂ ಅಲ್ಲಿಯೇ ಸಂಚರಿಸುತ್ತ ತಪಸ್ವಿಯಾಗಿರುವನು. ಆ ಋಷ್ಯ

* ಸುಮಂತ್ರನು ದಶರಥನ ಮಂತ್ರಿ. ಅವನು ಆಪ್ತನಾದ್ದರಿಂದ ಸಾರಥಿಯ ಕೆಲಸವನ್ನೂ ಮಾಡುತ್ತಿದ್ದನು.

† ಋಷ್ಯಶೃಂಗ, ಋಶ್ಯಶೃಂಗ—ಎಂಬ ಎರಡು ಪಾಠಗಳೂ ಉಂಟು.

ನಾನ್ಯಂ ಜಾನಾತಿ ವಿಪ್ರೇಂದ್ರೋ ನಿತ್ಯಂ ಪಿತ್ರನುವರ್ತನಾತ್ ।
ದ್ವೈವಿಧ್ಯಂ ಬ್ರಹ್ಮಚರ್ಯಸ್ಯ ಭವಿಷ್ಯತಿ ಮಹಾತ್ಮನಃ ॥ ೫
ಲೋಕೇಷು ಪ್ರಥಿತಂ ರಾಜನ್ ವಿಪ್ರೈಶ್ಚ ಕಥಿತಂ ಸದಾ ।
ತಸ್ಯೈವಂ ವರ್ತಮಾನಸ್ಯ ಕಾಲಃ ಸಮಭಿವರ್ತತ ॥ ೬
ಅಗ್ನಿಂ ಶುಶ್ರೂಷಮಾಣಸ್ಯ ಪಿತರಂ ಚ ಯಶಸ್ವಿನಮ್ ।
ಏತಸ್ಮಿನ್ನೇವ ಕಾಲೇ ತು ರೋಮಪಾದಃ ಪ್ರತಾಪವಾನ್ ॥ ೭
ಅಂಗೇಷು ಪ್ರಥಿತೋ ರಾಜಾ ಭವಿಷ್ಯತಿ ಮಹಾಬಲಃ ।
ತಸ್ಯ ವ್ಯತಿಕ್ರಮಾದ್ರಾಜ್ಞೋ ಭವಿಷ್ಯತಿ ಸುದಾರುಣಾ ॥ ೮
ಅನಾವೃಷ್ಟಿಃ ಸುಘೋರಾ ವೈ ಸರ್ವಭೂತಭಯಾವಹಾ ।
ಅನಾವೃಷ್ಟ್ಯಾಂ ತು ವೃತ್ತಾಯಾಂ ರಾಜಾ ದುಃಖಸಮನ್ವಿತಃ ॥ ೯
ಬ್ರಾಹ್ಮಣಾನ್ ಶ್ರುತವೃದ್ಧಾಂಶ್ಚ ಸಮಾನೀಯ ಪ್ರವಕ್ಷ್ಯತಿ ।
ಭವಂತಃ ಶ್ರುತಧರ್ಮಾಣೋ ಲೋಕಚಾರಿತ್ರವೇದಿನಃ ॥ ೧೦
ಸಮಾದಿಶಂತು ನಿಯಮಂ ಪ್ರಾಯಶ್ಚಿತ್ತಂ ಯಥಾ ಭವೇತ್ ।
ಇತ್ಯುಕ್ತಾಸ್ತೇ ತತೋ ರಾಜ್ಞಾ ಸರ್ವೇ ಬ್ರಾಹ್ಮಣಸತ್ತಮಾಃ ॥ ೧೧

---

ಶೃಂಗನಿಗೆ ತಂದೆಯ ಶುಶ್ರೂಷೆಯೊಂದನ್ನು ಬಿಟ್ಟು ಹೊರಗಿನ ವ್ಯವಹಾರವೇನೂ ತಿಳಿಯದು (೩-೪) ಆ ಮಹಾತ್ಮನ ಬ್ರಹ್ಮಚರ್ಯವು ಎರಡು ವಿಧವಾಗಿರುತ್ತದೆ. ಮೇಖಲಾಧಾರಣ ಮೊದಲಾದವುಗಳೊಡನೆ ಇಂದ್ರಿಯಗಳನ್ನು ನಿಗ್ರಹಿಸಬೇಕೆಂದು ಲೋಕದಲ್ಲಿ ಪ್ರಸಿದ್ಧವಾದ ಬ್ರಹ್ಮಚರ್ಯ ಒಂದು, ಸ್ಮೃತಿಕಾರರು ಹೇಳಿರುವ ಋತುಗಮನರೂಪವಾದ ಬ್ರಹ್ಮಚರ್ಯ ಇನ್ನೊಂದು (೫-೬) ಅಗ್ನಿಯನ್ನೂ ತಂದೆಯನ್ನೂ ಸೇವಿಸುತ್ತ ಮೊದಲನೆಯ ಬ್ರಹ್ಮಚರ್ಯದಲ್ಲಿ ಇರುವಾಗ ಕೆಲವು ಕಾಲ ಕಳೆಯುವುದು. ಇದೇ ಸಮಯದಲ್ಲಿ ರೋಮಪಾದನೆಂಬ ಪ್ರತಾಪಶಾಲಿಯು ಅಂಗದೇಶಕ್ಕೆ ಅಧಿಪತಿಯಾಗಿರುವನು. ಅವನು ರಾಜಧರ್ಮದಿಂದ ತಪ್ಪಿ ನಡೆದ ಕಾರಣವಾಗಿ ಅವನ ದೇಶದಲ್ಲಿ ಭೀಕರವಾದ ಅನಾವೃಷ್ಟಿಯು ತಲೆದೋರುವುದು (೭-೮). ಅದರಿಂದ ದುಃಖಿತನಾಗಿ ರೋಮಪಾದನು ಜ್ಞಾನವೃದ್ಧರಾದ ಬ್ರಾಹ್ಮಣರನ್ನು ಕರೆಯಿಸಿ ಹೇಳುವನು: "ಪೂಜ್ಯರೆ, ನೀವು ಧರ್ಮವನ್ನೂ ಲೋಕಾಚಾರವನ್ನೂ ಬಲ್ಲವರು. ಈಗ ನಾನು ಯಾವ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳ

ವಕ್ಷ್ಯಂತಿ ತೇ ಮಹೀಪಾಲಂ ಬ್ರಾಹ್ಮಣಾ ವೇದಪಾರಗಾಃ ।
ವಿಭಾಂಡಕಸುತಂ ರಾಜನ್ ಸರ್ವೋಪಾಯೈರಿಹಾನಯ ॥ ೧೨

ಆನಾಯ್ಯ ಚ ಮಹೀಪಾಲ ಋಷ್ಯಶೃಂಗಂ ಸುಸತ್ಕೃತಮ್ ।
ಪ್ರಯಚ್ಛ ಕನ್ಯಾಂ ಶಾಂತಾಂ ವೈ ವಿಧಿನಾ ಸುಸಮಾಹಿತಃ ॥ ೧೩

ತೇಷಾಂ ತು ವಚನಂ ಶ್ರುತ್ವಾ ರಾಜಾ ಚಿಂತಾಂ ಪ್ರಪತ್ಸ್ಯತೇ ।
ಕೇನೋಪಾಯೇನ ವೈ ಶಕ್ಯಮಿಹಾನೇತುಂ ಸ ವೀರ್ಯವಾನ್ ॥

ತತೋ ರಾಜಾ ವಿನಿಶ್ಚಿತ್ಯ ಸಹ ಮಂತ್ರಿಭಿರಾತ್ಮವಾನ್ ।
ಪುರೋಹಿತಮಮಾತ್ಯಾಂಶ್ಚ ಪ್ರೇಷಯಿಷ್ಯತಿ ಸತ್ಕೃತಾನ್ ॥ ೧೫

ತೇ ತು ರಾಜ್ಞೋ ವಚಃ ಶ್ರುತ್ವಾ ವ್ಯಥಿತಾವನತಾನನಾಃ ।
ನ ಗಚ್ಛೇಮ ಋಷೇರ್ಭೀತಾ ಅನುನೇಷ್ಯಂತಿ ತಂ ನೃಪಮ್ ॥ ೧೬

ವಕ್ಷ್ಯಂತಿ ಚಿಂತಯಿತ್ವಾ ತೇ ತಸ್ಯೋಪಾಯಾಂಶ್ಚ ತತ್ಕ್ಷಮಾನ್ ।
ಆನೇಷ್ಯಾಮೋ ವಯಂ ವಿಪ್ರಂ ನ ಚ ದೋಷೋ ಭವಿಷ್ಯತಿ ॥ ೧೭

---

ಬೇಕೆಂಬುದನ್ನು ತಿಳಿಸಿರಿ" (೯-೧೧) ಆಗ ವೇದಪಾರಂಗತರಾದ ಆ ಬ್ರಾಹ್ಮಣಶ್ರೇಷ್ಠರು ಹೋಮವಾದನನ್ನು ಕುರಿತು "ಮಹಾರಾಜ, ವಿಭಾಂಡಕಸುತನಾದ ಋಷ್ಯಶೃಂಗನನ್ನು ಇಲ್ಲಿಗೆ ಬರಮಾಡಿಕೊಂಡು ಅವನಿಗೆ ನಿನ್ನ ಕನ್ಯೆಯಾದ ಶಾಂತೆಯನ್ನು ಕೊಟ್ಟು ವಿಧಿಪೂರ್ವಕವಾಗಿ ವಿವಾಹವನ್ನು ಮಾಡು" ಎನ್ನುವರು ಆಗ ಋಷ್ಯಶೃಂಗನನ್ನು ಬರಮಾಡಿಕೊಳ್ಳುವುದು ಹೇಗೆ?—ಎಂದು ರಾಜನಿಗೆ ಚಿಂತೆಯಾಗುವುದು (೧೨-೧೪). ಕಡೆಗೆ ಅವನು ಮಂತ್ರಿಗಳೊಡನೆ ಆಲೋಚನೆಮಾಡಿ ಪುರೋಹಿತನನ್ನೂ ಮಂತ್ರಿಗಳನ್ನೂ ಋಷ್ಯಶೃಂಗನನ್ನು ಕರೆತರುವುದಕ್ಕಾಗಿ ಕಳಿಸುವನು ಅವರು ರಾಜನ ಮಾತನ್ನು ಕೇಳಿ ವ್ಯಥೆಗೊಳ್ಳುವರು ರಾಜನೆದುರಿಗೆ ತಲೆತಗ್ಗಿಸಿಕೊಂಡು "ನಾವು ಋಷ್ಯಶೃಂಗನನ್ನು ಕರೆತರಲಾರೆವು ನಮಗೆ ಭಯವಾಗುತ್ತದೆ. ಅದಕ್ಕೆ ಬೇರೆ ಉಪಾಯಗಳಿವೆ. ಅಂಥ ಉಪಾಯಗಳಿಂದ ಬೇಕಾದರೆ ಕರೆತರಬಲ್ಲೆವು ಅದರಲ್ಲಿ ದೋಷವೇನೂ ಇಲ್ಲ" ಎನ್ನುವರು (೧೫-೧೭).

ಏವಮಂಗಾಧಿಪೇನೈವ ಗಣಿಕಾಭಿರ್ಋಷೇಃ ಸುತಃ ।
ಆನೀತೋಽವರ್ಷಯದ್ ದೇವಃ ಶಾಂತಾ ಚಾಸ್ಮೈ ಪ್ರದೀಯತೇ ॥

ಋಷ್ಯಶೃಂಗಸ್ತು ಜಾಮಾತಾ ಪುತ್ರಾಂಸ್ತವ ವಿಧಾಸ್ಯತಿ ।
ಸನತ್ಕುಮಾರಕಥಿತಮೇತಾವದ್ ವ್ಯಾಹೃತಂ ಮಯಾ ॥ ೧೯

ಅಥ ಹೃಷ್ಟೋ ದಶರಥಃ ಸುಮಂತ್ರಂ ಪ್ರತ್ಯಭಾಷತ ।
ಯಥರ್ಷ್ಯಶೃಂಗಸ್ತ್ವಾನೀತೋ ವಿಸ್ತರೇಣ ತಥೋಚ್ಯತಾಮ್ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ನವಮಃ ಸರ್ಗಃ



ಅದಕ್ಕೆ, ರಾಜನು ಒಪ್ಪಿಕೊಳ್ಳಲು ವೇಶ್ಯೆಯರನ್ನು ಕಳಿಸಿ ಋಷ್ಯಶೃಂಗನನ್ನು ಕರೆಸುವರು. ಆಗ ದೇಶದಲ್ಲಿ ಸುವೃಷ್ಟಿಯಾಗುವುದು ಅಂಥ ಜಾಮಾತನಾದ* ಋಷ್ಯಶೃಂಗನ ಅನುಗ್ರಹದಿಂದ ದಶರಥಮಹಾರಾಜನಿಗೆ ಸಂತತಿಯಾಗುವುದು. ಮಹಾರಾಜ, ಈರೀತಿಯಾಗಿ ಸನತ್ಕುಮಾರರು ಹೇಳಿದರು" ಎಂದನು (೧೮-೧೯). ಆಗ ದಶರಥನು ಸಂತುಷ್ಟನಾಗಿ "ಸುಮಂತ್ರ, ಅನಂತರ ಋಷ್ಯಶೃಂಗನನ್ನು ಅವರು ಹೇಗೆ ಕರೆತಂದರು? ಅದರ ವಿಷಯವನ್ನು ಹೇಳು" ಎಂದನು (೨೦)

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಒಂಬತ್ತನೆಯ ಸರ್ಗ



* ರೋಮಪಾದನ ಅಳಿಯ. ದಶರಥನಿಗೆ ರೋಮಪಾದನು ಅತ್ಯಂತ ಮಿತ್ರನಾದ್ದರಿಂದ ದಶರಥನ ಅಳಿಯನೆಂದು ವ್ಯಪದೇಶವಿರಬಹುದು. ಶಾಂತಾ ಎಂಬವಳು ದಶರಥನ ಮಗಳೆಂದೂ ರೋಮಪಾದನಿಗೆ ಸಾಕುವುದಕ್ಕಾಗಿ ಕೊಟ್ಟಿದ್ದನೆಂದೂ ಕಥೆಯುಂಟು.

## ದಶಮಃ ಸರ್ಗಃ

ಋಷ್ಯಶೃಂಗಸ್ಯಾಂಗದೇಶಾನಯನಪ್ರಕಾರಃ

ಸುಮಂತ್ರಶ್ಚೋದಿತೋ ರಾಜ್ಞಾ ಪ್ರೋವಾಚೇದಂ ವಚಸ್ತದಾ ।
ಯಥರ್ಷ್ಯಶೃಂಗಸ್ತ್ವಾನೀತೋ ಯೇನೋಪಾಯೇನ ಮಂತ್ರಿಭಿಃ ॥

ತನ್ಮೇ ನಿಗದಿತಂ ಸರ್ವಂ ಶೃಣು ಮೇ ಮಂತ್ರಿಭಿಃ ಸಹ ।
ರೋಮಪಾದಮುವಾಚೇದಂ ಸಹಾಮಾತ್ಯಃ ಪುರೋಹಿತಃ ॥ ೨

ಉಪಾಯೋ ನಿರಪಾಯೋಽಯಮಸ್ಮಾಭಿರಭಿಚಿಂತಿತಃ ।
ಋಷ್ಯಶೃಂಗೋ ವನಚರಸ್ತಪಃಸ್ವಾಧ್ಯಾಯತತ್ಪರಃ ॥ ೩

ಅನಭಿಜ್ಞಃ ಸ ನಾರೀಣಾಂ ವಿಷಯಾಣಾಂ ಸುಖಸ್ಯ ಚ ।
ಇಂದ್ರಿಯಾರ್ಥೈರಭಿಮತೈರ್ನರಚಿತ್ತಪ್ರಮಾಥಿಭಿಃ ॥ ೪

ಪುರಮಾನಾಯಯಿಷ್ಯಾಮಃ ಕ್ಷಿಪ್ರಂ ಚಾಧ್ಯವಸೀಯತಾಮ್ ।
ಗಣಿಕಾಸ್ತತ್ರ ಗಚ್ಛಂತು ರೂಪವತ್ಯಃ ಸ್ವಲಂಕೃತಾಃ ॥ ೫

## ಸರ್ಗ ೧೦

ಋಷ್ಯಶೃಂಗನನ್ನು ರೋಮಪಾದನ ರಾಜ್ಯಕ್ಕೆ ಕರೆತಂದ ಬಗೆ

ಆಗ ಸುಮಂತ್ರನು ಹೀಗೆಂದನು: "ಮಹಾರಾಜ, ರೋಮಪಾದನ ಮಂತ್ರಿಗಳು ಋಷ್ಯಶೃಂಗನನ್ನು ಕರೆತಂದ ಬಗೆಯನ್ನು ಹೇಳುವೆನು, ಕೇಳು: ಪುರೋಹಿತನು ಮಂತ್ರಿಗಳೊಡನೆ ರೋಮಪಾದನನ್ನು ಉದ್ದೇಶಿಸಿ 'ಮಹಾರಾಜ, ನಾವು ಒಂದು ಉಪಾಯವನ್ನು ಆಲೋಚಿಸಿದ್ದೇವೆ. ಇದರಲ್ಲಿ ಯಾವ ಅಪಾಯವೂ ಇಲ್ಲ (೧-೨). ಋಷ್ಯಶೃಂಗನು ತಪಸ್ಸು ವೇದಾಧ್ಯಯನಗಳಲ್ಲಿ ನಿರತನಾಗಿ ಕಾಡಿನಲ್ಲಿಯೇ ಇರತಕ್ಕವನು ಅವನಿಗೆ ಹೆಂಗಸರೆಂದರೇನೆಂಬುದೇ ಗೊತ್ತಿಲ್ಲ. ವಿಷಯಸುಖವನ್ನು ಅರಿಯನು. ಆದ್ದರಿಂದ ಮನುಷ್ಯನ ಹೃದಯವನ್ನೇ ತಮ್ಮೆಡೆಗೆ ಎಳೆದು ಸೂರೆಮಾಡಬಲ್ಲ ಭೋಗಸಾಮಗ್ರಿಗಳಿಂದ ಅವನನ್ನು ಆಕರ್ಷಿಸಿ ನಗರಕ್ಕೆ ಕರೆತರುತ್ತೇವೆ ನೀನು ಒಪ್ಪಿಗೆಯನ್ನು ಕೊಡು. ರೂಪವತಿಯರಾದ ವೇಶ್ಯೆಯರು ಚೆನ್ನಾಗಿ

*

**ಪ್ರಲೋಭ್ಯ ವಿವಿಧೋಪಾಯೈರಾನೇಷ್ಯಂತೀಹ ಸತ್ಕೃತಾಃ ।**
**ಶ್ರುತ್ವಾ ತಥೇತಿ ರಾಜಾ ಚ ಪ್ರತ್ಯುವಾಚ ಪುರೋಹಿತಮ್ ॥ ೬**

**ಪುರೋಹಿತೋ ಮಂತ್ರಿಣಶ್ಚ ತಥಾ ಚಕ್ರುಶ್ಚ ತೇ ತದಾ ।**
**ವಾರಮುಖ್ಯಾಸ್ತು ತಚ್ಛ್ರುತ್ವಾ ವನಂ ಪ್ರವಿವಿಶುರ್ಮಹತ್ ॥ ೭**

**ಆಶ್ರಮಸ್ಯಾವಿದೂರೇಽಸ್ಮಿನ್ ಯತ್ನಂ ಕುರ್ವಂತಿ ದರ್ಶನೇ ।**
**ಋಷಿಪುತ್ರಸ್ಯ ಧೀರಸ್ಯ ನಿತ್ಯಮಾಶ್ರಮವಾಸಿನಃ ॥ ೮**

**ಪಿತುಃ ಸ ನಿತ್ಯಸಂತುಷ್ಟೋ ನಾತಿಚಕ್ರಾಮ ಚಾಶ್ರಮಾತ್ ।**
**ನ ತೇನ ಜನ್ಮಪ್ರಭೃತಿ ದೃಷ್ಟಪೂರ್ವಂ ತಪಸ್ವಿನಾ ॥ ೯**

**ಸ್ತ್ರೀ ವಾ ಪುಮಾನ್ ವಾ ಯಚ್ಚಾನ್ಯತ್ ಸರ್ವಂ ನಗರರಾಷ್ಟ್ರಜಮ್**
**ತತಃ ಕದಾಚಿತ್ತಂ ದೇಶಮಾಜಗಾಮ ಯದೃಚ್ಛಯಾ ॥ ೧೦**

**ವಿಭಾಂಡಕಸುತಸ್ತತ್ರ ತಾಶ್ಚಾಪಶ್ಯದ್ವರಾಂಗನಾಃ ।**
**ತಾಶ್ಚಿತ್ರವೇಷಾಃ ಪ್ರಮುದಾ ಗಾಯಂತ್ಯೋ ಮಧುರಸ್ವನೈಃ ॥ ೧೧**

---

ಸಿಂಗರಿಸಿಕೊಂಡು ಋಷ್ಯಶೃಂಗನಿದ್ದಲ್ಲಿಗೆ ಹೋಗಬೇಕು (೩-೫). ಅವರು ವಿವಿಧೋಪಾಯಗಳಿಂದ ಅವನನ್ನು ಆಕರ್ಷಿಸಿ ಇಲ್ಲಿಗೆ ಕರೆತರಬಲ್ಲರು" ಎಂದನು. ರಾಜನು ಪುರೋಹಿತನ ಮಾತಿಗೆ ಒಪ್ಪಿದನು. ಪುರೋಹಿತನೂ ಮಂತ್ರಿಗಳೂ ವೇಶ್ಯೆಯರನ್ನು ಕರೆಸಿ ಅವರು ಮಾಡಬೇಕಾದ ಉಪಾಯಗಳನ್ನು ಹೇಳಿಕೊಟ್ಟು ಋಷ್ಯಶೃಂಗನಿದ್ದಲ್ಲಿಗೆ ಕಳಿಸಿದರು ಆ ವೇಶ್ಯೆಯರು ಅರಣ್ಯಕ್ಕೆ ಹೋಗಿ ಋಷ್ಯಶೃಂಗಾಶ್ರಮಕ್ಕೆ ಸಮೀಪದಲ್ಲಿ ಇಳಿದುಕೊಂಡು ಆತನನ್ನು ಕಾಣುವುದಕ್ಕಾಗಿ ಹವಣಿಸುತ್ತಿದ್ದರು. ಋಷ್ಯಶೃಂಗನಾದರೋ ತನ್ನ ತಂದೆಯ ಲಾಲನೆಯಿಂದ ನಿತ್ಯಸಂತುಷ್ಟನಾಗಿ ಯಾವಾಗಲೂ ಆಶ್ರಮದಲ್ಲಿಯೇ ಇರುತ್ತಿದ್ದನು (೬-೮). ಅದನ್ನು ಬಿಟ್ಟು ಹೊರಗೆ ಬರುತ್ತಲೇ ಇರಲಿಲ್ಲ. ಆ ತಪಸ್ವಿಯು ಹುಟ್ಟಿದಾಗಿನಿಂದ ಸ್ತ್ರೀಯನ್ನಾಗಲಿ ಇನ್ನೊಬ್ಬ ಪುರುಷನನ್ನಾಗಲಿ ನೋಡಿದವನೇ ಅಲ್ಲ. ಆಶ್ರಮದಿಂದ ಹೊರಗೆ ನಗರದಲ್ಲಾಗಲಿ ದೇಶದಲ್ಲಾಗಲಿ ಇರತಕ್ಕ ಕುದುರೆ ಕೋಳಿ ಮುಂತಾದ ಪ್ರಾಣಿಗಳನ್ನೂ ಸಹ ನೋಡಿರಲಿಲ್ಲ. ಹೀಗಿರಲು ಒಂದುಸಲ ದೈವವಶದಿಂದ ಆ ವಿಭಾಂಡಕಪುತ್ರನು ಆಶ್ರಮದಿಂದ ಹೊರಕ್ಕೆ ಬಂದನು (೯-೧೦). ಆಗ ಈ ಸುಂದರಿಯರು ಕಾಣಿಸಿಕೊಂಡರು. ವಿಚಿತ್ರವಾದ ಉಡುಗೆತೊಡಿಗೆ

ಋಷಿಪುತ್ರಮುಪಾಗಮ್ಯ ಸರ್ವಾ ವಚನಮಬ್ರುವನ್ ।
ಕಸ್ತ್ವಂ ಕಿಂ ವರ್ತಸೇ ಬ್ರಹ್ಮನ್ ಜ್ಞಾತುಮಿಚ್ಛಾಮಹೇ ವಯಮ್
ಏಕಸ್ತ್ವಂ ವಿಜನೇ ಘೋರೇ ವನೇ ಚರಸಿ ಶಂಸ ನಃ ।
ಅದೃಷ್ಟರೂಪಾಸ್ತಾಸ್ತೇನ ಕಾಮ್ಯರೂಪಾ ವನೇ ಸ್ತ್ರಿಯಃ ॥ ೧೩
ಹಾರ್ದಾತ್ತಸ್ಯ ಮತಿರ್ಜಾತಾ ಹ್ಯಾಖ್ಯಾತುಂ ಪಿತರಂ ಸ್ವಕಮ್ ।
ಪಿತಾ ವಿಭಾಂಡಕೋಽಸ್ಮಾಕಂ ತಸ್ಯಾಹಂ ಸುತ ಔರಸಃ ॥ ೧೪
ಋಷ್ಯಶೃಂಗ ಇತಿ ಖ್ಯಾತಂ ನಾಮ ಕರ್ಮ ಚ ಮೇ ಭುವಿ ।
ಇಹಾಶ್ರಮಪದೇಽಸ್ಮಾಕಂ ಸಮೀಪೇ ಶುಭದರ್ಶನಾಃ ॥ ೧೫
ಕರಿಷ್ಯೇ ವೋಽತ್ರ ಪೂಜಾಂ ವೈ ಸರ್ವೇಷಾಂ ವಿಧಿಪೂರ್ವಕಮ್ ।
ಋಷಿಪುತ್ರವಚಃ ಶ್ರುತ್ವಾ ಸರ್ವಾಸಾಂ ಮತಿರಾಸ ವೈ ॥ ೧೬
ತದಾಶ್ರಮಪದಂ ದ್ರಷ್ಟುಂ ಜಗ್ಮುಃ ಸರ್ವಾಶ್ಚ ತೇನ ತಾಃ ।
ಆಗತಾನಾಂ ತತಃ ಪೂಜಾಮೃಷಿಪುತ್ರಶ್ಚಕಾರ ಹ ॥ ೧೭

---

ಗಳನ್ನು ಧರಿಸಿದ ಈ ತರುಣಿಯರು ಇಂಪಾಗಿ ಹಾಡುತ್ತ ಆ ಋಷಿಪುತ್ರನ ಬಳಿಗೆ ಬಂದು ಹೀಗೆಂದರು: “ಹೇ ಬ್ರಾಹ್ಮಣ, ನೀನು ಯಾರು? ಇಲ್ಲಿ ಏನು ಮಾಡುತ್ತೀಯೆ? (೧೧-೧೨). ವಿಜನವಾದ ಈ ಕಾಡಿನಲ್ಲಿ ಒಂಟಿಯಾಗಿ ಸಂಚರಿಸುತ್ತಿರುವೆಯಲ್ಲ, ಇದೇಕೆ? ನಮಗೆ ಹೇಳು” ಋಷ್ಯಶೃಂಗನು ಸ್ತ್ರೀಯರ ಸುಂದರರೂಪವನ್ನೇ ನೋಡಿರಲಿಲ್ಲ. ಕಾಡಿನಲ್ಲಿ ಅವರನ್ನು ಕಂಡಾಗ ಒಂದು ಬಗೆಯ ಸ್ನೇಹವು ಹೃದಯದಲ್ಲಿ ಅಂಕುರಿಸಲು, ತಂದೆ ಮೊದಲಾದ ತನ್ನ ವಿಷಯವನ್ನು ಹೇಳಬೇಕೆಂದು ಮನಸ್ಸಾಯಿತು ಆತನು “ನನ್ನ ತಂದೆ ವಿಭಾಂಡಕಮುನಿ ನಾನು ಆತನ ಮಗ. ನನ್ನ ಹೆಸರು ಋಷ್ಯಶೃಂಗ (೧೩-೧೪). ನನ್ನ ಕೆಲಸ ಗೊತ್ತೇ ಇದೆ—ತಪಸ್ಸು ಮಾಡುವುದು ಎಲೈ ಸೌಮ್ಯರ, ಸಮೀಪದಲ್ಲಿಯೇ ನಮ್ಮ ಆಶ್ರಮವಿದೆ. (ನೀವು ಅಲ್ಲಿಗೆ ಬಂದರೆ) ವಿಧಿಪೂರ್ವಕವಾಗಿ ನಿಮ್ಮನ್ನು ಸತ್ಕರಿಸುವೆನು” ಎಂದು ನುಡಿದನು ಋಷಿಪುತ್ರನ ಮಾತನ್ನು ಕೇಳಿ ಈ ಸ್ತ್ರೀಯರು ಆಶ್ರಮವನ್ನು ನೋಡಬೇಕೆಂಬ ಅಪೇಕ್ಷೆಯಿಂದ ಅಲ್ಲಿಗೆ ಹೋದರು (೧೫-೧೬). ಆಗ ಋಷ್ಯಶೃಂಗನು ಆ ವೇಶ್ಯೆಯರಿಗೆ ‘ಇದು ಅರ್ಘ್ಯ, ಇದು ಪಾದ್ಯ, ಇದು

ಇದಮರ್ಘ್ಯಮಿದಂ ಪಾದ್ಯಮಿದಂ ಮೂಲಮಿದಂ ಫಲಮ್ ।
ಪ್ರತಿಗೃಹ್ಯ ತು ತಾಂ ಪೂಜಾಂ ಸರ್ವಾ ಏವ ಸಮುತ್ಸುಕಾಃ ॥ ೧೮

ಋಷೇರ್ಭೀತಾಸ್ತು ಶೀಘ್ರಂ ತಾ ಗಮನಾಯ ಮತಿಂ ದಧುಃ ।
ಅಸ್ಮಾಕಮಪಿ ಮುಖ್ಯಾನಿ ಫಲಾನೀಮಾನಿ ವೈ ದ್ವಿಜ ॥ ೧೯

ಗೃಹಾಣ ಪ್ರತಿ ಭದ್ರಂ ತೇ ಭಕ್ಷಯಸ್ವ ಚ ಮಾ ಚಿರಮ್ ।
ತತಸ್ತಾಸ್ತಂ ಸಮಾಲಿಂಗ್ಯ ಸರ್ವಾ ಹರ್ಷಸಮನ್ವಿತಾಃ ॥ ೨೦

ಮೋದಕಾನ್ ಪ್ರದದುಸ್ತಸ್ಮೈ ಭಕ್ಷ್ಯಾಂಶ್ಚ ವಿವಿಧಾನ್ ಶುಭಾನ್ ।
ತಾನಿ ಚಾಸ್ವಾದ್ಯ ತೇಜಸ್ವೀ ಫಲಾನೀತಿ ಸ್ಮ ಮನ್ಯತೇ ॥ ೨೧

ಅನಾಸ್ವಾದಿತಪೂರ್ವಾಣಿ ವನೇ ನಿತ್ಯನಿವಾಸಿನಾ ।
ಆಪೃಚ್ಛ್ಯ ಚ ತದಾ ವಿಪ್ರಂ ವ್ರತಚರ್ಯಾಂ ನಿವೇದ್ಯ ಚ ॥ ೨೨

ಗಚ್ಛಂತಿ ಸ್ಮಾಪದೇಶಾತ್ತಾ ಭೀತಾಸ್ತಸ್ಯ ಪಿತುಃ ಸ್ತ್ರಿಯಃ ।
ಗತಾಸು ತಾಸು ಸರ್ವಾಸು ಕಾಶ್ಯಪಸ್ಯಾತ್ಮಜೋ ದ್ವಿಜಃ ॥ ೨೩

---

ಮೂಲ, ಇದು ಫಲ' ಎಂದು ಹೇಳುತ್ತಾ ಅವೆಲ್ಲವನ್ನೂ ಕೊಟ್ಟು ಉಪಚರಿಸಿದನು ಆ ತರುಣಿಯರು ಕುತೂಹಲದಿಂದ ಅವೆಲ್ಲವನ್ನೂ ಸ್ವೀಕರಿಸಿದರು ವಿಭಾಂಡಕಮುನಿಯು ಎಲ್ಲಿ ಬಂದುಬಿಡುವನೋ ಎಂದು ಅವರಿಗೆ ಗಾಬರಿ (೧೭-೧೮) ಬೇಗನೆ ಅಲ್ಲಿಂದ ಹೊರಟುಹೋಗಬೇಕೆಂದು ಅವಸರಪಡುತ್ತ "ಹೇ ಬ್ರಾಹ್ಮಣಕುಮಾರ, ಒಳ್ಳೆಯದು, ನಾವು ತಂದಿರುವ ಈ ಹಣ್ಣುಗಳನ್ನು ತೆಗೆದುಕೊ. ಇವುಗಳನ್ನು ತಿಂದು ನೋಡು" ಎಂದು ಹೇಳಿ ಆತನನ್ನು ಆಲಂಗಿಸಿಕೊಂಡು ತಾವು ತಂದಿದ್ದ ನಾನಾ ಬಗೆಯ ಸಿಹಿ ತಿಂಡಿಗಳನ್ನು ಕೊಟ್ಟರು. ಆ ಋಷಿಕುಮಾರನು ಅವುಗಳನ್ನು ತಿನ್ನುತ್ತ ಅವು ಹಣ್ಣುಗಳೆಂದೇ ತಿಳಿದುಕೊಂಡನು (೧೯-೨೧). ಅರಣ್ಯದಲ್ಲಿಯೇ ವಾಸ ಮಾಡುತ್ತಿದ್ದ ಆತನು ಅಂಥ ಭಕ್ಷ್ಯಗಳನ್ನು ತಿಂದೇ ಇರಲಿಲ್ಲ. ವೇಶ್ಯೆಯರು ಆತನ ತಂದೆಯು ಬಂದುಬಿಟ್ಟಾನೆಂಬ ಭಯದಿಂದ ತಾವು ಯಾವುದೋ ವ್ರತವನ್ನು ಅನುಷ್ಠಾನಮಾಡಬೇಕಾಗಿದೆಯೆಂಬ ಸುಳ್ಳು ನೆವವನ್ನೊಡ್ಡಿ ಋಷ್ಯಶೃಂಗನನ್ನು ಬೀಳ್ಕೊಂಡು ಹೊರಟುಹೋದರು (೨೨-೨೩).

**ಅಸ್ವಸ್ಥಹೃದಯಶ್ಚಾಸಿದ್ ದುಃಖಾಚ್ಚ ಪರಿವರ್ತತೇ ।**
**ತತೋಽಪರೇದ್ಯುಸ್ತಂ ದೇಶಮಾಜಗಾಮ ಸ ವೀರ್ಯವಾನ್ ॥ ೨೪**

**ವಿಭಾಂಡಕಸುತಃ ಶ್ರೀಮಾನ್ ಮನಸಾ ಚಿಂತಯನ್ ಮುಹುಃ ।**
**ಮನೋಜ್ಞಾ ಯತ್ರ ತಾ ದೃಷ್ಟಾ ವಾರಮುಖ್ಯಾಃ ಸ್ವಲಂಕೃತಾಃ ॥**

**ದೃಷ್ಟ್ವೈವ ಚ ತದಾ ವಿಪ್ರಮಾಯಾಂತಂ ಹೃಷ್ಟಮಾನಸಾಃ ।**
**ಉಪಸೃತ್ಯ ತತಃ ಸರ್ವಾಸ್ತಾಸ್ತಮೂಚುರಿದಂ ವಚಃ ॥ ೨೬**

**ಏಹ್ಯಾಶ್ರಮಪದಂ ಸೌಮ್ಯ ಹ್ಯಸ್ಮಾಕಮಿತಿ ಚಾಬ್ರುವನ್ ।**
**ಚಿತ್ರಾಣ್ಯತ್ರ ಬಹೂನಿ ಸ್ಯುರ್ಮೂಲಾನಿ ಚ ಫಲಾನಿ ಚ ॥ ೨೭**

**ತತ್ರಾಪ್ಯೇಷ ವಿಧಿಃ ಶ್ರೀಮಾನ್ ವಿಶೇಷೇಣ ಭವಿಷ್ಯತಿ ।**
**ಶ್ರುತ್ವಾ ತು ವಚನಂ ತಾಸಾಂ ಸರ್ವಾಸಾಂ ಹೃದಯಂಗಮಮ್ ॥**

**ಗಮನಾಯ ಮತಿಂ ಚಕ್ರೇ ತಂ ಚ ನಿನ್ಯುಸ್ತದಾ ಸ್ತ್ರಿಯಃ ।**
**ತತ್ರ ಚಾನೀಯಮಾನೇ ತು ವಿಪ್ರೇ ತಸ್ಮಿನ್ ಮಹಾತ್ಮನಿ ॥ ೨೯**

---

ಅವರು ಹೊರಟುಹೋಗಲು ಇತ್ತ ಋಷ್ಯಶೃಂಗನ ಮನಸ್ಸಿಗೆ ಅಸ್ವಸ್ಥತೆಯು ಉಂಟಾಯಿತು ಅವನು ಮನಃಶಾಂತಿಯಿಲ್ಲದೆ ತಳಮಳಿಸುತ್ತಾ ನುತ್ತಾಡ ತೊಡಗಿದನು. ಮನಸ್ಸಿನಲ್ಲಿ ಆ ಸ್ತ್ರೀಯರ ಚಿಂತೆ ಬೇರೂರಿತು ಆ ಸುಂದರಿಯ ರನ್ನು ನೋಡಿದ ಸ್ಥಳಕ್ಕೆ ಮಾರನೆಯ ದಿನ ಮತ್ತೆ ಬಂದನು (೨೪-೨೫). ಅವನನ್ನು ಕಾಣುತ್ತಲೇ ವೇಶ್ಯೆಯರಿಗೆ ಆನಂದವಾಯಿತು. ಅವರು ಋಷ್ಯಶೃಂಗನ ಬಳಿಗೆ ಬಂದು "ಸೌಮ್ಯ, ನಮ್ಮ ಆಶ್ರಮಕ್ಕೆ ನೀನೂ ಬರಬೇಕು ಅಲ್ಲಿ ವಿಚಿತ್ರವಾದ ಫಲಮೂಲಗಳು ಬೇಕಾದಷ್ಟಿವೆ. ನಿನಗೂ ನಾವು ವಿಧಿಪೂರ್ವಕವಾಗಿ ಸತ್ಕಾರ ಮಾಡುತ್ತೇವೆ" ಎಂದರು (೨೬-೨೭) ಅವರ ಹೃದಯಂಗಮವಾದ ಮಾತಿನ ಸರಣಿಯನ್ನು ಕೇಳಿ ಋಷ್ಯಶೃಂಗನು ಅವರೊಡನೆ ಹೋಗಲು ಸಮ್ಮತಿಸಿದನು ಆಗ ವೇಶ್ಯೆಯರು ಅವನನ್ನು ಮೆಲ್ಲಗೆ ರೋಮಪಾದನ ರಾಜ್ಯಕ್ಕೆ ಕರತಂದರು. ಆ ಮಹಾಪುರುಷನು ರಾಜ್ಯದಲ್ಲಿ ಕಾಲಿಟ್ಟ ಕೂಡಲೇ ದೇವೇಂದ್ರನು ಧಾರಾಕಾರವಾಗಿ ಮಳೆಯನ್ನು ಸುರಿಸಿ ಜಗತ್ತನ್ನು ಆಹ್ಲಾದಗೊಳಿಸಿದನು (೨೮-೨೯).

ವವರ್ಷ ಸಹಸಾ ದೇವೋ ಜಗತ್ ಪ್ರಹ್ಲಾದಯಂಸ್ತದಾ ।
ವರ್ಷೇಣೈವಾಗತಂ ವಿಪ್ರಂ ವಿಷಯಂ ಸ್ವಂ ನರಾಧಿಪಃ ॥ ೩೦
ಪ್ರತ್ಯುದ್ಗಮ್ಯ ಮುನಿಂ ಪ್ರಹ್ವಃ ಶಿರಸಾ ಚ ಮಹೀಂ ಗತಃ ।
ಅರ್ಘ್ಯಂ ಚ ಪ್ರದದೌ ತಸ್ಮೈ ನ್ಯಾಯತಃ ಸುಸಮಾಹಿತಃ ॥ ೩೧
ವವ್ರೇ ಪ್ರಸಾದಂ ವಿಪ್ರೇಂದ್ರಾನ್ಮಾ ವಿಪ್ರಂ ಮನ್ಯುರಾವಿಶೇತ್ ।
ಅಂತಃಪುರಂ ಪ್ರವೇಶ್ಯಾಸ್ಮೈ ಕನ್ಯಾಂ ದತ್ವಾ ಯಥಾವಿಧಿ ॥ ೩೨
ಶಾಂತಾಂ ಶಾಂತೇನ ಮನಸಾ ರಾಜಾ ಹರ್ಷಮವಾಪ ಸಃ ।
ಏವಂ ಸ ನ್ಯವಸತ್ತತ್ರ ಸರ್ವಕಾಮೈಃ ಸುಪೂಜಿತಃ ॥ ೩೩
ಋಷ್ಯಶೃಂಗೋ ಮಹಾತೇಜಾಃ ಶಾಂತಯಾ ಸಹ ಭಾರ್ಯಯಾ ।

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ದಶಮಃ ಸರ್ಗಃ



ಜೊತೆಯಲ್ಲಿಯೇ ಸುವೃಷ್ಟಿಯನ್ನು ತಂದ ಆ ತಪೋನಿಧಿಯನ್ನು ರೋಮಪಾದರಾಜನು ವಿನಯದಿಂದ ಸ್ವಾಗತಿಸಿ, ನೆಲದಮೇಲೆ ಅಡ್ಡಬಿದ್ದು ಸಾಷ್ಟಾಂಗ ನಮಸ್ಕಾರ ಮಾಡಿದನು ಋಷ್ಯಶೃಂಗನಿಗೆ ಅರ್ಘ್ಯಾದಿಗಳನ್ನು ಸಮರ್ಪಿಸಿ ಪೂಜೆಮಾಡಿ, ತನ್ನನ್ನು ಕ್ಷಮಿಸಿ ಪ್ರಸನ್ನನಾಗಬೇಕೆಂದು ಬೇಡಿಕೊಂಡನು. (ತಾನು ಮಾಡಿದ ಕೆಲಸದಿಂದ) ಆತನಿಗೆ ಕೋಪಬಂದೀತೆಂದು ರೋಮಪಾದನಿಗೆ ಭಯವಿತ್ತು (೩೦-೩೧). ಋಷ್ಯಶೃಂಗನನ್ನು ಅಂತಃಪುರಕ್ಕೆ ಕರೆದೊಯ್ದು ತನ್ನ ಮಗಳಾದ ಶಾಂತೆಯನ್ನು ವಿಧಿಪೂರ್ವಕವಾಗಿ ಮದುವೆಮಾಡಿ ಕೊಟ್ಟನು. ಆಗ ರೋಮಪಾದನಿಗೆ ಮನಸ್ಸು ಹಗುರವಾಗಿ ಆನಂದವಾಯಿತು. ಮಹಾತೇಜೋನಿಧಿಯಾದ ಋಷ್ಯಶೃಂಗನು ಪತ್ನಿಯಾದ ಶಾಂತೆಯೊಡನೆ ರೋಮಪಾದನ ಅರಮನೆಯಲ್ಲಿ ಸಕಲ ಭೋಗಗಳನ್ನೂ ಅನುಭವಿಸುತ್ತ ವಾಸವಾಗಿದ್ದನು" (೩೨-೩೩).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಹತ್ತನೆಯ ಸರ್ಗ



## ಏಕಾದಶಃ ಸರ್ಗಃ

### ಋಷ್ಯಶೃಂಗಸ್ಯಾಯೋಧ್ಯಾಪ್ರವೇಶಃ

ಭೂಯ ಏವ ಹಿ ರಾಜೇಂದ್ರ ಶೃಣು ಮೇ ವಚನಂ ಹಿತಮ್ ।
ಯಥಾ ಸ ದೇವಪ್ರವರಃ ಕಥಾಯಾಮೇವಮಬ್ರವೀತ್ ॥ ೧

ಇಕ್ಷ್ವಾಕೂಣಾಂ ಕುಲೇ ಜಾತೋ ಭವಿಷ್ಯತಿ ಸುಧಾರ್ಮಿಕಃ ।
ರಾಜಾ ದಶರಥೋ ನಾಮ ಶ್ರೀಮಾನ್ ಸತ್ಯಪ್ರತಿಶ್ರವಃ ॥ ೨

ಅಂಗರಾಜೇನ ಸಖ್ಯಂ ಚ ತಸ್ಯ ರಾಜ್ಞೋ ಭವಿಷ್ಯತಿ ।
ಕನ್ಯಾ ಚಾಸ್ಯ ಮಹಾಭಾಗಾ ಶಾಂತಾ ನಾಮ ಭವಿಷ್ಯತಿ ॥ ೩

ಪುತ್ರಸ್ತು ಸೋಽಂಗರಾಜಸ್ಯ ರೋಮಪಾದ ಇತಿ ಶ್ರುತಃ ।
ತಂ ಸ ರಾಜಾ ದಶರಥೋ ಗಮಿಷ್ಯತಿ ಮಹಾಯಶಾಃ ॥ ೪

ಅನಪತ್ಯೋಽಸ್ಮಿ ಧರ್ಮಾತ್ಮನ್ ಶಾಂತಾಭರ್ತಾ ಮಮ ಕ್ರತುಮ್ ।
ಆಹರೇತ ತ್ವಯಾಜ್ಞಪ್ತಃ ಸಂತಾನಾರ್ಥಂ ಕುಲಸ್ಯ ಚ ॥ ೫

## ಸರ್ಗ ೧೧

### ದಶರಥನು ಋಷ್ಯಶೃಂಗನನ್ನು ಬರಮಾಡಿಕೊಳ್ಳುವುದು.

ಸುಮಂತ್ರನು ದಶರಥನಿಗೆ ಹೇಳಿದನು: "ಮಹಾರಾಜ, ಮಹಾಜ್ಞಾನಿಯಾದ ಸನತ್ಕುಮಾರನು ಹೇಳಿದ ಮಾತು ಇನ್ನೂ ಇದೆ ಕೇಳು. ಏನೆಂದರೆ, 'ಇಕ್ಷ್ವಾಕುವಂಶದಲ್ಲಿ ಒಳ್ಳೆಯ ಧಾರ್ಮಿಕನೂ ಸತ್ಯಸಂಧನೂ ಆದ ದಶರಥನೆಂಬ ರಾಜನು ಹುಟ್ಟುವನು. ಆತನಿಗೆ ಅಂಗರಾಜನಾದ ರೋಮಪಾದನೊಡನೆ ಸ್ನೇಹವು ಬೆಳೆಯುವುದು ಅವನಿಗೆ* ಶಾಂತೆಯೆಂಬ ಕುಮಾರಿಯು ಜನಿಸುವಳು (೧-೩). ದಶರಥನು ರೋಮಪಾದನ ಸಮೀಪಕ್ಕೆ ಹೋಗಿ 'ಪುಣ್ಯಾತ್ಮ, ನನಗೆ ಸಂತತಿ ಇಲ್ಲ ಶಾಂತಾಪತಿಯಾದ ಋಷ್ಯಶೃಂಗನಿಗೆ ನೀನು ಹೇಳು. ನನಗೆ ಸಂತತಿಯಾಗುವಂತೆ ಅವನು ಯಾಗವನ್ನು

* 'ಅವನಿಗೆ' ಎಂದರೆ ದಶರಥನಿಗೆಂದು ಕೆಲವರೂ, ರೋಮಪಾದನಿಗೆಂದು ಕೆಲವರೂ ಅರ್ಥವನ್ನು ಮಾಡುತ್ತಾರೆ.

ಶ್ರುತ್ವಾ ರಾಜ್ಞೋಽಥ ತದ್ವಾಕ್ಯಂ ಮನಸಾಪಿ ವಿಚಿಂತ್ಯ ಚ ।
ಪ್ರದಾಸ್ಯತೇ ಪುತ್ರವಂತಂ ಶಾಂತಾಭರ್ತಾರಮಾತ್ಮವಾನ್ ॥ ೬

ಪ್ರತಿಗೃಹ್ಯ ಚ ತಂ ವಿಪ್ರಂ ಸ ರಾಜಾ ವಿಗತಜ್ವರಃ ।
ಆಹರಿಷ್ಯತಿ ತಂ ಯಜ್ಞಂ ಪ್ರಹೃಷ್ಟೇನಾಂತರಾತ್ಮನಾ ॥ ೭

ತಂ ಚ ರಾಜಾ ದಶರಥೋ ಯಷ್ಟುಕಾಮಃ ಕೃತಾಂಜಲಿಃ ।
ಋಷ್ಯಶೃಂಗಂ ದ್ವಿಜಶ್ರೇಷ್ಠಂ ವರಯಿಷ್ಯತಿ ಧರ್ಮವಿತ್ ॥ ೮

ಯಜ್ಞಾರ್ಥಂ ಪ್ರಸವಾರ್ಥಂ ಚ ಸ್ವರ್ಗಾರ್ಥಂ ಚ ನರೇಶ್ವರಃ ।
ಲಭತೇ ಚ ಸ ತಂ ಕಾಮಂ ದ್ವಿಜಮುಖ್ಯಾದ್ವಿಶಾಂಪತಿಃ ॥ ೯

ಪುತ್ರಾಶ್ಚಾಸ್ಯ ಭವಿಷ್ಯಂತಿ ಚತ್ವಾರೋಽಮಿತವಿಕ್ರಮಾಃ ।
ವಂಶಪ್ರತಿಷ್ಠಾನಕರಾಃ ಸರ್ವಲೋಕೇಷು ವಿಶ್ರುತಾಃ ॥ ೧೦

ಏವಂ ಸ ದೇವಪ್ರವರಃ ಪೂರ್ವಂ ಕಥಿತವಾನ್ ಕಥಾಮ್ ।
ಸನತ್ಕುಮಾರೋ ಭಗವಾನ್ ಪುರಾ ದೇವಯುಗೇ ಪ್ರಭುಃ ॥ ೧೧

---

ಮಾಡಿಸಲಿ' ಎಂದು ಹೇಳುವನು. ಆಗ ರೋಮಪಾದನು ಆಗಲೆಂದು ಒಪ್ಪಿ ಪುತ್ರವಂತನೂ * ಶಾಂತಾಪತಿಯೂ ಆದ ಋಷ್ಯಶೃಂಗನಿಗೆ ಹೇಳಿ ಯಾಗದ ಕಾರ್ಯವನ್ನು ವಹಿಸುವನು (೪-೬) ದಶರಥರಾಜನು ನಿಶ್ಚಿಂತನಾಗಿ ಆ ಬ್ರಾಹ್ಮಣನನ್ನು ಕರೆದುಕೊಂಡು ಬಂದು ಹರ್ಷದಿಂದ ಪುತ್ರಕಾಮೇಷ್ಟಿಯನ್ನು ನೆರವೇರಿಸುವನು ಧರ್ಮಜ್ಞನಾದ ದಶರಥನು ಬದ್ಧಾಂಜಲಿಯಾಗಿ ಆ ಬ್ರಾಹ್ಮಣಶ್ರೇಷ್ಠನನ್ನು ಯಜ್ಞಕ್ಕಾಗಿ ವರಣ ಮಾಡಿಕೊಳ್ಳುವನು. ಯಜ್ಞದಿಂದ ಸಂತತಿ, ಯಶಸ್ಸು ಮತ್ತು ಸ್ವರ್ಗವನ್ನು ಪಡೆಯುವುದೇ ಅವನ ಉದ್ದೇಶವಾಗಿರುತ್ತದ ಆ ಉದ್ದೇಶವನ್ನು ಕಡೆಗೆ ಸಾಧಿಸುತ್ತಾನೆ (೭-೯) ದಶರಥನಿಗೆ ಮಹಾಪರಾಕ್ರಮಿಗಳಾದ ನಾಲ್ವರು ಪುತ್ರರು ಜನಿಸುವರು ಅವರೆಲ್ಲರೂ ವಂಶೋದ್ಧಾರಕರೂ ಜಗದ್ವಿಖ್ಯಾತರೂ ಆಗುವರು" (೧೦). ಈ ರೀತಿಯಲ್ಲಿ ಭಗವಾನ್ ಸನತ್ಕುಮಾರನು ಹಿಂದೆ

---

* 'ಜಾತಪುತ್ರಃ ಕೃಷ್ಣಕೇಶೋಽಗ್ನೀನಾದಧೀತ' ಎಂದು ವಿಧಿ. ಯಾಗಾಂಗವಾಗಿ ಅಗ್ನಿಯನ್ನು ಆಧಾನಮಾಡಲು ಪುತ್ರವಂತನಿಗೆ ಮಾತ್ರ ಅಧಿಕಾರ.

ಸ ತ್ವಂ ಪುರುಷಶಾರ್ದೂಲ ತಮಾನಯ ಸುಸತ್ಕೃತಮ್ ।
ಸ್ವಯಮೇವ ಮಹಾರಾಜ ಗತ್ವಾ ಸಬಲವಾಹನಃ ॥ ೧೨

ಸುಮಂತ್ರಸ್ಯ ವಚಃ ಶ್ರುತ್ವಾ ಹೃಷ್ಟೋ ದಶರಥೋಽಭವತ್ ।
ಅನುಮಾನ್ಯ ವಸಿಷ್ಠಂ ಚ ಸೂತವಾಕ್ಯಂ ನಿಶಮ್ಯ ಚ ॥ ೧೩

ಸಾಂತಃಪುರಃ ಸಹಾಮಾತ್ಯಃ ಪ್ರಯಯೌ ಯತ್ರ ಸ ದ್ವಿಜಃ ।
ವನಾನಿ ಸರಿತಶ್ಚೈವ ವ್ಯತಿಕ್ರಮ್ಯ ಶನೈಃ ಶನೈಃ ॥ ೧೪

ಅಭಿಚಕ್ರಾಮ ತಂ ದೇಶಂ ಯತ್ರ ವೈ ಮುನಿಪುಂಗವಃ ।
ಆಸಾದ್ಯ ತಂ ದ್ವಿಜಶ್ರೇಷ್ಠಂ ರೋಮಪಾದಸಮೀಪಗಮ್ ॥ ೧೫

ಋಷಿಪುತ್ರಂ ದದರ್ಶಾದೌ ದೀಪ್ಯಮಾನಮಿವಾನಲಮ್ ।
ತತೋ ರಾಜಾ ಯಥಾನ್ಯಾಯಂ ಪೂಜಾಂ ಚಕ್ರೇ ವಿಶೇಷತಃ ॥ ೧೬

ಸಖಿತ್ವಾತ್ತಸ್ಯ ವೈ ರಾಜ್ಞಃ ಪ್ರಹೃಷ್ಟೇನಾಂತರಾತ್ಮನಾ ।
ರೋಮಪಾದೇನ ಚಾಖ್ಯಾತಮೃಷಿಪುತ್ರಾಯ ಧೀಮತೇ ॥ ೧೭

ಸಖ್ಯಂ ಸಂಬಂಧಕಂ ಚೈವ ತದಾ ತಂ ಪ್ರತ್ಯಪೂಜಯತ್ ।
ಏವಂ ಸುಸತ್ಕೃತಸ್ತೇನ ಸಹೋಷಿತ್ವಾ ನರರ್ಷಭಃ ॥ ೧೮

---

ಕೃತಯುಗದಲ್ಲಿ ಹೇಳಿದ್ದನು ಆದ್ದರಿಂದ ಮಹಾರಾಜ, ನೀನೇ ಪರಿವಾರಸಮೇತನಾಗಿ ಹೋಗಿ ಋಷ್ಯಶೃಂಗನನ್ನು ಗೌರವದಿಂದ ಕರೆದುಕೊಂಡು ಬಾ" (೧೧-೧೨) ಸುಮಂತ್ರನು ಹೀಗೆ ಹೇಳಲು ದಶರಥನಿಗೆ ಆನಂದವಾಯಿತು ಅವನು ವಸಿಷ್ಠರ ಅನುಜ್ಞೆಯನ್ನು ಪಡೆದು ಅಂತಃಪುರದ ಸ್ತ್ರೀಯರನ್ನೂ ಅಮಾತ್ಯರನ್ನೂ ಜೊತೆಯಲ್ಲಿ ಕರೆದುಕೊಂಡು ಋಷ್ಯಶೃಂಗನಿದ್ದಲ್ಲಿಗೆ ಹೊರಟನು ದಾರಿಯಲ್ಲಿ ಅನೇಕ ವನಗಳನ್ನೂ ನದಿಗಳನ್ನೂ ದಾಟುತ್ತ ಆ ಮುನಿಶ್ರೇಷ್ಠನಿದ್ದ ಸ್ಥಳವನ್ನು ಸೇರಿದನು (೧೩-೧೫). ಅಲ್ಲಿ ರೋಮಪಾದನ ಸಮೀಪದಲ್ಲಿ ಅಗ್ನಿಯಂತೆ ಪ್ರಜ್ವಲಿಸುತ್ತ ಕುಳಿತಿದ್ದ ಋಷಿಪುತ್ರನನ್ನು ಕಂಡನು. ಆಗ ರೋಮಪಾದನು ತನ್ನ ಮಿತ್ರನಾದ ದಶರಥನನ್ನು ಸಂತೋಷದಿಂದ ಸ್ವಾಗತಿಸಿ ಸತ್ಕಾರಮಾಡಿ ತನಗೂ ದಶರಥನಿಗೂ ಇರುವ ಸ್ನೇಹವನ್ನೂ ಪೂರ್ವಸಂಬಂಧವನ್ನೂ ಋಷ್ಯಶೃಂಗನಿಗೆ ತಿಳಿಸಿ

ಸಪ್ತಾಷ್ಟದಿವಸಾನ್ ರಾಜಾ ರಾಜಾನಮಿದಮಬ್ರವೀತ್ ।
ಶಾಂತಾ ತವ ಸುತಾ ರಾಜನ್ ಸಹ ಭರ್ತ್ರಾ ವಿಶಾಂಪತೇ ॥ ೧೯

ಮದೀಯಂ ನಗರಂ ಯಾತು ಕಾರ್ಯಂ ಹಿ ಮಹದುದ್ಯತಮ್ ।
ತಥೇತಿ ರಾಜಾ ಸಂಶ್ರುತ್ಯ ಗಮನಂ ತಸ್ಯ ಧೀಮತಃ ॥ ೨೦

ಉವಾಚ ವಚನಂ ವಿಪ್ರಂ ಗಚ್ಛ ತ್ವಂ ಸಹ ಭಾರ್ಯಯಾ ।
ಋಷಿಪುತ್ರಃ ಪ್ರತಿಶ್ರುತ್ಯ ತಥೇತ್ಯಾಹ ನೃಪಂ ತದಾ ॥ ೨೧

ಸ ನೃಪೇಣಾಭ್ಯನುಜ್ಞಾತಃ ಪ್ರಯಯೌ ಸಹ ಭಾರ್ಯಯಾ ।
ತಾವನ್ಯೋಽನ್ಯಾಂಜಲಿಂ ಕೃತ್ವಾ ಸ್ನೇಹಾತ್ ಸಂಶ್ಲಿಷ್ಯ ಚೋರಸಾ ॥

ನನಂದತುರ್ದಶರಥೋ ರೋಮಪಾದಶ್ಚ ವೀರ್ಯವಾನ್ ।
ತತಃ ಸುಹೃದಮಾಪೃಚ್ಛ್ಯ ಪ್ರಸ್ಥಿತೋ ರಘುನಂದನಃ ॥ ೨೩

ಪೌರೇಭ್ಯಃ ಪ್ರೇಷಯಾಮಾಸ ದೂತಾನ್ ವೈ ಶೀಘ್ರಗಾಮಿನಃ ।
ಕ್ರಿಯತಾಂ ನಗರಂ ಸರ್ವಂ ಕ್ಷಿಪ್ರಮೇವ ಸ್ವಲಂಕೃತಮ್ ॥ ೨೪

---

ಅವನನ್ನು ಪರಿಚಯಮಾಡಿಕೊಟ್ಟನು (೧೬-೧೮). ದಶರಥನು ರೋಮಪಾದನ ಆತಿಥ್ಯವನ್ನು ಸ್ವೀಕರಿಸುತ್ತ ಏಳೆಂಟು ದಿನಗಳಿದ್ದನು ಆಮೇಲೆ ರೋಮಪಾದನನ್ನು ಕುರಿತು "ಮಹಾರಾಜ, ನಾನು ಅಶ್ವಮೇಧವೆಂಬ ಮಹಾಕಾರ್ಯವನ್ನು ಮಾಡಲು ಉದ್ಯುಕ್ತನಾಗಿದ್ದೇನೆ. ನಿನ್ನ ಪುತ್ರಿಯಾದ ಶಾಂತಾದೇವಿಯು ತನ್ನ ಪತಿಯೊಡನೆ ನನ್ನ ನಗರಕ್ಕೆ ಬರುವಂತೆ ಏರ್ಪಡಿಸು" ಎಂದನು. ಆಗ ರೋಮಪಾದನು ಮಹಾತ್ಮನಾದ ಋಷ್ಯಶೃಂಗನನ್ನು ಕಳಿಸಲು ಒಪ್ಪಿಕೊಂಡನು (೧೯-೨೦). ಅದೇ ರೀತಿಯಲ್ಲಿ ಋಷ್ಯಶೃಂಗನಿಗೆ ವಿಷಯವನ್ನು ತಿಳಿಸಲು, ಆ ಋಷಿಪುತ್ರನು ಆಗಲೆಂದು ಒಪ್ಪಿದನು. ಅದರಂತೆ ತನ್ನ ಪತ್ನಿಯನ್ನು ಕರೆದುಕೊಂಡು ರಾಜನಿಗೆ ತಿಳಿಸಿ ಹೊರಡಲು ಸನ್ನದ್ಧನಾದನು. ರೋಮಪಾದ, ದಶರಥ—ಇವರಿಬ್ಬರೂ ಸ್ನೇಹದಿಂದ ಒಬ್ಬರನ್ನೊಬ್ಬರು ಆಲಂಗಿಸಿಕೊಂಡು ಆನಂದಪರವಶರಾದರು. ದಶರಥನು ತನ್ನ ಮಿತ್ರನನ್ನು ಬೀಳ್ಕೊಂಡು ಅಯೋಧ್ಯೆಗೆ ಹೊರಟನು (೨೧-೨೩). ಅವನು ದೂತರನ್ನು ಕರೆದು "ನೀವು ಮೊದಲೇ ಶೀಘ್ರವಾಗಿ

**ಧೂಪಿತಂ ಸಿಕ್ತಸಂಮೃಷ್ಟಂ ಪತಾಕಾಭಿರಲಂಕೃತಮ್ ।**
**ತತಃ ಪ್ರಹೃಷ್ಟಾಃ ಪೌರಾಸ್ತೇ ಶ್ರುತ್ವಾ ರಾಜಾನಮಾಗತಮ್ ॥ ೨೫**
**ತಥಾ ಚಕ್ರುಶ್ಚ ತತ್ಸರ್ವಂ ರಾಜ್ಞಾ ಯತ್ ಪ್ರೇಷಿತಂ ತದಾ ।**
**ತತಃ ಸ್ವಲಂಕೃತಂ ರಾಜಾ ನಗರಂ ಪ್ರವಿವೇಶ ಹ ॥ ೨೬**
**ಶಂಖದುಂದುಭಿನಿರ್ಘೋಷೈಃ ಪುರಸ್ಕೃತ್ಯ ದ್ವಿಜರ್ಷಭಮ್ ।**
**ತತಃ ಪ್ರಮುದಿತಾಃ ಸರ್ವೇ ದೃಷ್ಟ್ವಾ ತಂ ನಾಗರಾ ದ್ವಿಜಮ್ ॥**
**ಪ್ರವೇಶ್ಯಮಾನಂ ಸತ್ಕೃತ್ಯ ನರೇಂದ್ರೇಣೇಂದ್ರಕರ್ಮಣಾ ।**
**ಯಥಾ ದಿವಿ ಸುರೇಂದ್ರೇಣ ಸಹಸ್ರಾಕ್ಷೇಣ ಕಾಶ್ಯಪಮ್ ॥ ೨೮**
**ಅಂತಃಪುರಂ ಪ್ರವೇಶ್ಯೈನಂ ಪೂಜಾಂ ಕೃತ್ವಾ ವಿಧಾನತಃ ।**
**ಕೃತಕೃತ್ಯಮಿವಾತ್ಮಾನಂ ಮೇನೇ ತಸ್ಯೋಪವಾಹನಾತ್ ॥ ೨೯**
**ಅಂತಃಪುರಸ್ತ್ರಿಯಃ ಸರ್ವಾಃ ಶಾಂತಾಂ ದೃಷ್ಟ್ವಾ ತದಾಗತಾಮ್ ।**
**ಸಹ ಭರ್ತ್ರಾ ವಿಶಾಲಾಕ್ಷೀಂ ಪ್ರೀತ್ಯಾನಂದಮುಪಾಗಮನ್ ॥ ೩೦**

---

ಅಯೋಧ್ಯೆಗೆ ಹೋಗಿರಿ. ಅಲ್ಲಿ ಪೌರರನ್ನು ಕುರಿತು ಹೀಗೆ ತಿಳಿಸಬೇಕು: "ಪಟ್ಟಣವನ್ನು ಕೂಡಲೇ ಬಹಳ ಚೆನ್ನಾಗಿ ಶೃಂಗರಿಸಬೇಕು ರಸ್ತೆಗಳಲ್ಲಿ ನೀರನ್ನು ಚಿಮುಕಿಸಿ ಸಾರಿಸಬೇಕು ಧೂಪದ ಸುಗಂಧವು ಎಲ್ಲೆಲ್ಲಿಯೂ ಹರಡಲಿ. ಧ್ವಜಪಟಗಳು ಹಾರಾಡಲಿ" ಎಂದನು. ಅನಂತರ ರಾಜನು ಹಿಂದಿರುಗಿ ಬರುವನೆಂಬ ಸುದ್ದಿಯನ್ನು ಕೇಳಿ ಅಯೋಧ್ಯೆಯ ಜನರೆಲ್ಲರೂ ಹರ್ಷದಿಂದ ರಾಜನು ಹೇಳಿಕಳಿಸಿದಂತೆಯೇ ಮಾಡಿದರು (೨೪-೨೬) ದಶರಥನು ಋಷ್ಯಶೃಂಗನನ್ನು ಮುಂದಿಟ್ಟುಕೊಂಡು ಶಂಖ ದುಂದುಭಿ ಮುಂತಾದ ವಾದ್ಯಘೋಷದೊಡನೆ ತಳಿರುತೋರಣಗಳಿಂದ ಅಲಂಕೃತವಾದ ಅಯೋಧ್ಯಾನಗರವನ್ನು ಪ್ರವೇಶಿಸಿದನು ದೇವಲೋಕದಲ್ಲಿ ದೇವೇಂದ್ರನು ಕಾಶ್ಯಪನನ್ನು ಕರೆತರುವಂತೆ ದಶರಥ ಮಹಾರಾಜನು ಕರೆತರುತ್ತಿದ್ದ ಋಷ್ಯಶೃಂಗಮುನೀಶ್ವರನನ್ನು ನೋಡಿ ಅಯೋಧ್ಯಾನಗರದ ಪ್ರಜೆಗಳಿಗೆ ಆನಂದವಾಯಿತು (೨೭-೨೮). ದಶರಥನು ಆ ಋಷಿಪುತ್ರನನ್ನು ಅಂತಃಪುರಕ್ಕೆ ಕರೆದುಕೊಂಡುಹೋಗಿ ವಿಧಿಪೂರ್ವಕವಾಗಿ ಪೂಜಿಸಿ ಸತ್ಕರಿಸಿದನು. ದಶರಥನಿಗೆ 'ಈಗ ನಾನು ಧನ್ಯನಾದೆ' ಎನ್ನಿಸಿತು ಸುಂದರಿಯಾದ

**ಪೂಜ್ಯಮಾನಾ ಚ ತಾಭಿಃ ಸಾ ರಾಜ್ಞಾ ಚೈವ ವಿಶೇಷತಃ ।**
**ಉವಾಸ ತತ್ರ ಸುಖಿತಾ ಕಂಚಿತ್ಕಾಲಂ ಸಹರ್ತ್ವಿಜಾ ॥ ३೧**

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕಾದಶಃ ಸರ್ಗಃ

---

## ದ್ವಾದಶಃ ಸರ್ಗಃ

### ಅಶ್ವಮೇಧಸಂಭಾರಃ

**ತತಃ ಕಾಲೇ ಬಹುತಿಥೇ ಕಸ್ಮಿಂಶ್ಚಿತ್ ಸುಮನೋಹರೇ ।**
**ವಸಂತೇ ಸಮನುಪ್ರಾಪ್ತೇ ರಾಜ್ಞೋ ಯಷ್ಟುಂ ಮನೋಽಭವತ್ ॥**

**ತತಃ ಪ್ರಸಾದ್ಯ ಶಿರಸಾ ತಂ ವಿಪ್ರಂ ದೇವವರ್ಣಿನಮ್ ।**
**ಯಜ್ಞಾರ್ಥಂ ವರಯಾಮಾಸ ಸಂತಾನಾರ್ಥಂ ಕುಲಸ್ಯ ಚ ॥ ೨**

---

ಶಾಂತಾದೇವಿಯು ತನ್ನ ಪತಿಯೊಡನೆ ಬಂದುದನ್ನು ಕಂಡು ಅಂತಃಪುರದ ಸ್ತ್ರೀಯರು ಆನಂದದಿಂದ ಹಿಗ್ಗಿದರು. ಅವಳು ರಾಣೀವಾಸದವರಿಂದಲೂ ದಶರಥನಿಂದಲೂ ಸತ್ಕೃತಳಾಗಿ ತನ್ನ ಪತಿಯೊಡನೆ ಕೆಲವು ದಿನ ಅಂತಃಪುರದಲ್ಲಿ ಸುಖದಿಂದಿದ್ದಳು (೨೯-೩೧)

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಹನ್ನೊಂದನೆಯ ಸರ್ಗ

---

## ಸರ್ಗ ೧೨

### ಯಜ್ಞನಿರ್ಣಯ.

ಅನಂತರ ಕೆಲವು ದಿನಗಳಮೇಲೆ ಮನೋಹರವಾದ ವಸಂತಕಾಲವು ಪ್ರಾಪ್ತವಾಗಲು ದಶರಥರಾಜನಿಗೆ ಯಜ್ಞವನ್ನಾರಂಭಿಸಬೇಕೆಂದು ಮನಸ್ಸಾಯಿತು. ಅವನು ದೇವತೆಯಂತೆ ಕಂಗೊಳಿಸುತ್ತಿದ್ದ ಋಷ್ಯಶೃಂಗನಿಗೆ ತಲೆಬಾಗಿ ವಂದಿಸಿ "ಋಷೀಶ್ವರ, ನನಗೆ ಸಂತತಿಯಾಗಿ ಕುಲವು ಉದ್ಧಾರವಾಗಬೇಕೆಂದು ಯಜ್ಞವನ್ನು ಮಾಡಲು ಇಚ್ಛಿಸುತ್ತೇನೆ. ಈ ಕಾರ್ಯದಲ್ಲಿ ನಿನ್ನನ್ನು

ತಥೇತಿ ಚ ಸ ರಾಜಾನಮುವಾಚ ಚ ಸುಸತ್ಕೃತಃ ।
ಸಂಭಾರಾಃ ಸಂಭ್ರಿಯಂತಾಂ ತೇ ತುರಗಶ್ಚ ವಿಮುಚ್ಯತಾಮ್ ॥ ೩

ಸರಯ್ವಾಶ್ಚೋತ್ತರೇ ತೀರೇ ಯಜ್ಞಭೂಮಿರ್ವಿಧೀಯತಾಮ್ ।
ತತೋ ನೃಪೋಽಬ್ರವೀದ್ವಾಕ್ಯಂ ಸುಮಂತ್ರಂ ಮಂತ್ರಿಸತ್ತಮಮ್ ॥

ಸುಮಂತ್ರಾವಾಹಯ ಕ್ಷಿಪ್ರಮೃತ್ವಿಜೋ ಬ್ರಹ್ಮವಾದಿನಃ ।
ಸುಯಜ್ಞಂ ವಾಮದೇವಂ ಚ ಜಾಬಾಲಿಮಥ ಕಾಶ್ಯಪಮ್ ॥ ೫

ಪುರೋಹಿತಂ ವಸಿಷ್ಠಂ ಚ ಯೇ ಚಾನ್ಯೇ ದ್ವಿಜಸತ್ತಮಾಃ ।
ತತಃ ಸುಮಂತ್ರಸ್ತ್ವರಿತಂ ಗತ್ವಾ ತ್ವರಿತವಿಕ್ರಮಃ ॥ ೬

ಸಮಾನಯತ್ ಸ ತಾನ್ ವಿಪ್ರಾನ್ ಸಮಸ್ತಾನ್ ವೇದಪಾರಗಾನ್
ತಾನ್ ಪೂಜಯಿತ್ವಾ ಧರ್ಮಾತ್ಮಾ ರಾಜಾ ದಶರಥಸ್ತದಾ ॥ ೭

ಧರ್ಮಾರ್ಥಸಹಿತಂ ಯುಕ್ತಂ ಶ್ಲಕ್ಷ್ಣಂ ವಚನಮಬ್ರವೀತ್ ।
ಮಮ ಲಾಲಪ್ಯಮಾನಸ್ಯ ಪುತ್ರಾರ್ಥಂ ನಾಸ್ತಿ ವೈ ಸುಖಮ್ ॥ ೮

ತದರ್ಥಂ ಹಯಮೇಧೇನ ಯಕ್ಷ್ಯಾಮೀತಿ ಮತಿರ್ಮಮ ।
ತದಹಂ ಯಷ್ಟುಮಿಚ್ಛಾಮಿ ಶಾಸ್ತ್ರದೃಷ್ಟೇನ ಕರ್ಮಣಾ ॥ ೯

---

ಋತ್ವಿಜನನ್ನಾಗಿ ವರಿಸಿದ್ದೇನೆ" ಎಂದನು (೧-೨) ಋಷ್ಯಶೃಂಗನು ಹಾಗೆಯೇ ಆಗಲೆಂದು ನುಡಿದು 'ರಾಜ, ಯಜ್ಞಸಾಮಗ್ರಿಗಳನ್ನು ಸಿದ್ಧಪಡಿಸು. ಯಜ್ಞಾಶ್ವವನ್ನು (ದೇಶಸಂಚಾರಕ್ಕಾಗಿ) ಬಿಡು. ಸರಯೂನದಿಯ ಉತ್ತರ ತೀರದಲ್ಲಿ ಯಾಗಭೂಮಿಯು ಸಿದ್ಧವಾಗಲಿ' ಎಂದನು ಆಗ ರಾಜನು ಸುಮಂತ್ರನನ್ನು ಕರೆದು "ಸುಮಂತ್ರ, ಬ್ರಹ್ಮವಾದಿಗಳಾದ ಋತ್ವಿಜರನ್ನು ಕೂಡಲೆ ಬರಮಾಡು ಸುಯಜ್ಞರು, ವಾಮದೇವರು, ಜಾಬಾಲಿಗಳು, ಕಾಶ್ಯಪರು, ವಸಿಷ್ಠರು—ಮುಂತಾದ ದ್ವಿಜಶ್ರೇಷ್ಠರು ಬರಲಿ" ಎಂದು ಹೇಳಿದನು (೩-೫). ಸುಮಂತ್ರನು ಆ ವೈದಿಕರನ್ನು ತ್ವರೆಯಿಂದ ಕರೆತಂದನು. ಧರ್ಮಾತ್ಮನಾದ ದಶರಥರಾಜನು ಅವರೆಲ್ಲರನ್ನೂ ಆದರದಿಂದ ಪೂಜಿಸಿ ವಿನಯದಿಂದ ಹೇಳಿದನು: "ಪೂಜ್ಯರೆ, ಮಕ್ಕಳಿಗಾಗಿ ಹಂಬಲಿಸುತ್ತಿರುವ ನನಗೆ ಸುಖವೆಂಬುದೇ ಇಲ್ಲವಾಗಿದೆ (೬-೮). ಆದ್ದರಿಂದ ಅಶ್ವಮೇಧಯಾಗವನ್ನು ಮಾಡಬೇಕೆಂದು ನನಗೆ ಇಚ್ಛೆಯಾಗಿದೆ. ವಿಧಿಪೂರ್ವಕವಾಗಿ ನಾನು

**ಋಷಿಪುತ್ರಪ್ರಭಾವೇಣ ಕಾಮಾನ್ ಪ್ರಾಪ್ಸ್ಯಾಮಿ ಚಾಪ್ಯಹಮ್ ।**
**ತತಃ ಸಾಧ್ವಿತಿ ತದ್ವಾಕ್ಯಂ ಬ್ರಾಹ್ಮಣಾಃ ಪ್ರತ್ಯಪೂಜಯನ್ ॥** ೧೦

**ವಸಿಷ್ಠಪ್ರಮುಖಾಃ ಸರ್ವೇ ಪಾರ್ಥಿವಸ್ಯ ಮುಖಾಚ್ಚ್ಯುತಮ್ ।**
**ಋಷ್ಯಶೃಂಗಪುರೋಗಾಶ್ಚ ಪ್ರತ್ಯೂಚುರ್ನೃಪತಿಂ ತದಾ ॥** ೧೧

**ಸಂಭಾರಾಃ ಸಂಭ್ರಿಯಂತಾಂ ತೇ ತುರಗಶ್ಚ ವಿಮುಚ್ಯತಾಮ್ ।**
**ಸರಯ್ವಾಶ್ಚೋತ್ತರೇ ತೀರೇ ಯಜ್ಞಭೂಮಿರ್ವಿಧೀಯತಾಮ್ ॥**

**ಸರ್ವಥಾ ಪ್ರಾಪ್ಸ್ಯಸೇ ಪುತ್ರಾಂಶ್ಚತುರೋಽಮಿತವಿಕ್ರಮಾನ್ ।**
**ಯಸ್ಯ ತೇ ಧಾರ್ಮಿಕೀ ಬುದ್ಧಿರಿಯಂ ಪುತ್ರಾರ್ಥಮಾಗತಾ ॥** ೧೩

**ತತಃ ಪ್ರೀತೋಽಭವದ್ರಾಜಾ ಶ್ರುತ್ವಾ ತದ್ ದ್ವಿಜಭಾಷಿತಮ್ ।**
**ಅಮಾತ್ಯಾಂಶ್ಚಾಬ್ರವೀದ್ರಾಜಾ ಹರ್ಷೇಣೇದಂ ಶುಭಾಕ್ಷರಮ್ ॥**

**ಸಂಭಾರಾಃ ಸಂಭ್ರಿಯಂತಾಂ ಮೇ ಗುರೂಣಾಂ ವಚನಾದಿಹ ।**
**ಸಮರ್ಥಾಧಿಷ್ಠಿತಶ್ಚಾಶ್ವಃ ಸೋಪಾಧ್ಯಾಯೋ ವಿಮುಚ್ಯತಾಮ್ ॥**

---

ಇದನ್ನು ಮಾಡಬೇಕು. ನನ್ನ ಇಷ್ಟವು ಹೇಗೆ ನೆರವೇರೀತೆಂಬುದನ್ನು ತಾವು ಆಲೋಚಿಸಬೇಕು." ಅದನ್ನು ಕೇಳಿ ಆ ದ್ವಿಜರೆಲ್ಲರೂ ರಾಜನ ಮಾತು ಯುಕ್ತವಾದದ್ದೆಂದು ಮೆಚ್ಚಿದರು (೯-೧೦) ವಸಿಷ್ಠರು, ಋಷ್ಯಶೃಂಗರು— ಮೊದಲಾದವರೆಲ್ಲರೂ ದಶರಥನಿಗೆ "ಮಹಾರಾಜ, ಯಾಗಕ್ಕೆ ಬೇಕಾದ ಸಾಮಗ್ರಿಗಳನ್ನು ಸಿದ್ಧಪಡಿಸಿ ಯಜ್ಞಾಶ್ವವನ್ನು ವಿಜಯಯಾತ್ರೆಗಾಗಿ ಬಿಡೋಣವಾಗಲಿ; ಸರಯೂನದಿಯ ಉತ್ತರತೀರದಲ್ಲಿ ಯಾಗಶಾಲೆಯ ನಿರ್ಮಾಣವಾಗಲಿ (೧೧-೧೨) ನಿನಗೆ ಪರಾಕ್ರಮಿಗಳಾದ ನಾಲ್ವರು ಪುತ್ರರು ನಿಶ್ಚಯವಾಗಿಯೂ ಜನಿಸುವರು. ಪುತ್ರಾರ್ಥವಾಗಿ ಈ ಧರ್ಮಕಾರ್ಯವನ್ನು ಮಾಡಬೇಕೆಂದು ನಿನಗೆ ಬುದ್ಧಿಯುಂಟಾದುದು ಒಳ್ಳೆಯದು" ಎಂದರು. ಬ್ರಾಹ್ಮಣರ ಆ ಮಾತುಗಳನ್ನು ಕೇಳಿ ರಾಜನು ಸಂತುಷ್ಟನಾಗಿ ಮಂತ್ರಿಗಳೊಡನೆ ಹೀಗೆ ಹೇಳಿದನು (೧೩-೧೪): "ನನ್ನ ಗುರುಗಳು ಆಜ್ಞಮಾಡಿದಂತೆ ಎಲ್ಲ ಯಜ್ಞಸಾಮಗ್ರಿಗಳನ್ನೂ ಸಿದ್ಧಪಡಿಸಿರಿ. ಸಮರ್ಥ

ಸರಯ್ವಾಶ್ಚೋತ್ತರೇ ತೀರೇ ಯಜ್ಞಭೂಮಿರ್ವಿಧೀಯತಾಮ್ ।
ಶಾಂತಯಶ್ಚಾಪಿ ವರ್ಧಂತಾಂ ಯಥಾಕಲ್ಪಂ ಯಥಾವಿಧಿ ॥ ೧೬

ಶಕ್ಯಃ ಕರ್ತುಮಯಂ ಯಜ್ಞಃ ಸರ್ವೇಣಾಪಿ ಮಹೀಕ್ಷಿತಾ ।
ನಾಪರಾಧೋ ಭವೇತ್ ಕಷ್ಟೋ ಯದ್ಯಸ್ಮಿನ್ ಕ್ರತುಸತ್ತಮೇ ॥

ಛಿದ್ರಂ ಹಿ ಮೃಗಯಂತೇಽತ್ರ ವಿದ್ವಾಂಸೋ ಬ್ರಹ್ಮರಾಕ್ಷಸಾಃ ।
ವಿಘ್ನಿತಸ್ಯ ಹಿ ಯಜ್ಞಸ್ಯ ಸದ್ಯಃ ಕರ್ತಾ ವಿನಶ್ಯತಿ ॥ ೧೮

ತದ್ಯಥಾ ವಿಧಿಪೂರ್ವಂ ಮೇ ಕ್ರತುರೇಷ ಸಮಾಪ್ಯತೇ ।
ತಥಾ ವಿಧಾನಂ ಕ್ರಿಯತಾಂ ಸಮರ್ಥಾಃ ಕರಣೇಷ್ವಿಹ ॥ ೧೯

ತಥೇತಿ ಚ ತತಃ ಸರ್ವೇ ಮಂತ್ರಿಣಃ ಪ್ರತ್ಯಪೂಜಯನ್ ।
ಪಾರ್ಥಿವೇಂದ್ರಸ್ಯ ತದ್ವಾಕ್ಯಂ ಯಥಾಜ್ಞಪ್ತಮಕುರ್ವತ ॥ ೨೦

ತತೋ ದ್ವಿಜಾಸ್ತೇ ಧರ್ಮಜ್ಞಮಸ್ತುವನ್ ಪಾರ್ಥಿವರ್ಷಭಮ್ ।
ಅನುಜ್ಞಾತಾಸ್ತತಃ ಸರ್ವೇ ಪುನರ್ಜಗ್ಮುರ್ಯಥಾಗತಮ್ ॥ ೨೧

---

ರಾದ ರಾಜಪುತ್ರರ ರಕ್ಷಣೆಯಲ್ಲಿ ಋತ್ವಿಜರೊಡನೆ ಯಜ್ಞಾಶ್ವವು ಹೊರಡಲಿ. ಸರಯೂನದಿಯ ಉತ್ತರತೀರದಲ್ಲಿ ಯಾಗಶಾಲೆಯ ನಿರ್ಮಾಣವಾಗಲಿ ವಿಧಿವತ್ತಾಗಿ ಶಾಂತಿಕರ್ಮಗಳನ್ನು ನಡೆಸಬೇಕು (೧೫-೧೬) ಇದರಲ್ಲಿ ಮಂತ್ರಕ್ರಿಯಾಲೋಪಗಳು ಸಂಭವಿಸದೇ ಇದ್ದ ಪಕ್ಷದಲ್ಲಿ ಎಲ್ಲಾ ಸಾಮಾನ್ಯ ರಾಜರೂ ಅಶ್ವಮೇಧವನ್ನು ನಡೆಸಿಯಾರು ವಿದ್ವಾಂಸರಾದ ಬ್ರಹ್ಮ ರಾಕ್ಷಸರು ಇದರಲ್ಲಿ ತಪ್ಪುಗಳನ್ನೇ ಹುಡುಕುತ್ತಾ ಇರುತ್ತಾರೆ. ಯಜ್ಞಕ್ಕೆ ವಿಘ್ನ ಒದಗಿದರೆ ಯಜಮಾನನು ಕೂಡಲೇ ವಿನಾಶಹೊಂದುತ್ತಾನೆ (೧೭-೧೮) ಆದ್ದರಿಂದ ನನಗೆ ಈ ಯಾಗವು ವಿಧಿಪೂರ್ವಕವಾಗಿ ನೆರವೇರು ವಂತೆ ಏರ್ಪಡಿಸಿರಿ. ಈ ಕೆಲಸದಲ್ಲಿ ನೀವು ಸಮರ್ಥರು " ಆಗ ಮಂತ್ರಿಗಳು ಹಾಗೆಯೇ ಏರ್ಪಡಿಸುತ್ತೇವೆಂದು ನುಡಿದು ಅದರಂತೆಯೇ ಎಲ್ಲವನ್ನೂ ನಡೆಸಿದರು (೧೯-೨೦). ಆ ವಿಪ್ರರು ಧರ್ಮಜ್ಞನಾದ ಮಹಾರಾಜನನ್ನು

ಗತೇಷ್ವಥ ದ್ವಿಜಾಗ್ರ್ಯೇಷು ಮಂತ್ರಿಣಸ್ತಾನ್ನರಾಧಿಪಃ ।
ವಿಸರ್ಜಯಿತ್ವಾ ಸ್ವಂ ವೇಶ್ಮ ಪ್ರವಿವೇಶ ಮಹಾದ್ಯುತಿಃ ॥ ೨೨

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ದ್ವಾದಶಃ ಸರ್ಗಃ

---

## ತ್ರಯೋದಶಃ ಸರ್ಗಃ

### ಯಜ್ಞಶಾಲಾಪ್ರವೇಶಃ

ಪುನಃ ಪ್ರಾಪ್ತೇ ವಸಂತೇ ತು ಪೂರ್ಣಃ ಸಂವತ್ಸರೋಽಭವತ್ ।
ಪ್ರಸವಾರ್ಥಂ ಗತೋ ಯಷ್ಟುಂ ಹಯಮೇಧೇನ ವೀರ್ಯವಾನ್॥

ಅಭಿವಾದ್ಯ ವಸಿಷ್ಠಂ ಚ ನ್ಯಾಯತಃ ಪ್ರತಿಪೂಜ್ಯ ಚ ।
ಅಬ್ರವೀತ್ ಪ್ರಶ್ರಿತಂ ವಾಕ್ಯಂ ಪ್ರಸವಾರ್ಥಂ ದ್ವಿಜೋತ್ತಮಮ್ ॥

---

ಪ್ರಶಂಸೆಮಾಡಿ ಅವನಿಂದ ಬೀಳ್ಕೊಂಡು ಹೊರಟುಹೋದರು. ದಶರಥನು ಮಂತ್ರಿಗಳನ್ನು ಕಳುಹಿಸಿ ರಾಜಭವನದೊಳಗೆ ಹೋದನು (೨೧-೨೨).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಹನ್ನೆರಡನೆಯ ಸರ್ಗ

---

## ಸರ್ಗ ೧೩

ದಶರಥನು ಯಜ್ಞಶಾಲೆಯನ್ನು ಪ್ರವೇಶಿಸಿ ದೀಕ್ಷೆಯನ್ನು ಸ್ವೀಕರಿಸುವುದು.

ಯಜ್ಞಾಶ್ವವನ್ನು ಬಿಟ್ಟು ಒಂದು ವರ್ಷವಾದಮೇಲೆ ಪುನಃ ವಸಂತ ಕಾಲವು ಪ್ರಾಪ್ತವಾಯಿತು. ಆಗ ದಶರಥನು ಪುತ್ರಾರ್ಥವಾಗಿ ಅಶ್ವಮೇಧವನ್ನು ಮಾಡಲು ಸಿದ್ಧನಾಗಿ ಹೊರಟನು. ಗುರುಗಳಾದ ವಸಿಷ್ಠರ ಪಾದಗಳನ್ನು ಮುಟ್ಟಿ ನಮಸ್ಕರಿಸಿ ನಮ್ರತೆಯಿಂದ “ಬ್ರಾಹ್ಮಣೋತ್ತಮರೆ, ಈಗ

ಯಜ್ಞೋ ಮೇ ಕ್ರಿಯತಾಂ ಬ್ರಹ್ಮನ್ ಯಥೋಕ್ತಂ ಮುನಿಪುಂಗವ
ಯಥಾ ನ ವಿಘ್ನಃ ಕ್ರಿಯತೇ ಯಜ್ಞಾಂಗೇಷು ವಿಧೀಯತಾಮ್ ॥

ಭವಾನ್ ಸ್ನಿಗ್ಧಃ ಸುಹೃನ್ಮಹ್ಯಂ ಗುರುಶ್ಚ ಪರಮೋ ಮಹಾನ್ ।
ವೋಢವ್ಯೋ ಭವತಾ ಚೈವ ಭಾರೋ ಯಜ್ಞಸ್ಯ ಚೋದ್ಯತಃ ॥ ೪

ತಥೇತಿ ಚ ಸ ರಾಜಾನಮಬ್ರವೀದ್ ದ್ವಿಜಸತ್ತಮಃ ।
ಕರಿಷ್ಯೇ ಸರ್ವಮೇವೈತದ್ಭವತಾ ಯತ್ಸಮರ್ಥಿತಮ್ ॥ ೫

ತತೋಽಬ್ರವೀದ್ ದ್ವಿಜಾನ್ ವೃದ್ಧಾನ್ ಯಜ್ಞಕರ್ಮಸು ನಿಷ್ಠಿತಾನ್ ।
ಸ್ಥಾಪತ್ಯೇ ನಿಷ್ಠಿತಾಂಶ್ಚೈವ ವೃದ್ಧಾನ್ ಪರಮಧಾರ್ಮಿಕಾನ್ ॥ ೬

ಕರ್ಮಾಂತಿಕಾನ್ ಶಿಲ್ಪಕರಾನ್ ವರ್ಧಕೀನ್ ಖನಕಾನಪಿ ।
ಗಣಕಾನ್ ಶಿಲ್ಪಿನಶ್ಚೈವ ತಥೈವ ನಟನರ್ತಕಾನ್ ॥ ೭

ತಥಾ ಶುಚೀನ್ ಶಾಸ್ತ್ರವಿದಃ ಪುರುಷಾನ್ ಸುಬಹುಶ್ರುತಾನ್ ।
ಯಜ್ಞಕರ್ಮ ಸಮೀಹಂತಾಂ ಭವಂತೋ ರಾಜಶಾಸನಾತ್ ॥ ೮

---

ಅಶ್ವಮೇಧವನ್ನು ನಡೆಸಿಕೊಡಬೇಕು ನಿರ್ವಿಘ್ನವಾಗಿ ನೆರವೇರುವಂತೆ ಹರಸಬೇಕು ಮಿತ್ರನಂತೆ ನೀವು ನನ್ನಲ್ಲಿ ಸ್ನೇಹವನ್ನಿಟ್ಟಿದ್ದೀರಿ ನನಗೆ ಪರಮಗುರುಗಳಾಗಿದ್ದೀರಿ ಈ ಯಜ್ಞಭಾರವನ್ನು ತಾವು ವಹಿಸಿಕೊಳ್ಳಬೇಕು" ಎಂದು ನುಡಿದನು (೧-೪) ಆಗ ವಸಿಷ್ಠರು "ರಾಜ, ನೀನು ಹೇಳಿದಂತೆ ಎಲ್ಲವನ್ನೂ ನಡೆಸಿಕೊಡುತ್ತೇನೆ" ಎಂದು ಹೇಳಿದರು. ಅನಂತರ ಯಾಗಕರ್ಮದಲ್ಲಿ ಅನುಭವಶಾಲಿಗಳಾದ ಹಿರಿಯ ಬ್ರಾಹ್ಮಣರು, ಯಾಗೋಪಕರಣಗಳ ನಿರ್ಮಾಣವನ್ನು ಬಲ್ಲ ಧಾರ್ಮಿಕರಾದ ಶಿಲ್ಪಿಗಳು, ಕರ್ಮಸ್ವರೂಪವನ್ನು ಬಲ್ಲ ಚಿತ್ರಕಾರರು, ಬಡಗಿಗಳು, ನೆಲವನ್ನಗೆಯುವವರು, ಲೆಕ್ಕಪತ್ರವನ್ನಿಡುವವರು, ಕುಶಲಕಲಾವಿದರು, ನಟರು, ನರ್ತಕರು, ಹಾಗೆಯೇ ಶಾಸ್ತ್ರಜ್ಞರೂ ಜ್ಞಾನಿಗಳೂ ಆದ ಸಜ್ಜನರು ಮೊದಲಾದವರನ್ನು ವಸಿಷ್ಠರು ಬರಮಾಡಿಕೊಂಡರು (೫-೭). ಅವರನ್ನುದ್ದೇಶಿಸಿ "ರಾಜಾಜ್ಞೆಯಂತೆ ನೀವೆಲ್ಲರೂ ಯಜ್ಞಕಾರ್ಯಕ್ಕೆ ನೆರವಾಗಬೇಕು. ನಾವಿರಗಟ್ಟಲೆ ಇಟ್ಟಿಗೆ

*

ಇಷ್ಟಕಾ ಬಹುಸಾಹಸ್ರೀ ಶೀಘ್ರಮಾನೀಯತಾಮಿತಿ ।
ಔಪಕಾರ್ಯಾಃ ಕ್ರಿಯಂತಾಂ ಚ ರಾಜ್ಞಾಂ ಬಹುಗುಣಾನ್ವಿತಾಃ ॥

ಬ್ರಾಹ್ಮಣಾವಸಥಾಶ್ಚೈವ ಕರ್ತವ್ಯಾಃ ಶತಶಃ ಶುಭಾಃ ।
ಭಕ್ಷ್ಯಾನ್ನಪಾನೈರ್ಬಹುಭಿಃ ಸಮುಪೇತಾಃ ಸುನಿಷ್ಠಿತಾಃ ॥ ೧೦

ತಥಾ ಪೌರಜನಸ್ಯಾಪಿ ಕರ್ತವ್ಯಾ ಬಹುವಿಸ್ತರಾಃ ।
ಆಗತಾನಾಂ ಸುದೂರಾಚ್ಚ ಪಾರ್ಥಿವಾನಾಂ ಪೃಥಕ್ ಪೃಥಕ್ ॥

ವಾಜಿವಾರಣಶಾಲಾಶ್ಚ ತಥಾ ಶಯ್ಯಾಗೃಹಾಣಿ ಚ ।
ಭಟಾನಾಂ ಮಹದಾವಾಸಾ ವೈದೇಶಿಕನಿವಾಸಿನಾಮ್ ॥ ೧೨

ಆವಾಸಾ ಬಹುಭಕ್ಷ್ಯಾ ವೈ ಸರ್ವಕಾಮೈರುಪಸ್ಥಿತಾಃ ।
ಪೌರಜಾನಪದಸ್ಯಾಪಿ ಜನಸ್ಯ ಬಹುಶೋಭನಮ್ ॥ ೧೩

ದಾತವ್ಯಮನ್ನಂ ವಿಧಿವತ್ ಸತ್ಕೃತ್ಯ ನ ತು ಲೀಲಯಾ ।
ಸರ್ವೇ ವರ್ಣಾ ಯಥಾ ಪೂಜಾಂ ಪ್ರಾಪ್ನುವಂತಿ ಸುಸತ್ಕೃತಾಃ ॥ ೧೪

---

ಗಳನ್ನು ತರಬೇಕು. ಯಾಗಕ್ಕೆ ಬರುವ ರಾಜರು ಇಳಿದುಕೊಳ್ಳುವುದಕ್ಕೆ ತಕ್ಕ ಭವನಗಳ ನಿರ್ಮಾಣವಾಗಬೇಕು ಬ್ರಾಹ್ಮಣರಿಗೆ ಯೋಗ್ಯವಾದ ಗೃಹಗಳನ್ನು ಕಟ್ಟಬೇಕು. ಎಲ್ಲರಿಗೂ ಅನ್ನ, ಪಾನ, ಭಕ್ಷ್ಯಗಳ ಯೋಗ್ಯ ವ್ಯವಸ್ಥೆ ಇರಬೇಕು (೮-೧೦). ಹಾಗೆಯೇ ದೂರದೇಶದಿಂದ ಬರುವ ಇತರ ಜನರಿಗೋಸ್ಕರ ದೊಡ್ಡದೊಡ್ಡ ವಸತಿಗೃಹಗಳನ್ನು ನಿರ್ಮಿಸಿ ಅಶ್ವಶಾಲೆ, ಗಜಶಾಲೆ, ಶಯ್ಯಾಗೃಹ, ವಿದೇಶದಿಂದ ಬಂದ ಸೈನಿಕರಿಗೆ ತಕ್ಕ ವಾಸಗೃಹಗಳು—ಇವೆಲ್ಲವನ್ನೂ ಸಿದ್ಧಪಡಿಸಿರಿ (೧೧-೧೨) ಅವುಗಳಲ್ಲಿ ಬೇಕಾದಷ್ಟು ಆಹಾರಸಾಮಗ್ರಿಗಳೂ ಆವಶ್ಯಕವಾದ ಎಲ್ಲಾ ಪದಾರ್ಥಗಳೂ ಸಿದ್ಧವಾಗಿರಲಿ. ನಗರವಾಸಿಗಳಿಗೂ ಗ್ರಾಮಾಂತರಗಳಿಂದ ಬರತಕ್ಕ ಪ್ರಜೆಗಳಿಗೂ ಒಳ್ಳೆಯ ಭೋಜನವನ್ನು ಒದಗಿಸತಕ್ಕದ್ದು ವಿಧಿವತ್ತಾಗಿ ಮರ್ಯಾದೆಯಿಂದ ಸಂತರ್ಪಣೆಯನ್ನು ನಡೆಸಬೇಕಲ್ಲದೆ, ಇದೆಲ್ಲ ವಿನೋದವೆಂದು ಹಗುರವಾಗಿ ಮಾತ್ರ ಭಾವಿಸಬಾರದು ಎಲ್ಲ ಜಾತಿಯವರನ್ನೂ ಚೆನ್ನಾಗಿ ಸತ್ಕರಿಸಿ ಯಥೋಚಿತವಾಗಿ ಗೌರವವನ್ನು ಸಲ್ಲಿಸತಕ್ಕದ್ದು(೧೩-೧೪).

ನ ಚಾವಜ್ಞಾ ಪ್ರಯೋಕ್ತವ್ಯಾ ಕಾಮಕ್ರೋಧವಶಾದಪಿ ।
ಯಜ್ಞಕರ್ಮಸು ಯೇ ವ್ಯಗ್ರಾಃ ಪುರುಷಾಃ ಶಿಲ್ಪಿನಸ್ತಥಾ ॥ ೧೫

ತೇಷಾಮಪಿ ವಿಶೇಷೇಣ ಪೂಜಾ ಕಾರ್ಯಾ ಯಥಾಕ್ರಮಮ್ ।
ಯೇ ಸ್ಯುಃ ಸಂಪೂಜಿತಾಃ ಸರ್ವೇ ವಸುಭಿರ್ಭೋಜನೇನ ಚ ॥ ೧೬

ಯಥಾ ಸರ್ವಂ ಸುವಿಹಿತಂ ನ ಕಿಂಚಿತ್ ಪರಿಹೀಯತೇ ।
ತಥಾ ಭವಂತಃ ಕುರ್ವಂತು ಪ್ರೀತಸ್ನಿಗ್ಧೇನ ಚೇತಸಾ ॥ ೧೭

ತತಃ ಸರ್ವೇ ಸಮಾಗಮ್ಯ ವಸಿಷ್ಠಮಿದಮಬ್ರುವನ್ ।
ಯಥೋಕ್ತಂ ತತ್ ಕರಿಷ್ಯಾಮೋ ನ ಕಿಂಚಿತ್ ಪರಿಹಾಸ್ಯತೇ ॥ ೧೮

ತತಃ ಸುಮಂತ್ರಮಾಹೂಯ ವಸಿಷ್ಠೋ ವಾಕ್ಯಮಬ್ರವೀತ್ ।
ನಿಮಂತ್ರಯಸ್ವ ನೃಪತೀನ್ ಪೃಥಿವ್ಯಾಂ ಯೇ ಚ ಧಾರ್ಮಿಕಾಃ ॥

ಬ್ರಾಹ್ಮಣಾನ್ ಕ್ಷತ್ರಿಯಾನ್ ವೈಶ್ಯಾನ್ ಶೂದ್ರಾಂಶ್ಚೈವ ಸಹಸ್ರಶಃ ।
ಸಮಾನಯಸ್ವ ಸತ್ಕೃತ್ಯ ಸರ್ವದೇಶೇಷು ಮಾನವಾನ್ ॥ ೨೦

---

ಕಾಮಕ್ರೋಧಗಳಿಗೆ ವಶರಾಗಿ ಯಾರಿಗೂ ಅವಮಾನವನ್ನು ಮಾಡಕೂಡದು. ಇದಲ್ಲದೆ ಯಾಗಕಾರ್ಯದಲ್ಲಿ ತೊಡಗಿದವರಿಗೂ ಇತರ ಕಾರ್ಯಕರ್ತರಿಗೂ ವಿಶೇಷವಾಗಿ ಉಪಚಾರವನ್ನು ನಡೆಸಬೇಕು. ಅವರೆಲ್ಲರನ್ನೂ ಧನದಿಂದಲೂ ಭೋಜನದಿಂದಲೂ ತೃಪ್ತಿಪಡಿಸಬೇಕು (೧೫-೧೬). ಕೆಲಸವೆಲ್ಲವೂ ಸಾಂಗವಾಗಿ ನೆರವೇರುವಂತೆಯೂ ಯಾವುದಕ್ಕೂ ಕೊರತೆಯಾಗದಂತೆಯೂ ನೀವೆಲ್ಲರೂ ಪ್ರೀತಿವಿಶ್ವಾಸಗಳಿಂದ ಕಾರ್ಯವನ್ನು ನಿರ್ವಹಿಸಿರಿ" ಎಂದು ಹೇಳಿದರು ಆಗ ಅವರೆಲ್ಲರೂ ವಸಿಷ್ಠರಿಗೆ "ತಾವು ಅಪ್ಪಣೆ ಮಾಡಿದಂತೆ ಕಾರ್ಯವನ್ನು ನಿರ್ವಹಿಸುತ್ತೇವೆ. ಯಾವುದಕ್ಕೂ ಕೊರತೆಯಾಗದಂತೆ ನೋಡಿಕೊಳ್ಳುತ್ತೇವೆ" ಎಂದು ಮಾತುಕೊಟ್ಟರು (೧೭-೧೮) ಆಮೇಲೆ ವಸಿಷ್ಠರು ಸುಮಂತ್ರನನ್ನು ಕರದು "ಅಯ್ಯಾ-ಸುಮಂತ್ರ, ಈ ಭೂಮಂಡಲದಲ್ಲಿರುವ ಧಾರ್ಮಿಕರಾದ ಸಕಲ ಭೂಪತಿಗಳಿಗೂ (ಯಜ್ಞಕ್ಕೆ ಬರುವಂತೆ) ಆಹ್ವಾನವನ್ನು ಕಳಿಸು ದೇಶವಿದೇಶಗಳಲ್ಲಿರುವ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರುಗಳನ್ನು ಸತ್ಕರಿಸಿ ಅವರಲ್ಲರೂ ಸಾವಿರಾರು ಸಂಖ್ಯೆಯಲ್ಲಿ

ಮಿಥಿಲಾಧಿಪತಿಂ ಶೂರಂ ಜನಕಂ ಸತ್ಯವಾದಿನಮ್ ।
ನಿಷ್ಠಿತಂ ಸರ್ವಶಾಸ್ತ್ರೇಷು ತಥಾ ವೇದೇಷು ನಿಷ್ಠಿತಮ್ ॥ ೨೧

ತಮಾನಯ ಮಹಾಭಾಗಂ ಸ್ವಯಮೇವ ಸುಸತ್ಕೃತಮ್ ।
ಪೂರ್ವಸಂಬಂಧಿನಂ ಜ್ಞಾತ್ವಾ ತತಃ ಪೂರ್ವಂ ಬ್ರವೀಮಿ ತೇ ॥ ೨೨

ತಥಾ ಕಾಶೀಪತಿಂ ಸ್ನಿಗ್ಧಂ ಸತತಂ ಪ್ರಿಯವಾದಿನಮ್ ।
ಸದ್ವೃತ್ತಂ ದೇವಸಂಕಾಶಂ ಸ್ವಯಮೇವಾನಯಸ್ವ ಹ ॥ ೨೩

ತಥಾ ಕೇಕಯರಾಜಾನಂ ವೃದ್ಧಂ ಪರಮಧಾರ್ಮಿಕಮ್ ।
ಶ್ವಶುರಂ ರಾಜಸಿಂಹಸ್ಯ ಸಪುತ್ರಂ ತ್ವಮಿಹಾನಯ ॥ ೨೪

ಅಂಗೇಶ್ವರಂ ಮಹಾಭಾಗಂ ರೋಮಪಾದಂ ಸುಸತ್ಕೃತಮ್ ।
ವಯಸ್ಯಂ ರಾಜಸಿಂಹಸ್ಯ ಸಮಾನಯ ಯಶಸ್ವಿನಮ್ ॥ ೨೫

ಪ್ರಾಚೀನಾನ್ ಸಿಂಧುಸೌವೀರಾನ್ ಸೌರಾಷ್ಟ್ರೇಯಾಂಶ್ಚ ಪಾರ್ಥಿವಾನ್
ದಾಕ್ಷಿಣಾತ್ಯಾನ್ನರೇಂದ್ರಾಂಶ್ಚ ಸಮಸ್ತಾನಾನಯಸ್ವ ಹ ॥ ೨೬

---

ಬರುವಂತೆ ಏರ್ಪಡಿಸು (೧೯-೨೦). ಮಿಥಿಲಾಧಿಪತಿಯಾದ ಜನಕ ಮಹಾರಾಜನಿರುವನಷ್ಟೆ. ಅವನು ಶೂರ, ಸತ್ಯವಾದಿ. ವೇದಗಳಲ್ಲಿಯೂ ಸಕಲಶಾಸ್ತ್ರಗಳಲ್ಲಿಯೂ ದೊಡ್ಡ ವಿದ್ವಾಂಸ (೨೧). ಆ ಮಹಾಪುರುಷನ ಬಳಿಗೆ ನೀನೇ ಹೋಗಿ ಸತ್ಕರಿಸಿ ಕರೆದುಕೊಂಡುಬಾ. ಅವನು ದಶರಥನಿಗೆ ಪೂರ್ವದಿಂದಲೂ ಬಂಧು. ಅದನ್ನರಿತು ನಾನು ಈ ಮಾತನ್ನು ಹೇಳು ತ್ತಿದ್ದೇನೆ. ಹಾಗೆಯೇ ದಶರಥನಿಗೆ ಮಿತ್ರನೂ ಪ್ರಿಯವಾದಿಯೂ ಸದಾಚಾರ ನಿರತನೂ ದೇವಸಮಾನನೂ ಆದ ಕಾಶೀರಾಜನನ್ನು ನೀನೇ ಕರೆದುಕೊಂಡು ಬರಬೇಕು (೨೨-೨೩). ಮಹಾರಾಜನಿಗೆ ಮಾವನೂ ಪರಮ ಧಾರ್ಮಿಕನೂ ಆದ ವೃದ್ಧ ಕೇಕಯರಾಜನನ್ನು ಪುತ್ರಸಮೇತನಾಗಿ ಬರುವಂತೆ ಕರೆದುಬಾ. ಹಾಗೆಯೇ ಮಹಾರಾಜನಿಗೆ ಸ್ನೇಹಿತನೂ ಮಹಾಭಾಗನೂ ಆದ ರೋಮಪಾದನನ್ನು ಸತ್ಕರಿಸಿ ಕರೆತರಬೇಕು (೨೪-೨೫). ಪೂರ್ವದೇಶ, ದಕ್ಷಿಣದೇಶಗಳ ಸಮಸ್ತ ನರೇಂದ್ರರನ್ನೂ ಸಿಂಧು, ಸೌವೀರ, ಸೌರಾಷ್ಟ್ರದ

**ಸಂತಿ ಸ್ನಿಗ್ಧಾಶ್ಚ ಯೇ ಚಾನ್ಯೇ ರಾಜಾನಃ ಪೃಥಿವೀತಲೇ ।**
**ತಾನಾನಯ ಯಥಾ ಕ್ಷಿಪ್ರಂ ಸಾನುಗಾನ್ ಸಹಬಾಂಧವಾನ್ ॥ ೨೭**

**ಏತಾನ್ ದೂತೈರ್ಮಹಾಭಾಗೈರಾನಯಸ್ವ ನೃಪಾಜ್ಞಯಾ ।**
**ವಸಿಷ್ಠವಾಕ್ಯಂ ತಚ್ಛ್ರುತ್ವಾ ಸುಮಂತ್ರಸ್ತ್ವರಿತಸ್ತದಾ ॥ ೨೮**

**ವ್ಯಾದಿಶತ್ ಪುರುಷಾಂಸ್ತತ್ರ ರಾಜ್ಞಾಮಾನಯನೇ ಶುಭಾನ್ ।**
**ಸ್ವಯಮೇವ ಹಿ ಧರ್ಮಾತ್ಮಾ ಪ್ರಯಯೌ ಮುನಿಶಾಸನಾತ್॥ ೨೯**

**ಸುಮಂತ್ರಸ್ತ್ವರಿತೋ ಭೂತ್ವಾ ಸಮಾನೇತುಂ ಮಹೀಕ್ಷಿತಃ ।**
**ತೇ ಚ ಕರ್ಮಾಂತಿಕಾಃ ಸರ್ವೇ ವಸಿಷ್ಠಾಯ ಚ ಧೀಮತೇ ॥ ೩೦**

**ಸರ್ವಂ ನಿವೇದಯಂತಿ ಸ್ಮ ಯಜ್ಞೇ ಯದುಪಕಲ್ಪಿತಮ್ ।**
**ತತಃ ಪ್ರೀತೋ ದ್ವಿಜಶ್ರೇಷ್ಠಸ್ತಾನ್ ಸರ್ವಾನಿದಮಬ್ರವೀತ್ ॥ ೩೧**

**ಅವಜ್ಞಯಾ ನ ದಾತವ್ಯಂ ಕಸ್ಯಚಿಲ್ಲೀಲಯಾಪಿ ವಾ ।**
**ಅವಜ್ಞಯಾ ಕೃತಂ ಹನ್ಯಾದ್ದಾತಾರಂ ನಾತ್ರ ಸಂಶಯಃ ॥ ೩೨**

---

ಭೂಪಾಲರನ್ನೂ ಬರುವಂತೆ ಆಹ್ವಾನಿಸಬೇಕು. ಒಟ್ಟಿನಲ್ಲಿ ದಶರಥ ಮಹಾರಾಜನಿಗೆ ಪ್ರೀತಿಪಾತ್ರರಾದ ದೊರೆಗಳು ಯಾರು ಯಾರು ಇದ್ದಾರೊ, ಅವರೆಲ್ಲರೂ ಬಂಧುಪರಿವಾರಸಮೇತರಾಗಿ ಆಗಮಿಸುವಂತೆ ಆಹ್ವಾನವನ್ನು ಕಳಿಸತಕ್ಕದ್ದು (೨೬-೨೭). ಇದೆಲ್ಲವೂ ರಾಜಾಜ್ಞೆಯೆಂದು ತಿಳಿದು ಯೋಗ್ಯರಾದ ದೂತರನ್ನು ಕಳಿಸಿ ರಾಜರನ್ನು ಬರಮಾಡು" ಎಂದರು. ಸುಮಂತ್ರನು ಕೂಡಲೇ ಸಮರ್ಥರಾದ ದೂತರು ಬೇರೆ ಬೇರೆ ಕಡೆಗೆ ಹೋಗುವಂತೆ ವ್ಯವಸ್ಥೆ ಮಾಡಿದನು ವಸಿಷ್ಠಮುನಿಗಳು ಹೇಳಿದಂತೆ ಕೆಲವು ಸ್ಥಳಗಳಿಗೆ ತಾನೇ ಹೋದನು (೨೮-೩೦) ಯಜ್ಞಕಾರ್ಯದಲ್ಲಿ ನಿಯುಕ್ತರಾಗಿದ್ದ ಕಾರ್ಯಕರ್ತರು ತಮಗೆ ಆಜ್ಞೆಯಾಗಿದ್ದ ಕಾರ್ಯಗಳನ್ನು ನೆರವೇರಿಸಿ, ಅದೆಲ್ಲವನ್ನೂ ವಸಿಷ್ಠರಿಗೆ ಅರಿಕೆಮಾಡಿದರು ವಸಿಷ್ಠರು ಸಂತುಷ್ಟರಾಗಿ ಆ ಬ್ರಾಹ್ಮಣರನ್ನು ಕುರಿತು "(ಯಾಗಸಮಯದಲ್ಲಿ) ಅನಾದರದಿಂದಾಗಲಿ ವಿನೋದವೆಂಬ ಭಾವನೆಯಿಂದಾಗಲಿ ಯಾರಿಗೂ ದಾನಮಾಡತಕ್ಕದ್ದಲ್ಲ ಅನಾದರದಿಂದ ಮಾಡಿದರೆ ದಾತನಿಗೆ ಕೇಡು ತಪ್ಪದು ಸಂದೇಹವೇ ಇಲ್ಲ" ಎಂದು

ತತಃ ಕೈಶ್ಚಿದಹೋರಾತ್ರೈರುಪಯಾತಾ ಮಹೀಕ್ಷಿತಃ ।
ಬಹೂನಿ ರತ್ನಾನ್ಯಾದಾಯ ರಾಜ್ಞೋ ದಶರಥಸ್ಯ ಹ ॥ ೩೩

ತತೋ ವಸಿಷ್ಠಃ ಸುಪ್ರೀತೋ ರಾಜಾನಮಿದಮಬ್ರವೀತ್ ।
ಉಪಯಾತಾ ನರವ್ಯಾಘ್ರ ರಾಜಾನಸ್ತವ ಶಾಸನಾತ್ ॥ ೩೪

ಮಯಾ ಚ ಸತ್ಕೃತಾಃ ಸರ್ವೇ ಯಥಾರ್ಹಂ ರಾಜಸತ್ತಮಾಃ ।
ಯಜ್ಞಿಯಂ ಚ ಕೃತಂ ರಾಜನ್ ಪುರುಷೈಃ ಸುಸಮಾಹಿತೈಃ ॥ ೩೫

ನಿರ್ಯಾತು ಚ ಭವಾನ್ ಯಷ್ಟುಂ ಯಜ್ಞಾಯತನಮಂತಿಕಾತ್ ।
ಸರ್ವಕಾಮೈರುಪಹೃತೈರುಪೇತಂ ವೈ ಸಮಂತತಃ ॥ ೩೬

ದ್ರಷ್ಟುಮರ್ಹಸಿ ರಾಜೇಂದ್ರ ಮನಸೇವ ವಿನಿರ್ಮಿತಮ್ ।
ತಥಾ ವಸಿಷ್ಠವಚನಾದೃಷ್ಯಶೃಂಗಸ್ಯ ಚೋಭಯೋಃ ॥ ೩೭

ದಿವಸೇ ಶುಭನಕ್ಷತ್ರೇ ನಿರ್ಯಾತೋ ಜಗತೀಪತಿಃ ।
ತತೋ ವಸಿಷ್ಠಪ್ರಮುಖಾಃ ಸರ್ವ ಏವ ದ್ವಿಜೋತ್ತಮಾಃ ॥ ೩೮

---

ತಿಳಿಸಿದರು (೩೧-೩೨) ಅನಂತರ ಕೆಲವು ದಿನಗಳಲ್ಲಿ ಭೂಪತಿಗಳು ದಶರಥನಿಗೋಸ್ಕರ ನಾನಾ ಬಗೆಯ ರತ್ನಗಳನ್ನು ಹೇರಳವಾಗಿ ತೆಗೆದು ಕೊಂಡು ಬಂದರು. ವಸಿಷ್ಠಮುನಿಗಳು ಸಂತುಷ್ಟಚಿತ್ತರಾಗಿ ದಶರಥನನ್ನು ಕಂಡು "ಮಹಾರಾಜ, ನಿನ್ನ ಆಜ್ಞೆಯಂತೆ ಭೂಪತಿಗಳು ಆಗಮಿಸಿದ್ದಾರೆ. ಅವರೆಲ್ಲರನ್ನೂ ನಾನು ಯಥೋಚಿತವಾಗಿ ಸತ್ಕರಿಸಿದ್ದೇನೆ ಕಾರ್ಯಕರ್ತರು ಯಜ್ಞಸಾಮಗ್ರಿಗಳನ್ನು ಎಚ್ಚರಿಕೆಯಿಂದ ಸಿದ್ಧಗೊಳಿಸಿದ್ದಾರೆ (೩೩-೩೫). ನೀನು ಬಂದು ಯಾಗಶಾಲೆಯನ್ನು ನೋಡು. ಬೇಕಾಗಿರುವ ಸಕಲ ವಸ್ತುಗಳನ್ನೂ ತರಿಸಿ ಸುತ್ತಲೂ ಅಣಿಮಾಡಲಾಗಿದೆ ಮಾನಸಸೃಷ್ಟಿಯೋ ಎಂಬಂತೆ ನಿರ್ಮಾಣವಾಗಿರುವ ಯಾಗಶಾಲೆಯನ್ನು ನೀನು ನೋಡಬೇಕು" ಎಂದರು (೩೬-೩೭). ಆಗ ದಶರಥನು ಋಷ್ಯಶೃಂಗರ ಅನುಮತಿಯನ್ನು ಪಡೆದು ಶುಭನಕ್ಷತ್ರದಿಂದ ಕೂಡಿದ ಒಳ್ಳೆಯ ಮುಹೂರ್ತದಲ್ಲಿ ಯಾಗಶಾಲೆಗೆ ತರಳಿದನು ಅನಂತರ ವಸಿಷ್ಠರೇ ಮೊದಲಾದ ದ್ವಿಜೋತ್ತಮರು

ಋಷ್ಯಶೃಂಗಂ ಪುರಸ್ಕೃತ್ಯ ಯಜ್ಞಕರ್ಮಾರಭಂಸ್ತದಾ ।
ಯಜ್ಞವಾಟಗತಾಃ ಸರ್ವೇ ಯಥಾಶಾಸ್ತ್ರಂ ಯಥಾವಿಧಿ ॥ ೩೯
ಶ್ರೀಮಾಂಶ್ಚ ಸಹ ಪತ್ನೀಭೀ ರಾಜಾ ದೀಕ್ಷಾಮುಪಾವಿಶತ್ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ತ್ರಯೋದಶಃ ಸರ್ಗಃ

---

## ಚತುರ್ದಶಃ ಸರ್ಗಃ

### ಅಶ್ವಮೇಧಃ

ಅಥ ಸಂವತ್ಸರೇ ಪೂರ್ಣೇ ತಸ್ಮಿನ್ ಪ್ರಾಪ್ತೇ ತುರಂಗಮೇ ।
ಸರಯ್ವಾಶ್ಚೋತ್ತರೇ ತೀರೇ ರಾಜ್ಞೋ ಯಜ್ಞೋಽಭ್ಯವರ್ತತ ॥ ೧
ಋಷ್ಯಶೃಂಗಂ ಪುರಸ್ಕೃತ್ಯ ಕರ್ಮ ಚಕ್ರುರ್ದ್ವಿಜರ್ಷಭಾಃ ।
ಅಶ್ವಮೇಧೇ ಮಹಾಯಜ್ಞೇ ರಾಜ್ಞಸ್ತಸ್ಯ ಮಹಾತ್ಮನಃ ॥ ೨

---

ಋಷ್ಯಶೃಂಗನನ್ನು ಮುಂದುಮಾಡಿಕೊಂಡು ಶಾಸ್ತ್ರೋಕ್ತವಾದ ಕ್ರಮದಿಂದ ಯಜ್ಞಶಾಲೆಯಲ್ಲಿ ಯಜ್ಞಕಾರ್ಯವನ್ನು ಆರಂಭಿಸಿದರು ದಶರಥ ಮಹಾರಾಜನು ತನ್ನ ಪತ್ನಿಯರೊಡನೆ ಯಜ್ಞದೀಕ್ಷೆಯನ್ನು ಸ್ವೀಕರಿಸಿದನು (೩೮-೩೯)

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಹದಿಮೂರನೆಯ ಸರ್ಗ

---

## ಸರ್ಗ ೧೪

### ಅಶ್ವಮೇಧಯಾಗ

ಸಂವತ್ಸರವು ಪೂರ್ಣವಾಗಿ ಅಶ್ವಮೇಧದ ಕುದುರೆಯು ಹಿಂದಿರುಗಿ ಬಂದಿತು. ಆಗ ಸರಯೂನದಿಯ ಉತ್ತರತೀರದಲ್ಲಿ ದಶರಥಮಹಾರಾಜನ ಅಶ್ವಮೇಧವು ಪ್ರಾರಂಭವಾಯಿತು ಆ ಬ್ರಾಹ್ಮಣರು ಋಷ್ಯಶೃಂಗನನ್ನು ಪ್ರಧಾನ ಋತ್ವಿಜನನ್ನಾಗಿ ಮಾಡಿಕೊಂಡು ವಿಧಿವತ್ತಾಗಿ ಅನುಷ್ಠಾನಗಳನ್ನು

ಕರ್ಮ ಕುರ್ವಂತಿ ವಿಧಿವದ್ಯಾಜಕಾ ವೇದಪಾರಗಾಃ ।
ಯಥಾವಿಧಿ ಯಥಾನ್ಯಾಯಂ ಪರಿಕ್ರಾಮಂತಿ ಶಾಸ್ತ್ರತಃ ॥ ೩

ಪ್ರವರ್ಗ್ಯಂ ಶಾಸ್ತ್ರತಃ ಕೃತ್ವಾ ತಥೈವೋಪಸದಂ ದ್ವಿಜಾಃ ।
ಚಕ್ರುಶ್ಚ ವಿಧಿವತ್ ಸರ್ವಮಧಿಕಂ ಕರ್ಮ ಶಾಸ್ತ್ರತಃ ॥ ೪

ಅಭಿಪೂಜ್ಯ ತತೋ ಹೃಷ್ಟಾಃ ಸರ್ವೇ ಚಕ್ರುರ್ಯಥಾವಿಧಿ ।
ಪ್ರಾತಃಸವನಪೂರ್ವಾಣಿ ಕರ್ಮಾಣಿ ಮುನಿಪುಂಗವಾಃ ॥ ೫

ಐಂದ್ರಶ್ಚ ವಿಧಿವದ್ದತ್ತೋ ರಾಜಾ ಚಾಭಿಷ್ಟುತೋಽನಘಃ ।
ಮಾಧ್ಯಂದಿನಂ ಚ ಸವನಂ ಪ್ರಾವರ್ತತ ಯಥಾಕ್ರಮಮ್ ॥ ೬

ತೃತೀಯಸವನಂ ಚೈವ ರಾಜ್ಞೋಽಸ್ಯ ಸುಮಹಾತ್ಮನಃ ।
ಚಕ್ರುಸ್ತೇ ಶಾಸ್ತ್ರತೋ ದೃಷ್ಟ್ವಾ ಕರ್ಮಾಣಿ ಮುನಿಪುಂಗವಾಃ ॥ ೭

ಆಹ್ವಯಾಂಚಕ್ರಿರೇ ತತ್ರ ಶಕ್ರಾದೀನ್ ವಿಬುಧೋತ್ತಮಾನ್ ।
ಋಷ್ಯಶೃಂಗಾದಯೋ ಮಂತ್ರೈಃ ಶಿಕ್ಷಾಕ್ಷರಸಮನ್ವಿತೈಃ ॥ ೮

ಗೀತಿಭಿರ್ಮಧುರೈಃ ಸ್ನಿಗ್ಧೈರ್ಮಂತ್ರಾಹ್ವಾನೈರ್ಯಥಾರ್ಹತಃ ।
ಹೋತಾರೋ ದದುರಾವಾಹ್ಯ ಹವಿರ್ಭಾಗಾನ್ ದಿವೌಕಸಾಮ್ ॥

---

ಮಾಡತೊಡಗಿದರು(೧-೨). ವೇದಪಾರಂಗತರಾದ ಆ ಋತ್ವಿಜರು ಶಾಸ್ತ್ರೋಕ್ತ ಕ್ರಮದಲ್ಲಿಯೇ ಯಜ್ಞಶಾಲೆಯಲ್ಲಿ ವ್ಯವಹರಿಸುತ್ತಿದ್ದರು. ಅವರು ಪ್ರವರ್ಗ್ಯ ಹೋಮವನ್ನೂ ಉಪಸದ ಎಂಬ ಇಷ್ಟಿಯನ್ನೂ ಅದಕ್ಕೆ ಸಂಬಂಧಿಸಿದ ಇತರ ಕರ್ಮಗಳನ್ನೂ ಆಚರಿಸಿದರು (೩-೪). ಆಯಾ ಕರ್ಮಾಧಿದೇವತೆಗಳನ್ನು ಪೂಜಿಸಿ ಪ್ರಾತಃಸವನ ಮುಂತಾದ ಕರ್ಮಗಳನ್ನು ಅನುಷ್ಠಾನಮಾಡಿದರು. ಆಮೇಲೆ ಇಂದ್ರದೇವತಾಕವಾದ ಹವಿರ್ಭಾಗವನ್ನು ಕೊಟ್ಟು ಪಾಪಹರನಾದ ಸೋಮರಾಜನನ್ನು ಸ್ತುತಿಸಿ ಮಾಧ್ಯಂದಿನಸವನವನ್ನು ನೆರವೇರಿಸಿದರು (೫-೬). ಆ ಬ್ರಾಹ್ಮಣೋತ್ತಮರು ಅನಂತರ ಶಾಸ್ತ್ರೋಕ್ತವಾಗಿ ತೃತೀಯ ಸವನವನ್ನು ಮಾಡಿದರು ಋಷ್ಯಶೃಂಗ ಮೊದಲಾದ ಋತ್ವಿಜರು ಶಿಕ್ಷಾ ಶಾಸ್ತ್ರವು ಬೋಧಿಸುವಂತೆ ಪರಿಶುದ್ಧವಾದ ಅಕ್ಷರಗಳನ್ನುಚ್ಚರಿಸುತ್ತಾ ಮಂತ್ರ ಗಳಿಂದ ದೇವೇಂದ್ರನೇ ಮೊದಲಾದ ದೇವತೆಗಳನ್ನು ಆಹ್ವಾನಿಸಿದರು (೭-೮). ಹೋತೃಗಳು ಮಧುರವೂ ಸ್ನೇಹಯುಕ್ತವೂ ಆಗಿ ಇಂಪಾದ ಧ್ವನಿಗಳಿಂದ

ನ ಚಾಹುತಮಭೂತ್ತತ್ರ ಸ್ಖಲಿತಂ ನಾಪಿ ಕಿಂಚನ ।
ದೃಶ್ಯತೇ ಬ್ರಹ್ಮವತ್ ಸರ್ವಂ ಕ್ಷೇಮಯುಕ್ತಂ ಹಿ ಚಕ್ರಿರೇ ॥ ೧೦

ನ ತೇಷ್ವಹಃಸು ಶ್ರಾಂತೋ ವಾ ಕ್ಷುಧಿತೋ ವಾಪಿ ದೃಶ್ಯತೇ ।
ನಾವಿದ್ವಾನ್ ಬ್ರಾಹ್ಮಣಸ್ತತ್ರ ನಾಶತಾನುಚರಸ್ತಥಾ ॥ ೧೧

ಬ್ರಾಹ್ಮಣಾ ಭುಂಜತೇ ನಿತ್ಯಂ ನಾಥವಂತಶ್ಚ ಭುಂಜತೇ ।
ತಾಪಸಾ ಭುಂಜತೇ ಚಾಪಿ ಶ್ರಮಣಾ ಭುಂಜತೇ ತಥಾ ॥ ೧೨

ವೃದ್ಧಾಶ್ಚ ವ್ಯಾಧಿತಾಶ್ಚೈವ ಸ್ತ್ರಿಯೋ ಬಾಲಾಸ್ತಥೈವ ಚ ।
ಅನಿಶಂ ಭುಂಜಮಾನಾನಾಂ ನ ತೃಪ್ತಿರುಪಜಾಯತೇ ॥ ೧೩

ದೀಯತಾಂ ದೀಯತಾಮನ್ನಂ ವಾಸಾಂಸಿ ವಿವಿಧಾನಿ ಚ ।
ಇತಿ ಸಂಚೋದಿತಾಸ್ತತ್ರ ತಥಾ ಚಕ್ರುರನೇಕಶಃ ॥ ೧೪

ಅನ್ನಕೂಟಾಶ್ಚ ಬಹವೋ ದೃಶ್ಯಂತೇ ಪರ್ವತೋಪಮಾಃ ।
ದಿವಸೇ ದಿವಸೇ ತತ್ರ ಸಿದ್ಧಸ್ಯ ವಿಧಿವತ್ತದಾ ॥ ೧೫

---

ಕೂಡಿದ ಋಙ್ಮಂತ್ರಗಳಿಂದ ದೇವತೆಗಳನ್ನು ಆಹ್ವಾನಿಸಿ ಹವಿರ್ಭಾಗಗಳನ್ನು ಅರ್ಪಿಸಿದರು. ಆ ಯಜ್ಞದಲ್ಲಿ ಯಾವ ಹವಿರ್ಭಾಗವನ್ನೂ ಅರ್ಪಿಸದೆ ಬಿಡಲಿಲ್ಲ. ಯಾವ ಶಾಸ್ತ್ರಲೋಪವೂ ನಡೆಯಲಿಲ್ಲ ಸರ್ವಕರ್ಮಗಳನ್ನೂ ಋತ್ವಿಜರು ಮಂತ್ರಪೂರ್ವಕವಾಗಿಯೂ ನಿರ್ವಿಘ್ನವಾಗಿಯೂ ನೆರವೇರಿಸಿದರು (೯–೧೦) ಆ ದಿನಗಳಲ್ಲಿ ಬಳಲಿದವನಾಗಲಿ ಹಸಿದವನಾಗಲಿ ಕಂಡುಬರಲಿಲ್ಲ. ಅಲ್ಲಿ ವಿದ್ವಾಂಸನಲ್ಲದ ಬ್ರಾಹ್ಮಣನಿರಲಿಲ್ಲ ನೂರು ಮಂದಿ ಶಿಷ್ಯರಾದರೂ ಇಲ್ಲದ ಆಚಾರ್ಯನಿರಲಿಲ್ಲ ಅಲ್ಲಿ ಬ್ರಾಹ್ಮಣರೂ, ಭೃತ್ಯರೂ, ತಪಸ್ವಿಗಳೂ, ಸಂನ್ಯಾಸಿಗಳೂ, ವೃದ್ಧರೂ, ಹೆಂಗಸರೂ, ಹುಡುಗರೂ ಪ್ರತಿದಿನವೂ ಊಟಮಾಡುತ್ತಲೇ ಇದ್ದರೂ (ಅಡಿಗೆಯು ಬಹಳ ರುಚಿಕರವಾಗಿದ್ದುದರಿಂದ) ಎಷ್ಟು ಊಟಮಾಡಿದರೂ ತೃಪ್ತಿಯೇ ಇಲ್ಲ (೧೧–೧೩). 'ಇನ್ನೂ ಅನ್ನವನ್ನು ಬಡಿಸಿರಿ ವಸ್ತ್ರಗಳನ್ನು ಕೊಡಿರಿ' ಎಂದು ವಿಚಾರಣಾಕರ್ತರು ಹೇಳುತ್ತಲೇ ಇದ್ದರು. ಕಾರ್ಯಕರ್ತರು ಅದರಂತೆ ಮಾಡುತ್ತಲೇ ಇದ್ದರು. ಪ್ರತಿದಿನವೂ

ನಾನಾದೇಶಾದನುಪ್ರಾಪ್ತಾಃ ಪುರುಷಾಃ ಸ್ತ್ರೀಗಣಾಸ್ತಥಾ ।
ಅನ್ನಪಾನೈಃ ಸುವಿಹಿತಾಸ್ತಸ್ಮಿನ್ ಯಜ್ಞೇ ಮಹಾತ್ಮನಃ ॥ ೧೬

ಅನ್ನಂ ಹಿ ವಿಧಿವತ್ ಸ್ವಾದು ಪ್ರಶಂಸಂತಿ ದ್ವಿಜರ್ಷಭಾಃ ।
ಅಹೋ ತೃಪ್ತಾಃ ಸ್ಮ ಭದ್ರಂ ತೇ ಇತಿ ಶುಶ್ರಾವ ರಾಘವಃ ॥ ೧೭

ಸ್ವಲಂಕೃತಾಶ್ಚ ಪುರುಷಾ ಬ್ರಾಹ್ಮಣಾನ್ ಪರ್ಯವೇಷಯನ್ ।
ಉಪಾಸತೇ ಚ ತಾನನ್ಯೇ ಸುಮೃಷ್ಟಮಣಿಕುಂಡಲಾಃ ॥ ೧೮

ಕರ್ಮಾಂತರೇ ತದಾ ವಿಪ್ರಾ ಹೇತುವಾದಾನ್ ಬಹೂನಪಿ ।
ಪ್ರಾಹುಃ ಸ್ಮ ವಾಗ್ಮಿನೋ ಧೀರಾಃ ಪರಸ್ಪರಜಿಗೀಷಯಾ ॥ ೧೯

ದಿವಸೇ ದಿವಸೇ ತತ್ರ ಸಂಸ್ತರೇ ಕುಶಲಾ ದ್ವಿಜಾಃ ।
ಸರ್ವಕರ್ಮಾಣಿ ಚಕ್ರುಸ್ತೇ ಯಥಾಶಾಸ್ತ್ರಂ ಪ್ರಚೋದಿತಾಃ ॥ ೨೦

ನಾಷಡಂಗವಿದತ್ರಾಸೀನ್ನಾವ್ರತೋ ನಾಬಹುಶ್ರುತಃ ।
ಸದಸ್ಯಾಸ್ತಸ್ಯ ವೈ ರಾಜ್ಞೋ ನಾವಾದಕುಶಲಾ ದ್ವಿಜಾಃ ॥ ೨೧

---

ಕ್ರಮವರಿತು ಮಾಡಿಹಾಕುತ್ತಿದ್ದ ಅನ್ನದ ರಾಶಿಗಳು ಪರ್ವತಗಳಂತೆ ಕಾಣು ತ್ತಿದ್ದವು ಮಹಾತ್ಮನಾದ ದಶರಥನ ಯಾಗಕ್ಕೆ ನಾನಾ ದೇಶಗಳಿಂದ ಬಂದಿದ್ದ ಗಂಡಸರು ಹೆಂಗಸರುಗಳೆಲ್ಲರೂ ಅನ್ನಪಾನಗಳಿಂದ ತೃಪ್ತರಾದರು (೧೪-೧೬). ಮೃಷ್ಟಾನ್ನಭೋಜನಮಾಡಿದ ಬ್ರಾಹ್ಮಣರು 'ಆಹಾ! ನಮಗೆ ತೃಪ್ತಿಯಾಯಿತು. ದಶರಥರಾಜ, ನಿನಗೆ ಶುಭವಾಗಲಿ!' ಎಂದು ಹರಸುತ್ತಿರುವುದನ್ನು ಕೇಳಿ ದಶರಥನು ಸಂತೋಷಪಡುತ್ತಿದ್ದನು ಅಲಂಕೃತರಾದ ಪರಿಚಾರಕರು ಬ್ರಾಹ್ಮಣರಿಗೆ ಬಡಿಸುತ್ತಿದ್ದರು ಮಣಿಮಯ ಕುಂಡಲಗಳನ್ನು ಧರಿಸಿದ್ದ ಮತ್ತೆ ಕೆಲವು ಪರಿಚಾರಕರು ಅವರಿಗೆ ಸಹಾಯಮಾಡುತ್ತಿದ್ದರು (೧೭-೧೮). ಯಜ್ಞಕರ್ಮದ ಮಧ್ಯದಲ್ಲಿ ವಿರಾಮವಾದಾಗ ವಿದ್ವಾಂಸರಾದ ಋತ್ವಿಜರು ಶಾಸ್ತ್ರಾರ್ಥದಲ್ಲಿ ಒಬ್ಬರನ್ನೊಬ್ಬರು ಜಯಿಸುವ ಇಚ್ಛೆಯಿಂದ ವಾಗ್ಧೋರಣೆಯನ್ನು ವ್ಯಕ್ತಪಡಿಸುತ್ತ ಯುಕ್ತಿಯುಕ್ತವಾಗಿ ವಾಕ್ಯಾರ್ಥವನ್ನು ನಡೆಸುತ್ತಿದ್ದರು. ಯಜ್ಞಕರ್ಮದಲ್ಲಿ ಕುಶಲರಾದ ಆ ಬ್ರಾಹ್ಮಣರು ಪ್ರತಿದಿವಸವೂ ಹಿರಿಯರು ಸೂಚಿಸಿದಂತೆ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದರು (೧೯-೨೦). ದಶರಥನ ಆ ಯಾಗದಲ್ಲಿ ಸದಸ್ಯರಾಗಿದ್ದ ಋತ್ವಿಜರಲ್ಲಿ ಪ್ರತಿ

ಪ್ರಾಪ್ತೇ ಯೂಪೋಚ್ಛ್ರಯೇ ತಸ್ಮಿನ್ ಷಡ್ಬೈಲ್ವಾಃ ಖಾದಿರಾಸ್ತಥಾ
ತಾವಂತೋ ಬಿಲ್ವಸಹಿತಾಃ ಪರ್ಣಿನಶ್ಚ ತಥಾಪರೇ ॥ ೨೨

ಶ್ಲೇಷ್ಮಾತಕಮಯಸ್ತ್ವೇಕೋ ದೇವದಾರುಮಯಸ್ತಥಾ ।
ದ್ವಾವೇವ ವಿಹಿತೌ ತತ್ರ ಬಾಹುವ್ಯಸ್ತಪರಿಗ್ರಹೌ ॥ ೨೩

ಕಾರಿತಾಃ ಸರ್ವ ಏವೈತೇ ಶಾಸ್ತ್ರಜ್ಞೈರ್ಯಜ್ಞಕೋವಿದೈಃ ।
ಶೋಭಾರ್ಥಂ ತಸ್ಯ ಯಜ್ಞಸ್ಯ ಕಾಂಚನಾಲಂಕೃತಾಭವನ್ ॥ ೨೪

ಏಕವಿಂಶತಿಯೂಪಾಸ್ತೆ ಏಕವಿಂಶತ್ಯರತ್ನಯಃ ।
ವಾಸೋಭಿರೇಕವಿಂಶದ್ಭಿರೇಕೈಕಂ ಸಮಲಂಕೃತಾಃ ॥ ೨೫

ವಿನ್ಯಸ್ತಾ ವಿಧಿವತ್ ಸರ್ವೇ ಶಿಲ್ಪಿಭಿಃ ಸುಕೃತಾ ದೃಢಾಃ ।
ಅಷ್ಟಾಶ್ರಯಃ ಸರ್ವ ಏವ ಶ್ಲಕ್ಷ್ಣರೂಪಸಮನ್ವಿತಾಃ ॥ ೨೬

---

ಯೊಬ್ಬನೂ ವೇದದ ಷಡಂಗಗಳನ್ನು ಬಲ್ಲವನು ಪ್ರತಿಯೊಬ್ಬನೂ ವ್ರತಾನುಷ್ಠಾನನಿರತನು ಪ್ರತಿಯೊಬ್ಬನೂ ಬಹುವಿಧಶಾಸ್ತ್ರಗಳಲ್ಲಿ ಪಾರಂಗತನು. ಪ್ರತಿಯೊಬ್ಬನೂ ವಾಕ್ಯಾರ್ಥವನ್ನು ನಡೆಸುವುದರಲ್ಲಿ ಪ್ರವೀಣನು (೨೧). ಆಗ ಯೂಪಸ್ತಂಭವನ್ನು ಪ್ರತಿಷ್ಠೆಮಾಡುವ ಸಮಯ ಬಂದಿತು ಆರು ಬಿಲ್ವಯೂಪಗಳೂ ಆರು ಖಾದಿರ(ಕಗ್ಗಲಿ) ಯೂಪಗಳೂ ಸ್ಥಾಪಿಸಲ್ಪಟ್ಟವು. ಹಾಗೆಯೇ ಆರು ಪಲಾಶಯೂಪಗಳೂ ಒಂದು ಶ್ಲೇಷ್ಮಾತಕ ಮರದ ಯೂಪವೂ ದೇವದಾರು ಮರದ ಎರಡು ಯೂಪಗಳೂ ಸ್ಥಾಪಿಸಲ್ಪಟ್ಟವು. ಈ ಯೂಪಗಳೆಲ್ಲವೂ ಪರಸ್ಪರ ಎರಡು ತೋಳುಗಳನ್ನು ಮಧ್ಯದಲ್ಲಿ ನೀಡುವಷ್ಟು ದೂರದಲ್ಲಿದ್ದವು (೨೨-೨೩) ಇವೆಲ್ಲವೂ ಯಜ್ಞಪ್ರಕ್ರಿಯೆಯನ್ನು ಬಲ್ಲವರಿಂದ ಮಾಡಲ್ಪಟ್ಟಿದ್ದವು ಚೆನ್ನಾಗಿ ಕಾಣಲೆಂದು ಈ ಯೂಪಗಳನ್ನು ಚಿನ್ನದ ಪಟ್ಟಿಗಳಿಂದ ಅಲಂಕರಿಸಿದ್ದರು ಒಟ್ಟು ಇಪ್ಪತ್ತೊಂದು ಯೂಪಗಳಿದ್ದವು ಒಂದೊಂದು ಯೂಪವೂ ಇಪ್ಪತ್ತೊಂದು ಮೊಳಗಳಷ್ಟು ಉದ್ದವಿತ್ತು. ಈ ಇಪ್ಪತ್ತೊಂದು ಯೂಪಗಳನ್ನು ಇಪ್ಪತ್ತೊಂದು ದಿವ್ಯಾಂಬರಗಳಿಂದ ಅಲಂಕರಿಸಲಾಗಿತ್ತು (೨೪-೨೫). ಈ ಯೂಪಗಳನ್ನು ನ್ಯೂನಾತಿರೇಕವಿಲ್ಲದಂತೆ ಯಥಾಶಾಸ್ತ್ರವಾಗಿ ಶಿಲ್ಪಿಗಳು ನಿರ್ಮಿಸಿದ್ದರು. ಇವೆಲ್ಲವೂ ಗಟ್ಟಿಯಾಗಿ ನುಣುವಾಗಿ ಅಷ್ಟಕೋಣಗಳಿಂದ ಯುಕ್ತವಾಗಿದ್ದವು. ವಸ್ತ್ರ

ಆಚ್ಛಾದಿತಾಸ್ತೇ ವಾಸೋಭಿಃ ಪುಷ್ಪೈರ್ಗಂಧೈಶ್ಚ ಭೂಷಿತಾಃ ।
ಸಪ್ತರ್ಷಯೋ ದೀಪ್ತಿಮಂತೋ ವಿರಾಜಂತೇ ಯಥಾ ದಿವಿ ॥ ೨೭

ಇಷ್ಟಕಾಶ್ಚ ಯಥಾನ್ಯಾಯಂ ಕಾರಿತಾಶ್ಚ ಪ್ರಮಾಣತಃ ।
ಚಿತೋಽಗ್ನಿರ್ಬ್ರಾಹ್ಮಣೈಸ್ತತ್ರ ಕುಶಲೈಃ ಶುಲ್ಬಕರ್ಮಣಿ ॥ ೨೮

ಸ ಚಿತ್ಯೋ ರಾಜಸಿಂಹಸ್ಯ ಸಂಚಿತಃ ಕುಶಲೈರ್ದ್ವಿಜೈಃ ।
ಗರುಡೋ ರುಕ್ಮಪಕ್ಷೋ ವೈ ತ್ರಿಗುಣೋಽಷ್ಟಾದಶಾತ್ಮಕಃ ॥ ೨೯

ನಿಯುಕ್ತಾಸ್ತತ್ರ ಪಶವಸ್ತತ್ತದುದ್ದಿಶ್ಯ ದೈವತಮ್ ।
ಉರಗಾಃ ಪಕ್ಷಿಣಶ್ಚೈವ ಯಥಾಶಾಸ್ತ್ರಂ ಪ್ರಚೋದಿತಾಃ ॥ ೩೦

ಶಾಮಿತ್ರೇ ತು ಹಯಸ್ತತ್ರ ತಥಾ ಜಲಚರಾಶ್ಚ ಯೇ ।
ಋತ್ವಿಗ್ಭಿಃ ಸರ್ವಮೇವೈತನ್ನಿಯುಕ್ತಂ ಶಾಸ್ತ್ರತಸ್ತದಾ ॥ ೩೧

ಪಶೂನಾಂ ತ್ರಿಶತಂ ತತ್ರ ಯೂಪೇಷು ನಿಯತಂ ತದಾ ।
ಅಶ್ವರತ್ನೋತ್ತಮಂ ತಸ್ಯ ರಾಜ್ಞೋ ದಶರಥಸ್ಯ ಚ ॥ ೩೨

---

ಗಳಿಂದ ಆಚ್ಛಾದಿತವಾಗಿ ಗಂಧಪುಷ್ಪಗಳಿಂದ ಅಲಂಕೃತವಾಗಿದ್ದ ಈ ಯೂಪಸ್ತಂಭಗಳು ಆಕಾಶದಲ್ಲಿ ಶೋಭಿಸುವ ಸಪ್ತರ್ಷಿಗಳಂತೆ ಕಂಗೊಳಿಸುತ್ತಿದ್ದವು (೨೬-೨೭). ಯಜ್ಞಶಿಲ್ಪದಲ್ಲಿ ಕುಶಲರಾದ ಬ್ರಾಹ್ಮಣರು ಅಳತೆಗೆ ಅನುಸಾರವಾಗಿ ಇಟ್ಟಿಗೆಗಳನ್ನು ಮಾಡಿ ಅವುಗಳಿಂದ ವೇದಿಯನ್ನು ನಿರ್ಮಿಸಿ ಅಗ್ನಿಯನ್ನು ಚಯನಮಾಡಿದರು. ದಶರಥಮಹಾರಾಜನ ಆ ಯಜ್ಞವೇದಿಯು ಚಿನ್ನದ ಗರಿಗಳಿರುವ ಗರುಡಪಕ್ಷಿಯ ಆಕಾರದಲ್ಲಿತ್ತು. ಅದರಲ್ಲಿ ಅಗ್ನಿಷ್ಟೋಮದಲ್ಲಿರುವ ಆರು ಪ್ರಸ್ತಾರಗಳಿಗೆ ಮೂರರಷ್ಟು - ಎಂದರೆ ಹದಿನೆಂಟು ಪ್ರಸ್ತಾರಗಳಿದ್ದವು (೨೮-೨೯). ಆ ಯೂಪಸ್ತಂಭಗಳಲ್ಲಿ ಆಯಾ ದೇವತೆಗಳನ್ನುದ್ದೇಶಿಸಿ ಪಶುಗಳೂ ಸರ್ಪಗಳೂ ಪಕ್ಷಿಗಳೂ ಬಂಧಿಸಲ್ಪಟ್ಟವು. ಅಲ್ಲದೆ ಕುದುರೆ, ಜಲಚರಗಳಾದ ಆಮೆ ಮುಂತಾದ ಪ್ರಾಣಿಗಳೂ ಋತ್ವಿಜರಿಂದ ವಿಧಿವತ್ತಾಗಿ ವಿಶಸನಕರ್ಮಕ್ಕೋಸ್ಕರ ಸಿದ್ಧಗೊಳಿಸಲ್ಪಟ್ಟವು (೩೦-೩೧). ಒಟ್ಟು ಮುನ್ನೂರು ಪಶುಗಳೂ ದಶರಥನ ಉತ್ತಮಾಶ್ವವೂ ಯೂಪಗಳಿಗೆ ಬಂಧಿಸಲ್ಪಟ್ಟವು. ಅನಂತರ ಕೌಸಲ್ಯಾದೇವಿಯು ಅಶ್ವವನ್ನು ಪೂಜಿಸಿ ಪ್ರದಕ್ಷಿಣೆ

ಕೌಸಲ್ಯಾ ತಂ ಹಯಂ ತತ್ರ ಪರಿಚರ್ಯ ಸಮಂತತಃ ।
ಕೃಪಾಣೈರ್ವಿಶಶಾಸ್ಯೈನಂ ತ್ರಿಭಿಃ ಪರಮಯಾ ಮುದಾ ॥ ೩೩

ಪತತ್ರಿಣಾ ತದಾ ಸಾರ್ಧಂ ಸುಸ್ಥಿತೇನ ಚ ಚೇತಸಾ ।
ಅವಸದ್ರಜನೀಮೇಕಾಂ ಕೌಸಲ್ಯಾ ಧರ್ಮಕಾಮ್ಯಯಾ ॥ ೩೪

ಹೋತಾಧ್ವರ್ಯುಸ್ತಥೋದ್ಗಾತಾ ಹಸ್ತೇನ ಸಮಯೋಜಯನ್ ।
ಮಹಿಷ್ಯಾ ಪರಿವೃತ್ತ್ಯಾ ಚ ವಾವಾತಾಮಪರಾಂ ತಥಾ ॥ ೩೫

ಪತತ್ರಿಣಸ್ತಸ್ಯ ವಪಾಮುದ್ಧೃತ್ಯ ನಿಯತೇಂದ್ರಿಯಃ ।
ಋತ್ವಿಕ್ ಪರಮಸಂಪನ್ನಃ ಶ್ರಪಯಾಮಾಸ ಶಾಸ್ತ್ರತಃ ॥ ೩೬

ಧೂಮಗಂಧಂ ವಪಾಯಾಸ್ತು ಜಿಘ್ರತಿ ಸ್ಮ ನರಾಧಿಪಃ ।
ಯಥಾಕಾಲಂ ಯಥಾನ್ಯಾಯಂ ನಿರ್ಣುದನ್ ಪಾಪಮಾತ್ಮನಃ ॥

ಹಯಸ್ಯ ಯಾನಿ ಚಾಂಗಾನಿ ತಾನಿ ಸರ್ವಾಣಿ ಭೂಸುರಾಃ ।
ಅಗ್ನೌ ಪ್ರಾಸ್ಯಂತಿ ವಿಧಿವತ್ ಸಮಸ್ತಾಃ ಷೋಡಶರ್ತ್ವಿಜಃ ॥ ೩೮

---

ಮಾಡಿ ಅದರ ಎದೆಯಮೇಲೆ ಸುವರ್ಣದ ಮೂರು ಸೂಜಿಗಳಿಂದ ಛೇದನ ಮಾರ್ಗವನ್ನು ಗುರುತಿಸಿದಳು (೩೨-೩೩) ಆಮೇಲೆ ವಿಶಸನಮಾಡಲ್ಪಟ್ಟ ಕುದುರೆಯ ಸಮೀಪದಲ್ಲಿ ಕೌಸಲ್ಯೆಯು ಧರ್ಮಕಾಮನೆಯಿಂದ ಸ್ಥಿರಮನಸ್ಕಳಾಗಿ ಒಂದು ರಾತ್ರಿಯನ್ನು ಕಳೆದಳು ಅನಂತರ ಹೋತೃ, ಅಧ್ವರ್ಯು, ಉದ್ಗಾತೃಗಳೆಂಬ ಋತ್ವಿಜರು ಮಹಿಷಿ, ಪರಿವೃತ್ತಿ, ವಾವಾತಾ ಎಂಬ ರಾಜನ ಪತ್ನಿಯರನ್ನು ಹಸ್ತದಿಂದ ಪರಿಗ್ರಹಿಸಿದರು* (೩೪-೩೫). ಆಮೇಲೆ ಪ್ರಯೋಗಚತುರನಾದ ಅಧ್ವರ್ಯುವು ಏಕಾಗ್ರಚಿತ್ತದಿಂದ ವಪಾಸ್ಥಾನೀಯವಾದ ತೇಜನಿಯೆಂಬ ವಸ್ತುವನ್ನು ಅಶ್ವದಿಂದ ತೆಗೆದು ಹೋಮಮಾಡಿದನು. ಆಗ ದಶರಥನು ತನ್ನ ಪಾಪವನ್ನು ಪರಿಹರಿಸಿಕೊಳ್ಳುವುದಕ್ಕಾಗಿ ತೇಜನೀಹೋಮಕಾಲದಲ್ಲುಂಟಾದ ಧೂಮವನ್ನು ಶಾಸ್ತ್ರೋಕ್ತವಾಗಿ ಆಘ್ರಾಣಿಸಿದನು (೩೬-೩೭). ಅನಂತರ ಹದಿನಾರು ಮಂದಿ ಋತ್ವಿಜರು ಅಶ್ವದ ಇತರ ಅಂಗಗಳನ್ನೆಲ್ಲಾ ವಿಧಿವತ್ತಾಗಿ ಅಗ್ನಿಯಲ್ಲಿ ಹೋಮಮಾಡಿದರು.

* ಮಹಿಷಿ ಮೊದಲಾದವರು ವಿವಿಧ ಜಾತಿಗೆ ಸೇರಿದ ರಾಜಭಾರ್ಯೆಯರು.

ಪ್ಲಕ್ಷಶಾಖಾಸು ಯಜ್ಞಾನಾಮನ್ಯೇಷಾಂ ಕ್ರಿಯತೇ ಹವಿಃ ।
ಅಶ್ವಮೇಧಸ್ಯ ಯಜ್ಞಸ್ಯ ವೈತಸೋ ಭಾಗ ಇಷ್ಯತೇ ॥ ೩೯

ತ್ರ್ಯಹೋಽಶ್ವಮೇಧಃ ಸಂಖ್ಯಾತಃ ಕಲ್ಪಸೂತ್ರೇಣ ಬ್ರಾಹ್ಮಣೈಃ ।
ಚತುಷ್ಟೋಮಮಹಸ್ತಸ್ಯ ಪ್ರಥಮಂ ಪರಿಕಲ್ಪಿತಮ್ ॥ ೪೦

ಉಕ್ಥ್ಯಂ ದ್ವಿತೀಯಂ ಸಂಖ್ಯಾತಮತಿರಾತ್ರಂ ತಥೋತ್ತರಮ್ ।
ಕಾರಿತಾಸ್ತತ್ರ ಬಹವೋ ವಿಹಿತಾಃ ಶಾಸ್ತ್ರದರ್ಶನಾತ್ ॥ ೪೧

ಜ್ಯೋತಿಷ್ಟೋಮಾಯುಷೀ ಚೈವಮತಿರಾತ್ರೌ ಚ ನಿರ್ಮಿತೌ ।
ಅಭಿಜಿದ್ವಿಶ್ವಜಿಚ್ಚೈವಮಪ್ತೋರ್ಯಾಮೋ ಮಹಾಕ್ರತುಃ ॥ ೪೨

ಪ್ರಾಚೀಂ ಹೋತ್ರೇ ದದೌ ರಾಜಾ ದಿಶಂ ಸ್ವಕುಲವರ್ಧನಃ ।
ಅಧ್ವರ್ಯವೇ ಪ್ರತೀಚೀಂ ತು ಬ್ರಹ್ಮಣೇ ದಕ್ಷಿಣಾಂ ದಿಶಮ್ ॥ ೪೩

ಉದ್ಗಾತ್ರೇ ಚ ತತೋದೀಚಿಂ ದಕ್ಷಿಣೈಷಾ ವಿನಿರ್ಮಿತಾ ।
ಅಶ್ವಮೇಧೇ ಮಹಾಯಜ್ಞೇ ಸ್ವಯಂಭುವಿಹಿತೇ ಪುರಾ ॥ ೪೪

---

ಇತರ ಯಾಗಗಳಲ್ಲಿ ಪ್ಲಕ್ಷವೃಕ್ಷದ ಶಾಖೆಯಿಂದ ಮಾಡಿದ ಸ್ರುಕ್ಕಿನಲ್ಲಿ ಹವಿರ್ಭಾಗವನ್ನರ್ಪಿಸಬೇಕು ಅಶ್ವಮೇಧಯಾಗದಲ್ಲಿ ವೇತಸಶಾಖೆಯಿಂದ ಮಾಡಿದ ಸ್ರುಕ್ಕಿನಲ್ಲಿ ತೇಜನೀಹೋಮವು ನಡೆಯಬೇಕು (೩೮-೩೯). ಅಶ್ವಮೇಧವು ಮೂರು ದಿನ ನಡೆಸತಕ್ಕ ಯಾಗ ಇದರಲ್ಲಿ ಮೊದಲನೆಯ ದಿನದ ಕೃತ್ಯಕ್ಕೆ ಚತುಷ್ಟೋಮಯುಕ್ತವಾದ ಅಗ್ನಿಷ್ಟೋಮವೆಂದೂ, ಎರಡನೆಯ ದಿನದ ಕೃತ್ಯಕ್ಕೆ ಉಕ್ಥ್ಯವೆಂದೂ, ಮೂರನೆಯ ದಿನದ ಕರ್ಮಕ್ಕೆ ಅತಿರಾತ್ರವೆಂದೂ ಹೆಸರು (೪೦-೪೧). ಇವೂ ಅಲ್ಲದೆ ಜ್ಯೋತಿಷ್ಟೋಮ, ಆಯುಷ್ಟೋಮ, ಎರಡು ಅತಿರಾತ್ರಗಳು, ಅಭಿಜಿತ್, ವಿಶ್ವಜಿತ್, ಅಪ್ತೋರ್ಯಾಮಗಳೆಂಬ ಆರು ಕ್ರತುಗಳು ಮಾಡಲ್ಪಟ್ಟವು. ಅನಂತರ ದಶರಥಮಹಾರಾಜನು ಪೂರ್ವದಿಕ್ಕಿನ ರಾಜ್ಯಗಳನ್ನು ಹೋತೃವಿಗೂ, ಅಧ್ವರ್ಯುವಿಗೆ ಪಶ್ಚಿಮದ ರಾಜ್ಯಗಳನ್ನೂ, ಬ್ರಹ್ಮನೆಂಬ ಋತ್ವಿಜನಿಗೆ ದಕ್ಷಿಣದ ರಾಜ್ಯಗಳನ್ನೂ, ಉದ್ಗಾತೃವಿಗೆ ಉತ್ತರದ ರಾಜ್ಯಗಳನ್ನೂ ದಕ್ಷಿಣೆಯಾಗಿ

ಕ್ರತುಂ ಸಮಾಪ್ಯ ತು ತದಾ ನ್ಯಾಯತಃ ಪುರುಷರ್ಷಭಃ ।
ಋತ್ವಿಗ್ಭ್ಯೋ ಹಿ ದದೌ ರಾಜಾ ಧರಾಂ ತಾಂ ಕುಲವರ್ಧನಃ ॥ ೪೫

ಋತ್ವಿಜಸ್ತ್ವಬ್ರುವನ್ ಸರ್ವೇ ರಾಜಾನಂ ಗತಕಲ್ಮಷಮ್ ।
ಭವಾನೇವ ಮಹೀಂ ಕೃತ್ಸ್ನಾಮೇಕೋ ರಕ್ಷಿತುಮರ್ಹತಿ ॥ ೪೬

ನ ಭೂಮ್ಯಾ ಕಾರ್ಯಮಸ್ಮಾಕಂ ನ ಹಿ ಶಕ್ತಾಃ ಸ್ಮ ಪಾಲನೇ ।
ರತಾಃ ಸ್ವಾಧ್ಯಾಯಕರಣೇ ವಯಂ ನಿತ್ಯಂ ಹಿ ಭೂಮಿಪ ॥ ೪೭

ನಿಷ್ಕ್ರಯಂ ಕಿಂಚಿದೇವೇಹ ಪ್ರಯಚ್ಛತು ಭವಾನಿತಿ ।
ಮಣಿರತ್ನಂ ಸುವರ್ಣಂ ವಾ ಗಾವೋ ಯದ್ವಾ ಸಮುದ್ಯತಮ್ ॥ ೪೮

ತತ್ ಪ್ರಯಚ್ಛ ನರಶ್ರೇಷ್ಠ ಧರಣ್ಯಾ ನ ಪ್ರಯೋಜನಮ್ ।
ಏವಮುಕ್ತೋ ನರಪತಿರ್ಬ್ರಾಹ್ಮಣೈರ್ವೇದಪಾರಗೈಃ ॥ ೪೯

ಗವಾಂ ಶತಸಹಸ್ರಾಣಿ ದಶ ತೇಭ್ಯೋ ದದೌ ನೃಪಃ ।
ದಶಕೋಟೀಃ ಸುವರ್ಣಸ್ಯ ರಜತಸ್ಯ ಚತುರ್ಗುಣಮ್ ॥ ೫೦

---

ಕೊಟ್ಟನು.* ದಶರಥನು ಹೀಗೆ ತನ್ನ ರಾಜ್ಯವನ್ನೇ ಋತ್ವಿಜರಿಗಾಗಿ ದಾನ ಮಾಡಿದನು (೪೨-೪೫). ಆಗ ಋತ್ವಿಜರೆಲ್ಲರೂ ದಶರಥನನ್ನು ಕುರಿತು "ದಶರಥ, ಈ ರಾಜ್ಯವನ್ನು ನೀನೇ ರಕ್ಷಿಸಬೇಕು ನಾವು ಇದನ್ನು ರಕ್ಷಿಸ ಲಾರೆವು. ನಮಗೆ ಇದರಿಂದ ಆಗಬೇಕಾದ್ದೂ ಇಲ್ಲ ನಾವು ಯಾವಾಗಲೂ ವೇದಶಾಸ್ತ್ರಗಳನ್ನು ಅಧ್ಯಯನಮಾಡುತ್ತ ಶಿಷ್ಯರಿಗೆ ಕಲಿಸುತ್ತ ಇರತಕ್ಕವರು (೪೬-೪೭) ಇದಕ್ಕೆ ಬದಲಾಗಿ ರತ್ನವನ್ನೊ, ಸುವರ್ಣವನ್ನೊ, ಹಸುಗಳನ್ನೊ ಅಥವಾ ಇನ್ನಾವುದನ್ನೊ ಕೊಡಬಹುದು. ಆದ್ದರಿಂದ ಬೇರೆ ಏನನ್ನಾದರೂ ಕೊಡು. ರಾಜ್ಯದಿಂದ ನಮಗೆ ಪ್ರಯೋಜನವಿಲ್ಲ" ಎಂದು ಹೇಳಿದರು (೪೮-೪೯). ಆಗ ದಶರಥಮಹಾರಾಜನು ಅವರಿಗೆ ರಾಜ್ಯಕ್ಕೆ ಪ್ರತಿಯಾಗಿ

*ಅಶ್ವಮೇಧಯಾಗದಲ್ಲಿ ರಾಜನು ತನ್ನ ಹೆಂಡತಿಯರನ್ನೂ ರಾಜ್ಯವನ್ನೂ ಋತ್ವಿಜರಿಗೆ ದಾನಮಾಡಬೇಕೆಂಬ ವಿಧಿ ಇದೆ. ಆದರೆ ಋತ್ವಿಜರು ಪ್ರತಿನಿಧಿದ್ರವ್ಯವನ್ನು ಮಾತ್ರ ತೆಗೆದುಕೊಂಡು ರಾಜನ ಹೆಂಡತಿಯರನ್ನೂ ರಾಜ್ಯವನ್ನೂ ಅವನಿಗೇ ಹಿಂದಿರುಗಿಸಬೇಕು ಇದೊಂದು ಶಾಸ್ತ್ರದ ಕಟ್ಟಳೆ

ಋತ್ವಿಜಸ್ತು ತತಃ ಸರ್ವೇ ಪ್ರದದುಃ ಸಹಿತಾ ವಸು ।
ಋಷ್ಯಶೃಂಗಾಯ ಮುನಯೇ ವಸಿಷ್ಠಾಯ ಚ ಧೀಮತೇ ॥ ೫೧

ತತಸ್ತೇ ನ್ಯಾಯತಃ ಕೃತ್ವಾ ಪ್ರವಿಭಾಗಂ ದ್ವಿಜೋತ್ತಮಾಃ ।
ಸುಪ್ರೀತಮನಸಃ ಸರ್ವೇ ಪ್ರತ್ಯೂಚುರ್ಮುದಿತಾ ಭೃಶಮ್ ॥ ೫೨

ತತಃ ಪ್ರಸರ್ಪಕೇಭ್ಯಸ್ತು ಹಿರಣ್ಯಂ ಸುಸಮಾಹಿತಃ ।
ಜಾಂಬೂನದಂ ಕೋಟಿಸಂಖ್ಯಂ ಬ್ರಾಹ್ಮಣೇಭ್ಯೋ ದದೌ ನೃಪಃ ॥

ದರಿದ್ರಾಯ ದ್ವಿಜಾಯಾಥ ಹಸ್ತಾಭರಣಮುತ್ತಮಮ್ ।
ಕಸ್ಮೈಚಿದ್ಯಾಚಮಾನಾಯ ದದೌ ರಾಘವನಂದನಃ ॥ ೫೪

ತತಃ ಪ್ರೀತೇಷು ನೃಪತಿರ್ದ್ವಿಜೇಷು ದ್ವಿಜವತ್ಸಲಃ ।
ಪ್ರಣಾಮಮಕರೋತ್ತೇಷಾಂ ಹರ್ಷಪರ್ಯಾಕುಲೇಕ್ಷಣಃ ॥ ೫೫

ತಸ್ಯಾಶಿಷೋಽಥ ವಿಧಿವದ್ಬ್ರಾಹ್ಮಣೈಃ ಸಮುದಾಹೃತಾಃ ।
ಉದಾರಸ್ಯ ನೃವೀರಸ್ಯ ಧರಣ್ಯಾಂ ಪ್ರಣತಸ್ಯ ಚ ॥ ೫೬

---

ಹತ್ತುಲಕ್ಷ ಗೋವುಗಳನ್ನೂ ಹತ್ತುಕೋಟಿ ಸುವರ್ಣನಾಣ್ಯಗಳನ್ನೂ ನಲವತ್ತುಕೋಟಿ ಬೆಳ್ಳಿಯ ನಾಣ್ಯಗಳನ್ನೂ ಅರ್ಪಿಸಿದನು. ಋತ್ವಿಜರು ಅವುಗಳೆಲ್ಲವನ್ನೂ ಋಷ್ಯಶೃಂಗ ಮತ್ತು ವಸಿಷ್ಠರಿಗೆ ಒಪ್ಪಿಸಿದರು (೫೦-೫೧). ಅನಂತರ ಅವರೆಲ್ಲರೂ ನೇರಿ ತಮತಮಗೆ ಸಲ್ಲಬೇಕಾದ್ದನ್ನು ಶಾಸ್ತ್ರೋಕ್ತವಾದ ಕ್ರಮದಲ್ಲಿ ಹಂಚಿಕೊಂಡು ಸಂತುಷ್ಟರಾಗಿ ನಾವು ತೃಪ್ತರಾದೆವೆಂದು ದಶರಥನಿಗೆ ತಿಳಿಸಿದರು. ತರುವಾಯ ದಶರಥನು ಯಾಗವನ್ನು ನೋಡಲು ಬಂದಿದ್ದ ಬ್ರಾಹ್ಮಣರಿಗೆ ಕೋಟಿಗಟ್ಟಲೆ ಸುವರ್ಣನಾಣ್ಯಗಳನ್ನು ದಕ್ಷಿಣೆಯಾಗಿ ಕೊಟ್ಟನು (೫೨-೫೩). ಒಬ್ಬ ದರಿದ್ರ ಬ್ರಾಹ್ಮಣನು, ದಶರಥನು ಕೈಗೆ ಹಾಕಿಕೊಂಡಿದ್ದ ಅಮೂಲ್ಯವಾದ ಹಸ್ತಾಭರಣವನ್ನೇ ಯಾಚಿಸಲು ದಶರಥನು ಸಂತೋಷದಿಂದ ಅದನ್ನು ಕೊಟ್ಟುಬಿಟ್ಟನು! ಹೀಗೆ ಬ್ರಾಹ್ಮಣರೆಲ್ಲರೂ ಸುಪ್ರೀತರಾಗಲು ಬ್ರಾಹ್ಮಣರಲ್ಲಿ ಗೌರವಭಾವನೆಯನ್ನಿಟ್ಟುಕೊಂಡಿದ್ದ ಮಹಾರಾಜನು ಹರ್ಷದಿಂದ ವಿಕಸಿತನೇತ್ರನಾಗಿ ಅವರನ್ನು ನೋಡುತ್ತ ಸಾಷ್ಟಾಂಗಪ್ರಣಾಮಮಾಡಿದನು (೫೪-೫೫). ಆಗ ಬ್ರಾಹ್ಮಣರೆಲ್ಲರೂ ಉದಾರಸ್ವಭಾವದ ಆ ಪುರುಷಶ್ರೇಷ್ಠನನ್ನು ವಿಧಿವತ್ತಾಗಿ ಆಶೀರ್ವದಿಸಿದರು.

ತತಃ ಪ್ರೀತಮನಾ ರಾಜಾ ಪ್ರಾಪ್ಯ ಯಜ್ಞಮನುತ್ತಮಮ್ ।
ಪಾಪಾಪಹಂ ಸ್ವರ್ನಯನಂ ದುಸ್ತರಂ ಪಾರ್ಥಿವರ್ಷಭೈಃ ॥ ೫೭

ತತೋಽಬ್ರವೀದೃಷ್ಯಶೃಂಗಂ ರಾಜಾ ದಶರಥಸ್ತದಾ ।
ಕುಲಸ್ಯ ವರ್ಧನಂ ತ್ವಂ ತು ಕರ್ತುಮರ್ಹಸಿ ಸುವ್ರತ ॥ ೫೮

ತಥೇತಿ ಚ ಸ ರಾಜಾನಮುವಾಚ ದ್ವಿಜಸತ್ತಮಃ ।
ಭವಿಷ್ಯಂತಿ ಸುತಾ ರಾಜಂಶ್ಚತ್ವಾರಸ್ತೇ ಕುಲೋದ್ವಹಾಃ ॥ ೫೯

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಚತುರ್ದಶಃ ಸರ್ಗಃ



ಹೀಗೆ ದಶರಥನು ಪಾಪಹಾರಿಯೂ ಸ್ವರ್ಗದಾಯಕವೂ ಇತರ ರಾಜರಿಗೆ ದುಃಸಾಧ್ಯವೂ ಆದ ಅಶ್ವಮೇಧವನ್ನು ನಡೆಯಿಸಿ ಸಂತುಷ್ಟನಾದನು (೫೬-೫೭) ಆಮೇಲೆ ಋಷ್ಯಶೃಂಗಮುನಿಯ ಸಮೀಪಕ್ಕೆ ಹೋಗಿ "ಮಹಾತ್ಮ, ನನಗೆ ವಂಶೋದ್ಧಾರಕನಾದ ಪುತ್ರನನ್ನು ಕರುಣಿಸಬೇಕು" ಎಂದು ಬೇಡಿಕೊಳ್ಳಲು, ಆ ದ್ವಿಜೋತ್ತಮನು "ರಾಜ, ಹಾಗೆಯೇ ಆಗಲಿ. ನಿನಗೆ ವಂಶೋದ್ಧಾರಕರಾದ ನಾಲ್ವರು ಪುತ್ರರು ಜನಿಸುವರು" ಎಂದು ನುಡಿದನು (೫೮-೫೯).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಹದಿನಾಲ್ಕನೆಯ ಸರ್ಗ



## ಪಂಚದಶಃ ಸರ್ಗಃ

### ರಾವಣವಧೋಪಾಯಃ

ಮೇಧಾವೀ ತು ತತೋ ಧ್ಯಾತ್ವಾ ಸ ಕಿಂಚಿದಿದಮುತ್ತರಮ್ ।
ಲಬ್ಧಸಂಜ್ಞಸ್ತತಸ್ತಂ ತು ವೇದಜ್ಞೋ ನೃಪಮಬ್ರವೀತ್ ॥ ೧
ಇಷ್ಟಿಂ ತೇಽಹಂ ಕರಿಷ್ಯಾಮಿ ಪುತ್ರೀಯಾಂ ಪುತ್ರಕಾರಣಾತ್ ।
ಅಥರ್ವಶಿರಸಿ ಪ್ರೋಕ್ತೈರ್ಮಂತ್ರೈಃ ಸಿದ್ಧಾಂ ವಿಧಾನತಃ ॥ ೨
ತತಃ ಪ್ರಾಕ್ರಮದಿಷ್ಟಿಂ ತಾಂ ಪುತ್ರೀಯಾಂ ಪುತ್ರಕಾರಣಾತ್ ।
ಜುಹಾವ ಚಾಗ್ನೌ ತೇಜಸ್ವೀ ಮಂತ್ರದೃಷ್ಟೇನ ಕರ್ಮಣಾ ॥ ೩
ತತೋ ದೇವಾಃ ಸಗಂಧರ್ವಾಃ ಸಿದ್ಧಾಶ್ಚ ಪರಮರ್ಷಯಃ ।
ಭಾಗಪ್ರತಿಗ್ರಹಾರ್ಥಂ ವೈ ಸಮವೇತಾ ಯಥಾವಿಧಿ ॥ ೪
ತಾಃ ಸಮೇತ್ಯ ಯಥಾನ್ಯಾಯಂ ತಸ್ಮಿನ್ ಸದಸಿ ದೇವತಾಃ ।
ಅಬ್ರುವನ್ ಲೋಕಕರ್ತಾರಂ ಬ್ರಹ್ಮಾಣಂ ವಚನಂ ಮಹತ್ ॥ ೫

### ಸರ್ಗ ೧೫

ದಶರಥನ ಪುತ್ರಕಾಮೇಷ್ಟಿ. ರಾವಣನನ್ನು ಸಂಹರಿಸುವಂತೆ
ದೇವತೆಗಳು ಮಹಾವಿಷ್ಣುವನ್ನು ಪ್ರಾರ್ಥಿಸುವುದು.

ವೇದಪಾರಂಗತನಾದ ಋಷ್ಯಶೃಂಗನು (ರಾಜನಿಗೆ ಸಂತಾನವಾಗುವ ಮಾರ್ಗವು ಯಾವುದೆಂದು) ಸ್ವಲ್ಪಹೊತ್ತು ಆಲೋಚಿಸುತ್ತ ಸಮಾಧಿಸ್ಥನಾಗಿ ಕಡೆಯಲ್ಲಿ "ನಿನಗೆ ಪುತ್ರಸಂತಾನವಾಗುವುದಕ್ಕಾಗಿ ಪುತ್ರಕಾಮೇಷ್ಟಿಯನ್ನು ಮಾಡಿಸುತ್ತೇನೆ. ಅಥರ್ವವೇದದಲ್ಲಿ ಪ್ರೋಕ್ತವಾದ ಮಂತ್ರಗಳಿಂದ ವಿಧಿಪೂರ್ವಕವಾಗಿ ಇದನ್ನು ಆಚರಿಸಬೇಕು" ಎಂದು ಹೇಳಿದನು (೧-೨). ಅನಂತರ ಪುತ್ರಕಾಮೇಷ್ಟಿಯನ್ನು ಪ್ರಾರಂಭಿಸಿ ಆ ತೇಜಸ್ವಿಯು ಮಂತ್ರೋಕ್ತವಾದ ವಿಧಾನದಿಂದ ಅಗ್ನಿಯಲ್ಲಿ ಹೋಮಮಾಡಿದನು. ಆಗ ದೇವತೆಗಳು, ಗಂಧರ್ವರು, ಸಿದ್ಧರು, ದೇವರ್ಷಿಗಳು—ಇವರೆಲ್ಲರೂ ಹವಿರ್ಭಾಗವನ್ನು ಸ್ವೀಕರಿಸುವುದಕ್ಕಾಗಿ ಅಲ್ಲಿಗೆ ಬಂದರು (೩-೪). ಆ ಸಭೆಯಲ್ಲಿ (ಜನರಿಗೆ ಅದೃಶ್ಯರಾಗಿದ್ದ) ದೇವತೆಗಳು ಸೃಷ್ಟಿಕರ್ತನಾದ ಬ್ರಹ್ಮನೊಡನೆ ಒಂದು

ಭಗವಂಸ್ತ್ವತ್ಪ್ರಸಾದೇನ ರಾವಣೋ ನಾಮ ರಾಕ್ಷಸಃ ।
ಸರ್ವಾನ್ನೋ ಬಾಧತೇ ವೀರ್ಯಾಚ್ಛಾಸಿತುಂ ತಂ ನ ಶಕ್ನುಮಃ ॥ ೬

ತ್ವಯಾ ತಸ್ಮೈ ವರೋ ದತ್ತಃ ಪ್ರೀತೇನ ಭಗವನ್ ಪುರಾ ।
ಮಾನಯಂತಶ್ಚ ತಂ ನಿತ್ಯಂ ಸರ್ವಂ ತಸ್ಯ ಕ್ಷಮಾಮಹೇ ॥ ೭

ಉದ್ವೇಜಯತಿ ಲೋಕಾಂಸ್ತ್ರೀನುಚ್ಛ್ರಿತಾನ್ ದ್ವೇಷ್ಟಿ ದುರ್ಮತಿಃ ।
ಶಕ್ರಂ ತ್ರಿದಶರಾಜಾನಂ ಪ್ರಧರ್ಷಯಿತುಮಿಚ್ಛತಿ ॥ ೮

ಋಷೀನ್ ಯಕ್ಷಾನ್ ಸಗಂಧರ್ವಾನಸುರಾನ್ ಬ್ರಾಹ್ಮಣಾಂಸ್ತಥಾ ।
ಅತಿಕ್ರಾಮತಿ ದುರ್ಧರ್ಷೋ ವರದಾನೇನ ಮೋಹಿತಃ ॥ ೯

ನೈನಂ ಸೂರ್ಯಃ ಪ್ರತಪತಿ ಪಾರ್ಶ್ವೇ ವಾತಿ ನ ಮಾರುತಃ ।
ಚಲೋರ್ಮಿಮಾಲೀ ತಂ ದೃಷ್ಟ್ವಾ ಸಮುದ್ರೋಽಪಿ ನ ಕಂಪತೇ ॥

ಸುಮಹನ್ನೋ ಭಯಂ ತಸ್ಮಾದ್ರಾಕ್ಷಸಾದ್ಘೋರದರ್ಶನಾತ್ ।
ವಧಾರ್ಥಂ ತಸ್ಯ ಭಗವನ್ನುಪಾಯಂ ಕರ್ತುಮರ್ಹಸಿ ॥ ೧೧

---

ಮಹತ್ವದ ಮಾತನ್ನು ಪ್ರಸ್ತಾವಿಸಿದರು: "ಬ್ರಹ್ಮದೇವ, ರಾವಣನೆಂಬ ರಾಕ್ಷಸನು ನಿನ್ನ ಅನುಗ್ರಹದಿಂದ ಬಲಶಾಲಿಯಾಗಿ ನಮ್ಮೆಲ್ಲರನ್ನೂ ಪೀಡಿಸುತ್ತಿದ್ದಾನೆ ಅವನನ್ನು ದಂಡಿಸಲು ನಮಗೆ ಶಕ್ತಿಯಿಲ್ಲ. ನೀನು ಅವನ ತಪಸ್ಸಿಗೆ ಮೆಚ್ಚಿ ಹಿಂದೆ ವರವನ್ನು ಕೊಟ್ಟಿದ್ದೀಯೆ ಆದ್ದರಿಂದ ನಾವು ಅವನನ್ನು ಗೌರವಿಸುತ್ತ ಅವನ ಬಾಧೆಯನ್ನು ಸಹಿಸಿಕೊಳ್ಳಬೇಕಾಗಿದೆ (೫-೭) ಆ ದುಷ್ಟನು ಮೂರು ಲೋಕಗಳನ್ನೂ ಹೆದರಿಸುತ್ತಿದ್ದಾನೆ. ಲೋಕಪಾಲಕರನ್ನು ದ್ವೇಷಿಸುತ್ತಾನೆ ದೇವೇಂದ್ರನನ್ನೂ ಪದಚ್ಯುತನನ್ನಾಗಿ ಮಾಡಬೇಕೆಂದಿದ್ದಾನೆ ಋಷಿಗಳು, ಯಕ್ಷರು, ಗಂಧರ್ವರು, ಅಸುರರು, ಬ್ರಾಹ್ಮಣರು—ಇವರನ್ನೆಲ್ಲ ಅತಿಕ್ರಮಿಸಿ ತೊಂದರೆಪಡಿಸುತ್ತಾನೆ. ಅವನನ್ನು ಹಿಡಿಯುವವರೇ ಇಲ್ಲ. ನಿನ್ನ ವರಬಲದಿಂದ ಅವನ ತಲೆ ತಿರುಗಿದೆ (೮-೯) ಅವನೆದುರಿಗೆ ಸೂರ್ಯನು ಜ್ವಲಿಸುವುದಿಲ್ಲ. ಗಾಳಿ ಬೀಸುವುದಿಲ್ಲ. ಸದಾ ಅಲೆಗಳಿಂದ ಅಪ್ಪಳಿಸುವ ಸಮುದ್ರರಾಜನೂ ಕೂಡ ರಾವಣನನ್ನು ಕಂಡರೆ ಅಲ್ಲಾಡದೆ ನಿಂತುಬಿಡುವನು ಘೋರರೂಪಿಯಾದ ಆ ರಾಕ್ಷಸನಿಂದ ನಮಗೆ ಬಹಳ ಭಯವಾಗಿದೆ. ಹೇ ಭಗವಂತ, ಅವನನ್ನು ಸಂಹರಿಸುವುದಕ್ಕೆ

ಏವಮುಕ್ತಃ ಸುರೈಃ ಸರ್ವೈಶ್ಚಿಂತಯಿತ್ವಾ ತತೋಽಬ್ರವೀತ್ ।
ಹಂತಾಯಂ ವಿದಿತಸ್ತಸ್ಯ ವಧೋಪಾಯೋ ದುರಾತ್ಮನಃ ॥ ೧೨

ತೇನ ಗಂಧರ್ವಯಕ್ಷಾಣಾಂ ದೇವದಾನವರಕ್ಷಸಾಮ್ ।
ಅವಧ್ಯೋಽಸ್ಮೀತಿ ವಾಗುಕ್ತಾ ತಥೇತ್ಯುಕ್ತಂ ಚ ತನ್ಮಯಾ ॥ ೧೩

ನಾಕೀರ್ತಯದವಜ್ಞಾನಾತ್ತದ್ರಕ್ಷೋ ಮಾನುಷಾಂಸ್ತದಾ ।
ತಸ್ಮಾತ್ ಸ ಮಾನುಷಾದ್ವಧ್ಯೋ ಮೃತ್ಯುರ್ನಾನ್ಯೋಽಸ್ಯ ವಿದ್ಯತೇ

ಏತಚ್ಛ್ರುತ್ವಾ ಪ್ರಿಯಂ ವಾಕ್ಯಂ ಬ್ರಹ್ಮಣಾ ಸಮುದಾಹೃತಮ್ ।
ದೇವಾ ಮಹರ್ಷಯಃ ಸರ್ವೇ ಪ್ರಹೃಷ್ಟಾಸ್ತೇಽಭವಂಸ್ತದಾ ॥ ೧೫

ಏತಸ್ಮಿನ್ನಂತರೇ ವಿಷ್ಣುರುಪಯಾತೋ ಮಹಾದ್ಯುತಿಃ ।
ಶಂಖಚಕ್ರಗದಾಪಾಣಿಃ ಪೀತವಾಸಾ ಜಗತ್ಪತಿಃ ॥ ೧೬

ಬ್ರಹ್ಮಣಾ ಚ ಸಮಾಗಮ್ಯ ತತ್ರ ತಸ್ಥೌ ಸಮಾಹಿತಃ ।
ತಮಬ್ರುವನ್ ಸುರಾಃ ಸರ್ವೇ ಸಮಭಿಷ್ಟೂಯ ಸಂನತಾಃ ॥ ೧೭

---

ನೀನು ಏನಾದರೂ ಉಪಾಯವನ್ನು ಮಾಡಬೇಕು” ಎಂದು ಪ್ರಾರ್ಥಿಸಿದರು (೧೦-೧೧). ಆಗ ಬ್ರಹ್ಮನು ಸ್ವಲ್ಪ ಆಲೋಚಿಸಿ “ಸರಿ; ಆ ದುರಾತ್ಮನನ್ನು ಸಂಹರಿಸತಕ್ಕ ಉಪಾಯವು ತಿಳಿಯಿತು. ದೇವತೆಗಳೆ, ರಾವಣನು ಯಕ್ಷ, ಗಂಧರ್ವ, ದೇವ, ದಾನವ, ರಾಕ್ಷಸರಿಂದ ತಾನು ಅವಧ್ಯನಾಗಬೇಕೆಂದು ವರವನ್ನು ಕೇಳಿಕೊಳ್ಳಲು, ನಾನು ‘ಆಗಲಿ’ ಎಂದು ಹೇಳಿದೆ. ಆ ರಾಕ್ಷಸನು ಆಗ ಅನಾದರದಿಂದ ಮನುಷ್ಯರ ಹೆಸರನ್ನು ಎತ್ತಲಿಲ್ಲ. ಆದ್ದರಿಂದ ಅವನು ಮನುಷ್ಯನಿಂದಲೇ ವಧ್ಯನಾಗಬೇಕು ಬೇರೆ ವಿಧದಲ್ಲಿ ಅವನಿಗೆ ಮರಣ ಸಾಧ್ಯವಿಲ್ಲ” ಎಂದನು (೧೨-೧೪). ಬ್ರಹ್ಮನ ಮಾತನ್ನು ಕೇಳಿ ದೇವತೆಗಳಿಗೆ ಬಹಳ ಹರ್ಷವಾಯಿತು. ಅಷ್ಟರಲ್ಲಿ ಜಗದೀಶ್ವರನಾದ ಮಹಾವಿಷ್ಣುವು ಶಂಖಚಕ್ರಗದಾಪಾಣಿಯಾಗಿ ಪೀತಾಂಬರವನ್ನು ಧರಿಸಿ ದಿವ್ಯಕಾಂತಿಯನ್ನು ಸೂಸುತ್ತ ಅಲ್ಲಿಗೆ ಬಂದನು (೧೫-೧೬) ಬಂದು ಪ್ರಸನ್ನಚಿತ್ತನಾಗಿ ಬ್ರಹ್ಮನ ಬಳಿ ನಿಂತನು. ದೇವತೆಗಳೆಲ್ಲರೂ ಆತನಿಗೆ ತಲೆಬಾಗಿ ಸ್ತುತಿಸುತ್ತ

**ತ್ವಾಂ ನಿಯೋಕ್ಷ್ಯಾಮಹೇ ವಿಷ್ಣೋ ಲೋಕಾನಾಂ ಹಿತಕಾಮ್ಯಯಾ**
**ರಾಜ್ಞೋ ದಶರಥಸ್ಯ ತ್ವಮಯೋಧ್ಯಾಧಿಪತೇಃ ಪ್ರಭೋಃ ॥** ೧೮
**ಧರ್ಮಜ್ಞಸ್ಯ ವದಾನ್ಯಸ್ಯ ಮಹರ್ಷಿಸಮತೇಜಸಃ ।**
**ತಸ್ಯ ಭಾರ್ಯಾಸು ತಿಸೃಷು ಹ್ರೀಶ್ರೀಕೀರ್ತ್ಯುಪಮಾಸು ಚ ॥** ೧೯
**ವಿಷ್ಣೋ ಪುತ್ರತ್ವಮಾಗಚ್ಛ ಕೃತ್ವಾತ್ಮಾನಂ ಚತುರ್ವಿಧಮ್ ।**
**ತತ್ರ ತ್ವಂ ಮಾನುಷೋ ಭೂತ್ವಾ ಪ್ರವೃದ್ಧಂ ಲೋಕಕಂಟಕಮ್ ॥**
**ಅವಧ್ಯಂ ದೈವತೈರ್ವಿಷ್ಣೋ ಸಮರೇ ಜಹಿ ರಾವಣಮ್ ।**
**ಸ ಹಿ ದೇವಾನ್ ಸಗಂಧರ್ವಾನ್ ಸಿದ್ಧಾಂಶ್ಚ ಮುನಿಸತ್ತಮಾನ್ ॥**
**ರಾಕ್ಷಸೋ ರಾವಣೋ ಮೂರ್ಖೋ ವೀರ್ಯೋತ್ಸೇಕೇನ ಬಾಧತೇ ।**
**ಋಷಯಸ್ತು ತತಸ್ತೇನ ಗಂಧರ್ವಾಪ್ಸರಸಸ್ತಥಾ ॥** ೨೨
**ಕ್ರೀಡಂತೋ ನಂದನವನೇ ರೌದ್ರೇಣ ಕಿಲ ಹಿಂಸಿತಾಃ ।**
**ವಧಾರ್ಥಂ ವಯಮಾಯಾತಾಸ್ತಸ್ಯ ವೈ ಮುನಿಭಿಃ ಸಹ ॥** ೨೩

---

“ಹೇ ಮಹಾವಿಷ್ಣೋ, ಲೋಕಹಿತಕ್ಕಾಗಿ ನಾವು ನಿನ್ನಲ್ಲಿ ಒಂದು ಪ್ರಾರ್ಥನೆಯನ್ನು ಸಲ್ಲಿಸುತ್ತೇವೆ ಅಯೋಧ್ಯಾಪತಿಯಾದ ದಶರಥಮಹಾರಾಜನಿಗೆ ನೀನು ಪುತ್ರನಾಗಿ ಅವತರಿಸು (೧೭–೧೮). ದಶರಥನು ಧರ್ಮಜ್ಞ; ಉದಾರಿ; ಮಹರ್ಷಿಯಂತೆ ತೇಜಸ್ವಿಯಾದವನು. ಅವನ ಪತ್ನಿಯರಾದ ಕೌಸಲ್ಯೆ, ಸುಮಿತ್ರೆ, ಕೈಕೇಯಿ—ಈ ಮೂವರೂ ಹ್ರೀ, ಶ್ರೀ, ಕೀರ್ತಿಗಳಂತೆ ಇದ್ದಾರೆ. ನೀನು ಅವರಲ್ಲಿ ನಾಲ್ಕು ಅಂಶಗಳಿಂದ ಪುತ್ರನಾಗಿ ಜನಿಸು. ಹೀಗೆ ಮನುಷ್ಯನಾಗಿ ಜನಿಸಿ ನೀನು ಯುದ್ಧದಲ್ಲಿ ರಾವಣನನ್ನು ಸಂಹರಿಸಬೇಕು (೧೯–೨೦) ಅವನು ಲೋಕಕಂಟಕನಾಗಿ ಬೆಳೆದು ನಿಂತಿದ್ದಾನೆ. ನಮ್ಮಿಂದ ಅವನನ್ನು ಕೊಲ್ಲುವುದು ಶಕ್ಯವಿಲ್ಲ. ಹೇ ಮಹಾವಿಷ್ಣೋ, ಆ ರಾಕ್ಷಸನು ಶೌರ್ಯದ ಕೊಬ್ಬಿನಿಂದ ನಮ್ಮೆಲ್ಲರನ್ನೂ ಮಹರ್ಷಿಗಳನ್ನೂ ಪೀಡಿಸುತ್ತಿದ್ದಾನೆ ಋಷಿಗಳೂ ಗಂಧರ್ವರೂ ಅಪ್ಸರಃಸ್ತ್ರೀಯರೂ ನಂದನವನದಲ್ಲಿ ತಮ್ಮ ಪಾಡಿಗೆ ವಿಹರಿಸುತ್ತಾ ಇದ್ದರೆ, ಈ ಕ್ರೂರನು ಅಲ್ಲಿಗೆ ಹೋಗಿ ಅವರನ್ನು ಹಿಂಸೆಪಡಿಸಿದ್ದಾನೆ (೨೦–೨೨). ಅವನನ್ನು ಸಂಹಾರಮಾಡಿಸಬೇಕೆಂದು ನಾವೆಲ್ಲರೂ ಮುನಿಗಳೊಡನೆ ಇಲ್ಲಿಗೆ ಬಂದು ನಿನ್ನ ಮರೆಹೊಕ್ಕಿದ್ದೇವೆ.

ಸಿದ್ಧಗಂಧರ್ವಯಕ್ಷಾಶ್ಚ ತತಸ್ತ್ವಾಂ ಶರಣಂ ಗತಾಃ ।
ತ್ವಂ ಗತಿಃ ಪರಮಾ ದೇವ ಸರ್ವೇಷಾಂ ನಃ ಪರಂತಪ ॥ ೨೪
ವಧಾಯ ದೇವಶತ್ರೂಣಾಂ ನೃಣಾಂ ಲೋಕೇ ಮನಃ ಕುರು ।
ಏವಮುಕ್ತಸ್ತು ದೇವೇಶೋ ವಿಷ್ಣುಸ್ತ್ರಿದಶಪುಂಗವಃ ॥ ೨೫
ಪಿತಾಮಹಪುರೋಗಾಂಸ್ತಾನ್ ಸರ್ವಲೋಕನಮಸ್ಕೃತಃ ।
ಅಬ್ರವೀತ್ ತ್ರಿದಶಾನ್ ಸರ್ವಾನ್ ಸಮೇತಾನ್ ಧರ್ಮಸಂಹಿತಾನ್
ಭಯಂ ತ್ಯಜತ ಭದ್ರಂ ವೋ ಹಿತಾರ್ಥಂ ಯುಧಿ ರಾವಣಮ್ ।
ಸಪುತ್ರಪೌತ್ರಂ ಸಾಮಾತ್ಯಂ ಸಮಿತ್ರಜ್ಞಾತಿಬಾಂಧವಮ್ ॥ ೨೭
ಹತ್ವಾ ಕ್ರೂರಂ ದುರಾತ್ಮಾನಂ ದೇವರ್ಷೀಣಾಂ ಭಯಾವಹಮ್ ।
ದಶ ವರ್ಷಸಹಸ್ರಾಣಿ ದಶ ವರ್ಷಶತಾನಿ ಚ ॥ ೨೮
ವತ್ಸ್ಯಾಮಿ ಮಾನುಷೇ ಲೋಕೇ ಪಾಲಯನ್ ಪೃಥಿವೀಮಿಮಾಮ್।
ಏವಂ ದತ್ವಾ ವರಂ ದೇವೋ ದೇವಾನಾಂ ವಿಷ್ಣುರಾತ್ಮವಾನ್ ॥ ೨೯
ಮಾನುಷ್ಯೇ ಚಿಂತಯಾಮಾಸ ಜನ್ಮಭೂಮಿಮಥಾತ್ಮನಃ ।
ತತಃ ಪದ್ಮಪಲಾಶಾಕ್ಷಃ ಕೃತ್ವಾತ್ಮಾನಂ ಚತುರ್ವಿಧಮ್ ॥ ೩೦

---

ಹೇ ದೇವ, ನಮ್ಮೆಲ್ಲರಿಗೂ ನೀನೇ ಗತಿ. ದೇವಶತ್ರುಗಳಾದ ರಾಕ್ಷಸರನ್ನು ಸಂಹರಿಸುವುದಕ್ಕೋಸ್ಕರ ನೀನು ಮನುಷ್ಯಲೋಕದಲ್ಲಿ ಅವತರಿಸಲು ಮನಸ್ಸು ಮಾಡಬೇಕು" ಎಂದು ಪ್ರಾರ್ಥಿಸಿದರು (೨೩-೨೫) ಆಗ ದೇವೇಶ್ವರನೂ ಸರ್ವಲೋಕವಂದಿತನೂ ಆದ ಮಹಾವಿಷ್ಣುವು ಧರ್ಮನಿಷ್ಠರಾದ ಬ್ರಹ್ಮಾದಿ ದೇವತೆಗಳನ್ನು ಕುರಿತು "ಎಲೈ ದೇವತೆಗಳೆ, ಹೆದರಬೇಡಿರಿ. ನಿಮ್ಮ ಹಿತಕ್ಕೋಸ್ಕರ ನಾನು ಯುದ್ಧದಲ್ಲಿ ರಾವಣನನ್ನು ಸಂಹರಿಸುತ್ತೇನೆ. ಅವನ ಪುತ್ರಪೌತ್ರರನ್ನೂ ಅಮಾತ್ಯರನ್ನೂ ಮಿತ್ರಜ್ಞಾತಿಬಂಧುಗಳನ್ನೂ ವಧಿಸುತ್ತೇನೆ (೨೬-೨೭). ರಾವಣನು ಕ್ರೂರ; ದುರಾತ್ಮ; ದೇವರ್ಷಿಗಳಿಗೆ ಭಯಂಕರ. ಅವನನ್ನು ಸಂಹರಿಸಿದಮೇಲೆ ಹನ್ನೊಂದುಸಾವಿರ ವರ್ಷಗಳ ವರೆಗೆ ಈ ಪೃಥ್ವಿಯನ್ನು ಪಾಲಿಸುತ್ತ ನಾನು ಮನುಷ್ಯಲೋಕದಲ್ಲಿ ವಾಸ ಮಾಡುವೆನು" ಎಂದು ವರವನ್ನು ಅನುಗ್ರಹಿಸಿದನು (೨೮-೨೯). ಅನಂತರ ತಾನು ಮನಷ್ಯನಾಗಿ ಎಲ್ಲಿ ಅವತರಿಸಬೇಕೆಂಬುದನ್ನು ಪರ್ಯಾಲೋಚಿಸಿ,

ಪಿತರಂ ರೋಚಯಾಮಾಸ ತದಾ ದಶರಥಂ ನೃಪಮ್ ।
ತತೋ ದೇವರ್ಷಿಗಂಧರ್ವಾಃ ಸರುದ್ರಾಃ ಸಾಪ್ಸರೋಗಣಾಃ ॥ ೩೧
ಸ್ತುತಿಭಿರ್ದಿವ್ಯರೂಪಾಭಿಸ್ತುಷ್ಟುವುರ್ಮಧುಸೂದನಮ್ ॥

ತಮುದ್ಧತಂ ರಾವಣಮುಗ್ರತೇಜಸಂ
ಪ್ರವೃದ್ಧದರ್ಪಂ ತ್ರಿದಶೇಶ್ವರದ್ವಿಷಮ್ ।
ವಿರಾವಣಂ ಸಾಧುತಪಸ್ವಿಕಂಟಕಂ
ತಪಸ್ವಿನಾಮುದ್ಧರ ತಂ ಭಯಾವಹಮ್ ॥ ೩೨

ತಮೇವ ಹತ್ವಾ ಸಬಲಂ ಸಬಾಂಧವಮ್
ವಿರಾವಣಂ ರಾವಣಮುಗ್ರಪೌರುಷಮ್ ।
ಸ್ವರ್ಲೋಕಮಾಗಚ್ಛ ಗತಜ್ವರಶ್ಚಿರಂ
ಸುರೇಂದ್ರಗುಪ್ತಂ ಗತದೋಷಕಲ್ಮಷಮ್ ॥ ೩೩

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಪಂಚದಶಃ ಸರ್ಗಃ

---

ಆ ಪುಂಡರೀಕಾಕ್ಷನು ತನ್ನನ್ನು ನಾಲ್ಕು ಅಂಶಗಳಾಗಿ ವಿಭಾಗಿಸಿಕೊಂಡು ಅವತರಿಸಬೇಕೆಂದೂ ದಶರಥನು ತನಗೆ ತಂದೆಯಾಗಬೇಕೆಂದೂ ಬಯಸಿದನು ಆಗ ದೇವರ್ಷಿ ಗಂಧರ್ವರೂ ಏಕಾದಶರುದ್ರರೂ ಅಪ್ಸರಃಸ್ತ್ರೀಯರೂ ಶ್ರೀಮನ್ನಾರಾಯಣನನ್ನು ದಿವ್ಯಸ್ತೋತ್ರಗಳಿಂದ ಸ್ತುತಿಸಿದರು (೩೦-೩೧). " ಹೇ ದೇವ, ದುರಹಂಕಾರಿಯೂ ಉಗ್ರನೂ ದರ್ಪಶಾಲಿಯೂ ಇಂದ್ರಶತ್ರುವೂ ಆದ ರಾವಣನನ್ನು ಸಂಹರಿಸು ಜಗತ್ತನ್ನೇ ಗೋಳಾಡಿಸುತ್ತ ಸಜ್ಜನರಿಗೂ ತಪಸ್ವಿಗಳಿಗೂ ಕಂಟಕನಾಗಿ ಋಷಿಭಯಂಕರನಾದ ರಾವಣನನ್ನು ನಾಶ ಮಾಡು (೩೨). ಅವನ ಸೈನ್ಯವನ್ನೂ ಬಂಧುಗಳನ್ನೂ ಕೊಂದು ಉಗ್ರ ಪರಾಕ್ರಮಿಯಾದ ರಾವಣನನ್ನು ವಧಿಸು ಅನಂತರ ಚಿರಕಾಲ ನಿಶ್ಚಿಂತನಾಗಿ ಇಂದ್ರಪಾಲಿತವೂ ನಿರ್ದೋಷವೂ ಆದ ಸ್ವರ್ಗಲೋಕಕ್ಕೆ* ದಯಮಾಡಿಸು " ಎಂದು ಪ್ರಾರ್ಥಿಸಿದರು (೩೩).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಹದಿನೈದನೆಯ ಸರ್ಗ

---

* ಸ್ವರ್ಗಲೋಕ = ವೈಕುಂಠ ; ಸುರೇಂದ್ರ = ವಿಷ್ವಕ್‌ಸೇನ, ಅಥವಾ ಇದು ವಿಷ್ಣುವಿನ ಸಂಬೋಧನೆ ಎಂದು ವ್ಯಾಖ್ಯಾನಕಾರರು ಹೇಳಿದ್ದಾರೆ.

## ಷೋಡಶಃ ಸರ್ಗಃ

ಪಾಯಸೋತ್ಪತ್ತಿಃ

ತತೋ ನಾರಾಯಣೋ ವಿಷ್ಣುರ್ನಿಯುಕ್ತಃ ಸುರಸತ್ತಮೈಃ ।
ಜಾನನ್ನಪಿ ಸುರಾನೇವಂ ಶ್ಲಕ್ಷ್ಣಂ ವಚನಮಬ್ರವೀತ್ ॥ ೧

ಉಪಾಯಃ ಕೋ ವಧೇ ತಸ್ಯ ರಾಕ್ಷಸಾಧಿಪತೇಃ ಸುರಾಃ ।
ಯಮಹಂ ತಂ ಸಮಾಸ್ಥಾಯ ನಿಹನ್ಯಾಮೃಷಿಕಂಟಕಮ್ ॥ ೨

ಏವಮುಕ್ತಾಃ ಸುರಾಃ ಸರ್ವೇ ಪ್ರತ್ಯೂಚುರ್ವಿಷ್ಣುಮವ್ಯಯಮ್ ।
ಮಾನುಷಂ ರೂಪಮಾಸ್ಥಾಯ ರಾವಣಂ ಜಹಿ ಸಂಯುಗೇ ॥ ೩

ಸ ಹಿ ತೇಪೇ ತಪಸ್ತೀವ್ರಂ ದೀರ್ಘಕಾಲಮರಿಂದಮ ।
ಯೇನ ತುಷ್ಟೋಽಭವದ್ಬ್ರಹ್ಮಾ ಲೋಕಕೃಲ್ಲೋಕಪೂರ್ವಜಃ ॥ ೪

ಸಂತುಷ್ಟಃ ಪ್ರದದೌ ತಸ್ಮೈ ರಾಕ್ಷಸಾಯ ವರಂ ಪ್ರಭುಃ ।
ನಾನಾವಿಧೇಭ್ಯೋ ಭೂತೇಭ್ಯೋ ಭಯಂ ನಾನ್ಯತ್ರ ಮಾನುಷಾತ್

## ಸರ್ಗ ೧೬

ಹೋಮಕುಂಡದಿಂದ ಪ್ರಾಜಾಪತ್ಯಪುರುಷನು ಆವಿರ್ಭವಿಸಿ ದಶರಥನಿಗೆ
ಪಾಯಸವನ್ನು ಅರ್ಪಿಸುವುದು. ಅದನ್ನು ದಶರಥನು
ತನ್ನ ಪತ್ನಿಯರಿಗೆ ವಿಭಾಗಿಸಿಕೊಡುವುದು.

ಈ ಪ್ರಕಾರ ದೇವತೆಗಳು ಪ್ರಾರ್ಥಿಸಲು ಶ್ರೀಮನ್ನಾರಾಯಣನು, ತನಗೆ ಗೊತ್ತಿದ್ದರೂ ಮೃದುವಾಗಿ "ದೇವತೆಗಳೆ, ಆ ರಾಕ್ಷಸಾಧಿಪತಿಯನ್ನು ವಧಿಸುವ ಉಪಾಯ ಯಾವುದು ? ಆ ಋಷಿಕಂಟಕನನ್ನು ಹೇಗೆ ವಧಿಸಲಿ ?" ಎಂದು ಕೇಳಿದನು (೧-೨). ಆಗ ದೇವತೆಗಳು "ಹೇ ಸ್ವಾಮಿ, ಮನುಷ್ಯನಾಗಿ ಅವತರಿಸಿ ಸಂಗ್ರಾಮದಲ್ಲಿ ರಾವಣನನ್ನು ವಧಿಸು ಆ ವೀರನು ದೀರ್ಘ ಕಾಲದವರೆಗೆ ಉಗ್ರವಾದ ತಪಸ್ಸನ್ನಾಚರಿಸಿದನು ಸೃಷ್ಟಿಕರ್ತನಾದ ಬ್ರಹ್ಮದೇವನು ಅದರಿಂದ ಸಂಪ್ರೀತನಾಗಿ ಆ ರಾಕ್ಷಸನಿಗೆ ವರವನ್ನು ಕೊಟ್ಟಿದ್ದಾನೆ. ಆ ವರದ ಪ್ರಕಾರ ರಾವಣನಿಗೆ ಮನುಷ್ಯನನ್ನು ಬಿಟ್ಟು ಯಾರಿಂದಲೂ

ಅವಜ್ಞಾತಾಃ ಪುರಾ ತೇನ ವರದಾನೇ ಹಿ ಮಾನವಾಃ ।
ಏವಂ ಪಿತಾಮಹಾತ್ತಸ್ಮಾದ್ವರಂ ಪ್ರಾಪ್ಯ ಸ ಗರ್ವಿತಃ ॥ ೬

ಉತ್ಸಾದಯತಿ ಲೋಕಾಂಸ್ತ್ರೀನ್ ಸ್ತ್ರಿಯಶ್ಚಾಪ್ಯಪಕರ್ಷತಿ ।
ತಸ್ಮಾತ್ತಸ್ಯ ವಧೋ ದೃಷ್ಟೋ ಮಾನುಷೇಭ್ಯಃ ಪರಂತಪ ॥ ೭

ಇತ್ಯೇತದ್ವಚನಂ ಶ್ರುತ್ವಾ ಸುರಾಣಾಂ ವಿಷ್ಣುರಾತ್ಮವಾನ್ ।
ಪಿತರಂ ರೋಚಯಾಮಾಸ ತದಾ ದಶರಥಂ ನೃಪಮ್ ॥ ೮

ಸ ಚಾಪ್ಯಪುತ್ರೋ ನೃಪತಿಸ್ತಸ್ಮಿನ್ ಕಾಲೇ ಮಹಾದ್ಯುತಿಃ ।
ಅಯಜತ್ ಪುತ್ರಿಯಾಮಿಷ್ಟಿಂ ಪುತ್ರೇಪ್ಸುರರಿಸೂದನಃ ॥ ೯

ಸ ಕೃತ್ವಾ ನಿಶ್ಚಯಂ ವಿಷ್ಣುರಾಮಂತ್ರ್ಯ ಚ ಪಿತಾಮಹಮ್ ।
ಅಂತರ್ಧಾನಂ ಗತೋ ದೇವೈಃ ಪೂಜ್ಯಮಾನೋ ಮಹರ್ಷಿಭಿಃ ॥

ತತೋ ವೈ ಯಜಮಾನಸ್ಯ ಪಾವಕಾದತುಲಪ್ರಭಮ್ ।
ಪ್ರಾದುರ್ಭೂತಂ ಮಹದ್ಭೂತಂ ಮಹಾವೀರ್ಯಂ ಮಹಾಬಲಮ್

---

ಭಯವಿಲ್ಲ (೩-೫) ಏಕೆಂದರೆ, ಅವನು ವರವನ್ನು ಕೇಳಿಕೊಳ್ಳುವಾಗ ಮನುಷ್ಯರು ಯಾವ ಲೆಕ್ಕದವರೆಂದು ಅವರನ್ನು ಉಪೇಕ್ಷೆಮಾಡಿಬಿಟ್ಟನು. ಹೀಗೆ ಲೋಕಪಿತಾಮಹನಿಂದ ವರವನ್ನು ಪಡೆದು ಸೊಕ್ಕಿ, ಮೂರು ಲೋಕಗಳನ್ನೂ ಕಂಗೆಡಿಸುತ್ತಿದ್ದಾನೆ ಪರಸ್ತ್ರೀಯರನ್ನು ಎಳೆದುಕೊಂಡು ಹೋಗುತ್ತಿದ್ದಾನೆ. ಆದ್ದರಿಂದ ದೇವ, ಮನುಷ್ಯರಿಂದಲೇ ಅವನಿಗೆ ಮರಣವೆಂದು ನಿಶ್ಚಿತವಾಗಿದೆ" ಎಂದರು (೬-೭) ದೇವತೆಗಳ ನುಡಿಯನ್ನು ಆಲಿಸಿ ವಿಷ್ಣುವು ದಶರಥಮಹಾರಾಜನನ್ನು ತಂದೆಯಾಗಿ ಆರಿಸಿಕೊಂಡನು. ಅದೇ ಸಮಯದಲ್ಲಿ ದೀಪ್ತಿಶಾಲಿಯಾದ ದಶರಥಭೂಪಾಲನು ಪುತ್ರಾರ್ಥಿಯಾಗಿ ಪುತ್ರಕಾಮೇಷ್ಟಿಯನ್ನು ನಡೆಸುತ್ತಿದ್ದನು. ದೇವತೆಗಳೂ ಮಹರ್ಷಿಗಳೂ ಕೈಮುಗಿದುಕೊಂಡಿರಲು, ವಿಷ್ಣುವು ಅವತರಿಸಬೇಕೆಂದು ನಿಶ್ಚಯಿಸಿ ಬ್ರಹ್ಮನನ್ನು ಬೀಳ್ಕೊಂಡು ಅಲ್ಲಿಯೇ ಅಂತರ್ಧಾನಹೊಂದಿದನು (೮-೧೦). ಅನಂತರ ಇತ್ತ ದಶರಥನು ಯಜ್ಞಮಾಡುತ್ತಿರುವಾಗ ಮಹಾವೀರ್ಯಸಂಪನ್ನನೂ ಮಹಾಬಲಶಾಲಿಯೂ ಆದ ದಿವ್ಯಪುರುಷನೊಬ್ಬನು ಕಣ್ಣು

ಕೃಷ್ಣಂ ರಕ್ತಾಂಬರಧರಂ ರಕ್ತಾಸ್ಯಂ ದುಂದುಭಿಸ್ವನಮ್ ।
ಸ್ನಿಗ್ಧಹರ್ಯಕ್ಷತನುಜಶ್ಮಶ್ರುಪ್ರವರಮೂರ್ಧಜಮ್ ॥ ೧೨

ಶುಭಲಕ್ಷಣಸಂಪನ್ನಂ ದಿವ್ಯಾಭರಣಭೂಷಿತಮ್ ।
ಶೈಲಶೃಂಗಸಮುತ್ಸೇಧಂ ದೃಪ್ತಶಾರ್ದೂಲವಿಕ್ರಮಮ್ ॥ ೧೩

ದಿವಾಕರಸಮಾಕಾರಂ ದೀಪ್ತಾನಲಶಿಖೋಪಮಮ್ ।
ತಪ್ತಜಾಂಬೂನದಮಯೀಂ ರಾಜತಾಂತಪರಿಚ್ಛದಾಮ್ ॥ ೧೪

ದಿವ್ಯಪಾಯಸಸಂಪೂರ್ಣಾಂ ಪಾತ್ರೀಂ ಪತ್ನೀಮಿವ ಪ್ರಿಯಾಮ್ ।
ಪ್ರಗೃಹ್ಯ ವಿಪುಲಾಂ ದೋರ್ಭ್ಯಾಂ ಸ್ವಯಂ ಮಾಯಾಮಯೀಮಿವ

ಸಮವೇಕ್ಷ್ಯಾಬ್ರವೀದ್ವಾಕ್ಯಮಿದಂ ದಶರಥಂ ನೃಪಮ್ ।
ಪ್ರಾಜಾಪತ್ಯಂ ನರಂ ವಿದ್ಧಿ ಮಾಮಿಹಾಭ್ಯಾಗತಂ ನೃಪ ॥ ೧೬

ತತಃ ಪರಂ ತದಾ ರಾಜಾ ಪ್ರತ್ಯುವಾಚ ಕೃತಾಂಜಲಿಃ ।
ಭಗವನ್ ಸ್ವಾಗತಂ ತೇಽಸ್ತು ಕಿಮಹಂ ಕರವಾಣಿ ತೇ ॥ ೧೭

---

ಕೋರೈಸುವ ಪ್ರಭೆಯನ್ನು ಸುತ್ತಲೂ ಚೆಲ್ಲುತ್ತ ಅಗ್ನಿಮಧ್ಯದಿಂದ ಆವಿರ್ಭವಿಸಿದನು. ಆತನು ಶ್ಯಾಮಲವರ್ಣ; ರಕ್ತಾಂಬರಧಾರಿ; ರಕ್ತನೇತ್ರ; ದುಂದುಭಿಗಂಭೀರನಾದ; ಸಿಂಹದ ಕೇಸರಗಳಂತೆ ಕೆಂಚನೆಯ ನಯವಾದ ಗಡ್ಡಮೀಸೆಗಳು, ಕೇಶರಾಶಿ (೧೧-೧೨); ಶುಭಲಕ್ಷಣಸಂಪನ್ನ; ದಿವ್ಯಾಭರಣಭೂಷಿತ; ಗಿರಿಶೃಂಗದಂತೆ ಉನ್ನತಕಾಯ; ಕೊಬ್ಬಿದ ಹುಲಿಯಂತೆ ಪಾದವಿಕ್ಷೇಪ; ಭಾಸ್ಕರನಂತೆ ತೇಜೋರಾಶಿ; ಅಗ್ನಿಜ್ವಾಲೆಯಂತೆ ತೀಕ್ಷ್ಣ. ಆ ದಿವ್ಯಪುರುಷನು ಬೆಳ್ಳಿಯ ಮುಚ್ಚಳವನ್ನು ಹಾಕಿರುವ ಆಶ್ಚರ್ಯಕರವಾದ ಒಂದು ದೊಡ್ಡ ಚಿನ್ನದ ಪಾತ್ರೆಯನ್ನು, ಪ್ರಿಯಪತ್ನಿಯನ್ನು ಆಲಿಂಗಿಸಿಕೊಳ್ಳುವಂತೆ ಎರಡು ತೋಳುಗಳಿಂದ ಆವರಿಸಿ ಹಿಡಿದುಕೊಂಡಿದ್ದನು. ಆ ಪಾತ್ರೆಯಲ್ಲಿ ದಿವ್ಯವಾದ ಪಾಯಸವು ತುಂಬಿತ್ತು (೧೩-೧೫) ಅವನು ದಶರಥನನ್ನು ಸಮೀಕ್ಷಿಸಿ "ರಾಜ, ನಾನು ಪ್ರಜಾಪತಿಯು ಕಳಿಸಿದ ಪುರುಷನೆಂದು ತಿಳಿ" ಎಂದನು. ಆಗ ದಶರಥನು ಕೈಮುಗಿದುಕೊಂಡು "ಭಗವನ್, ನಿನಗೆ ಸ್ವಾಗತ. ಏನು ಮಾಡಲಿ? ಅಪ್ಪಣೆಯಾಗಬೇಕು" ಎಂದನು (೧೬-೧೭).



ವ್ರಾಜಾಪತ್ಯಂ ನರಂ ವಿದ್ಧಿ ಮಾಮಿಹಾಭ್ಯಾಗತಂ ನೃಪ |

**ಅಥೋ ಪುನರಿದಂ ವಾಕ್ಯಂ ಪ್ರಾಜಾಪತ್ಯೋ ನರೋಽಬ್ರವೀತ್ ।**
**ರಾಜನ್ನರ್ಚಯತಾ ದೇವಾನದ್ಯ ಪ್ರಾಪ್ತಮಿದಂ ತ್ವಯಾ ॥ ೧೮**

**ಇದಂ ತು ನೃಪಶಾರ್ದೂಲ ಪಾಯಸಂ ದೇವನಿರ್ಮಿತಮ್ ।**
**ಪ್ರಜಾಕರಂ ಗೃಹಾಣ ತ್ವಂ ಧನ್ಯಮಾರೋಗ್ಯವರ್ಧನಮ್ ॥ ೧೯**

**ಭಾರ್ಯಾಣಾಮನುರೂಪಾಣಾಮಶ್ನೀತೇತಿ ಪ್ರಯಚ್ಛ ವೈ ।**
**ತಾಸು ತ್ವಂ ಪ್ರಾಪ್ಸ್ಯಸೇ ಪುತ್ರಾನ್ ಯದರ್ಥಂ ಯಜಸೇ ನೃಪ ॥**

**ತಥೇತಿ ನೃಪತಿಃ ಪ್ರೀತಃ ಶಿರಸಾ ಪ್ರತಿಗೃಹ್ಯ ತಾಮ್ ।**
**ಪಾತ್ರೀಂ ದೇವಾನ್ನಸಂಪೂರ್ಣಾಂ ದೇವದತ್ತಾಂ ಹಿರಣ್ಮಯೀಮ್ ॥**

**ಅಭಿವಾದ್ಯ ಚ ತದ್ಭೂತಮದ್ಭುತಂ ಪ್ರಿಯದರ್ಶನಮ್ ।**
**ಮುದಾ ಪರಮಯಾ ಯುಕ್ತಶ್ಚಕಾರಾಭಿಪ್ರದಕ್ಷಿಣಮ್ ॥ ೨೨**

**ತತೋ ದಶರಥಃ ಪ್ರಾಪ್ಯ ಪಾಯಸಂ ದೇವನಿರ್ಮಿತಮ್ ।**
**ಬಭೂವ ಪರಮಪ್ರೀತಃ ಪ್ರಾಪ್ಯ ವಿತ್ತಮಿವಾಧನಃ ॥ ೨೩**

---

ಆಗ ಪ್ರಾಜಾಪತ್ಯಪುರುಷನು "ರಾಜ, ನೀನು ದೇವತೆಗಳನ್ನು ಅರ್ಚಿಸಿದ್ದರಿಂದ ಇದು ನಿನಗೆ ದೊರಕಿದೆ. ದೇವನಿರ್ಮಿತವಾದ ಪಾಯಸವಿದು. ಇದು ನಿನಗೆ ಸಂತಾನವನ್ನು ಕೊಡುತ್ತದೆಯಲ್ಲದೆ ಸಂಪತ್ಕರವೂ ಆರೋಗ್ಯಕಾರಿಯೂ ಆಗಿದೆ. ಇದನ್ನು ಸ್ವೀಕರಿಸು (೧೮-೧೯) ಈ ಪಾಯಸವನ್ನು ಭಕ್ಷಿಸಬೇಕೆಂದು ಹೇಳಿ ಅನುರೂಪರಾದ ನಿನ್ನ ಪತ್ನಿಯರಿಗೆ ಕೊಡು. ದಶರಥ, ನಿನ್ನ ಯಾಗದ ಫಲವಾಗಿ ಆ ಪತ್ನಿಯರಲ್ಲಿ ಪುತ್ರರನ್ನು ಪಡೆಯುತ್ತೀಯೆ" ಎಂದು ಹೇಳಿದನು. ದಶರಥನು ಆನಂದದಿಂದ ಹಿಗ್ಗಿದನು. 'ತಥಾಸ್ತು' ಎಂದು ನುಡಿದು ದಿವ್ಯಪಾಯಸದಿಂದ ತುಂಬಿದ್ದ ಆ ಸುವರ್ಣ ಪಾತ್ರೆಯನ್ನು ತಲೆಬಾಗಿ ಸ್ವೀಕರಿಸಿದನು (೨೦-೨೧). ಅನಂತರ ಅದ್ಭುತಾಕಾರನೂ ಪ್ರಸನ್ನಮೂರ್ತಿಯೂ ಆಗಿದ್ದ ದಿವ್ಯಪುರುಷನಿಗೆ ಪರಮ ಸಂತೋಷದಿಂದ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿದನು. ದಶರಥನಿಗೆ ದೇವನಿರ್ಮಿತವಾದ ಪಾಯಸವು ದೊರಕಿದ್ದು, ದರಿದ್ರನಿಗೆ ಲಕ್ಷ್ಮಿಯು

ತತಸ್ತದದ್ಭುತಪ್ರಖ್ಯಂ ಭೂತಂ ಪರಮಭಾಸ್ವರಮ್ ।
ಸಂವರ್ತಯಿತ್ವಾ ತತ್ಕರ್ಮ ತತ್ರೈವಾಂತರಧೀಯತ ॥ ೨೪
ಹರ್ಷರಶ್ಮಿಭಿರುದ್ಯೋತಂ ತಸ್ಯಾಂತಃಪುರಮಾಬಭೌ ।
ಸೋಽಂತಃಪುರಂ ಪ್ರವಿಶ್ಯೈವ ಕೌಸಲ್ಯಾಮಿದಮಬ್ರವೀತ್ ॥ ೨೫
ಪಾಯಸಂ ಪ್ರತಿಗೃಹ್ಣೀಷ್ವ ಪುತ್ರೀಯಮಿದಮಾತ್ಮನಃ ।
ಕೌಸಲ್ಯಾಯೈ ನರಪತಿಃ ಪಾಯಸಾರ್ಧಂ ದದೌ ತದಾ ॥ ೨೬
ಅರ್ಧಾದರ್ಧಂ ದದೌ ಚಾಪಿ ಸುಮಿತ್ರಾಯೈ ನರಾಧಿಪಃ ।
ಕೈಕೇಯ್ಯೈ ಚಾವಶಿಷ್ಟಾರ್ಧಂ ದದೌ ಪುತ್ರಾರ್ಥಕಾರಣಾತ್ ॥ ೨೭
ಪ್ರದದೌ ಚಾವಶಿಷ್ಟಾರ್ಧಂ ಪಾಯಸಸ್ಯಾಮೃತೋಪಮಮ್ ।
ಅನುಚಿಂತ್ಯ ಸುಮಿತ್ರಾಯೈ ಪುನರೇವ ಮಹೀಪತಿಃ ॥ ೨೮
ಏವಂ ತಾಸಾಂ ದದೌ ರಾಜಾ ಭಾರ್ಯಾಣಾಂ ಪಾಯಸಂ ಪೃಥಕ್ ।
ತಾಸ್ತ್ವೇತತ್ ಪಾಯಸಂ ಪ್ರಾಪ್ಯ ನರೇಂದ್ರಸ್ಯೋತ್ತಮಾಃ ಸ್ತ್ರಿಯಃ
ಸಂಮಾನಂ ಮೇನಿರೇ ಸರ್ವಾಃ ಪ್ರಹರ್ಷೋದಿತಚೇತಸಃ ॥

---

ಒಲಿದಂತಾಯಿತು (೨೨-೨೩). ಅದ್ಭುತವೂ ಪರಮತೇಜಸ್ವಿಯೂ ಆದ ಆ ದಿವ್ಯಾಕೃತಿಯು ತನ್ನ ಕರ್ತವ್ಯವನ್ನು ನಿರ್ವಹಿಸಿ ಅದೇ ಹೋಮಾಗ್ನಿಯಲ್ಲಿ ಅಂತರ್ಧಾನಹೊಂದಿತು ರಾಜಪತ್ನಿಯರ ಮುಖದಲ್ಲಿ ಹರ್ಷವು ಹೊಮ್ಮಿತು. ಶರತ್ಕಾಲದ ಸುಂದರಚಂದ್ರಮನ ಕಾಂತಿಯಿಂದ ಗಗನದಂತೆ, ಆ ರಾಣಿಯರ ಮುಖಕಾಂತಿಯಿಂದ ಅಂತಃಪುರವು ಚೆಲುವಾಯಿತು (೨೪-೨೫). ದಶರಥನು ಅಂತಃಪುರಕ್ಕೆ ಹೋಗಿ ಕೌಸಲ್ಯೆಯೊಂದಿಗೆ 'ನಿನಗೆ ಪುತ್ರನನ್ನು ಕೊಡುವ ಈ ಪಾಯಸವನ್ನು ಸ್ವೀಕರಿಸು' ಎನ್ನುತ್ತ ಆ ಪಾಯಸದಲ್ಲಿ ಅರ್ಧಭಾಗವನ್ನು ಕೌಸಲ್ಯೆಗೆ ಕೊಟ್ಟನು. ಉಳಿದುದರಲ್ಲಿ ಅರ್ಧಭಾಗವನ್ನು ಸುಮಿತ್ರೆಗೆ ಕೊಟ್ಟನು. (ಪಾತ್ರೆಯಲ್ಲಿ ನಾಲ್ಕನೆಯ ಒಂದು ಭಾಗ ಪಾಯಸ ಉಳಿಯಿತು.) ಅದರಲ್ಲಿ ಅರ್ಧಭಾಗವನ್ನು ಕೈಕೇಯಿಗೆ ಕೊಟ್ಟನು (೨೬-೨೭). ದಶರಥನು ವಿಚಾರಶೀಲನಾದ್ದರಿಂದ ನ್ಯಾಯವನ್ನು ಪರ್ಯಾಲೋಚಿಸಿ, ಅಮೃತೋಪಮವಾದ ಉಳಿದ ಭಾಗವನ್ನು ಮತ್ತೆ ಸುಮಿತ್ರೆಗೆ ಕೊಟ್ಟನು. ಹೀಗೆ ದಶರಥನು ಮೂವರು ಪತ್ನಿಯರಿಗೂ

ತತಸ್ತು ತಾಃ ಪ್ರಾಶ್ಯ ತದುತ್ತಮಸ್ತ್ರಿಯೋ
ಮಹೀಪತೇರುತ್ತಮಪಾಯಸಂ ಪೃಥಕ್ ।
ಹುತಾಶನಾದಿತ್ಯಸಮಾನತೇಜಸೋಽ-
ಚಿರೇಣ ಗರ್ಭಾನ್ ಪ್ರತಿಪೇದಿರೇ ತದಾ ॥ ೩೦

ತತಸ್ತು ರಾಜಾ ಪ್ರಸಮೀಕ್ಷ್ಯ ತಾಃ ಸ್ತ್ರಿಯಃ
ಪ್ರರೂಢಗರ್ಭಾಃ ಪ್ರತಿಲಬ್ಧಮಾನಸಃ ।
ಬಭೂವ ಹೃಷ್ಟಸ್ತ್ರಿದಿವೇ ಯಥಾ ಹರಿಃ
ಸುರೇಂದ್ರಸಿದ್ಧರ್ಷಿಗಣಾಭಿಪೂಜಿತಃ ॥ ೩೧

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಷೋಡಶಃ ಸರ್ಗಃ

---

ಪಾಯಸವನ್ನು ವಿಭಾಗಿಸಿಕೊಟ್ಟನು* (೨೮). ರಾಜನ ಆ ಮೂವರು ಪತ್ನಿಯರೂ ಉತ್ತಮಗುಣಸಂಪನ್ನರು. ದಶರಥನು ತಮ್ಮ ಸ್ಥಾನಮಾನಕ್ಕೆ ತಕ್ಕಂತೆ ಪಾಯಸವನ್ನು ವಿಭಾಗಿಸಿಕೊಟ್ಟನೆಂದು ಅವರೆಲ್ಲರೂ ಸಂತೋಷ ಪಟ್ಟರು (೨೯). ಉತ್ತಮಸ್ವಭಾವದ ಆ ರಾಣಿಯರು ತಮ್ಮ ಪಾಲಿನ ದಿವ್ಯ ಪಾಯಸವನ್ನು ಭಕ್ಷಿಸಿದರು ಅನಂತರ ಅಗ್ನಿಯಂತೆ ತೇಜೋಮಯವಾದ ಗರ್ಭವನ್ನು ಧರಿಸಿ ಅವರೆಲ್ಲರೂ ತೇಜೋವಿಶೇಷದಿಂದ ಬೆಳಗುತ್ತಿದ್ದರು (೩೦). ದಶರಥಮಹಾರಾಜನು ತನ್ನ ಪತ್ನಿಯರು ಗರ್ಭಿಣಿಯರಾದುದನ್ನು ತಿಳಿದು ಆನಂದಪಟ್ಟನು. ಅವನ ಮನಸ್ಸಿಗೆ ಸಮಾಧಾನವಾಯಿತು. ದಶರಥನ ಭಾಗ್ಯವನ್ನು ಕಂಡು ದೇವೇಂದ್ರನೂ ಸಿದ್ಧರೂ ಮಹರ್ಷಿಗಳೂ ಅವನನ್ನು ಕೊಂಡಾಡಿದರು ಸ್ವರ್ಗದಲ್ಲಿ ಇಂದ್ರನೂ ಸಂತುಷ್ಟನಾದನು† (೩೧).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಹದಿನಾರನೆಯ ಸರ್ಗ

---

* ಪಾಯಸವನ್ನು ಹದಿನಾರಾಣೆಯ ಒಂದು ರೂಪಾಯಿಯಷ್ಟೆಂದು ತಿಳಿಯೋಣ. ಅದರಲ್ಲಿ ಎಂಟಾಣೆಯ ಭಾಗ ಕೌಸಲ್ಯೆಗೂ, ಆರಾಣೆಯ ಭಾಗ ಸುಮಿತ್ರೆಗೂ, ಎರಡಾಣೆಯ ಭಾಗ ಕೈಕೇಯಿಗೂ ಸಂದಿತು. ಅನುಬಂಧವನ್ನು ನೋಡಿ.

† ಮೂಲದಲ್ಲಿ ಯಥಾಶಬ್ದವು ಚಶಬ್ದಾರ್ಥದಲ್ಲಿದೆ. ಮತ್ತು ಎಂದರ್ಥ. ಶ್ಲೋಕದ ಕಡೆಯ ಸಾಲು ದಶರಥನಿಗೆ ವಿಶೇಷಣ.

## ಸಪ್ತದಶಃ ಸರ್ಗಃ

### ಋಕ್ಷವಾನರೋತ್ಪತ್ತಿಃ

ಪುತ್ರತ್ವಂ ತು ಗತೇ ವಿಷ್ಣೌ ರಾಜ್ಞಸ್ತಸ್ಯ ಮಹಾತ್ಮನಃ ।
ಉವಾಚ ದೇವತಾಃ ಸರ್ವಾಃ ಸ್ವಯಂಭೂರ್ಭಗವಾನಿದಮ್ ॥ ೧

ಸತ್ಯಸಂಧಸ್ಯ ವೀರಸ್ಯ ಸರ್ವೇಷಾಂ ನೋ ಹಿತೈಷಿಣಃ ।
ವಿಷ್ಣೋಃ ಸಹಾಯಾನ್ ಬಲಿನಃ ಸೃಜಧ್ವಂ ಕಾಮರೂಪಿಣಃ ॥ ೨

ಮಾಯಾವಿದಶ್ಚ ಶೂರಾಂಶ್ಚ ವಾಯುವೇಗಸಮಾನ್ ಜವೇ ।
ನಯಜ್ಞಾನ್ ಬುದ್ಧಿಸಂಪನ್ನಾನ್ ವಿಷ್ಣುತುಲ್ಯಪರಾಕ್ರಮಾನ್ ॥ ೩

ಅಸಂಹಾರ್ಯಾನುಪಾಯಜ್ಞಾನ್ ಸಿಂಹಸಂಹನನಾನ್ವಿತಾನ್ ।
ಸರ್ವಾಸ್ತ್ರಗುಣಸಂಪನ್ನಾನಮೃತಪ್ರಾಶನಾನಿವ ॥ ೪

## ಸರ್ಗ ೧೭

ಬ್ರಹ್ಮನ ಪ್ರೇರಣೆಯಂತೆ ದೇವತೆಗಳು ವಾನರರನ್ನೂ ಭಲ್ಲೂಕಗಳನ್ನೂ ಪುತ್ರರನ್ನಾಗಿ ಸೃಜಿಸುವುದು.

ಮಹಾತ್ಮನಾದ ದಶರಥನ ಪುತ್ರನಾಗಿ ಜನಿಸಬೇಕೆಂದು ವಿಷ್ಣುವು ನಿಶ್ಚಯಿಸಲಾಗಿ, ಇತ್ತ ಭಗವಾನ್ ಬ್ರಹ್ಮನು ದೇವತೆಗಳನ್ನು ಕುರಿತು ಹೀಗೆಂದನು: "ಎಲೈ ದೇವತೆಗಳೆ, ಸತ್ಯಸಂಧನೂ ವೀರನೂ ನಮ್ಮೆಲ್ಲರಿಗೆ ಹಿತೈಷಿಯೂ ಆದ ಮಹಾವಿಷ್ಣುವಿಗೆ ಸಹಾಯಮಾಡುವುದಕ್ಕಾಗಿ ಕಾಮರೂಪಿಗಳಾದ ಬಲಶಾಲಿಗಳನ್ನು ನೀವು ಸೃಜಿಸಬೇಕು (೧-೨). ಅವರು ರಾಕ್ಷಸರ ಮಾಯೋಪಾಯಗಳನ್ನು ಬಲ್ಲವರೂ ಶೂರರೂ ವಾಯುವೇಗವುಳ್ಳವರೂ ನೀತಿಜ್ಞರೂ ಬುದ್ಧಿಸಂಪನ್ನರೂ ವಿಷ್ಣುವಿನಂತೆ ಪರಾಕ್ರಮಿಗಳೂ ಆಗಿರಬೇಕು. ಅವರು ಇತರರಿಂದ ಕೊಲ್ಲಲು ಅಶಕ್ಯರೂ ಉಪಾಯಜ್ಞರೂ ಸಿಂಹದಂತಹ ಶರೀರಧಾರಿಗಳೂ ಸರ್ವಾಸ್ತ್ರಗಳ ಪ್ರಯೋಗವನ್ನು ಬಲ್ಲವರೂ ಅಮೃತಪಾನಮಾಡಿದವರಂತೆ ಗಟ್ಟಿಗರೂ ಆಗಿರಬೇಕು (೩-೪).

ಅಪ್ಸರಃಸು ಚ ಮುಖ್ಯಾಸು ಗಂಧರ್ವೀಣಾಂ ತನೂಷು ಚ ।
ಕಿಂನರೀಣಾಂ ಚ ಗಾತ್ರೇಷು ವಾನರೀಣಾಂ ತನೂಷು ಚ ॥ ೫

ಯಕ್ಷಪನ್ನಗಕನ್ಯಾಸು ಋಷಿವಿದ್ಯಾಧರೀಷು ಚ ।
ಸೃಜಧ್ವಂ ಹರಿರೂಪೇಣ ಪುತ್ರಾಂಸ್ತುಲ್ಯಪರಾಕ್ರಮಾನ್ ॥ ೬

ಪೂರ್ವಮೇವ ಮಯಾ ಸೃಷ್ಟೋ ಜಾಂಬವಾನೃಕ್ಷಪುಂಗವಃ ।
ಜೃಂಭಮಾಣಸ್ಯ ಸಹಸಾ ಮಮ ವಕ್ತ್ರಾದಜಾಯತ ॥ ೭

ತೇ ತಥೋಕ್ತಾ ಭಗವತಾ ತತ್ ಪ್ರತಿಶ್ರುತ್ಯ ಶಾಸನಮ್ ।
ಜನಯಾಮಾಸುರೇವಂ ತೇ ಪುತ್ರಾನ್ ವಾನರರೂಪಿಣಃ ॥ ೮

ಋಷಯಶ್ಚ ಮಹಾತ್ಮಾನಃ ಸಿದ್ಧವಿದ್ಯಾಧರೋರಗಾಃ ।
ಚಾರಣಾಶ್ಚ ಸುತಾನ್ ವೀರಾನ್ ಸಸೃಜುರ್ವನಚಾರಿಣಃ ॥ ೯

ವಾನರೇಂದ್ರಂ ಮಹೇಂದ್ರಾಭಮಿಂದ್ರೋ ವಾಲಿನಮಾತ್ಮಜಮ್ ।
ಸುಗ್ರೀವಂ ಜನಯಾಮಾಸ ತಪನಸ್ತಪತಾಂ ವರಃ ॥ ೧೦

ಬೃಹಸ್ಪತಿಸ್ತ್ವಜನಯತ್ತಾರಂ ನಾಮ ಮಹಾಹರಿಮ್ ।
ಸರ್ವವಾನರಮುಖ್ಯಾನಾಂ ಬುದ್ಧಿಮಂತಮನುತ್ತಮಮ್ ॥ ೧೧

---

ಅಪ್ಸರೆಯರು, ಗಂಧರ್ವಿಯರು, ಯಕ್ಷಸ್ತ್ರೀಯರು, ನಾಗಕನ್ಯೆಯರು ಮುಂತಾದ ಸ್ತ್ರೀಯರಲ್ಲಿ ನಿಮ್ಮಂತೆಯೇ ಪರಾಕ್ರಮಶಾಲಿಗಳಾದ ಪುತ್ರರನ್ನು ಸೃಜಿಸಿರಿ. ಅವರು ವಾನರರೂಪಧಾರಿಗಳಾಗಿರಲಿ (೫-೬). ನಾನು ಭಲ್ಲೂಕ ಶ್ರೇಷ್ಠನಾದ ಜಾಂಬವಂತನನ್ನು ಹಿಂದೆಯೇ ಸೃಷ್ಟಿಸಿದ್ದೇನೆ. ನಾನು ಆಕಳಿಸು ವಾಗ ನನ್ನ ಬಾಯಿಂದ ಅವನು ಉದ್ಭವಿಸಿದನು." ಬ್ರಹ್ಮನ ಈ ಆಜ್ಞೆಯನ್ನು ಮನ್ನಿಸಿ ದೇವತೆಗಳು ವಾನರರೂಪಿಗಳಾದ ಪುತ್ರರನ್ನು ಉತ್ಪಾದಿಸಿದರು (೭-೮). ಋಷಿಗಳೂ ಸಿದ್ಧ ವಿದ್ಯಾಧರ ಪನ್ನಗರೂ ಚಾರಣರೂ ವೀರರಾದ ವಾನರರನ್ನು ಸೃಜಿಸಿದರು ಇಂದ್ರನು ತನ್ನಂತೆ ವೀರನೂ ವಾನರೇಂದ್ರನೂ ಆದ ವಾಲಿಯನ್ನು ಪುತ್ರನನ್ನಾಗಿ ಪಡೆದನು. ಸೂರ್ಯನು ಸುಗ್ರೀವನನ್ನು ಉತ್ಪಾದಿಸಿದನು (೯-೧೦). ಸಕಲ ಕಪಿಗಳಲ್ಲಿ ಬುದ್ಧಿಶಾಲಿಯಾದ ತಾರನೆಂಬ

ಧನದಸ್ಯ ಸುತಃ ಶ್ರೀಮಾನ್ ವಾನರೋ ಗಂಧಮಾದನಃ ।
ವಿಶ್ವಕರ್ಮಾ ತ್ವಜನಯನ್ನಲಂ ನಾಮ ಮಹಾಹರಿಮ್ ॥ ೧೨
ಪಾವಕಸ್ಯ ಸುತಃ ಶ್ರೀಮಾನ್ನೀಲೋಽಗ್ನಿಸದೃಶಪ್ರಭಃ ।
ತೇಜಸಾ ಯಶಸಾ ವೀರ್ಯಾದತ್ಯರಿಚ್ಯತ ವೀರ್ಯವಾನ್ ॥ ೧೩
ರೂಪದ್ರವಿಣಸಂಪನ್ನಾವಶ್ವಿನೌ ರೂಪಸಂಮತೌ ।
ಮೈಂದಂ ಚ ದ್ವಿವಿದಂ ಚೈವ ಜನಯಾಮಾಸತುಃ ಸ್ವಯಮ್ ॥ ೧೪
ವರುಣೋ ಜನಯಾಮಾಸ ಸುಷೇಣಂ ನಾಮ ವಾನರಮ್ ।
ಶರಭಂ ಜನಯಾಮಾಸ ಪರ್ಜನ್ಯಸ್ತು ಮಹಾಬಲಮ್ ॥ ೧೫
ಮಾರುತಸ್ಯಾತ್ಮಜಃ ಶ್ರೀಮಾನ್ ಹನುಮಾನ್ನಾಮ ವಾನರಃ ।
ವಜ್ರಸಂಹನನೋಪೇತೋ ವೈನತೇಯಸಮೋ ಜವೇ ॥ ೧೬
ಸರ್ವವಾನರಮುಖ್ಯೇಷು ಬುದ್ಧಿಮಾನ್ ಬಲವಾನಪಿ ।
ತೇ ಸೃಷ್ಟಾ ಬಹುಸಾಹಸ್ರಾ ದಶಗ್ರೀವವಧೇ ರತಾಃ ॥ ೧೭
ಅಪ್ರಮೇಯಬಲಾ ವೀರಾ ವಿಕ್ರಾಂತಾಃ ಕಾಮರೂಪಿಣಃ ।
ತೇ ಗಜಾಚಲಸಂಕಾಶಾ ವಪುಷ್ಮಂತೋ ಮಹಾಬಲಾಃ ॥ ೧೮

---

ಮಹಾಕಪಿಯು ಬೃಹಸ್ಪತಿಗೆ ಮಗನಾದನು. ಗಂಧಮಾದನನು ಕುಬೇರನ ಮಗ. ನಳನು ವಿಶ್ವಕರ್ಮನ ಮಗ. ತೇಜಸ್ವಿಯಾದ ನೀಲನು ಅಗ್ನಿಗೆ ಮಗನಾದನು. ಆ ವೀರನು ತೇಜಸ್ಸು ಯಶಸ್ಸು ವೀರ್ಯಗಳಿಂದ ಎಲ್ಲರನ್ನೂ ಮೀರಿಸಿದ್ದನು (೧೧-೧೩) ರೂಪವಂತರಾದ ಅಶ್ವಿನೀದೇವತೆಗಳು ಮೈಂದದ್ವಿವಿದರನ್ನು ಸೃಜಿಸಿದರು. ವರುಣನು ಸುಷೇಣನನ್ನೂ ಪರ್ಜನ್ಯನು ಶರಭನನ್ನೂ ಉತ್ಪಾದಿಸಿದರು ವಾಯುದೇವನಿಗೆ ಹನುಮಂತನು ಪುತ್ರನಾಗಿ ಜನಿಸಿದನು. ಅವನು ವಜ್ರಕಾಯ; ಗರುತ್ಮನಂತೆ ವೇಗಶಾಲಿ; ಇತರ ಎಲ್ಲ ಕಪಿಶ್ರೇಷ್ಠರಿಗಿಂತ ಬುದ್ಧಿಶಾಲಿ; ಬಲಶಾಲಿ (೧೪-೧೬). ಹೀಗೆ ರಾವಣವಧೆಗೆ ಸಹಾಯಮಾಡುವುದಕ್ಕಾಗಿ ಸಾವಿರಗಟ್ಟಲೆ ವಾನರರು ಸೃಜಿಸಲ್ಪಟ್ಟರು. ಆ ವೀರರ ಪರಾಕ್ರಮವನ್ನು ಊಹಿಸುವುದು ಶಕ್ಯವಲ್ಲ. ಅವರೆಲ್ಲರೂ ಕಾಮರೂಪಿಗಳು ಆನೆಯಂತೆಯೂ ಬೆಟ್ಟದಂತೆಯೂ ದೊಡ್ಡದೊಡ್ಡ ಶರೀರಧಾರಿಗಳು. ಮಹಾಬಲಸಂಪನ್ನರು (೧೭-೧೮).

ಋಕ್ಷವಾನರಗೋಪುಚ್ಛಾಃ ಕ್ಷಿಪ್ರಮೇವಾಭಿಜಜ್ಞಿರೇ ।
ಯಸ್ಯ ದೇವಸ್ಯ ಯದ್ರೂಪಂ ವೇಷೋ ಯಶ್ಚ ಪರಾಕ್ರಮಃ ॥ ೧೯

ಅಜಾಯತ ಸಮಂ ತೇನ ತಸ್ಯ ತಸ್ಯ ಪೃಥಕ್ ಪೃಥಕ್ ।
ಗೋಲಾಂಗೂಲೀಷು ಚೋತ್ಪನ್ನಾಃ ಕೇಚಿತ್ ಸಂಮತವಿಕ್ರಮಾಃ ॥

ಋಕ್ಷೀಷು ಚ ತಥಾ ಜಾತಾ ವಾನರಾಃ ಕಿಂನರೀಷು ಚ ।
ದೇವಾ ಮಹರ್ಷಿಗಂಧರ್ವಾಸ್ತಾರ್ಕ್ಷ್ಯಾ ಯಕ್ಷಾ ಯಶಸ್ವಿನಃ ॥ ೨೧

ನಾಗಾಃ ಕಿಂಪುರುಷಾಶ್ಚೈವ ಸಿದ್ಧವಿದ್ಯಾಧರೋರಗಾಃ ।
ಬಹವೋ ಜನಯಾಮಾಸುರ್ಹೃಷ್ಟಾಸ್ತತ್ರ ಸಹಸ್ರಶಃ ॥ ೨೨

ಚಾರಣಾಶ್ಚ ಸುತಾನ್ ವೀರಾನ್ ಸಸೃಜುರ್ವನಚಾರಿಣಃ ।
ವಾನರಾನ್ ಸುಮಹಾಕಾಯಾನ್ ಸರ್ವಾನ್ ವೈ ವನಚಾರಿಣಃ ॥

ಅಪ್ಸರಃಸು ಚ ಮುಖ್ಯಾಸು ತಥಾ ವಿದ್ಯಾಧರೀಷು ಚ ।
ನಾಗಕನ್ಯಾಸು ಚ ತಥಾ ಗಂಧರ್ವೀಣಾಂ ತನೂಷು ಚ ॥ ೨೪

ಕಾಮರೂಪಬಲೋಪೇತಾ ಯಥಾಕಾಮಂ ವಿಚಾರಿಣಃ ।
ಸಿಂಹಶಾರ್ದೂಲಸದೃಶಾ ದರ್ಪೇಣ ಚ ಬಲೇನ ಚ ॥ ೨೫

---

ವಾನರರಂತೆಯೇ ಭಲ್ಲೂಕಗಳೂ ಗೋಪುಚ್ಛಗಳೂ* ಜನಿಸಿದವು. ಆಯಾ ದೇವತೆಗಳ ರೂಪಪರಾಕ್ರಮಗಳೇ ಅವರ ಮಕ್ಕಳಲ್ಲಿಯೂ ತೋರಿದವು. ಗೋಪುಚ್ಛಗಳಲ್ಲಿಯೂ, ಭಲ್ಲೂಕಗಳಲ್ಲಿಯೂ, ಕಿಂನರಿಯರಲ್ಲಿಯೂ ಭಿನ್ನ ಜಾತಿಯ ವಾನರರು ಉದಿಸಿದರು ಹೀಗೆ ದೇವತೆಗಳೂ ಮಹರ್ಷಿಗಳೂ ಗಂಧರ್ವರೂ ಮೊದಲಾದ ದೇವಯೋನಿಪುರುಷರು ಲೆಕ್ಕವಿಲ್ಲದಷ್ಟು ವಾನರರನ್ನು ಸೃಜಿಸಿದರು (೧೯-೨೫). ಅಪ್ಸರಃಸ್ತ್ರೀಯರು, ವಿದ್ಯಾಧರಿಯರು ಮುಂತಾದವರ ಗರ್ಭದಲ್ಲಿ ಅವರೆಲ್ಲರೂ ಹುಟ್ಟಿದರು ಅವರು ಬಲದರ್ಪಗಳಲ್ಲಿ ಸಿಂಹಶಾರ್ದೂಲಗಳಿಗೆ ಸದೃಶರು , ಶಿಲೆಗಳಿಂದಲೂ ಬೆಟ್ಟಗಳಿಂದಲೂ ಯುದ್ಧ ಮಾಡತಕ್ಕವರು ಕೋರೆಯ ಹಲ್ಲು ಉಗುರುಗಳೇ ಅವರ ಆಯುಧಗಳು.

* ಗೋಪುಚ್ಛ = ಒಂದು ಜಾತಿಯ ಕಪಿ ; ಸಿಂಗಳೀಕ.

*

ಶಿಲಾಪ್ರಹರಣಾಃ ಸರ್ವೇ ಸರ್ವೇ ಪಾದಪಯೋಧಿನಃ ।
ನಖದಂಷ್ಟ್ರಾಯುಧಾಃ ಸರ್ವೇ ಸರ್ವೇ ಸರ್ವಾಸ್ತ್ರಕೋವಿದಾಃ ॥ ೨೬

ವಿಚಾಲಯೇಯುಃ ಶೈಲೇಂದ್ರಾನ್ ಭೇದಯೇಯುಃ ಸ್ಥಿರಾನ್ ದ್ರುಮಾನ್ ।
ಕ್ಷೋಭಯೇಯುಶ್ಚ ವೇಗೇನ ಸಮುದ್ರಂ ಸರಿತಾಂ ಪತಿಮ್ ॥ ೨೭

ದಾರಯೇಯುಃ ಕ್ಷಿತಿಂ ಪದ್ಭ್ಯಾಮಾಪ್ಲವೇಯುರ್ಮಹಾರ್ಣವಮ್ ।
ನಭಃಸ್ಥಲಂ ವಿಶೇಯುಶ್ಚ ಗೃಹ್ಣೀಯುರಪಿ ತೋಯದಾನ್ ॥ ೨೮

ಗೃಹ್ಣೀಯುರಪಿ ಮಾತಂಗಾನ್ ಮತ್ತಾನ್ ಪ್ರವ್ರಜತೋ ವನೇ ।
ನರ್ದಮಾನಾಶ್ಚ ನಾದೇನ ಪಾತಯೇಯುರ್ವಿಹಂಗಮಾನ್ ॥ ೨೯

ಈದೃಶಾನಾಂ ಪ್ರಸೂತಾನಿ ಹರೀಣಾಂ ಕಾಮರೂಪಿಣಾಮ್ ।
ಶತಂ ಶತಸಹಸ್ರಾಣಿ ಯೂಥಪಾನಾಂ ಮಹಾತ್ಮನಾಮ್ ॥ ೩೦

ತೇ ಪ್ರಧಾನೇಷು ಯೂಥೇಷು ಹರೀಣಾಂ ಹರಿಯೂಥಪಾಃ ।
ಬಭೂವುರ್ಯೂಥಪಶ್ರೇಷ್ಠಾ ವೀರಾಂಶ್ಚಾಜನಯನ್ ಹರೀನ್ ॥

---

ಆದರೂ ಅಸ್ತ್ರವಿದ್ಯೆಯಲ್ಲಿ ಪಳಗಿದವರು. ಅವರು ಪರ್ವತಗಳನ್ನು ಅಲ್ಲಾಡಿಸಬಲ್ಲರು. ಮರಗಳನ್ನೇ ಮುರಿದುಹಾಕಬಲ್ಲರು (೨೪-೨೬). ವೇಗದಿಂದ ನುಗ್ಗಿ ಸಮುದ್ರವನ್ನು ಕ್ಷೋಭೆಗೊಳಿಸಬಲ್ಲರು. ಕಾಲುಗಳಿಂದ ಒದೆದು ಭೂಮಿಯನ್ನೇ ಸೀಳಬಲ್ಲರು. ಮಹಾಸಾಗರವನ್ನು ಈಜಿ ದಾಟಬಲ್ಲರು. ನಭೋಮಂಡಲದಲ್ಲಿ ನುಗ್ಗಬಲ್ಲರು ಮೇಘಗಳನ್ನು ಹಿಡಿದು ಎಳೆಯಬಲ್ಲರು. ಅರಣ್ಯದಲ್ಲಿ ಅಲೆಯುವ ಮತ್ತಮಾತಂಗಗಳನ್ನು ಹಿಡಿದು ನಿಲ್ಲಿಸಬಲ್ಲರು. ತಮ್ಮ ಗರ್ಜನೆಗಳಿಂದಲೇ ಆಕಾಶದಲ್ಲಿ ಹಾರಾಡುವ ಪಕ್ಷಿಗಳನ್ನು ಕೆಳಕ್ಕೆ ಉದುರಿಸಬಲ್ಲರು (೨೭-೨೯). ಈ ರೀತಿಯಲ್ಲಿ ಕಾಮರೂಪಿಗಳಾದ ವಾನರ ವೀರ ನಾಯಕರು ಒಂದುಕೋಟಿ ಸಂಖ್ಯೆಯಲ್ಲಿ ಉದಿಸಿದರು. ಅವರು ತಮ್ಮಂತೆಯೇ ಪರಾಕ್ರಮಿಗಳಾದ ಬಹುಮಂದಿ ಕಪಿವೀರರನ್ನು ಉತ್ಪಾದಿಸಿದರು. ಅನೇಕರು ಋಕ್ಷವಂತನೆಂಬ ಪರ್ವತದ ಪ್ರದೇಶಗಳಲ್ಲಿ ವಾಸವಾಗಿದ್ದರು (೩೦-೩೧).

ಅನ್ಯೇ ಋಕ್ಷವತಃ ಪ್ರಸ್ಥಾನುಪತಸ್ಥುಃ ಸಹಸ್ರಶಃ ।
ಅನ್ಯೇ ನಾನಾವಿಧಾನ್ ಶೈಲಾನ್ ಭೇಜಿರೇ ಕಾನನಾನಿ ಚ ॥ ೩೨

ಸೂರ್ಯಪುತ್ರಂ ಚ ಸುಗ್ರೀವಂ ಶಕ್ರಪುತ್ರಂ ಚ ವಾಲಿನಮ್ ।
ಭ್ರಾತರಾವುಪತಸ್ಥುಸ್ತೇ ಸರ್ವೇ ಚ ಹರಿಯೂಥಪಾಃ ॥ ೩೩

ನಲಂ ನೀಲಂ ಹನೂಮಂತಮನ್ಯಾಂಶ್ಚ ಹರಿಯೂಥಪಾನ್ ।
ತೇ ತಾರ್ಕ್ಷ್ಯಬಲಸಂಪನ್ನಾಃ ಸರ್ವೇ ಯುದ್ಧವಿಶಾರದಾಃ ॥ ೩೪

ವಿಚರಂತೋಽರ್ದಯನ್ ದರ್ಪಾತ್ ಸಿಂಹವ್ಯಾಘ್ರಮಹೋರಗಾನ್
ತಾಂಶ್ಚ ಸರ್ವಾನ್ ಮಹಾಬಾಹುರ್ವಾಲೀ ವಿಪುಲವಿಕ್ರಮಃ ॥ ೩೫

ಜುಗೋಪ ಭುಜವೀರ್ಯೇಣ ಋಕ್ಷಗೋಪುಚ್ಛವಾನರಾನ್ ।
ತೈರಿಯಂ ಪೃಥಿವೀ ಶೂರೈಃ ಸಪರ್ವತವನಾರ್ಣವಾ ॥ ೩೬

ಕೀರ್ಣಾ ವಿವಿಧಸಂಸ್ಥಾನೈರ್ನಾನಾವ್ಯಂಜನಲಕ್ಷಣೈಃ ॥

ತೈರ್ಮೇಘವೃಂದಾಚಲಕೂಟಕಲ್ಪೈ-
ರ್ಮಹಾಬಲೈರ್ವಾನರಯೂಥಪಾಲೈಃ ।

---

ಕೆಲವರು ವಿವಿಧ ಪರ್ವತಗಳನ್ನೂ ಅರಣ್ಯಗಳನ್ನೂ ಆಶ್ರಯಿಸಿಕೊಂಡಿದ್ದರು ಅವರೆಲ್ಲರೂ ಇಂದ್ರಪುತ್ರನಾದ ವಾಲಿ, ಸೂರ್ಯಪುತ್ರನಾದ ಸುಗ್ರೀವ– ಎಂಬ ಅಣ್ಣತಮ್ಮಂದಿರಿಗೂ (ಅವರ ಮಂತ್ರಿಗಳಾದ) ನಳ, ನೀಲ, ಹನುಮಂತ ಮುಂತಾದ ಕಪಿನಾಯಕರಿಗೂ ಅಧೀನರಾಗಿದ್ದರು (೩೨–೩೩). ಗರುಡನಂತೆ ಬಲಶಾಲಿಗಳೂ ಯುದ್ಧವಿಶಾರದರೂ ಆದ ಅವರೆಲ್ಲರೂ ಸಿಂಘ, ವ್ಯಾಘ್ರ, ಘಟಸರ್ಪ–ಮುಂತಾದ ಭೀಕರ ಜಂತುಗಳನ್ನು ಪೀಡಿಸುತ್ತ ಅರಣ್ಯಗಳಲ್ಲಿ ಸಂಚರಿಸುತ್ತಿದ್ದರು. ಮಹಾಬಲಶಾಲಿಯೂ ಪರಾಕ್ರಮಿಯೂ ಆದ ವಾಲಿಯು ತನ್ನ ಭುಜಬಲದಿಂದ ಅವರೆಲ್ಲರನ್ನೂ ಪಾಲಿಸುತ್ತಿದ್ದನು (೩೪–೩೫). ನಾನಾ ಬಗೆಯ ಆಕೃತಿಯುಳ್ಳ ಆ ಶೂರರು ಪರ್ವತ ಅರಣ್ಯ ಸಮುದ್ರಗಳಲ್ಲೆಲ್ಲ ತುಂಬಿಕೊಂಡಿದ್ದರು. ಹೀಗೆ ಮೇಘಪಂಕ್ತಿಗಳಂತೆಯೂ ಪರ್ವತಶೃಂಗ

ಶಿಲಾಪ್ರಹರಣಾಃ ಸರ್ವೇ ಸರ್ವೇ ಪಾದಪಯೋಧಿನಃ ।
ನಖದಂಷ್ಟ್ರಾಯುಧಾಃ ಸರ್ವೇ ಸರ್ವೇ ಸರ್ವಾಸ್ತ್ರಕೋವಿದಾಃ ॥ ೨೬

ವಿಚಾಲಯೇಯುಃ ಶೈಲೇಂದ್ರಾನ್ ಭೇದಯೇಯುಃ ಸ್ಥಿರಾನ್ ದ್ರುಮಾನ್ ।
ಕ್ಷೋಭಯೇಯುಶ್ಚ ವೇಗೇನ ಸಮುದ್ರಂ ಸರಿತಾಂ ಪತಿಮ್ ॥ ೨೭

ದಾರಯೇಯುಃ ಕ್ಷಿತಿಂ ಪದ್ಭ್ಯಾಮಾಪ್ಲವೇಯುರ್ಮಹಾರ್ಣವಮ್ ।
ನಭಃಸ್ಥಲಂ ವಿಶೇಯುಶ್ಚ ಗೃಹ್ಣೀಯುರಪಿ ತೋಯದಾನ್ ॥ ೨೮

ಗೃಹ್ಣೀಯುರಪಿ ಮಾತಂಗಾನ್ ಮತ್ತಾನ್ ಪ್ರವ್ರಜತೋ ವನೇ ।
ನರ್ದಮಾನಾಶ್ಚ ನಾದೇನ ಪಾತಯೇಯುರ್ವಿಹಂಗಮಾನ್ ॥ ೨೯

ಈದೃಶಾನಾಂ ಪ್ರಸೂತಾನಿ ಹರೀಣಾಂ ಕಾಮರೂಪಿಣಾಮ್ ।
ಶತಂ ಶತಸಹಸ್ರಾಣಿ ಯೂಥಪಾನಾಂ ಮಹಾತ್ಮನಾಮ್ ॥ ೩೦

ತೇ ಪ್ರಧಾನೇಷು ಯೂಥೇಷು ಹರೀಣಾಂ ಹರಿಯೂಥಪಾಃ ।
ಬಭೂವುರ್ಯೂಥಪಶ್ರೇಷ್ಠಾ ವೀರಾಂಶ್ಚಾಜನಯನ್ ಹರೀನ್ ॥

---

ಆದರೂ ಅಸ್ತ್ರವಿದ್ಯೆಯಲ್ಲಿ ಪಳಗಿದವರು. ಅವರು ಪರ್ವತಗಳನ್ನು ಅಲ್ಲಾಡಿಸ ಬಲ್ಲರು. ಮರಗಳನ್ನೇ ಮುರಿದುಹಾಕಬಲ್ಲರು (೨೪-೨೬). ವೇಗದಿಂದ ನುಗ್ಗಿ ಸಮುದ್ರವನ್ನು ಕ್ಷೋಭೆಗೊಳಿಸಬಲ್ಲರು. ಕಾಲುಗಳಿಂದ ಒದೆದು ಭೂಮಿಯನ್ನೇ ಸೀಳಬಲ್ಲರು. ಮಹಾಸಾಗರವನ್ನು ಈಜಿ ದಾಟಬಲ್ಲರು. ನಭೋಮಂಡಲದಲ್ಲಿ ನುಗ್ಗಬಲ್ಲರು ಮೇಘಗಳನ್ನು ಹಿಡಿದು ಎಳೆಯುಬಲ್ಲರು. ಅರಣ್ಯದಲ್ಲಿ ಅಲೆಯುವ ಮತ್ತಮಾತಂಗಗಳನ್ನು ಹಿಡಿದು ನಿಲ್ಲಿಸಬಲ್ಲರು. ತಮ್ಮ ಗರ್ಜನೆಗಳಿಂದಲೇ ಆಕಾಶದಲ್ಲಿ ಹಾರಾಡುವ ಪಕ್ಷಿಗಳನ್ನು ಕೆಳಕ್ಕೆ ಉದುರಿಸ ಬಲ್ಲರು (೨೭-೨೯). ಈ ರೀತಿಯಲ್ಲಿ ಕಾಮರೂಪಿಗಳಾದ ವಾನರ ವೀರ ನಾಯಕರು ಒಂದುಕೋಟಿ ಸಂಖ್ಯೆಯಲ್ಲಿ ಉದಿಸಿದರು ಅವರು ತಮ್ಮಂತೆಯೇ ಪರಾಕ್ರಮಿಗಳಾದ ಬಹುಮಂದಿ ಕಪಿವೀರರನ್ನು ಉತ್ಪಾದಿಸಿದರು. ಅನೇಕರು ಋಕ್ಷವಂತನೆಂಬ ಪರ್ವತದ ಪ್ರದೇಶಗಳಲ್ಲಿ ವಾಸವಾಗಿದ್ದರು (೩೦-೩೧).

ಅನ್ಯೇ ಋಕ್ಷವತಃ ಪ್ರಸ್ಥಾನುಪತಸ್ಥುಃ ಸಹಸ್ರಶಃ ।
ಅನ್ಯೇ ನಾನಾವಿಧಾನ್ ಶೈಲಾನ್ ಭೇಜಿರೇ ಕಾನನಾನಿ ಚ ॥ ೩೨

ಸೂರ್ಯಪುತ್ರಂ ಚ ಸುಗ್ರೀವಂ ಶಕ್ರಪುತ್ರಂ ಚ ವಾಲಿನಮ್ ।
ಭ್ರಾತರಾವುಪತಸ್ಥುಸ್ತೇ ಸರ್ವೇ ಚ ಹರಿಯೂಥಪಾಃ ॥ ೩೩

ನಲಂ ನೀಲಂ ಹನೂಮಂತಮನ್ಯಾಂಶ್ಚ ಹರಿಯೂಥಪಾನ್ ।
ತೇ ತಾರ್ಕ್ಷ್ಯಬಲಸಂಪನ್ನಾಃ ಸರ್ವೇ ಯುದ್ಧವಿಶಾರದಾಃ ॥ ೩೪

ವಿಚರಂತೋಽರ್ದಯನ್ ದರ್ಪಾತ್ ಸಿಂಹವ್ಯಾಘ್ರಮಹೋರಗಾನ್
ತಾಂಶ್ಚ ಸರ್ವಾನ್ ಮಹಾಬಾಹುರ್ವಾಲೀ ವಿಪುಲವಿಕ್ರಮಃ ॥ ೩೫

ಜುಗೋಪ ಭುಜವೀರ್ಯೇಣ ಋಕ್ಷಗೋಪುಚ್ಛವಾನರಾನ್ ।
ತೈರಿಯಂ ಪೃಥಿವೀ ಶೂರೈಃ ಸಪರ್ವತವನಾರ್ಣವಾ ॥ ೩೬

ಕೀರ್ಣಾ ವಿವಿಧಸಂಸ್ಥಾನೈರ್ನಾನಾವ್ಯಂಜನಲಕ್ಷಣೈಃ ॥

ತೈರ್ಮೇಘವೃಂದಾಚಲಕೂಟಕಲ್ಪೈ-
ರ್ಮಹಾಬಲೈರ್ವಾನರಯೂಥಪಾಲೈಃ ।

---

ಕೆಲವರು ವಿವಿಧ ಪರ್ವತಗಳನ್ನೂ ಅರಣ್ಯಗಳನ್ನೂ ಆಶ್ರಯಿಸಿಕೊಂಡಿದ್ದರು ಅವರೆಲ್ಲರೂ ಇಂದ್ರಪುತ್ರನಾದ ವಾಲಿ, ಸೂರ್ಯಪುತ್ರನಾದ ಸುಗ್ರೀವ— ಎಂಬ ಅಣ್ಣತಮ್ಮಂದಿರಿಗೂ (ಅವರ ಮಂತ್ರಿಗಳಾದ) ನಳ, ನೀಲ, ಹನುಮಂತ ಮುಂತಾದ ಕಪಿನಾಯಕರಿಗೂ ಅಧೀನರಾಗಿದ್ದರು (೩೨-೩೩). ಗರುಡನಂತೆ ಬಲಶಾಲಿಗಳೂ ಯುದ್ಧವಿಶಾರದರೂ ಆದ ಅವರೆಲ್ಲರೂ ಸಿಂಘ, ವ್ಯಾಘ್ರ, ಘಟಸರ್ಪ-ಮುಂತಾದ ಭೀಕರ ಜಂತುಗಳನ್ನು ಪೀಡಿಸುತ್ತ ಅರಣ್ಯಗಳಲ್ಲಿ ಸಂಚರಿಸುತ್ತಿದ್ದರು. ಮಹಾಬಲಶಾಲಿಯೂ ಪರಾಕ್ರಮಿಯೂ ಆದ ವಾಲಿಯು ತನ್ನ ಭುಜಬಲದಿಂದ ಅವರೆಲ್ಲರನ್ನೂ ಪಾಲಿಸುತ್ತಿದ್ದನು (೩೪-೩೫). ನಾನಾ ಬಗೆಯ ಆಕೃತಿಯುಳ್ಳ ಆ ಶೂರರು ಪರ್ವತ ಅರಣ್ಯ ಸಮುದ್ರಗಳಲ್ಲೆಲ್ಲ ತುಂಬಿಕೊಂಡಿದ್ದರು. ಹೀಗೆ ಮೇಘಪಂಕ್ತಿಗಳಂತೆಯೂ ಪರ್ವತಶೃಂಗ

ಬಭೂವ ಭೂರ್ಭೀಮಶರೀರರೂಪೈಃ
ಸಮಾವೃತಾ ರಾಮಸಹಾಯಹೇತೋಃ ॥ ೩೭

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಸಪ್ತದಶಃ ಸರ್ಗಃ

---

## ಅಷ್ಟಾದಶಃ ಸರ್ಗಃ

ಶ್ರೀರಾಮಾದ್ಯವತಾರಃ

ನಿರ್ವೃತ್ತೇ ತು ಕ್ರತೌ ತಸ್ಮಿನ್ ಹಯಮೇಧೇ ಮಹಾತ್ಮನಃ ।
ಪ್ರತಿಗೃಹ್ಯ ಸುರಾ ಭಾಗಾನ್ ಪ್ರತಿಜಗ್ಮುರ್ಯಥಾಗತಮ್ ॥ ೧
ಸಮಾಪ್ತದೀಕ್ಷಾನಿಯಮಃ ಪತ್ನೀಗಣಸಮನ್ವಿತಃ ।
ಪ್ರವಿವೇಶ ಪುರೀಂ ರಾಜಾ ಸಭೃತ್ಯಬಲವಾಹನಃ ॥ ೨
ಯಥಾರ್ಹಂ ಪೂಜಿತಾಸ್ತೇನ ರಾಜ್ಞಾ ವೈ ಪೃಥಿವೀಶ್ವರಾಃ ।
ಮುದಿತಾಃ ಪ್ರಯಯುರ್ದೇಶಾನ್ ಪ್ರಣಮ್ಯ ಮುನಿಪುಂಗವಮ್ ॥

---

ಗಳಂತೆಯೂ ಇದ್ದ ಭೀಮಾಕಾರದ ವಾನರ ವೀರರು ಶ್ರೀರಾಮನಿಗೆ ಸಹಾಯ ಮಾಡುವುದಕ್ಕಾಗಿ ಜನಿಸಿ ಭೂಮಿಯಲ್ಲಿ ವ್ಯಾಪಿಸಿದರು * (೩೬-೩೭)

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಹದಿನೇಳನೆಯ ಸರ್ಗ

---

## ಸರ್ಗ ೧೮

ಶ್ರೀರಾಮ, ಭರತ, ಲಕ್ಷ್ಮಣ, ಶತ್ರುಘ್ನರ ಜನನ.

ಮಹಾತ್ಮನಾದ ದಶರಥನ ಅಶ್ವಮೇಧಯಾಗವು (ಪುತ್ರಕಾಮೇಷ್ಟಿಯೊಡನೆ) ಸಂಪೂರ್ಣವಾಗಿ ನೆರವೇರಿತು ದೇವತೆಗಳು ತಮ್ಮ ಹವಿರ್ಭಾಗಗಳನ್ನು ಸ್ವೀಕರಿಸಿ ಹೊರಟುಹೋದರು. ರಾಜನು ದೀಕ್ಷಾನಿಯಮವನ್ನು ಸಮಾಪ್ತಿಗೊಳಿಸಿ ಪತ್ನಿಯರೊಡನೆ ಪರಿವಾರಸಮೇತನಾಗಿ ಅಯೋಧ್ಯಾನಗರಕ್ಕೆ ಹೋಗಲು ಸನ್ನದ್ಧನಾದನು (೧-೨) ಬಂದಿದ್ದ ಭೂಪಾಲರು ಯಥಾ

---

* ಅನುಬಂಧವನ್ನು ನೋಡಿ.

ಶ್ರೀಮತಾಂ ಗಚ್ಛತಾಂ ತೇಷಾಂ ಸ್ವಪುರಾಣಿ ಪುರಾತ್ತತಃ ।
ಬಲಾನಿ ರಾಜ್ಞಾಂ ಶುಭ್ರಾಣಿ ಪ್ರಹೃಷ್ಟಾನಿ ಚಕಾಶಿರೇ ॥ ೪

ಗತೇಷು ಪೃಥಿವೀಶೇಷು ರಾಜಾ ದಶರಥಸ್ತದಾ ।
ಪ್ರವಿವೇಶ ಪುರೀಂ ಶ್ರೀಮಾನ್ ಪುರಸ್ಕೃತ್ಯ ದ್ವಿಜೋತ್ತಮಾನ್ ॥ ೫

ಶಾಂತಯಾ ಪ್ರಯಯೌ ಸಾರ್ಧಮೃಷ್ಯಶೃಂಗಃ ಸುಪೂಜಿತಃ ।
ಅನ್ವೀಯಮಾನೋ ರಾಜ್ಞಾಥ ಸಾನುಯಾತ್ರೇಣ ಧೀಮತಾ ॥ ೬

ಏವಂ ವಿಸೃಜ್ಯ ತಾನ್ ಸರ್ವಾನ್ ರಾಜಾ ಸಂಪೂರ್ಣಮಾನಸಃ ।
ಉವಾಸ ಸುಖಿತಸ್ತತ್ರ ಪುತ್ರೋತ್ಪತ್ತಿಂ ವಿಚಿಂತಯನ್ ॥ ೭

ತತೋ ಯಜ್ಞೇ ಸಮಾಪ್ತೇ ತು ಋತೂನಾಂ ಷಟ್ ಸಮತ್ಯಯುಃ।
ತತಶ್ಚ ದ್ವಾದಶೇ ಮಾಸೇ ಚೈತ್ರೇ ನಾವಮಿಕೇ ತಿಥೌ ॥ ೮

ನಕ್ಷತ್ರೇಽದಿತಿದೈವತ್ಯೇ ಸ್ವೋಚ್ಚಸಂಸ್ಥೇಷು ಪಂಚಸು ।
ಗ್ರಹೇಷು ಕರ್ಕಟೇ ಲಗ್ನೇ ವಾಕ್ಪತಾವಿಂದುನಾ ಸಹ ॥ ೯

---

ಯೋಗ್ಯವಾಗಿ ದಶರಥನು ಮಾಡಿದ ಗೌರವ ಸತ್ಕಾರಗಳನ್ನು ಸ್ವೀಕರಿಸಿ, ಸಂತೋಷದಿಂದ ಮುನಿಶ್ರೇಷ್ಠರಾದ ವಸಿಷ್ಠಋಷ್ಯಶೃಂಗರಿಗೆ ಪ್ರಣಾಮಗಳನ್ನರ್ಪಿಸಿ, ತಮ್ಮ ದೇಶಗಳಿಗೆ ಪ್ರಯಾಣಮಾಡಿದರು. ಅವರ ಸೈನಿಕರೂ ಸಹ ದಶರಥನ ಸತ್ಕಾರದಿಂದ ಸಂಪ್ರೀತರಾಗಿ ಉಲ್ಲಾಸಗೊಂಡಿದ್ದರು (೩-೪) ಅನಂತರ ಶ್ರೀಮಾನ್ ದಶರಥನು ದ್ವಿಜೋತ್ತಮರನ್ನು ಮುಂದುಮಾಡಿಕೊಂಡು ರಾಜಧಾನಿಯನ್ನು ಪ್ರವೇಶಿಸಿದನು ಅವನಿಂದ ಸಂಪೂಜಿತನಾಗಿ ಋಷ್ಯಶೃಂಗನು ಶಾಂತಾದೇವಿಯೊಡನೆ ಹೊರಡಲು, ದಶರಥನು ತನ್ನ ಪರಿವಾರದೊಂದಿಗೆ ಬೀಳ್ಕೊಡುತ್ತ ಹೋಗಿ ಅವರೀರ್ವರನ್ನೂ ಕಳುಹಿಸಿಕೊಟ್ಟನು (೫-೬). ಹೀಗೆ ದಶರಥನು ತನ್ನ ಮನೋರಥವನ್ನು ಪೂರೈಸಿ ಪುತ್ರೋತ್ಪತ್ತಿಯನ್ನು ಪ್ರತೀಕ್ಷಿಸುತ್ತ ಉಲ್ಲಾಸದಿಂದಿದ್ದನು ಯಜ್ಞವಾದಮೇಲೆ ಸುಮಾರು ಒಂದು ವರ್ಷ ಕಳೆಯುತ್ತ ಬಂದಿತು. ಹನ್ನೆರಡನೆಯ ತಿಂಗಳು ಚೈತ್ರಮಾಸ (ಶುಕ್ಲಪಕ್ಷದ) ನವಮೀ ತಿಥಿ. ಪುನರ್ವಸು ನಕ್ಷತ್ರ. ರವಿ, ಕುಜ, ಶನಿ, ಗುರು, ಶುಕ್ರ-ಈ ಐದು ಗ್ರಹಗಳು ತಮ್ಮ ಉಚ್ಚರಾಶಿಗಳಲ್ಲಿದ್ದಾರೆ. ಕರ್ಕಾಟಕ ಲಗ್ನವು

ಪ್ರೋದ್ಯಮಾನೇ ಜಗನ್ನಾಥಂ ಸರ್ವಲೋಕನಮಸ್ಕೃತಮ್ ।
ಕೌಸಲ್ಯಾಜನಯದ್ರಾಮಂ ಸರ್ವಲಕ್ಷಣಸಂಯುತಮ್ ॥ ೧೦

ವಿಷ್ಣೋರರ್ಧಂ ಮಹಾಭಾಗಂ ಪುತ್ರಮೈಕ್ಷ್ವಾಕವರ್ಧನಮ್ ।
ಕೌಸಲ್ಯಾ ಶುಶುಭೇ ತೇನ ಪುತ್ರೇಣಾಮಿತತೇಜಸಾ ॥ ೧೧

ಯಥಾ ವರೇಣ ದೇವಾನಾಮದಿತಿರ್ವಜ್ರಪಾಣಿನಾ ।
ಭರತೋ ನಾಮ ಕೈಕೇಯ್ಯಾಂ ಜಜ್ಞೇ ಸತ್ಯಪರಾಕ್ರಮಃ ॥ ೧೨

ಸಾಕ್ಷಾದ್ವಿಷ್ಣೋಶ್ಚತುರ್ಭಾಗಃ ಸರ್ವೈಃ ಸಮುದಿತೋ ಗುಣೈಃ ।
ಅಥ ಲಕ್ಷ್ಮಣಶತ್ರುಘ್ನೌ ಸುಮಿತ್ರಾಜನಯತ್ ಸುತೌ ॥ ೧೩

ಸರ್ವಾಸ್ತ್ರಕುಶಲೌ ವೀರೌ ವಿಷ್ಣೋರರ್ಧಸಮನ್ವಿತೌ ।
ಪುಷ್ಯೇ ಜಾತಸ್ತು ಭರತೋ ಮೀನಲಗ್ನೇ ಪ್ರಸನ್ನಧೀಃ ॥ ೧೪

ಸಾರ್ಪೇ ಜಾತೌ ಚ ಸೌಮಿತ್ರೀ ಕುಲೀರೇಽಭ್ಯುದಿತೇ ರವೌ ।
ರಾಜ್ಞಃ ಪುತ್ರಾ ಮಹಾತ್ಮಾನಶ್ಚತ್ವಾರೋ ಜಜ್ಞಿರೇ ಪೃಥಕ್ ॥ ೧೫

ಚಂದ್ರ ಬೃಹಸ್ಪತಿಗಳೊಡನೆ ಉದಯವನ್ನು ಹೊಂದುತ್ತಿದೆ. ಈ ಸುಮುಹೂರ್ತದಲ್ಲಿ ಕೌಸಲ್ಯಾದೇವಿಯ ಗರ್ಭದಿಂದ ಸರ್ವಲೋಕನಮಸ್ಕೃತನೂ ದಿವ್ಯಲಕ್ಷಣಸಂಯುತನೂ ಜಗನ್ನಾಥನೂ ಆದ ಶ್ರೀರಾಮಚಂದ್ರನು ಪುತ್ರನಾಗಿ ಅವತರಿಸಿದನು (೭-೧೦). ಆ ಮಹಾನುಭಾವನು ಶ್ರೀಮನ್ನಾರಾಯಣನ ಅರ್ಧಾಂಶ. ಇಕ್ಷ್ವಾಕು ಕುಲವನ್ನು ಉದ್ಧರಿಸಿದವನು. ವಜ್ರಪಾಣಿಯಾದ ದೇವೇಂದ್ರನಿಂದ ಅದಿತಿಯು ಶೋಭಿಸುವಂತೆ ಮಹಾತೇಜಸ್ವಿಯಾದ ಆ ಪುತ್ರನಿಂದ ಕೌಸಲ್ಯೆಯು ಶೋಭಿಸಿದಳು (೧೧-೧೨) ಅನಂತರ ಸತ್ಯಸಂಧನೂ ಸಕಲಸದ್ಗುಣ ಸಂಪನ್ನನೂ ಸಾಕ್ಷಾದ್ ವಿಷ್ಣುವಿನ ಒಂದು ಅಂಶವೂ ಆದ ಭರತನು ಕೈಕೇಯಿಯ ಗರ್ಭದಲ್ಲಿ ಜನಿಸಿದನು ಆಮೇಲೆ ವೀರರೂ ಸರ್ವಾಸ್ತ್ರಕುಶಲರೂ ವಿಷ್ಣುವಿನ ಅಂಶಭೂತರೂ ಆದ ಲಕ್ಷ್ಮಣ ಶತ್ರುಘ್ನರು ಸುಮಿತ್ರೆಯ ಪುತ್ರರಾಗಿ ಹುಟ್ಟಿದರು (೧೩-೧೪).* ಪುಷ್ಯನಕ್ಷತ್ರ ಮೀನಲಗ್ನದಲ್ಲಿ ಶಾಂತಸ್ವಭಾವದ ಭರತನು ಜನಿಸಿದನು. ಆಶ್ಲೇಷ ನಕ್ಷತ್ರ ಕರ್ಕಾಟಕ ಲಗ್ನದಲ್ಲಿ, ಸೂರ್ಯನು ಪ್ರವೃದ್ಧನಾಗಿರಲು (ಮಧ್ಯಾಹ್ನ ಕಾಲದಲ್ಲಿ)

* ಅನುಬಂಧವನ್ನು ನೋಡಿ.

ಗುಣವಂತೋಽನುರೂಪಾಶ್ಚ ರುಚ್ಯಾ ಪ್ರೋಷ್ಠಪದೋಪಮಾಃ ।
ಜಗುಃ ಕಲಂ ಚ ಗಂಧರ್ವಾ ನನೃತುಶ್ಚಾಪ್ಸರೋಗಣಾಃ ॥ ೧೬

ದೇವದುಂದುಭಯೋ ನೇದುಃ ಪುಷ್ಪವೃಷ್ಟಿಶ್ಚ ಖಾಚ್ಚ್ಯುತಾ ।
ಉತ್ಸವಶ್ಚ ಮಹಾನಾಸೀದಯೋಧ್ಯಾಯಾಂ ಜನಾಕುಲಃ ॥ ೧೭

ರಥ್ಯಾಶ್ಚ ಜನಸಂಬಾಧಾ ನಟನರ್ತಕಸಂಕುಲಾಃ ।
ಗಾಯನೈಶ್ಚ ವಿರಾವಿಣ್ಯೋ ವಾದನೈಶ್ಚ ತಥಾಪರೈಃ ॥ ೧೮

ವಿರೇಜುರ್ವಿಪುಲಾಸ್ತತ್ರ ಸರ್ವರತ್ನಸಮನ್ವಿತಾಃ ।
ಪ್ರದೇಯಾಂಶ್ಚ ದದೌ ರಾಜಾ ಸೂತಮಾಗಧವಂದಿನಾಮ್ ॥ ೧೯

ಬ್ರಾಹ್ಮಣೇಭ್ಯೋ ದದೌ ವಿತ್ತಂ ಗೋಧನಾನಿ ಸಹಸ್ರಶಃ ।
ಅತೀತ್ಯೈಕಾದಶಾಹಂ ತು ನಾಮಕರ್ಮ ತಥಾಕರೋತ್ ॥ ೨೦

---

ಲಕ್ಷ್ಮಣ ಶತ್ರುಘ್ನರು ಹುಟ್ಟಿದರು* (೧೫). ಹೀಗೆ ದಶರಥ ಮಹಾರಾಜನಿಗೆ ಗುಣಶಾಲಿಗಳೂ ಅನುರೂಪರೂ ಪ್ರೋಷ್ಠಪದ ನಕ್ಷತ್ರದ ನಾಲ್ಕು ತಾರೆಗಳಂತೆ ಪ್ರಕಾಶಮಾನರೂ ಆದ ಪುತ್ರರು ಜನಿಸಿದರು. ಆಗ ಗಂಧರ್ವರು ಇಂಪಾಗಿ ಹಾಡಿದರು ಅಪ್ಸರೆಯರು ಕುಣಿದರು. ದೇವದುಂದುಭಿಗಳು ಮೊಳಗಿದವು. ಆಕಾಶದಲ್ಲಿ ಪುಷ್ಪ ವೃಷ್ಟಿಯಾಯಿತು (೧೬-೧೭) ಅಯೋಧ್ಯೆಯಲ್ಲಿ ಭಾರಿ ಜನಸಂದಣಿಯು ಸೇರಿ ದೊಡ್ಡ ಉತ್ಸವ ನಡೆಯಿತು ರಸ್ತೆಗಳಲ್ಲಿ ಎಲ್ಲಿ ನೋಡಿದರೂ ನಟನರ್ತಕರಿಂದ ಕಾರ್ಯಕ್ರಮಗಳು ಏರ್ಪಟ್ಟವು. ಸಂಗೀತಗಾರರು ಹಾಡಿದರು. ವಾದ್ಯಗಾರರು ವಾದ್ಯವನ್ನು ನುಡಿಸಿದರು. (ಪ್ರೇಕ್ಷಕರು ಅವರೆಲ್ಲರಿಗೆ ಸಂತೋಷದಿಂದ ಕೊಟ್ಟ) ರತ್ನಗಳು ರಸ್ತೆಗಳಲ್ಲಿ ತೂರಾಡಿದವು (೧೮-೧೯). ದಶರಥನು ಪೌರಾಣಿಕರಿಗೂ ವಂಶಾವಳಿಯನ್ನು ಪ್ರಶಂಸೆ

---

* ಶ್ರೀರಾಮನು ಪುನರ್ವಸು ನಕ್ಷತ್ರ ನವಮೀ ಮಧ್ಯಾಹ್ನಕಾಲದಲ್ಲಿಯೂ, ಭರತನು ಪುಷ್ಯನಕ್ಷತ್ರ ದಶಮೀ ತಿಥಿಯಲ್ಲಿ ಸೂರ್ಯೋದಯಕ್ಕೆ ಪೂರ್ವದಲ್ಲಿಯೂ, ಲಕ್ಷ್ಮಣ ಶತ್ರುಘ್ನರು ದಶಮೀ ತಿಥಿಯಲ್ಲಿಯೇ ಆಶ್ಲೇಷ ನಕ್ಷತ್ರದಲ್ಲಿ ಮಧ್ಯಾಹ್ನಕಾಲ ದಲ್ಲಿಯೂ ಜನಿಸಿದರು.

ಜ್ಯೇಷ್ಠಂ ರಾಮಂ ಮಹಾತ್ಮಾನಂ ಭರತಂ ಕೈಕೆಯೀಸುತಮ್ ।
ಸೌಮಿತ್ರಿಂ ಲಕ್ಷ್ಮಣಮಿತಿ ಶತ್ರುಘ್ನಮಪರಂ ತಥಾ ॥ ೨೧

ವಸಿಷ್ಠಃ ಪರಮಪ್ರೀತೋ ನಾಮಾನಿ ಕೃತವಾಂಸ್ತದಾ ।
ಬ್ರಾಹ್ಮಣಾನ್ ಭೋಜಯಾಮಾಸ ಪೌರಾನ್ ಜಾನಪದಾನಪಿ ॥

ಅದದಾದ್ಬ್ರಾಹ್ಮಣಾನಾಂ ಚ ರತ್ನೌಘಮಮಿತಂ ಬಹು ।
ತೇಷಾಂ ಜನ್ಮಕ್ರಿಯಾದೀನಿ ಸರ್ವಕರ್ಮಾಣ್ಯಕಾರಯತ್ ॥ ೨೩

ತೇಷಾಂ ಕೇತುರಿವ ಜ್ಯೇಷ್ಠೋ ರಾಮೋ ರತಿಕರಃ ಪಿತುಃ ।
ಬಭೂವ ಭೂಯೋ ಭೂತಾನಾಂ ಸ್ವಯಂಭೂರಿವ ಸಂಮತಃ ॥ ೨೪

---

ಮಾಡತಕ್ಕ ಮಾಗಧರಿಗೂ ಸ್ತುತಿಪಾಠಕರಾದ ಬಂದಿಗಳಿಗೂ ಪಾರಿತೋಷಕ ಗಳನ್ನು ಕೊಟ್ಟನು. ಬ್ರಾಹ್ಮರಿಗೆ ಧನವನ್ನೂ ಗೋವುಗಳನ್ನೂ ದಾನ ಮಾಡಿದನು ಅನಂತರ ಹನ್ನೊಂದು ದಿನಗಳು ಕಳೆದಮೇಲೆ * (ಹದಿಮೂರ ನೆಯ ದಿನ) ಮಕ್ಕಳಿಗೆ ನಾಮಕರಣವನ್ನು ಮಾಡಿಸಿದನು. ಕೌಸಲ್ಯೆಯ ಗರ್ಭದಲ್ಲಿ ಜನಿಸಿದ ಜ್ಯೇಷ್ಠಪುತ್ರನಿಗೆ **ರಾಮ** ಎಂದೂ ಕೈಕಯೀ ಪುತ್ರನಿಗೆ **ಭರತ** ಎಂದೂ ಸುಮಿತ್ರೆಯ ಇಬ್ಬರು ಮಕ್ಕಳಿಗೆ **ಲಕ್ಷ್ಮಣ, ಶತ್ರುಘ್ನ** ಎಂದೂ ವಸಿಷ್ಠರು ನಾಮಕರಣ ಮಾಡಿದರು (೨೦–೨೨). ದಶರಥನು ಬ್ರಾಹ್ಮಣರಿಗೂ ಇತರ ಪ್ರಜೆಗಳೆಲ್ಲರಿಗೂ ಸಂತರ್ಪಣೆಯನ್ನು ನಡೆಯಿಸಿ ಬೇಕಾದಷ್ಟು ಐಶ್ವರ್ಯವನ್ನು ದಾನಮಾಡಿದನು. ಕ್ರಮೇಣ ವಸಿಷ್ಠರಿಂದ ಆ ಬಾಲಕರಿಗೆ ಜಾತಕರ್ಮ ಮೊದಲ್ಗೊಂಡು ಉಪನಯನದವರೆಗೆ ಎಲ್ಲ ಸಂಸ್ಕಾರ ಗಳನ್ನೂ ನೆರವೇರಿಸಿದನು. ಆ ಬಾಲಕರಲ್ಲಿ ಹಿರಿಯನಾದ ಶ್ರೀರಾಮನು ತಂದೆಗೆ ಬಹಳ ಪ್ರೀತಿಪಾತ್ರನಾಗಿ ದಶರಥನ ಕೀರ್ತಿಧ್ವಜದಂತೆ ಇದ್ದನು. ಅವನು ಜನರಿಗೆ ಬ್ರಹ್ಮನಂತೆ ಪೂಜ್ಯನಾಗಿ ತೋರಿದನು (೨೩–೨೪). ಆ ಬಾಲಕ

* ಲಕ್ಷ್ಮಣಶತ್ರುಘ್ನರು ಹುಟ್ಟಿ ಹನ್ನೊಂದು ದಿನಗಳೂ, ಶ್ರೀರಾಮನು ಹುಟ್ಟಿ ಹನ್ನೆರಡು ದಿನಗಳೂ ಕಳೆದವು. ಪ್ರಥಮ ಸೂತಕದೊಡನೆ ದ್ವಿತೀಯ ಸೂತಕವೂ ನಿವೃತ್ತವಾಯಿತು ಕ್ಷತ್ರಿಯನಿಗೆ ಹನ್ನೆರಡು ದಿನ ಜನನಸೂತಕ. ಹದಿಮೂರನೆಯ ದಿನ ನಾಮಕರಣವೆಂದು ಧರ್ಮಶಾಸ್ತ್ರವು ಹೇಳುತ್ತದೆ

ಸರ್ವೇ ವೇದವಿದಃ ಶೂರಾಃ ಸರ್ವೇ ಲೋಕಹಿತೇ ರತಾಃ ।
ಸರ್ವೇ ಜ್ಞಾನೋಪಸಂಪನ್ನಾಃ ಸರ್ವೇ ಸಮುದಿತಾ ಗುಣೈಃ ॥ ೨೫

ತೇಷಾಮಪಿ ಮಹಾತೇಜಾ ರಾಮಃ ಸತ್ಯಪರಾಕ್ರಮಃ ।
ಇಷ್ಟಃ ಸರ್ವಸ್ಯ ಲೋಕಸ್ಯ ಶಶಾಂಕ ಇವ ನಿರ್ಮಲಃ ॥ ೨೬

ಗಜಸ್ಕಂಧೇಽಶ್ವಪೃಷ್ಠೇ ಚ ರಥಚರ್ಯಾಸು ಸಂಮತಃ ।
ಧನುರ್ವೇದೇ ಚ ನಿರತಃ ಪಿತೃಶುಶ್ರೂಷಣೇ ರತಃ ॥ ೨೭

ಬಾಲ್ಯಾತ್ ಪ್ರಭೃತಿ ಸುಸ್ನಿಗ್ಧೋ ಲಕ್ಷ್ಮಣೋ ಲಕ್ಷ್ಮಿವರ್ಧನಃ ।
ರಾಮಸ್ಯ ಲೋಕರಾಮಸ್ಯ ಭ್ರಾತುರ್ಜ್ಯೇಷ್ಠಸ್ಯ ನಿತ್ಯಶಃ ॥ ೨೮

ಸರ್ವಪ್ರಿಯಕರಸ್ತಸ್ಯ ರಾಮಸ್ಯಾಪಿ ಶರೀರತಃ ।
ಲಕ್ಷ್ಮಣೋ ಲಕ್ಷ್ಮಿಸಂಪನ್ನೋ ಬಹಿಃಪ್ರಾಣ ಇವಾಪರಃ ॥ ೨೯

ನ ಚ ತೇನ ವಿನಾ ನಿದ್ರಾಂ ಲಭತೇ ಪುರುಷೋತ್ತಮಃ ।
ಮೃಷ್ಟಮನ್ನಮುಪಾನೀತಮಶ್ನಾತಿ ನ ಹಿ ತಂ ವಿನಾ ॥ ೩೦

ರೆಲ್ಲರೂ ವೇದಾಧ್ಯಯನಮಾಡಿ ಧನುರ್ವೇದದಲ್ಲಿ ಶೂರರೆನಿಸಿ ಪ್ರಜೆಗಳ ಹಿತದಲ್ಲಿ ಆಸಕ್ತರಾದರು ಅವರೆಲ್ಲರೂ ಶಾಸ್ತ್ರಜ್ಞಾನಸಂಪನ್ನರು ; ಎಲ್ಲರೂ ಗುಣವಂತರು ಅವರಲ್ಲಿಯೂ ಶ್ರೀರಾಮನು ಮಹಾತೇಜಸ್ವಿಯೂ ಸತ್ಯಸಂಧನೂ ಆಗಿದ್ದನು. ಸಕಲರಿಗೂ ಅವನನ್ನು ಕಂಡರೆ ನಿರ್ಮಲನಾದ ಚಂದ್ರನನ್ನು ಕಂಡಂತೆ ಹರ್ಷವಾಗುವುದು (೨೫-೨೬) ಶ್ರೀರಾಮನು ಆನೆಸವಾರಿ, ಕುದುರೆಸವಾರಿ, ರಥಸಂಚಾರಗಳಲ್ಲಿ ಪಳಗಿದ್ದನು ಧನುರ್ವಿದ್ಯೆಯಲ್ಲಿ ನಿರತ. ಪಿತೃಸೇವೆಯಲ್ಲಿ ಆಸಕ್ತ ಲಕ್ಷ್ಮೀವರ್ಧನನೆನಿಸಿದ ಲಕ್ಷ್ಮಣನಾದರೊ ತನ್ನ ಅಣ್ಣನಾದ ಲೋಕಾಭಿರಾಮ ಶ್ರೀರಾಮನೊಡನೆ ಬಾಲ್ಯದಿಂದಲೂ ಅತ್ಯಂತ ಸ್ನೇಹದಿಂದಿದ್ದನು ರಾಮನಿಗೂ ಲಕ್ಷ್ಮಣನನ್ನು ಕಂಡರೆ ತನ್ನ ಶರೀರಕ್ಕಿಂತಲೂ ಹೆಚ್ಚಿನ ಪ್ರೀತಿ. ಲಕ್ಷ್ಮಣನೆಂದರೆ ಹೊರಗಡೆ ಸಂಚರಿಸುವ ತನ್ನ ಪ್ರಾಣವೋ ಎಂದು ತಿಳಿದಿದ್ದನು (೨೭-೨೯). ಅವನು ಜೊತೆಯಲ್ಲಿ ಮಲಗಿಕೊಳ್ಳದಿದ್ದರೆ ಶ್ರೀರಾಮನಿಗೆ ನಿದ್ರೆಯೇ ಬರದು. ಮೃಷ್ಟಾನ್ನವನ್ನು ತಂದುಕೊಟ್ಟರೂ ಲಕ್ಷ್ಮಣನನ್ನು ಬಿಟ್ಟು ತಿನ್ನುತ್ತಿರಲಿಲ್ಲ ರಾಮನು ಕುದುರೆಯನ್ನೇರಿ ಬೇಟೆ

ಯದಾ ಹಿ ಹಯಮಾರೂಢೋ ಮೃಗಯಾಂ ಯಾತಿ ರಾಘವಃ ।
ತದೈನಂ ಪೃಷ್ಠತೋಽಭ್ಯೇತಿ ಸಧನುಃ ಪರಿಪಾಲಯನ್ ॥ ೩೧

ಭರತಸ್ಯಾಪಿ ಶತ್ರುಘ್ನೋ ಲಕ್ಷ್ಮಣಾವರಜೋ ಹಿ ಸಃ ।
ಪ್ರಾಣೈಃ ಪ್ರಿಯತರೋ ನಿತ್ಯಂ ತಸ್ಯ ಚಾಸೀತ್ತಥಾ ಪ್ರಿಯಃ ॥ ೩೨

ಸ ಚತುರ್ಭಿರ್ಮಹಾಭಾಗೈಃ ಪುತ್ರೈರ್ದಶರಥಃ ಪ್ರಿಯೈಃ ।
ಬಭೂವ ಪರಮಪ್ರೀತೋ ದೇವೈರಿವ ಪಿತಾಮಹಃ ॥ ೩೩

ತೇ ಯದಾ ಜ್ಞಾನಸಂಪನ್ನಾಃ ಸರ್ವೇ ಸಮುದಿತಾ ಗುಣೈಃ ।
ಹ್ರೀಮಂತಃ ಕೀರ್ತಿಮಂತಶ್ಚ ಸರ್ವಜ್ಞಾ ದೀರ್ಘದರ್ಶಿನಃ ॥ ೩೪

ತೇಷಾಮೇವಂಪ್ರಭಾವಾಣಾಂ ಸರ್ವೇಷಾಂ ದೀಪ್ತತೇಜಸಾಮ್ ।
ಪಿತಾ ದಶರಥೋ ಹೃಷ್ಟೋ ಬ್ರಹ್ಮಾ ಲೋಕಾಧಿಪೋ ಯಥಾ ॥

ತೇ ಚಾಪಿ ಮನುಜವ್ಯಾಘ್ರಾ ವೈದಿಕಾಧ್ಯಯನೇ ರತಾಃ ।
ಪಿತೃಶುಶ್ರೂಷಣರತಾ ಧನುರ್ವೇದೇ ಚ ನಿಷ್ಠಿತಾಃ ॥ ೩೬

---

ಯಾಡುವುದಕ್ಕೆ ಯಾವಾಗಲಾದರೂ ಹೊರಟರೆ, ಕೂಡಲೇ ಲಕ್ಷ್ಮಣನು ಧನುಸ್ಸನ್ನು ಹಿಡಿದು ಅವನ ಮೈಗಾವಲಾಗಿ ಹಿಂದೆಯೇ ಹೊರಟು ಬಿಡುತ್ತಿದ್ದನು (೩೦-೩೧). ಹಾಗೆಯೇ ಭರತನಿಗೆ ಶತ್ರುಘ್ನನೆಂದರೆ ಪ್ರಾಣಕ್ಕಿಂತಲೂ ಹೆಚ್ಚು ಪ್ರೀತಿ. ಅದೇ ರೀತಿಯಲ್ಲಿ ಶತ್ರುಘ್ನನಿಗೆ ಭರತನಮೇಲೆ ಪ್ರೀತಿ. ಲಕ್ಷ್ಮಣನಂತೆಯೇ ಶತ್ರುಘ್ನ ಎಷ್ಟಾದರೂ ಲಕ್ಷ್ಮಣನ ತಮ್ಮನಲ್ಲವೆ ಅವನು! ಪ್ರೀತಿಪಾತ್ರರಾದ ಈ ನಾಲ್ವರು ಪುತ್ರರೊಡನೆ ದಶರಥನು, ದೇವತೆಗಳಿಂದೊಡಗೂಡಿದ ಬ್ರಹ್ಮದೇವನಂತೆ ಆನಂದದಿಂದಿದ್ದನು (೩೨-೩೩) ಆ ಅಣ್ಣತಮ್ಮಂದಿರು ನಮ್ರಸ್ವಭಾವದವರೂ, ಕೀರ್ತಿಶಾಲಿಗಳೂ, ವಿವೇಕಿಗಳೂ, ದೂರದರ್ಶಿಗಳೂ ಆಗಿದ್ದರು ಇಂಥ ಪ್ರಭಾವಶಾಲಿಗಳಾದ ಪುತ್ರರೊಡನೆ ದಶರಥನು ಲೋಕಾಧಿಪತಿಯಾದ ಬ್ರಹ್ಮನಂತೆ ಹರ್ಷದಿಂದಿದ್ದನು (೩೪-೩೫). ಆ ವೀರಪುತ್ರರು ಧನುರ್ವೇದದಲ್ಲಿ ಪಾರಂಗತರಾಗಿ ವೇದಾಧ್ಯಯನ ಮಾಡುತ್ತ ತಂದೆಯನ್ನು ಶುಶ್ರೂಷೆಮಾಡಿಕೊಂಡಿದ್ದರು (೩೬).

ಅಥ ರಾಜಾ ದಶರಥಸ್ತೇಷಾಂ ದಾರಕ್ರಿಯಾಂ ಪ್ರತಿ ।
ಚಿಂತಯಾಮಾಸ ಧರ್ಮಾತ್ಮಾ ಸೋಪಾಧ್ಯಾಯಃ ಸಬಾಂಧವಃ ॥

ತಸ್ಯ ಚಿಂತಯಮಾನಸ್ಯ ಮಂತ್ರಿಮಧ್ಯೇ ಮಹಾತ್ಮನಃ ।
ಅಭ್ಯಾಗಚ್ಛನ್ಮಹಾತೇಜಾ ವಿಶ್ವಾಮಿತ್ರೋ ಮಹಾಮುನಿಃ ॥ ೩೮

ಸ ರಾಜ್ಞೋ ದರ್ಶನಾಕಾಂಕ್ಷೀ ದ್ವಾರಾಧ್ಯಕ್ಷಾನುವಾಚ ಹ ।
ಶೀಘ್ರಮಾಖ್ಯಾತ ಮಾಂ ಪ್ರಾಪ್ತಂ ಕೌಶಿಕಂ ಗಾಧಿನಃ ಸುತಮ್ ॥

ತಚ್ಛ್ರುತ್ವಾ ವಚನಂ ತ್ರಾಸಾದ್ರಾಜ್ಞೋ ವೇಶ್ಮ ಪ್ರದುದ್ರುವುಃ ।
ಸಂಭ್ರಾಂತಮನಸಃ ಸರ್ವೇ ತೇನ ವಾಕ್ಯೇನ ಚೋದಿತಾಃ ॥ ೪೦

ತೇ ಗತ್ವಾ ರಾಜಭವನಂ ವಿಶ್ವಾಮಿತ್ರಮೃಷಿಂ ತದಾ ।
ಪ್ರಾಪ್ತಮಾವೇದಯಾಮಾಸುರ್ನೃಪಾಯೇಕ್ಷ್ವಾಕವೇ ತದಾ ॥ ೪೧

ತೇಷಾಂ ತದ್ವಚನಂ ಶ್ರುತ್ವಾ ಸಪುರೋಧಾಃ ಸಮಾಹಿತಃ ।
ಪ್ರತ್ಯುಜ್ಜಗಾಮ ತಂ ಹೃಷ್ಟೋ ಬ್ರಹ್ಮಾಣಮಿವ ವಾಸವಃ ॥ ೪೨

---

(ಹೀಗೆ ಕೆಲವು ವರ್ಷಗಳಾದ ಮೇಲೆ) ಅವರಿಗೆ ವಿವಾಹವನ್ನು ಮಾಡಬೇಕೆಂದು ದಶರಥನಿಗೆ ಅಪೇಕ್ಷೆಯಾಯಿತು. ಅವನು ಉಪಾಧ್ಯಾಯರಾದ ವಸಿಷ್ಠಾದಿಮುನಿಗಳನ್ನೂ ಬಾಂಧವರನ್ನೂ ಮಂತ್ರಿಗಳನ್ನೂ ಕರೆಸಿ ಅವರೊಡನೆ ಈ ವಿಷಯವನ್ನು ಪರ್ಯಾಲೋಚಿಸುತ್ತ ಕುಳಿತಿದ್ದನು (೩೭). ಆ ಸಮಯಕ್ಕೆ ಸರಿಯಾಗಿ ವಿಶ್ವಾಮಿತ್ರ ಮಹರ್ಷಿಗಳು ರಾಜದರ್ಶನಕ್ಕಾಗಿ ದಯಮಾಡಿಸಿದರು. ಅವರು ಅರಮನೆಯ ದ್ವಾರಪಾಲಕರನ್ನು ಕುರಿತು "ಗಾಧಿಪುತ್ರನಾದ ಕೌಶಿಕನು ಬಂದಿದ್ದಾನೆಂದು ನಿಮ್ಮ ದೊರೆಗೆ ತಿಳಿಸಿ" ಎಂದರು. ಕೂಡಲೇ ದ್ವಾರಪಾಲಕರು ಗಾಬರಿಯಿಂದ ಅರಮನೆಯೊಳಗೆ ಓಡುತ್ತಹೋಗಿ ವಿಶ್ವಾಮಿತ್ರರು ಬಂದ ಸುದ್ದಿಯನ್ನು ದಶರಥನಿಗೆ ನಿವೇದಿಸಿದರು (೩೮–೪೧). ಅದನ್ನು ಕೇಳಿ ದಶರಥನಿಗೆ ಆನಂದವಾಯಿತು. ಇಂದ್ರನು ಬ್ರಹ್ಮನನ್ನು ಎದುರುಗೊಳ್ಳುವಂತೆ ವಿಶ್ವಾಮಿತ್ರರನ್ನು ಎದುರುಗೊಳ್ಳಲು ಪುರೋಹಿತರೊಡನೆ ಹೊರಟನು. ವಿಶ್ವಾಮಿತ್ರರು ಮಹಾತಪಸ್ವಿಗಳು.

ತಂ ದೃಷ್ಟ್ವಾ ಜ್ವಲಿತಂ ದೀಪ್ತ್ಯಾ ತಾಪಸಂ ಸಂಶಿತವ್ರತಮ್ ।
ಪ್ರಹೃಷ್ಟವದನೋ ರಾಜಾ ತತೋಽರ್ಘ್ಯಮುಪಹಾರಯತ್ ॥ ೪೩

ಸ ರಾಜ್ಞಃ ಪ್ರತಿಗೃಹ್ಯಾರ್ಘ್ಯಂ ಶಾಸ್ತ್ರದೃಷ್ಟೇನ ಕರ್ಮಣಾ ।
ಕುಶಲಂ ಚಾವ್ಯಯಂ ಚೈವ ಪರ್ಯಪೃಚ್ಛನ್ನರಾಧಿಪಮ್ ॥ ೪೪

ಪುರೇ ಕೋಶೇ ಜನಪದೇ ಬಾಂಧವೇಷು ಸುಹೃತ್ಸು ಚ ।
ಕುಶಲಂ ಕೌಶಿಕೋ ರಾಜ್ಞಃ ಪರ್ಯಪೃಚ್ಛತ್ ಸುಧಾರ್ಮಿಕಃ ॥

ಅಪಿ ತೇ ಸಂನತಾಃ ಸರ್ವೇ ಸಾಮಂತಾ ರಿಪವೋ ಜಿತಾಃ ।
ದೈವಂ ಚ ಮಾನುಷಂ ಚಾಪಿ ಕರ್ಮ ತೇ ಸಾಧ್ವನುಷ್ಠಿತಮ್ ॥

ವಸಿಷ್ಠಂ ಚ ಸಮಾಗಮ್ಯ ಕುಶಲಂ ಮುನಿಪುಂಗವಃ ।
ಋಷೀಂಶ್ಚಾನ್ಯಾನ್ ಯಥಾನ್ಯಾಯಂ ಮಹಾಭಾಗಾನುವಾಚ ಹ ॥

ತೇ ಸರ್ವೇ ಹೃಷ್ಟಮನಸಸ್ತಸ್ಯ ರಾಜ್ಞೋ ನಿವೇಶನಮ್ ।
ವಿವಿಶುಃ ಪೂಜಿತಾಸ್ತತ್ರ ನಿಷೇದುಶ್ಚ ಯಥಾರ್ಹತಃ ॥ ೪೮

ಅಥ ಹೃಷ್ಟಮನಾ ರಾಜಾ ವಿಶ್ವಾಮಿತ್ರಂ ಮಹಾಮುನಿಮ್ ।
ಉವಾಚ ಪರಮೋದಾರೋ ಹೃಷ್ಟಸ್ತಮಭಿಪೂಜಯನ್ ॥ ೪೯

---

ಕಠೋರನಿಯಮಶಾಲಿಗಳು ತೇಜಸ್ಸಿನಿಂದ ಜ್ವಲಿಸುತ್ತಿದ್ದರು ಅವರನ್ನು ಕಂಡು ರಾಜನ ಮುಖವು ಅರಳಿತು. ಅವರಿಗೆ ವಿಧಿಪೂರ್ವಕವಾಗಿ ಅರ್ಘ್ಯವನ್ನು ಕೊಟ್ಟು ಉಪಚರಿಸಿದನು (೪೨-೪೩). ವಿಶ್ವಾಮಿತ್ರರು ಅರ್ಘ್ಯವನ್ನು ಸ್ವೀಕರಿಸಿ ದಶರಥನ ಕುಶಲವನ್ನು ವಿಚಾರಿಸಿದರು. ರಾಜಧಾನಿ, ರಾಜ್ಯ, ಭಂಡಾರ, ಬಾಂಧವರು, ಮಿತ್ರರು – ಇವರೆಲ್ಲರ ಯೋಗಕ್ಷೇಮವನ್ನು ಕೇಳಿದರು (೪೪-೪೫). "ದಶರಥ, ಸಾಮಂತರಾಜರು ನಿನಗೆ ವಿಧೇಯರಾಗಿದ್ದಾರೆಯೆ? ಶತ್ರುಗಳನ್ನೆಲ್ಲಾ ಗೆದ್ದಿರುವೆಯಷ್ಟೆ? ದೇವತೆಗಳಿಗೂ ಮನುಷ್ಯರಿಗೂ ಪ್ರೀತಿದಾಯಕವಾದ ಕರ್ತವ್ಯಗಳನ್ನು ಚೆನ್ನಾಗಿ ಮಾಡುತ್ತಿರುವೆಯಾ?" ಎಂದರು. ಅನಂತರ ವಸಿಷ್ಠರನ್ನೂ ಇತರ ಮುನಿಗಳನ್ನೂ ಮಾತನಾಡಿಸಿ ಕುಶಲವನ್ನು ವಿಚಾರಿಸಿದರು (೪೬-೪೭). ಆಮೇಲೆ ಅವರೆಲ್ಲರೂ ಸಂತೋಷದಿಂದ ರಾಜಭವನವನ್ನು ಪ್ರವೇಶಿಸಿ ರಾಜನಿಂದ ಸತ್ಕೃತರಾಗಿ ತಮತಮಗೆ ಯೋಗ್ಯವಾದ ಸ್ಥಾನಗಳಲ್ಲಿ ಕುಳಿತುಕೊಂಡರು. ದಶರಥನು ಉಲ್ಲಾಸದಿಂದ ವಿಶ್ವಾಮಿತ್ರ

ಯಥಾಮೃತಸ್ಯ ಸಂಪ್ರಾಪ್ತಿರ್ಯಥಾ ವರ್ಷಮನೂದಕೇ ।
ಯಥಾ ಸದೃಶದಾರೇಷು ಪುತ್ರಜನ್ಮಾಪ್ರಜಸ್ಯ ಚ ॥ ೫೦

ಪ್ರಣಷ್ಟಸ್ಯ ಯಥಾ ಲಾಭೋ ಯಥಾ ಹರ್ಷೋ ಮಹೋದಯೇ।
ತಥೈವಾಗಮನಂ ಮನ್ಯೇ ಸ್ವಾಗತಂ ತೇ ಮಹಾಮುನೇ ॥ ೫೧

ಕಂ ಚ ತೇ ಪರಮಂ ಕಾಮಂ ಕರೋಮಿ ಕಿಮು ಹರ್ಷಿತಃ ।
ಪಾತ್ರಭೂತೋಽಸಿ ಮೇ ಬ್ರಹ್ಮನ್ ದಿಷ್ಟ್ಯಾ ಪ್ರಾಪ್ತೋಽಸಿ ಧಾರ್ಮಿಕ

ಅದ್ಯ ಮೇ ಸಫಲಂ ಜನ್ಮ ಜೀವಿತಂ ಚ ಸುಜೀವಿತಮ್ ।
ಪೂರ್ವಂ ರಾಜರ್ಷಿಶಬ್ದೇನ ತಪಸಾ ದ್ಯೋತಿತಪ್ರಭಃ ॥ ೫೩

ಬ್ರಹ್ಮರ್ಷಿತ್ವಮನುಪ್ರಾಪ್ತಃ ಪೂಜ್ಯೋಽಸಿ ಬಹುಧಾ ಮಯಾ ।
ತದದ್ಭುತಮಿದಂ ಬ್ರಹ್ಮನ್ ಪವಿತ್ರಂ ಪರಮಂ ಮಮ ॥ ೫೪

ಶುಭಕ್ಷೇತ್ರಗತಶ್ಚಾಹಂ ತವ ಸಂದರ್ಶನಾತ್ ಪ್ರಭೋ ।
ಬ್ರೂಹಿ ಯತ್ ಪ್ರಾರ್ಥಿತಂ ತುಭ್ಯಂ ಕಾರ್ಯಮಾಗಮನಂ ಪ್ರತಿ॥

---

ಮಹರ್ಷಿಗಳನ್ನು ಗೌರವಿಸಿ "ಮಹರ್ಷಿಗಳೆ, ತಮ್ಮ ಆಗಮನದಿಂದ ನನಗೆ ಪರಮಸಂತೋಷವಾಯಿತು. ತಮ್ಮ ಆಗಮನವು (ಮನುಷ್ಯನಿಗೆ) ಅಮೃತವು ದೊರಕಿದಂತೆ, ನೀರಿಲ್ಲದಾಗ ಮಳೆ ಬಂದಂತೆ, ಮಕ್ಕಳಿಲ್ಲದವನಿಗೆ ಧರ್ಮಪತ್ನಿಯಲ್ಲಿ ಮಗನು ಜನಿಸಿದಂತೆ, ಕಳೆದು ಹೋದ ನಿಧಿಯು ಸಿಕ್ಕಿದಂತೆ, ಮಹೋತ್ಸವಕಾಲದಲ್ಲಿ ಹರ್ಷದಂತೆ. ತಮಗೆ ಸ್ವಾಗತ(೪೮-೫೧). ನಿಮ್ಮ ಯಾವ ಇಷ್ಟಾರ್ಥವನ್ನು ನೆರವೇರಿಸಲಿ? ಹೇ ಬ್ರಹ್ಮರ್ಷಿಗಳೆ, ಉತ್ತಮ ಪಾತ್ರರಾಗಿದ್ದೀರಿ. ನನ್ನ ಭಾಗ್ಯದಿಂದ ದಯಮಾಡಿಸಿದ್ದೀರಿ. ನಾನು ಹುಟ್ಟಿದ್ದು ಈ ದಿನ ಸಫಲವಾಯಿತು. ನಾನು ಬದುಕಿದ್ದು ಸಾರ್ಥಕ ವಾಯಿತು (೫೨-೫೩). ಮೊದಲು ರಾಜರ್ಷಿಗಳಾಗಿದ್ದು ತಪೋಮಹಿಮೆ ಯಿಂದ ಬ್ರಹ್ಮರ್ಷಿಗಳಾದವರು ನೀವು. ಎಲ್ಲ ವಿಧದಲ್ಲಿಯೂ ನನಗೆ ಪೂಜ್ಯರು. ಇಲ್ಲಿಯವರೆಗೆ ನಿಮ್ಮ ಪವಿತ್ರವಾದ ಆಗಮನವಾದದ್ದು ಆಶ್ಚರ್ಯವೇ ಸರಿ. ನಿಮ್ಮ ಸಂದರ್ಶನದಿಂದ ನಾನಿದ್ದ ಸ್ಥಳವೇ ಪುಣ್ಯಕ್ಷೇತ್ರವಾಯಿತು. ಹೇ ಸ್ವಾಮಿ, ನಿಮಗೆ ನನ್ನಿಂದ ಏನಾಗಬೇಕು? ಬಂದ ಉದ್ದೇಶವೇನು?

ಇಚ್ಛಾಮ್ಯನುಗೃಹೀತೋಽಹಂ ತ್ವದರ್ಥಪರಿವೃದ್ಧಯೇ ।
ಕಾರ್ಯಸ್ಯ ನ ವಿಮರ್ಶಂ ಚ ಗಂತುಮರ್ಹಸಿ ಕೌಶಿಕ ॥ ೫೬

ಕರ್ತಾ ಚಾಹಮಶೇಷೇಣ ದೈವತಂ ಹಿ ಭವಾನ್ ಮಮ ।
ಮಮ ಚಾಯಮನುಪ್ರಾಪ್ತೋ ಮಹಾನಭ್ಯುದಯೋ ದ್ವಿಜ ॥

ತವಾಗಮನಜಃ ಕೃತ್ಸ್ನೋ ಧರ್ಮಶ್ಚಾನುತ್ತಮೋ ಮಮ ॥

ಇತಿ ಹೃದಯಸುಖಂ ನಿಶಮ್ಯ ವಾಕ್ಯಂ
ಶ್ರುತಿಸುಖಮಾತ್ಮವತಾ ವಿನೀತಮುಕ್ತಮ್ ।
ಪ್ರಥಿತಗುಣಯಶಾ ಗುಣೈರ್ವಿಶಿಷ್ಟಃ
ಪರಮಋಷಿಃ ಪರಮಂ ಜಗಾಮ ಹರ್ಷಮ್ ॥ ೫೮

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಅಷ್ಟಾದಶಃ ಸರ್ಗಃ



ಅಪ್ಪಣೆಯಾಗಬೇಕು (೫೪-೫೫). ನಿಮ್ಮ ಕಾರ್ಯವನ್ನು ನಡೆಸಿಕೊಡುವಂತೆ ನನ್ನನ್ನು ಅನುಗ್ರಹಿಸಬೇಕು. ನಡೆಸುತ್ತೇನೋ ಇಲ್ಲವೋ ಎಂದು ಸಂದೇಹ ಪಡಬಾರದು. ಪೂರ್ತಿಯಾಗಿ ನಡೆಸುತ್ತೇನೆ. ನನ್ನ ಭಾಗಕ್ಕೆ ನೀವು ದೇವರೇ ಹೌದು. ನನಗೆ ಒಂದು ಭಾಗ್ಯವೇ ಒದಗಿಬಂದಿತು. ನಿಮ್ಮ ಆಗಮನದಿಂದ ಧರ್ಮದ ಎಲ್ಲ ಉತ್ತಮ ಫಲವೂ ದೊರಕಿತು" ಎಂದು ಹೇಳಿದನು (೫೬-೫೭). ಹೀಗೆ ದಶರಥನು ವಿನಯದಿಂದ ಹೇಳಿದ ಹೃದಯಾನಂದಕರವಾದ ಮಾತನ್ನು ಕೇಳಿ ಗುಣಶಾಲಿಗಳೂ ಗುಣಗ್ರಾಹಿಗಳೂ ಆದ ವಿಶ್ವಾಮಿತ್ರಮುನಿಗಳಿಗೆ ಹರ್ಷವಾಯಿತು (೫೮).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಹದಿನೆಂಟನೆಯ ಸರ್ಗ



## ಏಕೋನವಿಂಶಃ ಸರ್ಗಃ

### ವಿಶ್ವಾಮಿತ್ರವಾಕ್ಯಮ್

ತಚ್ಛ್ರುತ್ವಾ ರಾಜಸಿಂಹಸ್ಯ ವಾಕ್ಯಮದ್ಭುತವಿಸ್ತರಮ್ ।
ಹೃಷ್ಟರೋಮಾ ಮಹಾತೇಜಾ ವಿಶ್ವಾಮಿತ್ರೋಽಭ್ಯಭಾಷತ ॥ ೧

ಸದೃಶಂ ರಾಜಶಾರ್ದೂಲ ತವೈತದ್ಭುವಿ ನಾನ್ಯಥಾ ।
ಮಹಾವಂಶಪ್ರಸೂತಸ್ಯ ವಸಿಷ್ಠವ್ಯಪದೇಶಿನಃ ॥ ೨

ಯತ್ತು ಮೇ ಹೃದ್ಗತಂ ವಾಕ್ಯಂ ತಸ್ಯ ಕಾರ್ಯಸ್ಯ ನಿಶ್ಚಯಮ್ ।
ಕುರುಷ್ವ ರಾಜಶಾರ್ದೂಲ ಭವ ಸತ್ಯಪ್ರತಿಶ್ರವಾಃ ॥ ೩

ಅಹಂ ನಿಯಮಮಾತಿಷ್ಠೇ ಸಿದ್ಧ್ಯರ್ಥಂ ಪುರುಷರ್ಷಭ ।
ತಸ್ಯ ವಿಘ್ನಕರೌ ದ್ವೌ ತು ರಾಕ್ಷಸೌ ಕಾಮರೂಪಿಣೌ ॥ ೪

ವ್ರತೇ ಮೇ ಬಹುಶಶ್ಚೀರ್ಣೇ ಸಮಾಪ್ತ್ಯಾಂ ರಾಕ್ಷಸಾವಿಮೌ ।
ಮಾರೀಚಶ್ಚ ಸುಬಾಹುಶ್ಚ ವೀರ್ಯವಂತೌ ಸುಶಿಕ್ಷಿತೌ ॥ ೫

### ಸರ್ಗ ೧೯

ಮಾರೀಚ ಸುಬಾಹುಗಳೆಂಬ ರಾಕ್ಷಸರು ಯಜ್ಞಕ್ಕೆ ವಿಘ್ನ ಮಾಡುತ್ತಿರುವರೆಂದೂ ಅವರನ್ನು ವಿನಾಶಗೊಳಿಸುವುದಕ್ಕಾಗಿ ರಾಮನನ್ನು ಕಳುಹಿಸಬೇಕೆಂದೂ ವಿಶ್ವಾಮಿತ್ರರು ದಶರಥನಿಗೆ ಹೇಳುವುದು

ಈ ಪ್ರಕಾರವಾಗಿ ದಶರಥನು ಹೇಳಿದ ವಿಸ್ಮಯಕರವಾದ ವಿಸ್ತೃತ ವಚನಗಳನ್ನು ಕೇಳಿ ವಿಶ್ವಾಮಿತ್ರರಿಗೆ ರೋಮಾಂಚವಾಯಿತು ಅವರು ಹೀಗೆಂದರು: "ರಾಜಶ್ರೇಷ್ಠ, ಈ ರೀತಿ ಹೇಳುವುದು ನಿನಗೆ ಯೋಗ್ಯವಾದದ್ದೇ ನೀನು ಮಹಾವಂಶದಲ್ಲಿ ಜನಿಸಿ ವಸಿಷ್ಠಮುನಿಗಳ ಶಿಷ್ಯನಾಗಿರತಕ್ಕವನು (೧-೨). ನನ್ನ ಮನಸ್ಸಿನಲ್ಲಿರುವುದನ್ನು ಹೇಳುತ್ತೇನೆ. ಆ ಕಾರ್ಯವನ್ನು ನಡೆಸಿಕೊಟ್ಟು ಸತ್ಯಸಂಧನೆನ್ನಿಸಿಕೊ ನಾನು ಒಂದು ಸಿದ್ಧಿಯನ್ನು ಪಡೆಯುವುದಕ್ಕಾಗಿ ಯಜ್ಞದೀಕ್ಷೆಯನ್ನು ಸ್ವೀಕರಿಸಿದ್ದೇನೆ ಅದಕ್ಕೆ ಕಾಮರೂಪಿಗಳಾದ ಇಬ್ಬರು ರಾಕ್ಷಸರು ವಿಘ್ನಕಾರಿಗಳಾಗಿದ್ದಾರೆ (೩-೪). ದೀಕ್ಷಾವ್ರತವು ಬಹುಮಟ್ಟಿಗೆ ಸಮಾಪ್ತಿಯಾಗುತ್ತಾ ಬಂದಿರು

ಸಮಾಂಸರುಧಿರೌಘೇನ ವೇದಿಂ ತಾಮಭ್ಯವರ್ಷತಾಮ್ ।
ಅವಧೂತೇ ತಥಾಭೂತೇ ತಸ್ಮಿನ್ನಿಯಮನಿಶ್ಚಯೇ ॥ ೭

ಕೃತಶ್ರಮೋ ನಿರುತ್ಸಾಹಸ್ತಸ್ಮಾದ್ದೇಶಾದಪಾಕ್ರಮೇ ।
ನ ಚ ಮೇ ಕ್ರೋಧಮುತ್ಸ್ರಷ್ಟುಂ ಬುದ್ಧಿರ್ಭವತಿ ಪಾರ್ಥಿವ ॥ ೭

ತಥಾಭೂತಾ ಹಿ ಸಾ ಚರ್ಯಾ ನ ಶಾಪಸ್ತತ್ರ ಮುಚ್ಯತೇ ।
ತತ್ ಪುತ್ರಂ ರಾಜಶಾರ್ದೂಲ ರಾಮಂ ಸತ್ಯಪರಾಕ್ರಮಮ್ ॥ ೮

ಕಾಕಪಕ್ಷಧರಂ ಶೂರಂ ಜ್ಯೇಷ್ಠಂ ಮೇ ದಾತುಮರ್ಹಸಿ ।
ಶಕ್ತೋ ಹ್ಯೇಷ ಮಯಾ ಗುಪ್ತೋ ದಿವ್ಯೇನ ಸ್ವೇನ ತೇಜಸಾ ॥ ೯

ರಾಕ್ಷಸಾ ಯೇ ವಿಕರ್ತಾರಸ್ತೇಷಾಮಪಿ ವಿನಾಶನೇ ।
ಶ್ರೇಯಶ್ಚಾಸ್ಮೈ ಪ್ರದಾಸ್ಯಾಮಿ ಬಹುರೂಪಂ ನ ಸಂಶಯಃ ॥ ೧೦

ತ್ರಯಾಣಾಮಪಿ ಲೋಕಾನಾಂ ಯೇನ ಖ್ಯಾತಿಂ ಗಮಿಷ್ಯತಿ ।
ನ ಚ ತೌ ರಾಮಮಾಸಾದ್ಯ ಶಕ್ತೌ ಸ್ಥಾತುಂ ಕಥಂಚನ ॥ ೧೧

---

ವಾಗ ಮಾರೀಚ, ಸುಬಾಹುಗಳೆಂಬ ಬಲಿಷ್ಠರಾದ ಆ ರಾಕ್ಷಸರು ರಕ್ತಮಾಂಸಗಳನ್ನು ಯಜ್ಞಕುಂಡದಲ್ಲಿ ಸುರಿದುಬಿಟ್ಟರು. ಯಜ್ಞವು ಕೆಟ್ಟುಹೋಯಿತು. ನನ್ನ ಆಯಾಸವೆಲ್ಲಾ ವ್ಯರ್ಥವಾಯಿತೆಂದು ನಿರುತ್ಸಾಹದಿಂದ ನಾನು ಅಲ್ಲಿಂದ ಹೊರಟುಬಂದೆ. ರಾಜ, ನನ್ನ ಕ್ರೋಧವನ್ನು ಹೊರಸೂಸುವುದಕ್ಕೆ ಮನಸ್ಸಾಗಲಿಲ್ಲ (೫-೭). ಯಜ್ಞದೀಕ್ಷೆಯೇ ಅಂತಹುದು. ಆ ಸಮಯದಲ್ಲಿ ಶಾಪವನ್ನು ಕೊಡಬಾರದು ಮಹಾರಾಜ, ಸತ್ಯಪರಾಕ್ರಮನೂ ನಿನ್ನ ಹಿರಿಯ ಮಗನೂ ಆದ ರಾಮನನ್ನು ನೀನು ನನ್ನೊಡನೆ ಕಳಿಸಬೇಕು. ಅವನು ಎಳೆಯ ಗುಂಗುರು ಕೂದಲುಳ್ಳವನಾದರೂ ಚಿಂತೆಯಿಲ್ಲ. ಅವನು ಮಹಾವೀರ. ನನ್ನ ರಕ್ಷಣೆಯಲ್ಲಿದ್ದಾಗ ಅವನು ತನ್ನ ದಿವ್ಯತೇಜಸ್ಸಿನಿಂದ ಯಜ್ಞಕ್ಕೆ ವಿಘ್ನಮಾಡುವ ಸಕಲ ರಾಕ್ಷಸರನ್ನೂ ವಿನಾಶಗೊಳಿಸಬಲ್ಲನು. ರಾಮನಿಗೆ ನಾನು ಬಹುವಿಧವಾದ ಶ್ರೇಯಸ್ಸನ್ನು ದೊರಕಿಸಿಕೊಡುವೆನು, ಸಂದೇಹಬೇಡ (೮-೧೦). ಅದರಿಂದ ರಾಮನು ಮೂರು ಲೋಕಗಳಲ್ಲಿಯೂ ಪ್ರಖ್ಯಾತನಾಗುವನು. ಆ ಮಾರೀಚಸುಬಾಹುಗಳು ರಾಮನೆದುರಿಗೆ ಎಂದಿಗೂ ನಿಲ್ಲಲಾರರು. ರಾಮನಲ್ಲದೆ ಇನ್ನೊಬ್ಬರಿಂದ ಅವರನ್ನು ಕೊಲ್ಲಲೂ

ನ ಚ ತೌ ರಾಘವಾದನ್ಯೋ ಹಂತುಮುತ್ಸಹತೇ ಪುಮಾನ್ ।
ವೀರ್ಯೋತ್ಸಿಕ್ತೌ ಹಿ ತೌ ಪಾಪೌ ಕಾಲಪಾಶವಶಂ ಗತೌ ॥ ೧೨
ರಾಮಸ್ಯ ರಾಜಶಾರ್ದೂಲ ನ ಪರ್ಯಾಪ್ತೌ ಮಹಾತ್ಮನಃ ।
ನ ಚ ಪುತ್ರಗತಂ ಸ್ನೇಹಂ ಕರ್ತುಮರ್ಹಸಿ ಪಾರ್ಥಿವ ॥ ೧೩
ಅಹಂ ತೇ ಪ್ರತಿಜಾನಾಮಿ ಹತೌ ತೌ ವಿದ್ಧಿ ರಾಕ್ಷಸೌ ।
ಅಹಂ ವೇದ್ಮಿ ಮಹಾತ್ಮಾನಂ ರಾಮಂ ಸತ್ಯಪರಾಕ್ರಮಮ್ ॥ ೧೪
ವಸಿಷ್ಠೋಽಪಿ ಮಹಾತೇಜಾ ಯೇ ಚೇಮೇ ತಪಸಿ ಸ್ಥಿತಾಃ ।
ಯದಿ ತೇ ಧರ್ಮಲಾಭಂ ಚ ಯಶಶ್ಚ ಪರಮಂ ಭುವಿ ॥ ೧೫
ಸ್ಥಿರಮಿಚ್ಛಸಿ ರಾಜೇಂದ್ರ ರಾಮಂ ಮೇ ದಾತುಮರ್ಹಸಿ ।
ಯದ್ಯಭ್ಯನುಜ್ಞಾಂ ಕಾಕುತ್ಸ್ಥ ದದತೇ ತವ ಮಂತ್ರಿಣಃ ॥ ೧೬
ವಸಿಷ್ಠಪ್ರಮುಖಾಃ ಸರ್ವೇ ತತೋ ರಾಮಂ ವಿಸರ್ಜಯ ।
ಅಭಿಪ್ರೇತಮಸಂಸಕ್ತಮಾತ್ಮಜಂ ದಾತುಮರ್ಹಸಿ ॥ ೧೭
ದಶರಾತ್ರಂ ಹಿ ಯಜ್ಞಸ್ಯ ರಾಮಂ ರಾಜೀವಲೋಚನಮ್ ।
ನಾತ್ಯೇತಿ ಕಾಲೋ ಯಜ್ಞಸ್ಯ ಯಥಾಯಂ ಮಮ ರಾಘವ ॥ ೧೮

---

ಸಾಧ್ಯವಿಲ್ಲ. ಆ ಪಾಪಿರಾಕ್ಷಸರಿಬ್ಬರೂ ವೀರ್ಯಮದದಿಂದ ಪುಂಡಾಟಿಕೆಯನ್ನು ನಡೆಸಿ ಯಮಪಾಶಕ್ಕೆ ಸಿಕ್ಕಿಬಿದ್ದಿದ್ದಾರೆ (೧೧-೧೨). ದಶರಥ, ಮಹಾತ್ಮನಾದ ರಾಮನಿಗೆ ಅವರು ಯಾರೂ ಎದುರಲ್ಲ ನೀನು ಪುತ್ರವಾತ್ಸಲ್ಯದಿಂದ ಹಿಂಜರಿಯಬೇಡ ನಾನು ನಿನಗೆ ಮಾತುಕೊಡುತ್ತೇನೆ— ಇಬ್ಬರು ರಾಕ್ಷಸರೂ ರಾಮನಿಂದ ಹತರಾದರೆಂದೇ ತಿಳಿ. ಸತ್ಯಪರಾಕ್ರಮನೂ ಮಹಾತ್ಮನೂ ಆದ ರಾಮನು ಯಾರು ಎಂಥವನು—ಎಂಬುದು ನನಗೆ ಗೊತ್ತು! (೧೩-೧೪). ಮಹಾತೇಜಸ್ವಿಗಳಾದ ವಸಿಷ್ಠರಿಗೆ ಗೊತ್ತು! ಈ ತಪಸ್ವಿಗಳಿಗೆ ಗೊತ್ತು! ಮಹಾರಾಜ, ನಿನಗೆ ಪುಣ್ಯಬೇಕಾದರೆ, ಈ ಜಗತ್ತಿನಲ್ಲಿ ಶಾಶ್ವತವಾದ ಕೀರ್ತಿ ಬೇಕಾದರೆ, ರಾಮನನ್ನು ನನ್ನೊಡನೆ ಕಳಿಸು. ನಿನ್ನ ಮಂತ್ರಿಗಳೂ ವಸಿಷ್ಠಾದಿಗಳೂ ಅನುಮತಿಯನ್ನು ಕೊಡುವುದಾದರೆ ರಾಮನನ್ನು ಕಳಿಸಬಹುದಲ್ಲ? (೧೫-೧೬). ಪ್ರಿಯಪುತ್ರನಾದ ರಾಮನನ್ನು ಶೀಘ್ರವೇ ನನ್ನೊಡನೆ ಕಳಿಸು. ಆತನು ಹತ್ತುರಾತ್ರಿ ಮಾತ್ರ

*

ತಥಾ ಕುರುಷ್ವ ಭದ್ರಂ ತೇ ಮಾ ಚ ಶೋಕೇ ಮನಃ ಕೃಥಾಃ ।
ಇತ್ಯೇವಮುಕ್ತ್ವಾ ಧರ್ಮಾತ್ಮಾ ಧರ್ಮಾರ್ಥಸಹಿತಂ ವಚಃ ॥ ೧೯

ವಿರರಾಮ ಮಹಾತೇಜಾ ವಿಶ್ವಾಮಿತ್ರೋ ಮಹಾಮುನಿಃ ।
ಸ ತನ್ನಿಶಮ್ಯ ರಾಜೇಂದ್ರೋ ವಿಶ್ವಾಮಿತ್ರವಚಃ ಶುಭಮ್ ॥ ೨೦

ಶೋಕೇನ ಮಹತಾವಿಷ್ಟಶ್ಚಚಾಲ ಚ ಮುಮೋಹ ಚ ।
ಲಬ್ಧಸಂಜ್ಞಸ್ತಥೋತ್ಥಾಯ ವ್ಯಷೀದತ ಭಯಾನ್ವಿತಃ ॥ ೨೧

ಇತಿ ಹೃದಯಮನೋವಿದಾರಣಂ
ಮುನಿವಚನಂ ತದತೀವ ಶುಶ್ರುವಾನ್ ।
ನರಪತಿರಗಮನ್ಮಹಾನ್ ಮಹಾತ್ಮಾ
ವ್ಯಥಿತಮನಾಃ ಪ್ರಚಚಾಲ ಚಾಸನಾತ್ ॥ ೨೨

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕೋನವಿಂಶಃ ಸರ್ಗಃ



ನನ್ನೊಡನಿದ್ದರೆ ಸಾಕು. ಯಜ್ಞಕ್ಕಾಗಿ ಇನ್ನೂ ಹೆಚ್ಚು ದಿನಗಳನ್ನು ತೆಗೆದು ಕೊಳ್ಳುವುದಿಲ್ಲ (೧೭-೧೮) ದಶರಥ, ನಾನು ಹೇಳಿದಂತೆ ಮಾಡು. ಶೋಕಿಸಬೇಡ." ಹೀಗೆ ಧರ್ಮಾರ್ಥಸಹಿತವಾದ ಮಾತನ್ನಾಡಿ ಮಹಾ ಜ್ಞಾನಿಗಳಾದ ವಿಶ್ವಾಮಿತ್ರರು ಸುಮ್ಮನಾದರು. ಅವರ ನುಡಿಯನ್ನು ಕೇಳಿ ದಶರಥನು ಮಹಾಶೋಕದಲ್ಲಿ ಮುಳುಗಿಹೋದನು (೧೯-೨೦). ಮೈಯಲ್ಲಿ ನಡುಕಹುಟ್ಟಿತು. ಎಚ್ಚರದಪ್ಪಿತು. ಸ್ವಲ್ಪ ಹೊತ್ತಿನಮೇಲೆ ಚೇತರಿಸಿ ಕೊಂಡನು ಮತ್ತೆ ದುಃಖಭಯಗಳಿಂದ ಕಂಗೆಟ್ಟನು. ಹೃದಯವನ್ನೇ ಕೊರೆಯುವ ವಿಶ್ವಾಮಿತ್ರರ ವಚನವನ್ನು ಕೇಳಿ ರಾಜನಿಗೆ ಬಹಳ ವ್ಯಥೆ ಯಾಯಿತು ಅವನು ಎಚ್ಚರದಪ್ಪಿ ಪೀಠದಿಂದ ಕೆಳಗೊರಗಿದನು (೨೧-೨೨).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಹತ್ತೊಂಬತ್ತನೆಯ ಸರ್ಗ



## ವಿಂಶಃ ಸರ್ಗಃ

### ದಶರಥವಾಕ್ಯಮ್

ತಚ್ಛ್ರುತ್ವಾ ರಾಜಶಾರ್ದೂಲೋ ವಿಶ್ವಾಮಿತ್ರಸ್ಯ ಭಾಷಿತಮ್ ।
ಮುಹೂರ್ತಮಿವ ನಿಃಸಂಜ್ಞಃ ಸಂಜ್ಞಾವಾನಿದಮಬ್ರವೀತ್ ॥ ೧

ಊನಷೋಡಶವರ್ಷೋ ಮೇ ರಾಮೋ ರಾಜೀವಲೋಚನಃ ।
ನ ಯುದ್ಧಯೋಗ್ಯತಾಮಸ್ಯ ಪಶ್ಯಾಮಿ ಸಹ ರಾಕ್ಷಸೈಃ ॥ ೨

ಇಯಮಕ್ಷೌಹಿಣೀ ಪೂರ್ಣಾ ಯಸ್ಯಾಹಂ ಪತಿರೀಶ್ವರಃ ।
ಅನಯಾ ಸಂವೃತೋ ಗತ್ವಾ ಯೋದ್ಧಾಹಂ ತೈರ್ನಿಶಾಚರೈಃ ॥ ೩

ಇಮೇ ಶೂರಾಶ್ಚ ವಿಕ್ರಾಂತಾ ಭೃತ್ಯಾ ಮೇಽಸ್ತ್ರವಿಶಾರದಾಃ ।
ಯೋಗ್ಯಾ ರಕ್ಷೋಗಣೈರ್ಯೋದ್ಧುಂ ನ ರಾಮಂ ನೇತುಮರ್ಹಸಿ ॥

## ಸರ್ಗ ೨೦

ಶ್ರೀರಾಮನು ಚಿಕ್ಕವನಾದ್ದರಿಂದ ರಾಕ್ಷಸರೊಡನೆ ಯುದ್ಧಕ್ಕೆ ಕಳಿಸುವುದು ಯುಕ್ತವಲ್ಲವೆಂದು ದಶರಥನು ವಿಜ್ಞಾಪಿಸಲು ವಿಶ್ವಾಮಿತ್ರರು ಕೋಪಗೊಳ್ಳುವುದು.

ವಿಶ್ವಾಮಿತ್ರರ ವಚನವನ್ನು ಕೇಳಿ ದಶರಥನು ಸ್ವಲ್ಪಹೊತ್ತು ಮೂರ್ಛಿತನಾಗಿ ಅನಂತರ ಚೇತರಿಸಿಕೊಂಡು ಹೀಗೆ ನುಡಿದನು. “ಕಮಲ ನೇತ್ರನಾದ ನನ್ನ ಮಗ ರಾಮನಿಗೆ ಇನ್ನೂ ಹದಿನಾರು ವರ್ಷ ತುಂಬಿಲ್ಲ.* ಇವನಿಗೆ ಇನ್ನೂ ರಾಕ್ಷಸರೊಡನೆ ಯುದ್ಧಮಾಡುವ ಯೋಗ್ಯತೆ ಇಲ್ಲ (೧-೨). ಒಂದು ಅಕ್ಷೌಹಿಣೀ ಸೇನೆ ನನ್ನ ಅಧೀನದಲ್ಲಿದೆ. ಈ ಸೇನೆಯೊಡನೆ ಬಂದು ನಾನೇ ರಾಕ್ಷಸರೊಡನೆ ಯುದ್ಧಮಾಡುವೆನು. ಈ ನನ್ನ ಸೈನಿಕರು ಶೂರರು. ಪರಾಕ್ರಮಿಗಳು. ಅಸ್ತ್ರವಿಶಾರದರು ಇವರು ರಾಕ್ಷಸಸೈನ್ಯದೊಡನೆ ಯುದ್ಧಮಾಡಬಲ್ಲರು. ರಾಮನನ್ನು ಕರೆದೊಯ್ಯುವುದು ಬೇಡ (೩-೪).

---

* ಅನುಬಂಧವನ್ನು ನೋಡಿ.

ಅಹಮೇವ ಧನುಷ್ಪಾಣಿರ್ಗೋಪ್ತಾ ಸಮರಮೂರ್ಧನಿ ।
ಯಾವತ್ ಪ್ರಾಣಾನ್ ಧರಿಷ್ಯಾಮಿ ತಾವದ್ಯೋತ್ಸ್ಯೇ ನಿಶಾಚರೈಃ ॥
ನಿರ್ವಿಘ್ನಾ ವ್ರತಚರ್ಯಾ ಸಾ ಭವಿಷ್ಯತಿ ಸುರಕ್ಷಿತಾ ।
ಅಹಂ ತತ್ರಾಗಮಿಷ್ಯಾಮಿ ನ ರಾಮಂ ನೇತುಮರ್ಹಸಿ ॥ ೬
ಬಾಲೋ ಹ್ಯಕೃತವಿದ್ಯಶ್ಚ ನ ಚ ವೇತ್ತಿ ಬಲಾಬಲಮ್ ।
ನ ಚಾಸ್ತ್ರಬಲಸಂಯುಕ್ತೋ ನ ಚ ಯುದ್ಧವಿಶಾರದಃ ॥ ೭
ನ ಚಾಸೌ ರಕ್ಷಸಾಂ ಯೋಗ್ಯಃ ಕೂಟಯುದ್ಧಾ ಹಿ ತೇ ಧ್ರುವಮ್
ವಿಪ್ರಯುಕ್ತೋ ಹಿ ರಾಮೇಣ ಮುಹೂರ್ತಮಪಿ ನೋತ್ಸಹೇ ॥ ೮
ಜೀವಿತುಂ ಮುನಿಶಾರ್ದೂಲ ನ ರಾಮಂ ನೇತುಮರ್ಹಸಿ ।
ಯದಿ ವಾ ರಾಘವಂ ಬ್ರಹ್ಮನ್ನೇತುಮಿಚ್ಛಸಿ ಸುವ್ರತ ॥ ೯
ಚತುರಂಗಸಮಾಯುಕ್ತಂ ಮಯಾ ಚ ಸಹ ತಂ ನಯ ।
ಷಷ್ಟಿರ್ವರ್ಷಸಹಸ್ರಾಣಿ ಜಾತಸ್ಯ ಮಮ ಕೌಶಿಕ ॥ ೧೦
ದುಃಖೇನೋತ್ಪಾದಿತಶ್ಚಾಯಂ ನ ರಾಮಂ ನೇತುಮರ್ಹಸಿ ।
ಚತುರ್ಣಾಮಾತ್ಮಜಾನಾಂ ಹಿ ಪ್ರೀತಿಃ ಪರಮಿಕಾ ಮಮ ॥ ೧೧

---

ನಾನೇ ಧನುರ್ಧಾರಿಯಾಗಿ ಯುದ್ಧಕ್ಕೆ ನಿಂತು ಯಜ್ಞರಕ್ಷಣೆ ಮಾಡುತ್ತೇನೆ. ಪ್ರಾಣವಿರುವವರೆಗೂ ನಿಶಾಚರರೊಡನೆ ಹೋರಾಡುವೆನು ನಿಮ್ಮ ವ್ರತಾನುಷ್ಠಾನವು ನಿರ್ವಿಘ್ನವಾಗಿ ನಡೆಯುವುದು. ನಾನೇ ಅಲ್ಲಿಗೆ ಬರುತ್ತೇನೆ ರಾಮನನ್ನು ಕರೆದೊಯ್ಯಬೇಡಿರಿ (೫-೬) ಅವನು ಇನ್ನೂ ಹುಡುಗ. ಯುದ್ಧವಿದ್ಯೆಯನ್ನು ಚೆನ್ನಾಗಿ ಕಲಿತಿಲ್ಲ. ಶತ್ರುಗಳ ಬಲಾಬಲಗಳನ್ನು ತಿಳಿದುಕೊಳ್ಳಲಾರ. ಅವನಿಗೆ ಅಸ್ತ್ರಬಲವಿಲ್ಲ. ಯುದ್ಧವಿಶಾರದನಲ್ಲ. ರಾಕ್ಷಸರೆಂದರೆ ಮಾಯೆಯಿಂದ ಯುದ್ಧಮಾಡತಕ್ಕವರು ರಾಮನು ಅವರಿಗೆ ಎದುರಲ್ಲ. ನಾನು ರಾಮನನ್ನು ಅಗಲಿ ಒಂದು ಕ್ಷಣವೂ ಬದುಕಲಾರೆ (೭-೮). ಮಹರ್ಷಿಗಳೆ, ರಾಮನನ್ನು ಕರೆದೊಯ್ಯಬೇಡಿರಿ. ರಾಮನು ಬರಲೇಬೇಕಾದರೆ ನಾನು ಚತುರಂಗಬಲಸಮೇತನಾಗಿ ಬರುತ್ತೇನೆ. ನನ್ನನ್ನೂ ಕರೆದುಕೊಂಡು ಹೋಗಿರಿ. ವಿಶ್ವಾಮಿತ್ರರೆ, ನಾನು ಹುಟ್ಟಿ ಅರವತ್ತುಸಾವಿರ ವರ್ಷಗಳಾದವು (೯-೧೦). ಈ ಮಗನನ್ನು ಪಡೆಯುವುದಕ್ಕಾಗಿ ಬಹಳ ಕಷ್ಟಪಟ್ಟಿದ್ದೇನೆ.

ಜ್ಯೇಷ್ಠಂ ಧರ್ಮಪ್ರಧಾನಂ ಚ ನ ರಾಮಂ ನೇತುಮರ್ಹಸಿ ।
ಕಿಂವೀರ್ಯಾ ರಾಕ್ಷಸಾಸ್ತೇ ಚ ಕಸ್ಯ ಪುತ್ರಾಶ್ಚ ಕೇ ಚ ತೇ ॥ ೧೨

ಕಥಂಪ್ರಮಾಣಾಃ ಕೇ ಚೈತಾನ್ ರಕ್ಷಂತಿ ಮುನಿಪುಂಗವ ।
ಕಥಂ ಚ ಪ್ರತಿಕರ್ತವ್ಯಂ ತೇಷಾಂ ರಾಮೇಣ ರಕ್ಷಸಾಮ್ ॥ ೧೩

ಮಾಮಕೈರ್ವಾ ಬಲೈರ್ಬ್ರಹ್ಮನ್ ಮಯಾ ವಾ ಕೂಟಯೋಧಿನಾಂ
ಸರ್ವಂ ಮೇ ಶಂಸ ಭಗವನ್ ಕಥಂ ತೇಷಾಂ ಮಯಾ ರಣೇ ॥ ೧೪

ಸ್ಥಾತವ್ಯಂ ದುಷ್ಟಭಾವಾನಾಂ ವೀರ್ಯೋತ್ಸಿಕ್ತಾ ಹಿ ರಾಕ್ಷಸಾಃ ।
ತಸ್ಯ ತದ್ವಚನಂ ಶ್ರುತ್ವಾ ವಿಶ್ವಾಮಿತ್ರೋಽಭ್ಯಭಾಷತ ॥ ೧೫

ಪೌಲಸ್ತ್ಯವಂಶಪ್ರಭವೋ ರಾವಣೋ ನಾಮ ರಾಕ್ಷಸಃ ।
ಸ ಬ್ರಹ್ಮಣಾ ದತ್ತವರಸ್ತ್ರೈಲೋಕ್ಯಂ ಬಾಧತೇ ಭೃಶಮ್ ॥ ೧೬

ಮಹಾಬಲೋ ಮಹಾವೀರ್ಯೋ ರಾಕ್ಷಸೈರ್ಬಹುಭಿರ್ವೃತಃ ।
ಶ್ರೂಯತೇ ಹಿ ಮಹಾವೀರ್ಯೋ ರಾವಣೋ ರಾಕ್ಷಸಾಧಿಪಃ ॥

---

ಇವನನ್ನು ಕರೆದುಕೊಂಡು ಹೋಗಬೇಡಿರಿ. ಈ ನಾಲ್ವರು ಮಕ್ಕಳಲ್ಲಿಯೂ ಧರ್ಮನಿಷ್ಠನಾದ ಹಿರಿಯ ಮಗನಲ್ಲಿ ನನಗೆ ಬಹಳ ಪ್ರೇಮ (೧೧). ಅವನನ್ನು ಕರೆದುಕೊಂಡು ಹೋಗಬೇಡಿರಿ. ಋಷಿಗಳೆ, ಆ ರಾಕ್ಷಸರ ಪರಾಕ್ರಮ ಎಂಥಾದ್ದು? ಅವರು ಯಾರ ಮಕ್ಕಳು? ಅವರು ಹೇಗಿದ್ದಾರೆ? ಅವರನ್ನು ರಕ್ಷಿಸಿ ಸಹಾಯಮಾಡತಕ್ಕವರು ಯಾರು? ರಾಮನು ಅವರನ್ನು ಹೇಗೆ ಸಂಹರಿಸಬೇಕಾಗುತ್ತದೆ? (೧೨-೧೩). ನನ್ನ ಸೈನಿಕರಾಗಲಿ ನಾನಾಗಲಿ ಆ ಮಾಯಾವಿಗಳೊಡನೆ ಹೇಗೆ ಯುದ್ಧಮಾಡಬೇಕಾಗುತ್ತದೆ? ಅದೆಲ್ಲವನ್ನೂ ತಿಳಿಸಿರಿ. ನಾನು ಅವರಿಗೆ ಪ್ರತೀಕಾರಮಾಡುವುದು ಹೇಗೆ? ರಾಕ್ಷಸರೆಂದರೆ ಶೌರ್ಯದಿಂದ ಕೊಬ್ಬಿಹೋಗಿರುತ್ತಾರೆ." ಈ ಮಾತನ್ನು ಕೇಳಿ ವಿಶ್ವಾಮಿತ್ರರು ಹೇಳಿದರು: (೧೪-೧೫) "ಪೌಲಸ್ತ್ಯವಂಶದಲ್ಲಿ ಹುಟ್ಟಿದ ರಾವಣನೆಂಬ ರಾಕ್ಷಸನಿದ್ದಾನೆ. ಅವನು ಬ್ರಹ್ಮನಿಂದ ವರವನ್ನು ಪಡೆದು ಮೂರು ಲೋಕಗಳನ್ನೂ ಬಾಧಿಸುತ್ತಿದ್ದಾನೆ. ಅವನೊಡನೆ ಬಹುಮಂದಿ ರಾಕ್ಷಸರಿದ್ದಾರೆಂದೂ ಅವನೇ ರಾಕ್ಷಸಾಧಿಪತಿಯೆಂದೂ ಮಹಾಪರಾಕ್ರಮಿ

ಸಾಕ್ಷಾದ್ವೈಶ್ರವಣಭ್ರಾತಾ ಪುತ್ರೋ ವಿಶ್ರವಸೋ ಮುನೇಃ ।
ಯದಾ ಸ್ವಯಂ ನ ಯಜ್ಞಸ್ಯ ವಿಘ್ನಕರ್ತಾ ಮಹಾಬಲಃ ॥ ೧೮
ತೇನ ಸಂಚೋದಿತೌ ದ್ವೌ ತು ರಾಕ್ಷಸೌ ಸುಮಹಾಬಲೌ ।
ಮಾರೀಚಶ್ಚ ಸುಬಾಹುಶ್ಚ ಯಜ್ಞವಿಘ್ನಂ ಕರಿಷ್ಯತಃ ॥ ೧೯
ಇತ್ಯುಕ್ತೋ ಮುನಿನಾ ತೇನ ರಾಜೋವಾಚ ಮುನಿಂ ತದಾ ।
ನ ಹಿ ಶಕ್ತೋಽಸ್ಮಿ ಸಂಗ್ರಾಮೇ ಸ್ಥಾತುಂ ತಸ್ಯ ದುರಾತ್ಮನಃ ॥ ೨೦
ಸ ತ್ವಂ ಪ್ರಸಾದಂ ಧರ್ಮಜ್ಞ ಕುರುಷ್ವ ಮಮ ಪುತ್ರಕೇ ।
ಮಮ ಚೈವಾಲ್ಪಭಾಗ್ಯಸ್ಯ ದೈವತಂ ಹಿ ಭವಾನ್ ಗುರುಃ ॥ ೨೧
ದೇವದಾನವಗಂಧರ್ವಾ ಯಕ್ಷಾಃ ಪತಗಪನ್ನಗಾಃ ।
ನ ಶಕ್ತಾ ರಾವಣಂ ಸೋಢುಂ ಕಿಂ ಪುನರ್ಮಾನವಾ ಯುಧಿ ॥ ೨೨
ಸ ಹಿ ವೀರ್ಯವತಾಂ ವೀರ್ಯಮಾದತ್ತೇ ಯುಧಿ ರಾಕ್ಷಸಃ ।
ತೇನ ಚಾಹಂ ನ ಶಕ್ನೋಮಿ ಸಂಯೋದ್ಧುಂ ತಸ್ಯ ವಾ ಬಲೈಃ ॥
ಸಬಲೋ ವಾ ಮುನಿಶ್ರೇಷ್ಠ ಸಹಿತೋ ವಾ ಮಮಾತ್ಮಜೈಃ ।
ಕಥಮಪ್ಯಮರಪ್ರಖ್ಯಂ ಸಂಗ್ರಾಮಾಣಾಮಕೋವಿದಮ್ ॥ ೨೪

---

ಯೆಂದೂ ಕೇಳಿದ್ದೇನೆ (೧೬-೧೭). ಅವನು ವಿಶ್ರವಸ್ಸಿನ ಮಗ. ಕುಬೇರನ ತಮ್ಮ. ಅವನು ಯಜ್ಞಕ್ಕೆ ವಿಘ್ನಮಾಡಲು ತಾನೇ ಬರದಿದ್ದಾಗ ಮಾರೀಚ, ಸುಬಾಹುಗಳನ್ನು ಕಳಿಸುತ್ತಾನೆ. ಅವರು ಬಲಿಷ್ಠರು. ಅವರು ಯಜ್ಞಕ್ಕೆ ವಿಘ್ನವನ್ನುಂಟುಮಾಡುತ್ತಾರೆ" (೧೮-೧೯). ಇದನ್ನು ಕೇಳಿ ದಶರಥನು "ಆ ದುರಾತ್ಮನಾದ ರಾವಣನೊಡನೆ ಯುದ್ಧಮಾಡುವ ಶಕ್ತಿ ನನಗೇ ಇಲ್ಲ. ಹೀಗಿರುವಾಗ, ಧರ್ಮಾತ್ಮರೆ, ನನ್ನ ಮಗನಲ್ಲಿ ಅನುಗ್ರಹಮಾಡಬೇಕು. ಅಲ್ಪಭಾಗ್ಯನಾದ ನನ್ನ ವಿಷಯದಲ್ಲಿಯೂ ಅನುಗ್ರಹಮಾಡಬೇಕು. ನನಗೆ ನೀವೇ ದೇವರು; ನೀವೇ ಗುರು (೨೦-೨೧). ದೇವದಾನವಗಂಧರ್ವಾದಿಗಳೇ ರಾವಣನನ್ನು ಎದುರಿಸಲಾರರು. ಇನ್ನು ಮನುಷ್ಯರ ಪಾಡೇನು? ರಾವಣನು ಯುದ್ಧಕ್ಕೆ ನಿಂತರೆ ಎಂತಹ ಶೂರರಾದರೂ ಅವರ ಶೌರ್ಯವನ್ನು ಅಡಗಿಸಬಲ್ಲನು. ನಾನು ಅವನೊಡನಾಗಲಿ ಅವನ ಕಡೆಯ ಸೈನಿಕರೊಡನಾಗಲಿ ಯುದ್ಧಮಾಡಲಾರೆ (೨೨-೨೩). ನನ್ನ ಸಹಾಯಕ್ಕೆ ಸೈನ್ಯವು ಬಂದರೂ

ಬಾಲಂ ಮೇ ತನಯಂ ಬ್ರಹ್ಮನ್ನೈವ ದಾಸ್ಯಾಮಿ ಪುತ್ರಕಮ್ ।
ಅಥ ಕಾಲೋಪಮೌ ಯುದ್ಧೇ ಸುತೌ ಸುಂದೋಪಸುಂದಯೋಃ॥

ಯಜ್ಞವಿಘ್ನಕರೌ ತೌ ತೇ ನೈವ ದಾಸ್ಯಾಮಿ ಪುತ್ರಕಮ್ ।
ತಯೋರನ್ಯತರೇಣಾಹಂ ಯೋದ್ಧಾ ಸ್ಯಾಂ ಸಸುಹೃದ್ಗಣಃ ॥ ೨೭

ಅನ್ಯಥಾ ತ್ವನುನೇಷ್ಯಾಮಿ ಭವಂತಂ ಸಹ ಬಾಂಧವೈಃ ॥

ಇತಿ ನರಪತಿಜಲ್ಪನಾದ್ದ್ವಿಜೇಂದ್ರಂ
ಕುಶಿಕಸುತಂ ಸುಮಹಾನ್ ವಿವೇಶ ಮನ್ಯುಃ ।
ಸುಹುತ ಇವ ಮಖೇಽಗ್ನಿರಾಜ್ಯಸಿಕ್ತಃ
ಸಮಭವದುಜ್ಜ್ವಲಿತೋ ಮಹರ್ಷಿವಹ್ನಿಃ ॥ ೨೭

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ವಿಂಶಃ ಸರ್ಗಃ



ಅಷ್ಟು ಮಕ್ಕಳು ಬಂದರೂ ಅಷ್ಟೆ. ಹೇಗಾದರೂ ನನ್ನ ಪುತ್ರನನ್ನು— ನನ್ನ ಮಗನನ್ನು—ಕೊಡಲಾರೆ ಅವನು ದೇವತೆಯಂತೆ ಇದ್ದಾನೆ. ಯುದ್ಧದಲ್ಲಿ ಪಳಗಿದವನಲ್ಲ ಯಜ್ಞಕ್ಕೆ ವಿಘ್ನಮಾಡತಕ್ಕ ಆ ಸುಂದೋಪಸುಂದರ ಮಕ್ಕಳು ಯಮನಂತಿದ್ದಾರೆ. ನನ್ನ ಮಗನನ್ನು ಕಳಿಸುವುದಿಲ್ಲ ಮಾರೀಚ ಸುಬಾಹುಗಳು ಯುದ್ಧದಲ್ಲಿ ಸುಶಿಕ್ಷಿತರು ಅವರಲ್ಲೊಬ್ಬನೊಡನೆ ನಾನು ಯುದ್ಧಮಾಡುತ್ತೇನೆ ನನ್ನ ಮಿತ್ರರನ್ನು ಕರೆತರುತ್ತೇನೆ. ನಿಮ್ಮ ಇಷ್ಟಕ್ಕೆ ವಿರೋಧವಾಗಿ ಈ ರೀತಿ ಬಾಂಧವರೊಡನೆ ನಿಮ್ಮನ್ನು ಬೇಡಿಕೊಳ್ಳುತ್ತಿದ್ದೇನೆ" ಎಂದನು (೨೪-೨೭) ದಶರಥನು ಈ ಪ್ರಕಾರವಾಗಿ ಹಲುಬುವುದನ್ನು ಕೇಳಿ ವಿಶ್ವಾಮಿತ್ರರಿಗೆ ಬಹಳ ಕೋಪ ಉಂಟಾಯಿತು ಯಜ್ಞಕುಂಡದಲ್ಲಿ ಉರಿಯುತ್ತಿರುವ ಅಗ್ನಿಗೆ ತುಪ್ಪವನ್ನು ಹೊಯ್ದಂತಾಗಿ, ಮಹರ್ಷಿಯೆಂಬ ಆ ಅಗ್ನಿಯು ಭುಗಿಲ್ ಎಂದಿತು! (೨೭).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಇಪ್ಪತ್ತನೆಯ ಸರ್ಗ



## ಏಕವಿಂಶಃ ಸರ್ಗಃ

### ವಸಿಷ್ಠವಾಕ್ಯಮ್

ತಚ್ಛ್ರುತ್ವಾ ವಚನಂ ತಸ್ಯ ಸ್ನೇಹಪರ್ಯಾಕುಲಾಕ್ಷರಮ್ ।
ಸಮನ್ಯುಃ ಕೌಶಿಕೋ ವಾಕ್ಯಂ ಪ್ರತ್ಯುವಾಚ ಮಹೀಪತಿಮ್ ॥ ೧

ಪೂರ್ವಮರ್ಥಂ ಪ್ರತಿಶ್ರುತ್ಯ ಪ್ರತಿಜ್ಞಾಂ ಹಾತುಮಿಚ್ಛಸಿ ।
ರಾಘವಾಣಾಮಯುಕ್ತೋಽಯಂ ಕುಲಸ್ಯಾಸ್ಯ ವಿಪರ್ಯಯಃ ॥ ೨

ಯದೀದಂ ತೇ ಕ್ಷಮಂ ರಾಜನ್ ಗಮಿಷ್ಯಾಮಿ ಯಥಾಗತಮ್ ।
ಮಿಥ್ಯಾಪ್ರತಿಜ್ಞಃ ಕಾಕುತ್ಸ್ಥ ಸುಖೀ ಭವ ಸಬಾಂಧವಃ ॥ ೩

ತಸ್ಯ ರೋಷಪರೀತಸ್ಯ ವಿಶ್ವಾಮಿತ್ರಸ್ಯ ಧೀಮತಃ ।
ಚಚಾಲ ವಸುಧಾ ಕೃತ್ಸ್ನಾ ವಿವೇಶ ಚ ಭಯಂ ಸುರಾನ್ ॥ ೪

## ಸರ್ಗ ೨೧

### ವಸಿಷ್ಠರು ವಿಶ್ವಾಮಿತ್ರಮುನಿಗಳ ಮಹಿಮೆಯನ್ನು ವರ್ಣಿಸಿ, ಅವರೊಡನೆ ಶ್ರೀರಾಮನನ್ನು ಕಳುಹಿಸಬೇಕೆಂದು ದಶರಥನಿಗೆ ಬುದ್ಧಿವಾದ ಹೇಳುವುದು

ಮಗನಮೇಲಿನ ಪ್ರೇಮದಿಂದ ದಶರಥನು ಅಕ್ಷರಗಳನ್ನು ತೊದಲಿಸುತ್ತ ಹೀಗೆ ಮಾತನಾಡಲು ವಿಶ್ವಾಮಿತ್ರಮುನಿಗಳು ಕ್ರುದ್ಧರಾದರು. "ಎಲೈ ದಶರಥ, ಮೊದಲು ಮಾತುಕೊಟ್ಟು ಈಗ ತಪ್ಪಿಸಿಕೊಳ್ಳುತ್ತಿರುವೆಯಾ? ಮಾತುಕೊಟ್ಟು ಮುರಿಯುವುದು ರಘುವಂಶದವರಿಗೆ ಯೋಗ್ಯವಲ್ಲ. ಇದು ನಿನ್ನ ಕುಲಕ್ಕೇ ವಿರುದ್ಧವಾದ ನಡತೆ (೧-೨). ಇದೇ ಸರಿಯೆಂದು ನೀನು ಭಾವಿಸುವುದಾದರೆ, ರಾಜ, ಇಗೋ - ಬಂದ ದಾರಿಯನ್ನು ಹಿಡಿದು ಹೊರಡುತ್ತೇನೆ. ವಚನಭ್ರಷ್ಟನೆನಿಸಿಕೊಂಡು ಬಂಧುಗಳೊಡನೆ ಸುಖವಾಗಿರು" ಎಂದು ಅಬ್ಬರಿಸಿದರು. ವಿಶ್ವಾಮಿತ್ರರು ರೋಷಾವಿಷ್ಟರಾದ್ದನ್ನು ಕಂಡು ಪೃಥಿವಿಯು ನಡುಗಿತು. ದೇವತೆಗಳು ಕಂಗಾಲಾದರು (೩-೪). ಜಗತ್ತೇ ತಲ್ಲಣಿಸಿದುದನ್ನು

ತ್ರಸ್ತರೂಪಂ ತು ವಿಜ್ಞಾಯ ಜಗತ್ ಸರ್ವಂ ಮಹಾನೃಷಿಃ ।
ನೃಪತಿಂ ಸುವ್ರತೋ ಧೀರೋ ವಸಿಷ್ಠೋ ವಾಕ್ಯಮಬ್ರವೀತ್ ॥ ೫

ಇಕ್ಷ್ವಾಕೂಣಾಂ ಕುಲೇ ಜಾತಃ ಸಾಕ್ಷಾದ್ಧರ್ಮ ಇವಾಪರಃ ।
ಧೃತಿಮಾನ್ ಸುವ್ರತಃ ಶ್ರೀಮಾನ್ನ ಧರ್ಮಂ ಹಾತುಮರ್ಹಸಿ ॥ ೬

ತ್ರಿಷು ಲೋಕೇಷು ವಿಖ್ಯಾತೋ ಧರ್ಮಾತ್ಮಾ ಇತಿ ರಾಘವಃ ।
ಸ್ವಧರ್ಮಂ ಪ್ರತಿಪದ್ಯಸ್ವ ನಾಧರ್ಮಂ ವೋಢುಮರ್ಹಸಿ ॥ ೭

ಸಂಶ್ರುತ್ಯೈವಂ ಕರಿಷ್ಯಾಮೀತ್ಯಕುರ್ವಾಣಸ್ಯ ರಾಘವ ।
ಇಷ್ಟಾಪೂರ್ತವಧೋ ಭೂಯಾತ್ತಸ್ಮಾದ್ರಾಮಂ ವಿಸರ್ಜಯ ॥ ೮

ಕೃತಾಸ್ತ್ರಮಕೃತಾಸ್ತ್ರಂ ವಾ ನೈನಂ ಶಕ್ಷ್ಯಂತಿ ರಾಕ್ಷಸಾಃ ।
ಗುಪ್ತಂ ಕುಶಿಕಪುತ್ರೇಣ ಜ್ವಲನೇನಾಮೃತಂ ಯಥಾ ॥ ೯

ಏಷ ವಿಗ್ರಹವಾನ್ ಧರ್ಮ ಏಷ ವೀರ್ಯವತಾಂ ವರಃ ।
ಏಷ ಬುದ್ಧ್ಯಾಧಿಕೋ ಲೋಕೇ ತಪಸಶ್ಚ ಪರಾಯಣಮ್ ॥ ೧೦

---

ಕಂಡು ಧೀಮಂತರಾದ ವಸಿಷ್ಠಮಹರ್ಷಿಗಳು "ದಶರಥ, ಇಕ್ಷ್ವಾಕುವಂಶದಲ್ಲಿ ಸಾಕ್ಷಾತ್ ಧರ್ಮಪುರುಷನಂತೆ ಜನಿಸಿದ್ದೀಯೆ ಧೀರನಾಗಿ ಸದಾಚಾರ ಸಂಪನ್ನನಾಗಿ ಧರ್ಮಮಾರ್ಗವನ್ನು ಬಿಟ್ಟುಹೋಗುವುದು ಈಗ ಸರಿಯಲ್ಲ (೫-೬). 'ದಶರಥನು ಧರ್ಮಾತ್ಮ' ಎಂದು ಮೂರು ಲೋಕಗಳಲ್ಲಿಯೂ ಪ್ರಖ್ಯಾತನಾಗಿದ್ದೀಯೆ 'ಸತ್ಯಪ್ರತಿಜ್ಞ'ನಾಗಿ ಸ್ವಧರ್ಮವನ್ನು ಅನುಸರಿಸು. ಅಧರ್ಮದ ಹೊರೆಯನ್ನು ಹೊರಬೇಡ 'ನಡೆಸುತ್ತೇನೆ' ಎಂದು ಪ್ರತಿಜ್ಞೆಮಾಡಿ ಅದರಂತೆ ನಡೆಸದಿದ್ದರೆ * ಇಷ್ಟಾಪೂರ್ತದ ಫಲವೆಲ್ಲವೂ ನಾಶವಾದೀತು. ಆದ್ದರಿಂದ ರಾಮನನ್ನು ಕಳಿಸು (೭-೮). ರಾಮನು ಅಸ್ತ್ರವಿದ್ಯಾವಿಶಾರದನಾಗಿರಲಿ-ಆಗದಿರಲಿ, ವಿಶ್ವಾಮಿತ್ರರ ರಕ್ಷಣೆಯಲ್ಲಿದ್ದಾಗ ಅವನನ್ನು ರಾಕ್ಷಸರು ಏನೂ ಮಾಡಲಾರರು ಆ ಸಮಯದಲ್ಲಿ ರಾಮನು ಅಗ್ನಿಚಕ್ರದಿಂದ ‡ ಸುರಕ್ಷಿತವಾದ ಅಮೃತವಿದ್ದಂತೆ. ವಿಶ್ವಾಮಿತ್ರಮುನಿ

---

* ಇಷ್ಟ = ಅಶ್ವಮೇಧ ಮುಂತಾದ ಯಾಗ. ಪೂರ್ತ ಅಥವಾ ಆಪೂರ್ತ = ಕೆರೆಕಟ್ಟೆಗಳನ್ನು ಕಟ್ಟಿಸುವುದು, ಅನ್ನದಾನ ಮುಂತಾದ ಕಾರ್ಯ.

‡ ಅನುಬಂಧವನ್ನು ನೋಡಿ

ಏಷೋಽಸ್ತ್ರಾನ್ ವಿವಿಧಾನ್ ವೇತ್ತಿ ತ್ರೈಲೋಕ್ಯೇ ಸಚರಾಚರೇ ।
ನೈನಮನ್ಯಃ ಪುಮಾನ್ ವೇತ್ತಿ ನ ಚ ವೇತ್ಸ್ಯಂತಿ ಕೇಚನ ॥ ೧೧

ನ ದೇವಾ ನರ್ಷಯಃ ಕೇಚಿನ್ನಾಸುರಾ ನ ಚ ರಾಕ್ಷಸಾಃ ।
ಗಂಧರ್ವಯಕ್ಷಪ್ರವರಾಃ ಸಕಿಂನರಮಹೋರಗಾಃ ॥ ೧೨

ಸರ್ವಾಸ್ತ್ರಾಣಿ ಭೃಶಾಶ್ವಸ್ಯ ಪುತ್ರಾಃ ಪರಮಧಾರ್ಮಿಕಾಃ ।
ಕೌಶಿಕಾಯ ಪುರಾ ದತ್ತಾ ಯದಾ ರಾಜ್ಯಂ ಪ್ರಶಾಸತಿ ॥ ೧೩

ತೇಽಪಿ ಪುತ್ರಾ ಭೃಶಾಶ್ವಸ್ಯ ಪ್ರಜಾಪತಿಸುತಾಸುತಾಃ ।
ನೈಕರೂಪಾ ಮಹಾವೀರ್ಯಾ ದೀಪ್ತಿಮಂತೋ ಜಯಾವಹಾಃ ॥

ಜಯಾ ಚ ಸುಪ್ರಭಾ ಚೈವ ದಕ್ಷಕನ್ಯೇ ಸುಮಧ್ಯಮೇ ।
ತೇ ಸುವಾತೇಽಸ್ತ್ರಶಸ್ತ್ರಾಣಿ ಶತಂ ಪರಮಭಾಸ್ವರಮ್ ॥ ೧೫

ಪಂಚಾಶತಂ ಸುತಾನ್ ಲೇಭೇ ಜಯಾ ನಾಮ ವರಾಂಗನಾ ।
ವಧಾಯಾಸುರಸೈನ್ಯಾನಾಮಮೇಯಾನ್ ಕಾಮರೂಪಿಣಃ ॥ ೧೬

---

ಗಳೆಂದರೆ ಸಾಕ್ಷಾತ್ ಧರ್ಮಪುರುಷರು ; ವೀರರಲ್ಲಿ ವೀರರು ; ವಿದ್ಯಾನಿಧಿಗಳು ; ತಪಸ್ಸಿನ ಪರಾಕಾಷ್ಠೆ ಇವರು (೯-೧೦). ಇವರಿಗೆ ನಾನಾ ಬಗೆಯ ಮಂತ್ರಾಸ್ತ್ರಗಳು ಗೊತ್ತಿವೆ ಇವರ ಯೋಗ್ಯತೆಯಾಗಲಿ ಇವರ ಮಂತ್ರಾಸ್ತ್ರಗಳಾಗಲಿ ಚರಾಚರಾತ್ಮಕವಾದ ಈ ಭುವನತ್ರಯದಲ್ಲಿ ಇನ್ನೊಬ್ಬನಿಗೆ ಗೊತ್ತಿಲ್ಲ. ಮುಂದೆ ಗೊತ್ತುಮಾಡಿಕೊಳ್ಳುವವರೂ ವಿರಳವೇ. ದೇವತೆಗಳಿಗೂ ತಿಳಿಯದು ಋಷಿಗಳಿಗೂ ತಿಳಿಯದು. ರಾಕ್ಷಸರಿಗೂ ತಿಳಿಯದು. ಗಂಧರ್ವಾದಿಗಳಿಗೂ ತಿಳಿಯದು (೧೧-೧೨) ಇವರು ಹಿಂದೆ ರಾಜ್ಯಭಾರ ಮಾಡುತ್ತಿದ್ದಾಗ ಸಕಲ ಅಸ್ತ್ರವಿದ್ಯೆಗಳನ್ನೂ (ಈಶ್ವರನೇ) ಇವರಿಗೆ ಉಪದೇಶ ಮಾಡಿದ್ದಾನೆ. ಅವು ಕೃಶಾಶ್ವನೆಂಬ ಪ್ರಜಾಪತಿಗೆ ಮಕ್ಕಳಾಗಿ ಜನಿಸಿ ಕೇವಲ ಧರ್ಮಪರಾಯಣರನ್ನೇ ಆಶ್ರಯಿಸತಕ್ಕವುಗಳಾಗಿದ್ದವು. ಜಯವನ್ನು ಗಳಿಸಿಕೊಡತಕ್ಕ ಮಹಾವಿದ್ಯಸಂಪನ್ನಗಳಾಗಿ ಪ್ರಜ್ವಲಿಸುತ್ತಾ ವಿವಿಧಾಕಾರದಲ್ಲಿದ್ದ ಆ ಅಸ್ತ್ರವಿದ್ಯೆಗಳ ತಾಯಂದಿರು ದಕ್ಷಪ್ರಜಾಪತಿಯ ಕನ್ಯೆಯರು (೧೩-೧೪). ಆ ಕನ್ಯೆಯರ ಹೆಸರು ಜಯಾ ಮತ್ತು ಸುಪ್ರಭಾ. ಅವರು ನೂರಾರು ಅಸ್ತ್ರವಿದ್ಯೆಗಳಿಗೆ ಜನ್ಮವಿತ್ತರು. ಅವರಲ್ಲಿ ಜಯಾ ಎನ್ನುವವಳು

**ಸುಪ್ರಭಾ ಜನಯಾಮಾಸ ಪುತ್ರಾನ್ ಪಂಚಾಶತಂ ಪುನಃ ।**
**ಸಂಹಾರಾನ್ನಾಮ ದುರ್ಧರ್ಷಾನ್ ದುರಾಕ್ರಾಮಾನ್ ಬಲೀಯಸಃ॥**

**ತಾನಿ ಚಾಸ್ತ್ರಾಣಿ ವೇತ್ತ್ಯೇಷ ಯಥಾವತ್ ಕುಶಿಕಾತ್ಮಜಃ ।**
**ಅಪೂರ್ವಾಣಾಂ ಚ ಜನನೇ ಶಕ್ತೋ ಭೂಯಃ ಸ ಧರ್ಮವಿತ್ ॥**

**ತೇನಾಸ್ಯ ಮುನಿಮುಖ್ಯಸ್ಯ ಸರ್ವಜ್ಞಸ್ಯ ಮಹಾತ್ಮನಃ ।**
**ನ ಕಿಂಚಿದಪ್ಯವಿದಿತಂ ಭೂತಂ ಭವ್ಯಂ ಚ ರಾಘವ ॥** ೧೯

**ಏವಂವೀರ್ಯೋ ಮಹಾತೇಜಾ ವಿಶ್ವಾಮಿತ್ರೋ ಮಹಾಯಶಾಃ ।**
**ನ ರಾಮಗಮನೇ ರಾಜನ್ ಸಂಶಯಂ ಗಂತುಮರ್ಹಸಿ ॥** ೨೦

**ತೇಷಾಂ ನಿಗ್ರಹಣೇ ಶಕ್ತಃ ಸ್ವಯಂ ಚ ಕುಶಿಕಾತ್ಮಜಃ ।**
**ತವ ಪುತ್ರಹಿತಾರ್ಥಾಯ ತ್ವಾಮುಪೇತ್ಯಾಭಿಯಾಚತೇ ॥** ೨೧

**ಇತಿ ಮುನಿವಚನಾತ್ ಪ್ರಸನ್ನಚಿತ್ತೋ**
**ರಘುವೃಷಭಶ್ಚ ಮುಮೋದ ಭಾಸ್ವರಾಂಗಃ ।**

---

ರಾಕ್ಷಸರ ವಧೆಗಾಗಿ ವರಬಲದಿಂದ ಕಾಮರೂಪಿಗಳಾದ ಐವತ್ತು ಮಂದಿ ಪುತ್ರರನ್ನು ಪಡೆದಳು (೧೫-೧೬). ಸುಪ್ರಭೆಯು ಸಂಹಾರ ಎಂಬ ಹೆಸರಿನ ಐವತ್ತುಮಂದಿ ಪುತ್ರರನ್ನು ಪಡೆದಳು ಆ ಅಸ್ತ್ರಗಳೆಲ್ಲವನ್ನೂ ಈ ಕೌಶಿಕ ಮುನಿಗಳು ಬಲ್ಲರು. ಅಷ್ಟೇ ಅಲ್ಲ. ಹೊಸ ಹೊಸ ಮಂತ್ರಾಸ್ತ್ರಗಳನ್ನು ಇವರು ತಪೋಬಲದಿಂದ ಸೃಜಿಸಬಲ್ಲರು (೧೭-೧೮). ಆದ್ದರಿಂದ, ದಶರಥ, ಮುನಿಶ್ರೇಷ್ಠರಾದ ಈ ಮಹಾತ್ಮರಿಗೆ ತಿಳಿಯದ ಭೂತವೂ ಇಲ್ಲ, ಭವಿಷ್ಯತ್ತೂ ಇಲ್ಲ. ವಿಶ್ವಾಮಿತ್ರರು ಇಂಥ ವೀರ್ಯಶಾಲಿಗಳು. ಕೀರ್ತಿಶಾಲಿಗಳು. ಮಹಾರಾಜ, ರಾಮನನ್ನು ಕಳಿಸುವ ವಿಷಯದಲ್ಲಿ ಯಾವ ಶಂಕೆಯನ್ನೂ ಇಟ್ಟುಕೊಳ್ಳಬೇಡ (೧೯-೨೦). ಇವರು ಆ ರಾಕ್ಷಸರನ್ನು ತಾವೇ ಸ್ವತಃ ನಡೆಬಡಿಯಬಲ್ಲರು. ಆದರೆ ನಿನ್ನ ಮಗನಿಗೆ ಶ್ರೇಯಸ್ಸನ್ನು ಕೋರುವುದಕ್ಕಾಗಿ ಇಲ್ಲಿಗೆ ಬಂದು ನಿನ್ನನ್ನು ಬೇಡಿಕೊಳ್ಳುತ್ತಿದ್ದಾರೆ" ಎಂದು ನುಡಿದರು (೨೧). ವಸಿಷ್ಠರು ಈ ರೀತಿಯಲ್ಲಿ ಹೇಳಿದ ಮೇಲೆ ದಶರಥಮಹಾರಾಜನ ಮನಸ್ಸಿಗೆ

ಗಮನಮಭಿರುರೋಚ ರಾಘವಸ್ಯ
ಪ್ರಥಿತಯಶಾಃ ಕುಶಿಕಾತ್ಮಜಾಯ ಬುದ್ಧ್ಯಾ ॥ ೨೨

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕವಿಂಶಃ ಸರ್ಗಃ

---

## ದ್ವಾವಿಂಶಃ ಸರ್ಗಃ

### ವಿದ್ಯಾಪ್ರದಾನಮ್

ತಥಾ ವಸಿಷ್ಠೇ ಬ್ರುವತಿ ರಾಜಾ ದಶರಥಃ ಸುತಮ್ ।
ಪ್ರಹೃಷ್ಟವದನೋ ರಾಮಮಾಜುಹಾವ ಸಲಕ್ಷ್ಮಣಮ್ ॥ ೧
ಕೃತಸ್ವಸ್ತ್ಯಯನಂ ಮಾತ್ರಾ ಪಿತ್ರಾ ದಶರಥೇನ ಚ ।
ಪುರೋಧಸಾ ವಸಿಷ್ಠೇನ ಮಂಗಲೈರಭಿಮಂತ್ರಿತಮ್ ॥ ೨
ಸ ಪುತ್ರಂ ಮೂರ್ಧ್ನ್ಯುಪಾಘ್ರಾಯ ರಾಜಾ ದಶರಥಃ ಪ್ರಿಯಮ್ ।
ದದೌ ಕುಶಿಕಪುತ್ರಾಯ ಸುಪ್ರೀತೇನಾಂತರಾತ್ಮನಾ ॥ ೩

---

ಸಮಾಧಾನವಾಯಿತು ಅವನು ವಿಶ್ವಾಮಿತ್ರರೊಡನೆ ಶ್ರೀರಾಮನನ್ನು ಕಳಿಸಲು ಸಂತೋಷದಿಂದ ಒಪ್ಪಿಕೊಂಡನು (೨೨).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಇಪ್ಪತ್ತೊಂದನೆಯ ಸರ್ಗ

---

## ಸರ್ಗ ೨೨

### ವಿಶ್ವಾಮಿತ್ರರ ಸಂಗಡ ರಾಮಲಕ್ಷ್ಮಣರು ಹೋಗುವುದು
### ಮಂತ್ರಾಸ್ತ್ರಗಳ ಉಪದೇಶ

ಅನಂತರ ದಶರಥನು ಸಂತುಷ್ಟನಾಗಿ ರಾಮನನ್ನು ಬರಮಾಡಿದನು. ಜೊತೆಗೆ ಲಕ್ಷ್ಮಣನೂ ಬಂದನು. ಅವರಿಗೆ ತಂದೆತಾಯಿಗಳು ಮಂಗಳವಾಗಲೆಂದು ಹಾರೈಸಿದರು. ವಸಿಷ್ಠರು ಮಂಗಲಸೂಕ್ತಗಳಿಂದ ಆಶೀರ್ವದಿಸಿದರು. ದಶರಥನು ಪ್ರೇಮದಿಂದ ಪುತ್ರನ ಶಿರಸ್ಸನ್ನು ಆಘ್ರಾಣಿಸಿ

ತತೋ ವಾಯುಃ ಸುಖಸ್ಪರ್ಶೋ ನೀರಜಸ್ಕೋ ವವೌ ತದಾ ।
ವಿಶ್ವಾಮಿತ್ರಗತಂ ದೃಷ್ಟ್ವಾ ರಾಮಂ ರಾಜೀವಲೋಚನಮ್ ॥ ೪

ಪುಷ್ಪವೃಷ್ಟಿರ್ಮಹತ್ಯಾಸೀದ್ದೇವದುಂದುಭಿನಿಃಸ್ವನೈಃ ।
ಶಂಖದುಂದುಭಿನಿರ್ಘೋಷಃ ಪ್ರಯಾತೇ ತು ಮಹಾತ್ಮನಿ ॥ ೫

ವಿಶ್ವಾಮಿತ್ರೋ ಯಯಾವಗ್ರೇ ತತೋ ರಾಮೋ ಮಹಾಯಶಾಃ ।
ಕಾಕಪಕ್ಷಧರೋ ಧನ್ವೀ ತಂ ಚ ಸೌಮಿತ್ರಿರನ್ವಗಾತ್ ॥ ೬

ಕಲಾಪಿನೌ ಧನುಷ್ಪಾಣೀ ಶೋಭಯಾನೌ ದಿಶೋ ದಶ ।
ವಿಶ್ವಾಮಿತ್ರಂ ಮಹಾತ್ಮಾನಂ ತ್ರಿಶೀರ್ಷಾವಿವ ಪನ್ನಗೌ ॥ ೭

ಅನುಜಗ್ಮತುರಕ್ಷುದ್ರೌ ಪಿತಾಮಹಮಿವಾಶ್ವಿನೌ ।
ತದಾ ಕುಶಿಕಪುತ್ರಂ ತು ಧನುಷ್ಪಾಣೀ ಸ್ವಲಂಕೃತೌ ॥ ೮

ಬದ್ಧಗೋಧಾಂಗುಲಿತ್ರಾಣೌ ಖಡ್ಗವಂತೌ ಮಹಾದ್ಯುತೀ ।
ಕುಮಾರೌ ಚಾರುವಪುಷೌ ಭ್ರಾತರೌ ರಾಮಲಕ್ಷ್ಮಣೌ ॥ ೯

---

ಮನಃಪೂರ್ವಕವಾಗಿ ವಿಶ್ವಾಮಿತ್ರರಿಗೆ ಒಪ್ಪಿಸಿದನು (೧-೩). ತಾವರೆಗಣ್ಣಿನ ಶ್ರೀರಾಮನು ವಿಶ್ವಾಮಿತ್ರರ ಸಮೀಪದಲ್ಲಿ ನಿಂತುಕೊಳ್ಳಲು ನಿರ್ಮಲವಾದ ಮಂದಮಾರುತವು ಬೀಸಿತು. ಆಕಾಶದಿಂದ ಪುಷ್ಪವೃಷ್ಟಿಯಾಯಿತು. ದೇವದುಂದುಭಿಗಳು ಮೊಳಗಿದವು. ಶಂಖಗಳು ಶಬ್ದಮಾಡಿದವು (೪-೫). ಮುಂದೆ ವಿಶ್ವಾಮಿತ್ರರು ಹೊರಟರು. ಅವರ ಹಿಂದೆ ಮುಂಗುರುಳಿನ ಶ್ರೀರಾಮ. ಅವನ ಹಿಂದೆ ಧನುರ್ಧಾರಿಯಾದ ಲಕ್ಷ್ಮಣ. ಎರಡು ಹೆಗಲುಗಳ ಮೇಲೂ ಬತ್ತಳಿಕೆಗಳನ್ನೇರಿಸಿದ್ದ ರಾಮಲಕ್ಷ್ಮಣರು ಮೂರು ಹೆಡೆಯ ಸರ್ಪಗಳಂತೆ ಕಾಣುತ್ತಿದ್ದರು. ಅವರು ಧನುಷ್ಪಾಣಿಗಳಾಗಿ ದಶದಿಕ್ಕುಗಳನ್ನೂ ಬೆಳಗುತ್ತ ವಿಶ್ವಾಮಿತ್ರರ ಹಿಂದೆ ನಡೆದರು (೬-೭). ಚೆನ್ನಾಗಿ ಅಲಂಕರಿಸಿಕೊಂಡಿದ್ದ ಸುಂದರರಾದ ಆ ಕುಮಾರರು ಗೋಧಾ* ಚರ್ಮದಿಂದ ಮಾಡಿದ ಅಂಗುಲಿತ್ರಾಣವನ್ನು ಧರಿಸಿ ಖಡ್ಗವನ್ನು ಹಿಡಿದು ವಿಶ್ವಾಮಿತ್ರರ ಹಿಂದೆ ಹೋಗುತ್ತಿರುವಾಗ, ಬ್ರಹ್ಮನೊಡನೆ ಹೋಗುತ್ತಿರುವ ಅಶ್ವಿನೀದೇವತೆ

---

* ಗೋಧಾ = ಮೊಸಳೆಯಂತಿರುವ ಒಂದು ಜಂತು.

ಅನುಯಾತೌ ಶ್ರಿಯಾ ದೀಪ್ತೌ ಶೋಭಯೇತಾಮನಿಂದಿತೌ ।
ಸ್ಥಾಣುಂ ದೇವಮಿವಾಚಿಂತ್ಯಂ ಕುಮಾರಾವಿವ ಪಾವಕೀ ॥ ೧೦

ಅಧ್ಯರ್ಧಯೋಜನಂ ಗತ್ವಾ ಸರಯ್ವಾ ದಕ್ಷಿಣೇ ತಟೇ ।
ರಾಮೇತಿ ಮಧುರಾಂ ವಾಣೀಂ ವಿಶ್ವಾಮಿತ್ರೋಽಭ್ಯಭಾಷತ ॥ ೧೧

ಗೃಹಾಣ ವತ್ಸ ಸಲಿಲಂ ಮಾ ಭೂತ್ ಕಾಲಸ್ಯ ಪರ್ಯಯಃ ।
ಮಂತ್ರಗ್ರಾಮಂ ಗೃಹಾಣ ತ್ವಂ ಬಲಾಮತಿಬಲಾಂ ತಥಾ ॥ ೧೨

ನ ಶ್ರಮೋ ನ ಜ್ವರೋ ವಾ ತೇ ನ ರೂಪಸ್ಯ ವಿಪರ್ಯಯಃ ।
ನ ಚ ಸುಪ್ತಂ ಪ್ರಮತ್ತಂ ವಾ ಧರ್ಷಯಿಷ್ಯಂತಿ ನೈರ್ಋತಾಃ ॥ ೧೩

ನ ಬಾಹ್ವೋಃ ಸದೃಶೋ ವೀರ್ಯೇ ಪೃಥಿವ್ಯಾಮಸ್ತಿ ಕಶ್ಚನ ।
ತ್ರಿಷು ಲೋಕೇಷು ವೈ ರಾಮ ನ ಭವೇತ್ ಸದೃಶಸ್ತವ ॥ ೧೪

ನ ಸೌಭಾಗ್ಯೇ ನ ದಾಕ್ಷಿಣ್ಯೇ ನ ಜ್ಞಾನೇ ಬುದ್ಧಿನಿಶ್ಚಯೇ ।
ನೋತ್ತರೇ ಪ್ರತಿವಕ್ತವ್ಯೇ ಸಮೋ ಲೋಕೇ ತವಾನಘ ॥ ೧೫

---

ಗಳಂತೆಯೂ, ಅಚಿಂತ್ಯಮಹಿಮನಾದ ಪರಮೇಶ್ವರನನ್ನು ಹಿಂಬಾಲಿಸಿ ಹೋಗುವ ಸ್ಕಂದವಿಶಾಖರಂತೆಯೂ * ಕಾಣಿಸಿದರು (೮-೧೦) ಒಂದೂವರೆ ಯೋಜನದೂರ ಸಾಗಿತು. ಸರಯೂನದಿಯ ದಕ್ಷಿಣ ತಟ. ವಿಶ್ವಾಮಿತ್ರರು ಇಂಪಾದ ಧ್ವನಿಯಿಂದ "ರಾಮ" ಎಂದು ಕರೆದು "ಮಗು, ಇಲ್ಲಿ ಆಚಮನ ಮಾಡು. ಬಲಾ, ಅತಿಬಲಾ ಎಂಬ ಮಂತ್ರವಿದ್ಯೆಗಳನ್ನು ಉಪದೇಶಿಸುತ್ತೇನೆ. ಸ್ವೀಕರಿಸು ವಿಲಂಬ ಬೇಡ ಈ ಮಂತ್ರಬಲದಿಂದ ನಿನಗೆ ಶ್ರಮವಾಗಲಿ, ಜ್ವರ ಬಾಧೆಯಾಗಲಿ, ಆಯಾಸದಿಂದ ರೂಪದಲ್ಲಿ ಪರಿವರ್ತನವಾಗಲಿ ಆಗುವುದಿಲ್ಲ. ನೀನು ನಿದ್ರಿಸುವಾಗ ಅಥವಾ ಅಜಾಗರೂಕನಾಗಿರುವಾಗ ರಾಕ್ಷಸರು ನಿನ್ನನ್ನು ಆಕ್ರಮಿಸಲಾರರು (೧೧-೧೩) ಭುಜಬಲದಲ್ಲಿ ನಿನಗೆ ಸಮಾನನಾದವನು ಈ ಭೂಮಂಡಲದಲ್ಲಿ - ಮೂರು ಲೋಕಗಳಲ್ಲಿ - ಒಬ್ಬನೂ ಇರುವುದಿಲ್ಲ. ವತ್ಸ-ರಾಮ, ಈ ಮಂತ್ರಗಳನ್ನು ನೀನು ಜಪಿಸುತ್ತಿದ್ದರೆ, ಸೌಭಾಗ್ಯದಲ್ಲಿ ಸಾಮರ್ಥ್ಯದಲ್ಲಿ ತತ್ವಜ್ಞಾನದಲ್ಲಿ ಕಾರ್ಯನಿಶ್ಚಯದಲ್ಲಿ ಪ್ರತಿವಾದದಲ್ಲಿ-

* ಇವರಿಬ್ಬರು ಈಶ್ವರನ ಮಕ್ಕಳೆಂದು ಮಹಾಭಾರತದಲ್ಲಿ ಹೇಳಿದೆ.

ಏತದ್ವಿದ್ಯಾದ್ವಯೇ ಲಬ್ಧೇ ನ ಭವೇತ್ ಸದೃಶಸ್ತವ ।
ಬಲಾ ಚಾತಿಬಲಾ ಚೈವ ಸರ್ವಜ್ಞಾನಸ್ಯ ಮಾತರೌ ॥ ೧೬

ಬಲಾಮತಿಬಲಾಂ ಚೈವ ಪಠತಃ ಪಥಿ ರಾಘವ ।
ಕ್ಷುತ್ಪಿಪಾಸೇ ನ ತೇ ರಾಮ ಭವಿಷ್ಯೇತೇ ನರೋತ್ತಮ ॥ ೧೭

ವಿದ್ಯಾದ್ವಯಮಧೀಯಾನೇ ಯಶಶ್ಚಾಪ್ಯತುಲಂ ತ್ವಯಿ ।
ಪಿತಾಮಹಸುತೇ ಹ್ಯೇತೇ ವಿದ್ಯೇ ತೇಜಃಸಮನ್ವಿತೇ ॥ ೧೮

ಪ್ರದಾತುಂ ತವ ಕಾಕುತ್ಸ್ಥ ಸದೃಶಸ್ತ್ವಂ ಹಿ ಧಾರ್ಮಿಕ ।
ಕಾಮಂ ಬಹುಗುಣಾಃ ಸರ್ವೇ ತ್ವಯ್ಯೇತೇ ನಾತ್ರ ಸಂಶಯಃ ॥ ೧೯

ತಪಸಾ ಸಂಭೃತೇ ಚೈತೇ ಬಹುರೂಪೇ ಭವಿಷ್ಯತಃ ।
ತತೋ ರಾಮೋ ಜಲಂ ಸ್ಪೃಷ್ಟ್ವಾ ಪ್ರಹೃಷ್ಟವದನಃ ಶುಚಿಃ ॥ ೨೦

ಪ್ರತಿಜಗ್ರಾಹ ತೇ ವಿದ್ಯೇ ಮಹರ್ಷೇರ್ಭಾವಿತಾತ್ಮನಃ ।
ವಿದ್ಯಾಸಮುದಿತೋ ರಾಮಃ ಶುಶುಭೇ ಭೂರಿವಿಕ್ರಮಃ ॥ ೨೧

ನೀನು ಸಕಲರನ್ನೂ ಮೀರಿಸುತ್ತೀಯೆ (೧೪-೧೫). ಈ ಎರಡು ವಿದ್ಯೆಗಳು ಸರ್ವಜ್ಞಾನಕ್ಕೂ ಮಾತೃದೇವತೆಗಳು ಇವುಗಳನ್ನು ನೀನು ಜಪಿಸುತ್ತಿದ್ದರೆ ದಾರಿಯಲ್ಲಿ ಹಸಿವು ಬಾಯಾರಿಕೆಗಳ ಬಾಧೆಯೂ ನಿನಗಿರುವುದಿಲ್ಲ (೧೬-೧೭). ಈ ವಿದ್ಯೆಗಳನ್ನು ಜಪಿಸಿದಲ್ಲಿ ಎಣೆಯಿಲ್ಲದಂತೆ ನಿನ್ನ ಕೀರ್ತಿ ವಿಸ್ತರಿಸುವುದು. ಮಹಾಪ್ರಭಾವಕಾರಿಗಳಾದ ಈ ಮಂತ್ರಗಳು ಬ್ರಹ್ಮನಿರ್ಮಿತವಾದವು. ರಾಮ, ಇವುಗಳ ಉಪದೇಶಕ್ಕೆ ನೀನು ಉತ್ತಮಪಾತ್ರನಾಗಿದ್ದೀಯೆ. ನೀನು ಗುಣವಂತ. ತಪೋಬಲದಿಂದ ನಾನು ಸಂಪಾದಿಸಿದ ಈ ವಿದ್ಯೆಗಳನ್ನು ನಿನಗೆ ಉಪದೇಶಿಸಿದರೆ ಅವು ಪ್ರಕಾಶಕ್ಕೆ ಬರುತ್ತವೆ" ಎಂದು ನುಡಿದರು. ಆಗ ಶ್ರೀರಾಮನು ಹರ್ಷದಿಂದ ಆಚಮನಮಾಡಿ ಶುಚೀಭೂತನಾದನು (೧೮-೧೯). ಜ್ಞಾನಿಗಳಾದ ವಿಶ್ವಾಮಿತ್ರಮುನಿಗಳು ಬಲಾ, ಅತಿಬಲಾ ಎಂಬ ಆ ವಿದ್ಯೆಗಳನ್ನು ಅವನಿಗೆ* ಉಪದೇಶಮಾಡಿದರು (೨೦). ಆ ಮಂತ್ರೋಪದೇಶದಿಂದ ಶ್ರೀರಾಮನಲ್ಲಿ ವಿಶೇಷವಾದ ತೇಜಃಸಂಚಾರ

* ಲಕ್ಷ್ಮಣನಿಗೂ ಉಪದೇಶಿಸಿದರೆಂದೂ ಅಥವಾ ರಾಮನು ಲಕ್ಷ್ಮಣನಿಗೆ ಉಪದೇಶಿಸಿದನೆಂದೂ ತಿಳಿಯಬೇಕು.—ವ್ಯಾಖ್ಯಾನ

ಸಹಸ್ರರಶ್ಮಿರ್ಭಗವಾನ್ ಶರದೀವ ದಿವಾಕರಃ ।
ಗುರುಕಾರ್ಯಾಣಿ ಸರ್ವಾಣಿ ನಿಯುಜ್ಯ ಕುಶಿಕಾತ್ಮಜಃ ॥ ೨೨

ಊಷುಸ್ತಾಂ ರಜನೀಂ ತೀರೇ ಸರಯ್ವಾಃ ಸುಸುಖಂ ತ್ರಯಃ ॥

ದಶರಥನೃಪಸೂನುಸತ್ತಮಾಭ್ಯಾಂ
ತೃಣಶಯನೇಽನುಚಿತೇ ಸಹೋಷಿತಾಭ್ಯಾಮ್ ।
ಕುಶಿಕಸುತವಚೋಽನುಲಾಲಿತಾಭ್ಯಾಂ
ಕ್ಷಣಮಿವ ಸಾ ವಿಬಭೌ ವಿಭಾವರೀ ಚ ॥ ೨೩

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ದ್ವಾವಿಂಶಃ ಸರ್ಗಃ



ವಾಯಿತು. ಆ ವೀರನು ಶರತ್ಕಾಲದ ಸಹಸ್ರರಶ್ಮಿಯಂತೆ ಕಂಗೊಳಿಸಿದನು. ವಿಶ್ವಾಮಿತ್ರರು ಗುರುಶುಶ್ರೂಷೆಮಾಡುವ ಕ್ರಮವನ್ನು ಬೋಧಿಸಿದರು. ಆ ರಾತ್ರಿಯನ್ನು ಮೂವರೂ ಸರಯೂತಟದಲ್ಲಿ ಕಳೆದರು (೨೧-೨೨) ರಾಜಕುಮಾರರಿಗೆ ಸಮುಚಿತವಲ್ಲದ ಹುಲ್ಲು ಸೊಪ್ಪುಗಳ ಹಾಸಿಗೆಯಲ್ಲಿ ರಾಮಲಕ್ಷ್ಮಣರು ಮಲಗಿದರು. ವಿಶ್ವಾಮಿತ್ರರ ಒಳ್ಳೆಯ ಮಾತುಗಳನ್ನು ಆಲಿಸುತ್ತಾ ರಾತ್ರಿಯನ್ನು ಸುಖವಾಗಿ ಕಳೆದರು. ಪ್ರಭಾತವಾಯಿತು (೨೩).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಇಪ್ಪತ್ತೆರಡನೆಯ ಸರ್ಗ



ಸಂಘ

## ತ್ರಯೋವಿಂಶಃ ಸರ್ಗಃ

### ಕಾಮಾಶ್ರಮವಾಸಃ

ಪ್ರಭಾತಾಯಾಂ ತು ಶರ್ವರ್ಯಾಂ ವಿಶ್ವಾಮಿತ್ರೋ ಮಹಾಮುನಿಃ
ಅಭ್ಯಭಾಷತ ಕಾಕುತ್ಸ್ಥಂ ಶಯಾನಂ ಪರ್ಣಸಂಸ್ತರೇ ॥ ೧

ಕೌಸಲ್ಯಾ ಸುಪ್ರಜಾ ರಾಮ ಪೂರ್ವಾ ಸಂಧ್ಯಾ ಪ್ರವರ್ತತೇ ।
ಉತ್ತಿಷ್ಠ ನರಶಾರ್ದೂಲ ಕರ್ತವ್ಯಂ ದೈವಮಾಹ್ನಿಕಮ್ ॥ ೨

ತಸ್ಯರ್ಷೇಃ ಪರಮೋದಾರಂ ವಚಃ ಶ್ರುತ್ವಾ ನೃಪಾತ್ಮಜೌ ।
ಸ್ನಾತ್ವಾ ಕೃತೋದಕೌ ವೀರೌ ಜೇಪತುಃ ಪರಮಂ ಜಪಮ್ ॥ ೩

ಕೃತಾಹ್ನಿಕೌ ಮಹಾವೀರ್ಯೌ ವಿಶ್ವಾಮಿತ್ರಂ ತಪೋಧನಮ್ ।
ಅಭಿವಾದ್ಯಾಭಿಸಂಹೃಷ್ಟೌ ಗಮನಾಯೋಪತಸ್ಥತುಃ ॥ ೪

ತೌ ಪ್ರಯಾತೌ ಮಹಾವೀರ್ಯೌ ದಿವ್ಯಾಂ ತ್ರಿಪಥಗಾಂ ನದೀಮ್
ದದೃಶಾತೇ ತತಸ್ತತ್ರ ಸರಯ್ವಾಃ ಸಂಗಮೇ ಶುಭೇ ॥ ೫

## ಸರ್ಗ ೨೩

### ಕಾಮಾಶ್ರಮದ ವೃತ್ತಾಂತ.

ರಾತ್ರಿ ಕಳೆದು ಬೆಳಗಾಗುತ್ತ ಬಂದಿತು. ಸೊಪ್ಪಿನ ಹಾಸಿಗೆಯಲ್ಲಿ ಮಲಗಿದ್ದ ರಾಮಲಕ್ಷ್ಮಣರನ್ನು ನೋಡಿ ವಿಶ್ವಾಮಿತ್ರರು "ರಾಮ, ನಿನ್ನನ್ನು ಹಡೆದ ಕೌಸಲ್ಯೆ ಭಾಗ್ಯಶಾಲಿನಿ. ಬೆಳಗಾಗುತ್ತಾ ಬಂದಿತು, ಏಳು. ಇನ್ನು ಸಂಧ್ಯಾವಂದನಾದಿ ನಿತ್ಯಕರ್ಮವನ್ನು ಮಾಡಬೇಕು" ಎಂದರು (೧-೨). ಪ್ರಸನ್ನಗಂಭೀರವಾಗಿ ನುಡಿದ ಆ ಮಹರ್ಷಿಗಳ ಮಾತನ್ನು ಕೇಳಿ ರಾಜಕುಮಾರರು ಎದ್ದರು. ಸ್ನಾನಮಾಡಿ ಸೂರ್ಯನಿಗೆ ಅರ್ಘ್ಯವನ್ನಿತ್ತು ಗಾಯತ್ರಿಯನ್ನು ಜಪಿಸಿದರು. ತಮ್ಮ ಆಹ್ನಿಕಗಳನ್ನು ಮುಗಿಸಿ ಆ ತಪೋಧನರಿಗೆ ಅಭಿವಾದನಮಾಡಿ ಮುಂದೆ ಹೊರಡಲು ಸಿದ್ಧರಾದರು (೩-೪). ಅವರು ಮುಂದೆ ಪ್ರಯಾಣಮಾಡುತ್ತ ಸರಯೂನದಿಯ

**ತತ್ರಾಶ್ರಮಪದಂ ಪುಣ್ಯಮೃಷೀಣಾಂ ಭಾವಿತಾತ್ಮನಾಮ್ ।**
**ಬಹುವರ್ಷಸಹಸ್ರಾಣಿ ತಪ್ಯತಾಂ ಪರಮಂ ತಪಃ ॥ ೬**

**ತಂ ದೃಷ್ಟ್ವಾ ಪರಮಪ್ರೀತೌ ರಾಘವೌ ಪುಣ್ಯಮಾಶ್ರಮಮ್ ।**
**ಊಚತುಸ್ತಂ ಮಹಾತ್ಮಾನಂ ವಿಶ್ವಾಮಿತ್ರಮಿದಂ ವಚಃ ॥ ೭**

**ಕಸ್ಯಾಯಮಾಶ್ರಮಃ ಪುಣ್ಯಃ ಕೋ ನ್ವಸ್ಮಿನ್ ವಸತೇ ಪುಮಾನ್ ।**
**ಭಗವನ್ ಶ್ರೋತುಮಿಚ್ಛಾವಃ ಪರಂ ಕೌತೂಹಲಂ ಹಿ ನೌ ॥ ೮**

**ತಯೋಸ್ತದ್ವಚನಂ ಶ್ರುತ್ವಾ ಪ್ರಹಸ್ಯ ಮುನಿಪುಂಗವಃ ।**
**ಅಬ್ರವೀಚ್ಛ್ರೂಯತಾಂ ರಾಮ ಕಸ್ಯಾಯಂ ಪೂರ್ವ ಆಶ್ರಮಃ ॥**

**ಕಂದರ್ಪೋ ಮೂರ್ತಿಮಾನಾಸೀತ್ ಕಾಮ ಇತ್ಯುಚ್ಯತೇ ಬುಧೈಃ ।**
**ತಪಸ್ಯಂತಮಿಹ ಸ್ಥಾಣುಂ ನಿಯಮೇನ ಸಮಾಹಿತಮ್ ॥ ೧೦**

**ಕೃತೋದ್ವಾಹಂ ತು ದೇವೇಶಂ ಗಚ್ಛಂತಂ ಸಮರುದ್ಗಣಮ್ ।**
**ಧರ್ಷಯಾಮಾಸ ದುರ್ಮೇಧಾ ಹುಂಕೃತಶ್ಚ ಮಹಾತ್ಮನಾ ॥ ೧೧**

**ಅವದಗ್ಧಸ್ಯ ರೌದ್ರೇಣ ಚಕ್ಷುಷಾ ರಘುನಂದನ ।**
**ವ್ಯಶೀರ್ಯಂತ ಶರೀರಾತ್ ಸ್ವಾತ್ ಸರ್ವಗಾತ್ರಾಣಿ ದುರ್ಮತೇಃ ॥**

---

ಸಂಗಮಿಸುವ ಸ್ಥಳದಲ್ಲಿ ದಿವ್ಯವಾದ ಗಂಗಾನದಿಯನ್ನು ಕಂಡರು. ಆ ಸಂಗಮ ಸ್ಥಳದಲ್ಲಿ ಸಾವಿರಾರು ವರ್ಷಗಳಿಂದ ಉಗ್ರ ತಪಸ್ಸನ್ನಾಚರಿಸುತ್ತಿದ್ದ ಋಷಿಗಳ ಪುಣ್ಯಾಶ್ರಮವಿದ್ದಿತು ಆಶ್ರಮವನ್ನು ಕಂಡು ರಾಮಲಕ್ಷ್ಮಣರಿಗೆ ಆನಂದ ವಾಯಿತು. ಅವರು ವಿಶ್ವಾಮಿತ್ರರೊಡನೆ "ಮಹರ್ಷಿಗಳೆ, ಈ ಪುಣ್ಯಾಶ್ರಮವು ಯಾರದು? ಇಲ್ಲಿ ಯಾರು ವಾಸಮಾಡುತ್ತಿದ್ದಾರೆ? ಇದನ್ನು ತಿಳಿದುಕೊಳ್ಳ ಬೇಕೆಂದು ನಮಗೆ ಕುತೂಹಲವಾಗಿದೆ" ಎಂದರು (೬-೮). ಆಗ ಮುನಿಗಳು ಒಮ್ಮೆ ನಕ್ಕು ಹೀಗೆಂದರು: "ರಾಮ, ಇದು ಯಾರ ಆಶ್ರಮವೆಂಬುದನ್ನು ಕೇಳು: ಹಿಂದೆ ಕಂದರ್ಪನು ಶರೀರಸಹಿತನಾಗಿದ್ದನು. ಅವನನ್ನು ಕಾಮ ಎಂದು ವಿದ್ವಜ್ಜನರು ಕರೆಯುತ್ತಾರೆ ಇಲ್ಲಿ ಈಶ್ವರನು ನಿಯಮಸ್ಥನಾಗಿ ತಪಸ್ಸನ್ನಾಚರಿಸುತ್ತಿದ್ದನು. ಒಂದು ಸಲ ಸಮಾಧಿಯಿಂದ ವ್ಯುತ್ಥಿತನಾಗಿ ಮರದ್ಗಣಸಹಿತ ಹೋಗುತ್ತಿರಲು, ಅವಿವೇಕಿಯಾದ ಕಾಮನು ಈಶ್ವರನಿಗೆ ಕಾಮವಿಕಾರವನ್ನುಂಟುಮಾಡಬೇಕೆಂದು ಅವನನ್ನು ಕೆಣಕಿದನು. ಆಗ

ತಸ್ಯ ಗಾತ್ರಂ ಹತಂ ತತ್ರ ನಿರ್ದಗ್ಧಸ್ಯ ಮಹಾತ್ಮನಾ ।
ಅಶರೀರಃ ಕೃತಃ ಕಾಮಃ ಕ್ರೋಧಾದ್ದೇವೇಶ್ವರೇಣ ಹ ॥ ೧೩

ಅನಂಗ ಇತಿ ವಿಖ್ಯಾತಸ್ತದಾಪ್ರಭೃತಿ ರಾಘವ ।
ಸ ಚಾಂಗವಿಷಯಃ ಶ್ರೀಮಾನ್ ಯತ್ರಾಂಗಂ ಸ ಮುಮೋಚ ಹ ॥

ತಸ್ಯಾಯಮಾಶ್ರಮಃ ಪುಣ್ಯಸ್ತಸ್ಯೇಮೇ ಮುನಯಃ ಪುರಾ ।
ಶಿಷ್ಯಾ ಧರ್ಮಪರಾ ನಿತ್ಯಂ ತೇಷಾಂ ಪಾಪಂ ನ ವಿದ್ಯತೇ ॥ ೧೫

ಇಹಾದ್ಯ ರಜನೀಂ ರಾಮ ವಸೇಮ ಶುಭದರ್ಶನೇ ।
ಪುಣ್ಯಯೋಃ ಸರಿತೋರ್ಮಧ್ಯೇ ಶ್ವಸ್ತರಿಷ್ಯಾಮಹೇ ವಯಮ್ ॥

ಅಭಿಗಚ್ಛಾಮಹೇ ಸರ್ವೇ ಶುಚಯಃ ಪುಣ್ಯಮಾಶ್ರಮಮ್ ।
ಸ್ನಾತಾಶ್ಚ ಕೃತಜಪ್ಯಾಶ್ಚ ಹುತಹವ್ಯಾ ನರೋತ್ತಮ ॥ ೧೭

ಇಹ ವಾಸಃ ಪರೋ ರಾಮ ಸುಖಂ ವತ್ಸ್ಯಾಮಹೇ ನಿಶಾಮ್ ।
ತೇಷಾಂ ಸಂವದತಾಂ ತತ್ರ ತಪೋದೀರ್ಘೇಣ ಚಕ್ಷುಷಾ ॥ ೧೮

---

ಪರಮೇಶ್ವರನು ಹುಂಕಾರಮಾಡಿ ಕಾಮನನ್ನು ಕೆಂಗಣ್ಣಿನಿಂದ ನೋಡಲು, ರಾಮ, ಆ ದುರ್ಬುದ್ಧಿಯ ಅಂಗಗಳೆಲ್ಲವೂ ಸುಟ್ಟು ಬೂದಿಯಾದವು (೯-೧೨). ಆ ದೇವೇಶ್ವರನ ಕ್ರೋಧದಿಂದ ಕಾಮನಿಗೆ ಶರೀರವೇ ಇಲ್ಲವಾಯಿತು. ಅಲ್ಲಿಂದ ಕಾಮನಿಗೆ ಅನಂಗ ಎಂದು ಹೆಸರಾಯಿತು ಕಾಮನು ತನ್ನ ಅಂಗ ವನ್ನು ಇಲ್ಲಿ ತ್ಯಜಿಸಿದ್ದರಿಂದ ಈ ದೇಶಕ್ಕೆ ಅಂಗದೇಶವೆಂದು ಹೆಸರು ಬಂದಿತು (೧೩-೧೪). ಈಶ್ವರನು ತಪಸ್ಸುಮಾಡುತ್ತಿದ್ದ ಪುಣ್ಯಾಶ್ರಮವಿದು ಅವನ ಶಿಷ್ಯರಾಗಿದ್ದ ಮುನಿಗಳು ಇಲ್ಲಿ ತಪಸ್ಸನ್ನಾಚರಿಸುತ್ತ ಧರ್ಮನಿಷ್ಠರಾಗಿ ಇದ್ದಾರೆ. ಅವರಿಗೆ ಪಾಪದ ಸೋಂಕೇ ಇಲ್ಲ. ರಾಮ, ಈ ಪುಣ್ಯನದಿಗಳ ಮಧ್ಯದಲ್ಲಿ—ಈ ಆಶ್ರಮದಲ್ಲಿ— ಈ ರಾತ್ರಿ ಉಳಿದುಕೊಳ್ಳೋಣ. ನಾಳೆ ಗಂಗಾನದಿಯನ್ನು ದಾಟಿ ಮುಂದೆ ಹೋಗೋಣ (೧೫-೧೬). ನಾವು ಸ್ನಾನಮಾಡಿ ಜಪಹೋಮಗಳನ್ನು ಮುಗಿಸಿಕೊಂಡು ಶುಚೀಭೂತರಾಗಿ ಈ ಪುಣ್ಯಾಶ್ರಮಕ್ಕೆ ಹೋಗೋಣ. ಈ ರಾತ್ರಿ ಇಲ್ಲಿ ಉಳಿದುಕೊಳ್ಳುವುದು ಒಳ್ಳೆಯದು.” ಈ ರೀತಿ ಅವರು ಮಾತನಾಡಿಕೊಳ್ಳುತ್ತಿರಲು ಆಶ್ರಮದಲ್ಲಿದ್ದ

ವಿಜ್ಞಾಯ ಪರಮಪ್ರೀತಾ ಮುನಯೋ ಹರ್ಷಮಾಗಮನ್ ।
ಅರ್ಘ್ಯಂ ಪಾದ್ಯಂ ತಥಾತಿಥ್ಯಂ ನಿವೇದ್ಯ ಕುಶಿಕಾತ್ಮಜೇ ॥ ೧೯

ರಾಮಲಕ್ಷ್ಮಣಯೋಃ ಪಶ್ಚಾದಕುರ್ವನ್ನತಿಥಿಕ್ರಿಯಾಮ್ ।
ಸತ್ಕಾರಂ ಸಮನುಪ್ರಾಪ್ಯ ಕಥಾಭಿರನುರಂಜಯನ್ ॥ ೨೦

ಯಥಾರ್ಹಮಜಪನ್ ಸಂಧ್ಯಾಮೃಷಯಸ್ತೇ ಸಮಾಹಿತಾಃ ।
ತತ್ರ ವಾಸಿಭಿರಾನೀತಾ ಮುನಿಭಿಃ ಸುವ್ರತೈಃ ಸಹ ॥ ೨೧

ನ್ಯವಸನ್ ಸುಸುಖಂ ತತ್ರ ಕಾಮಾಶ್ರಮಪದೇ ತದಾ ।
ಕಥಾಭಿರಭಿರಾಮಾಭಿರಭಿರಾಮೌ ನೃಪಾತ್ಮಜೌ ॥ ೨೨

ರಮಯಾಮಾಸ ಧರ್ಮಾತ್ಮಾ ಕೌಶಿಕೋ ಮುನಿಪುಂಗವಃ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ತ್ರಯೋವಿಂಶಃ ಸರ್ಗಃ



ಋಷಿಗಳಿಗೆ ತಪೋಮಹಿಮೆಯಿಂದ ಇವರು ಬಂದ ವಿಷಯ ತಿಳಿಯಿತು (೧೭–೧೮). ಅವರು ಅರ್ಘ್ಯಪಾದ್ಯಾದಿಗಳನ್ನು ತಂದು ವಿಶ್ವಾಮಿತ್ರರಿಗೆ ಅತಿಥಿ ಸತ್ಕಾರವನ್ನು ಮಾಡಿದರು. ಆಮೇಲೆ ರಾಮಲಕ್ಷ್ಮಣರನ್ನು ಸತ್ಕರಿಸಿ ಎಲ್ಲರೂ ಸಂತೋಷದಿಂದ ಮಾತುಕಥೆಯಾಡಿದರು. ಸರ್ವರೂ ಸಂಧ್ಯಾಜಪಾದಿಗಳನ್ನು (ನದೀತೀರದಲ್ಲಿ) ಮುಗಿಸಿದರು. ಅನಂತರ ಆಶ್ರಮವಾಸಿಗಳು ವಿಶ್ವಾಮಿತ್ರ ರಾಮ ಲಕ್ಷ್ಮಣರನ್ನು ತಮ್ಮ ಆಶ್ರಮಕ್ಕೆ ಕರೆದುಕೊಂಡು ಹೋದರು. ವಿಶ್ವಾಮಿತ್ರರು ಹೇಳುತ್ತಿದ್ದ ಮನೋಹರವಾದ ಕಥೆಗಳನ್ನು ಕೇಳುತ್ತ ಆ ರಾಜಕುಮಾರರು ಕಾಮಾಶ್ರಮದಲ್ಲಿ ಸುಖವಾಗಿದ್ದರು (೧೯–೨೨).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಇಪ್ಪತ್ತು ಮೂರನೆಯ ಸರ್ಗ



## ಚತುರ್ವಿಂಶಃ ಸರ್ಗಃ

### ತಾಟಕಾವನಪ್ರವೇಶಃ

ತತಃ ಪ್ರಭಾತೇ ವಿಮಲೇ ಕೃತಾಹ್ನಿಕಮರಿಂದಮೌ ।
ವಿಶ್ವಾಮಿತ್ರಂ ಪುರಸ್ಕೃತ್ಯ ನದ್ಯಾಸ್ತೀರಮುಪಾಗತೌ ॥ ೧

ತೇ ಚ ಸರ್ವೇ ಮಹಾತ್ಮಾನೋ ಮುನಯಃ ಸಂಶಿತವ್ರತಾಃ ।
ಉಪಸ್ಥಾಪ್ಯ ಶುಭಾಂ ನಾವಂ ವಿಶ್ವಾಮಿತ್ರಮಥಾಬ್ರುವನ್ ॥ ೨

ಆರೋಹತು ಭವಾನ್ನಾವಂ ರಾಜಪುತ್ರಪುರಸ್ಕೃತಃ ।
ಅರಿಷ್ಟಂ ಗಚ್ಛ ಪಂಥಾನಂ ಮಾ ಭೂತ್ ಕಾಲಸ್ಯ ಪರ್ಯಯಃ ॥ ೩

ವಿಶ್ವಾಮಿತ್ರಸ್ತಥೇತ್ಯುಕ್ತ್ವಾ ತಾನೃಷೀನಭಿಪೂಜ್ಯ ಚ ।
ತತಾರ ಸಹಿತಸ್ತಾಭ್ಯಾಂ ಸರಿತಂ ಸಾಗರಂಗಮಾಮ್ ॥ ೪

ತತಃ ಶುಶ್ರಾವ ತಂ ಶಬ್ದಂ ತೋಯಸಂರಂಭವರ್ಧಿತಮ್ ।
ಮಧ್ಯಮಾಗಮ್ಯ ತೋಯಸ್ಯ ಸಹ ರಾಮಃ ಕನೀಯಸಾ ॥ ೫

## ಸರ್ಗ ೨೪

### ಸರಯೂವರ್ಣನೆ. ತಾಟಕಾವೃತ್ತಾಂತ

ಮಾರನೆಯ ದಿನ ಪ್ರಾತಃಕಾಲ ಆಹ್ನಿಕವನ್ನು ತೀರಿಸಿ ವಿಶ್ವಾಮಿತ್ರರು ಹೊರಟರು. ಅವರೊಡನೆ ರಾಮಲಕ್ಷ್ಮಣರು ಗಂಗಾತೀರಕ್ಕೆ ಬಂದರು. ಆಶ್ರಮದಲ್ಲಿದ್ದ ಮಹಾತ್ಮರಾದ ಋಷಿಗಳೆಲ್ಲರೂ ಅವರನ್ನು ಕಳಿಸುವುದಕ್ಕಾಗಿ ಬಂದು, ಒಂದು ಉತ್ತಮವಾದ ದೋಣಿಯನ್ನು ತರಿಸಿ "ವಿಶ್ವಾಮಿತ್ರಮುನಿಗಳೆ, ರಾಜಪುತ್ರರೊಡನೆ ದೋಣಿಯನ್ನು ಹತ್ತಿರಿ ನಿಮ್ಮ ದಾರಿ ಸುಗಮವಾಗಿ ಸಾಗಲಿ" ಎಂದರು (೧-೩). ವಿಶ್ವಾಮಿತ್ರರು ಹಾಗೆಯೇ ಆಗಲೆಂದು ಆ ಋಷಿಗಳಿಗೆ ಅಭಿವಂದಿಸಿ ರಾಜಪುತ್ರರೊಡನೆ ದೋಣಿಯನ್ನೇರಿ ನದಿಯನ್ನು ದಾಟಲಾರಂಭಿಸಿದರು. ನದಿಯ ಮಧ್ಯಕ್ಕೆ ಬಂದಾಗ ಅಲೆಗಳ ಹೊಡೆತದಿಂದ ಮೊರೆಯುತ್ತ ಭೋರ್ಗರೆಯುವ ಮಹಾಧ್ವನಿ ಕೇಳಿಸಿತು (೪-೫).

ಅಥ ರಾಮಃ ಸರಿನ್ಮಧ್ಯೇ ಪಪ್ರಚ್ಛ ಮುನಿಪುಂಗವಮ್ ।
ವಾರಿಣೋ ಭಿದ್ಯಮಾನಸ್ಯ ಕಿಮಯಂ ತುಮುಲೋ ಧ್ವನಿಃ ॥ ೬
ರಾಘವಸ್ಯ ವಚಃ ಶ್ರುತ್ವಾ ಕೌತೂಹಲಸಮನ್ವಿತಮ್ ।
ಕಥಯಾಮಾಸ ಧರ್ಮಾತ್ಮಾ ತಸ್ಯ ಶಬ್ದಸ್ಯ ನಿಶ್ಚಯಮ್ ॥ ೭
ಕೈಲಾಸಪರ್ವತೇ ರಾಮ ಮನಸಾ ನಿರ್ಮಿತಂ ಸರಃ ।
ಬ್ರಹ್ಮಣಾ ನರಶಾರ್ದೂಲ ತೇನೇದಂ ಮಾನಸಂ ಸರಃ ॥ ೮
ತಸ್ಮಾತ್ ಸುಸ್ರಾವ ಸರಸಃ ಸಾಯೋಧ್ಯಾಮುಪಗೂಹತೇ ।
ಸರಃಪ್ರವೃತ್ತಾ ಸರಯೂಃ ಪುಣ್ಯಾ ಬ್ರಹ್ಮಸರಶ್ಚ್ಯುತಾ ॥ ೯
ತಸ್ಯಾಯಮತುಲಃ ಶಬ್ದೋ ಜಾಹ್ನವೀಮಭಿವರ್ತತೇ ।
ವಾರಿಸಂಕ್ಷೋಭಜೋ ರಾಮ ಪ್ರಣಾಮಂ ನಿಯತಃ ಕುರು ॥ ೧೦
ತಾಭ್ಯಾಂ ತು ತಾವುಭೌ ಕೃತ್ವಾ ಪ್ರಣಾಮಮತಿಧಾರ್ಮಿಕೌ ।
ತೀರಂ ದಕ್ಷಿಣಮಾಸಾದ್ಯ ಜಗ್ಮತುರ್ಲಘುವಿಕ್ರಮೌ ॥ ೧೧
ಸ ವನಂ ಘೋರಸಂಕಾಶಂ ದೃಷ್ಟ್ವಾ ನೃಪವರಾತ್ಮಜಃ ।
ಅವಿಪ್ರಹತಮೈಕ್ಷ್ವಾಕಃ ಪಪ್ರಚ್ಛ ಮುನಿಪುಂಗವಮ್ ॥ ೧೨

---

ಇದು ಏನಿರಬಹುದೆಂದು ರಾಮಲಕ್ಷ್ಮಣರಿಗೆ ಕುತೂಹಲ. ಶ್ರೀರಾಮನು ಮುನಿಗಳನ್ನು ಕುರಿತು "ಹೀಗೆ ನೀರು ಒಂದಕ್ಕೊಂದು ಸಂಘಟ್ಟಿಸಿ ಕೋಲಾಹಲಧ್ವನಿಯಾಗುವುದಲ್ಲ, ಇದೇನು?" ಎಂದು ಕೇಳಿದನು. ಆಗ ವಿಶ್ವಾಮಿತ್ರರು "ಕೈಲಾಸಪರ್ವತದಲ್ಲಿ ಒಂದು ಸರೋವರವಿದೆ. ಬ್ರಹ್ಮನ ಮಾನಸಸೃಷ್ಟಿಯಾದ್ದರಿಂದ ಅದಕ್ಕೆ ಮಾನಸಸರೋವರವೆಂದು ಹೆಸರು (೭-೮) ಅದರಿಂದಲೇ ಸರಯೂನದಿಯು ಹುಟ್ಟಿ ನಿಮ್ಮ ಅಯೋಧ್ಯೆಯ ಬಳಿ ಹರಿಯುತ್ತಿದೆ. ಬ್ರಹ್ಮಸರಸ್ಸಿನಿಂದ ಹುಟ್ಟಿದ ಆ ನದಿ ಪಾವನವಾದದ್ದು. ಅದು ಇಲ್ಲಿ ಗಂಗಾನದಿಯನ್ನು ಬಂದು ಕೂಡುತ್ತದೆ. ಆ ಸಂಘರ್ಷಣೆಯಿಂದ ಈ ಕೋಲಾಹಲಧ್ವನಿ ಹುಟ್ಟುತ್ತಿದೆ. ರಾಮ, ಈ ನದಿಗಳಿಗೆ ಪ್ರಣಾಮವನ್ನು ಅರ್ಪಿಸು" ಎಂದರು (೯-೧೦). ಅತಿಧಾರ್ಮಿಕರಾದ ರಾಮಲಕ್ಷ್ಮಣರು ಅಂತೆಯೇ ಭಕ್ತಿಯಿಂದ ಪ್ರಣಾಮಮಾಡಿದರು. ಆಮೇಲೆ ಗಂಗೆಯ ದಕ್ಷಿಣ ತೀರಕ್ಕೆ ಸೇರಿ ಬೇಗಬೇಗ ಕಾಲು ಹಾಕುತ್ತ ಮುಂದೆ ಹೊರಟರು. ಎದುರಿಗೆ

ಅಹೋ ವನಮಿದಂ ದುರ್ಗಂ ಝಿಲ್ಲಿಕಾಗಣನಾದಿತಮ್ ।
ಭೈರವೈಃ ಶ್ವಾಪದೈಃ ಕೀರ್ಣಂ ಶಕುಂತೈರ್ದಾರುಣಾರವೈಃ ॥ ೧೩
ನಾನಾಪ್ರಕಾರೈಃ ಶಕುನೈರ್ವಾಶ್ಯದ್ಭಿರ್ಭೈರವಸ್ವನೈಃ ।
ಸಿಂಹವ್ಯಾಘ್ರವರಾಹೈಶ್ಚ ವಾರಣೈಶ್ಚೋಪಶೋಭಿತಮ್ ॥ ೧೪
ಧವಾಶ್ವಕರ್ಣಖದಿರೈರ್ಬಿಲ್ವತಿಂದುಕಪಾಟಲೈಃ ।
ಸಂಕೀರ್ಣಂ ಬದರೀಭಿಶ್ಚ ಕಿಂನ್ವೇತದ್ದಾರುಣಂ ವನಮ್ ॥ ೧೫
ತಮುವಾಚ ಮಹಾತೇಜಾ ವಿಶ್ವಾಮಿತ್ರೋ ಮಹಾಮುನಿಃ ।
ಶ್ರೂಯತಾಂ ವತ್ಸ ಕಾಕುತ್ಸ್ಥ ಯಸ್ಯೈತದ್ದಾರುಣಂ ವನಮ್ ॥ ೧೬
ಏತೌ ಜನಪದೌ ಸ್ಫೀತೌ ಪೂರ್ವಮಾಸ್ತಾಂ ನರೋತ್ತಮ ।
ಮಲದಾಶ್ಚ ಕರೂಷಾಶ್ಚ ದೇವನಿರ್ಮಾಣನಿರ್ಮಿತೌ ॥ ೧೭
ಪುರಾ ವೃತ್ರವಧೇ ರಾಮ ಮಲೇನ ಸಮಭಿಪ್ಲುತಮ್ ।
ಕ್ಷುಧಾ ಚೈವ ಸಹಸ್ರಾಕ್ಷಂ ಬ್ರಹ್ಮಹತ್ಯಾ ಸಮಾವಿಶತ್ ॥ ೧೮
ತಮಿಂದ್ರಂ ಸ್ನಾಪಯನ್ ದೇವಾ ಋಷಯಶ್ಚ ತಪೋಧನಾಃ ।
ಕಲಶೈಃ ಸ್ನಾಪಯಾಮಾಸುರ್ಮಲಂ ಚಾಸ್ಯ ಪ್ರಮೋಚಯನ್ ॥

---

ಘೋರವಾದ ಅರಣ್ಯ ಸಿಕ್ಕಿತು (೧೧-೧೨). ಜನರ ಸುಳಿದಾಟವೇ ಇಲ್ಲದುದನ್ನು ಕಂಡು ಶ್ರೀರಾಮನು ವಿಶ್ವಾಮಿತ್ರರನ್ನು ಕುರಿತು "ಅಪ್ಪಾ, ಈ ಅಡವಿಯಲ್ಲಿ ಹೆಜ್ಜೆಯನ್ನಿಡುವುದೇ ಕಷ್ಟವಾಗಿದೆ! ಜೀರುಂಡೆಗಳು ಝೀರೆಂದು ಕೂಗುತ್ತಿವೆ ಭಯಂಕರ ಕಾಡುಮೃಗಗಳು ತುಂಬಿಕೊಂಡಿವೆ ಪಕ್ಷಿಗಳು ಕರ್ಕಶಧ್ವನಿ ಮಾಡುತ್ತಿವೆ. ಸಿಂಹ, ಹುಲಿ, ಕಾಡುಹಂದಿ, ಆನೆಗಳು ಸುಳಿದಾಡುತ್ತಿವೆ. ಕಗ್ಗಲಿ, ಮತ್ತಿ, ಬಿಲ್ವ, ತಿಂದುಕ ಮುಂತಾದ ಮರಗಳಿಂದ ತುಂಬಿದ ಈ ಅರಣ್ಯ ಯಾವುದು?" ಎಂದು ಕೇಳಿದನು (೧೩-೧೫). ಆಗ ಮಹರ್ಷಿಗಳು "ವತ್ಸ-ರಾಮ, ಹಿಂದೆ ಈ ಸ್ಥಳದಲ್ಲಿ ಮಲದ, ಕರೂಷ ಎಂಬ ಎರಡು ರಾಜ್ಯಗಳಿದ್ದವು. ಅವು ದೇವಲೋಕದಂತೆ ಸಮೃದ್ಧವಾಗಿದ್ದವು. ಇಂದ್ರನು ವೃತ್ರನನ್ನು ವಧಿಸಲಾಗಿ ಅವನಿಗೆ ಬ್ರಹ್ಮಹತ್ಯಾದೋಷವು ತಗುಲಿತು. ಅವನು ಅಶುಚಿಯಾದನು ಹಸಿವು ಬಾಧಿಸಲಾರಂಭಿಸಿತು (೧೬-೧೮). ಆಗ ದೇವತೆಗಳೂ ಋಷಿಗಳೂ ಸೇರಿ (ಮಂತ್ರಪೂತವಾದ) ಕಲಶೋದಕದಿಂದ

ಇಹ ಭೂಮ್ಯಾಂ ಮಲಂ ದತ್ವಾ ದತ್ವಾ ಕಾರೂಷಮೇವ ಚ ।
ಶರೀರಜಂ ಮಹೇಂದ್ರಸ್ಯ ತತೋ ಹರ್ಷಂ ಪ್ರಪೇದಿರೇ ॥ ೨೦
ನಿರ್ಮಲೋ ನಿಷ್ಕರೂಷಶ್ಚ ಶುಚಿರಿಂದ್ರೋ ಯದಾಭವತ್ ।
ದದೌ ದೇಶಸ್ಯ ಸುಪ್ರೀತೋ ವರಂ ಪ್ರಭುರನುತ್ತಮಮ್ ॥ ೨೧
ಇಮೌ ಜನಪದೌ ಸ್ಫೀತೌ ಖ್ಯಾತಿಂ ಲೋಕೇ ಗಮಿಷ್ಯತಃ ।
ಮಲದಾಶ್ಚ ಕರೂಷಾಶ್ಚ ಮಮಾಂಗಮಲಧಾರಿಣೌ ॥ ೨೨
ಸಾಧು ಸಾಧ್ವಿತಿ ತಂ ದೇವಾಃ ಪಾಕಶಾಸನಮಬ್ರುವನ್ ।
ದೇಶಸ್ಯ ಪೂಜಾಂ ತಾಂ ದೃಷ್ಟ್ವಾ ಕೃತಾಂ ಶಕ್ರೇಣ ಧೀಮತಾ ॥
ಏತೌ ಜನಪದೌ ಸ್ಫೀತೌ ದೀರ್ಘಕಾಲಮರಿಂದಮ ।
ಮಲದಾಶ್ಚ ಕರೂಷಾಶ್ಚ ಮುದಿತೌ ಧನಧಾನ್ಯತಃ ॥ ೨೪
ಕಸ್ಯಚಿತ್ತ್ವಥ ಕಾಲಸ್ಯ ಯಕ್ಷೀ ವೈ ಕಾಮರೂಪಿಣೀ ।
ಬಲಂ ನಾಗಸಹಸ್ರಸ್ಯ ಧಾರಯಂತೀ ತದಾ ಹ್ಯಭೂತ್ ॥ ೨೫
ತಾಟಕಾ ನಾಮ ಭದ್ರಂ ತೇ ಭಾರ್ಯಾ ಸುಂದಸ್ಯ ಧೀಮತಃ ।
ಮಾರೀಚೋ ರಾಕ್ಷಸಃ ಪುತ್ರೋ ಯಸ್ಯಾಃ ಶಕ್ರಪರಾಕ್ರಮಃ ॥ ೨೬

---

ಇಂದ್ರನಿಗೆ ಇಲ್ಲಿ ಅಭಿಷೇಕಮಾಡಲು, ಅವನ ಮಲವೂ ಕರೂಷವೂ ದೇಹದಿಂದ ತೊಲಗಿ ಇಂದ್ರನು ಪರಿಶುದ್ಧನಾದನು ಅವನು ಸುಪ್ರೀತನಾಗಿ 'ಈ ಸ್ಥಳದಲ್ಲಿ ನನ್ನ ಮಲವೂ ಕರೂಷವೂ* ಕಳೆದುಹೋದ್ದರಿಂದ ಇದು ಮಲದ, ಕರೂಷ ಎಂಬ ಎರಡು ರಾಜ್ಯಗಳಾಗಿ ಬೆಳೆದು ಸಂಪತ್ಸಮೃದ್ಧಿಯಿಂದ ಪ್ರಖ್ಯಾತವಾಗಲಿ' ಎಂದು ವರವನ್ನು ಕೊಟ್ಟನು (೧೯-೨೨). ದೇವತೆಗಳು 'ಭಲಾ! ಒಳ್ಳೆಯದಾಯಿತು' ಎಂದು ಶ್ಲಾಘಿಸಿದರು ರಾಮ, ಈ ರಾಜ್ಯಗಳು ಅನಂತರ ಧನಧಾನ್ಯಭರಿತಗಳಾಗಿ ಬೆಳೆದವು. ಕೆಲವು ಕಾಲ ಕಳೆದ ಮೇಲೆ ಕಾಮರೂಪಿಣಿಯಾದ ಒಬ್ಬ ಯಕ್ಷಿಯು ಇಲ್ಲಿ ಸೇರಿಕೊಂಡು ಈ ರಾಜ್ಯಗಳನ್ನು ಕೊಳ್ಳೆಹೊಡೆಯಲಾರಂಭಿಸಿದಳು. ಅವಳಿಗೆ ಹತ್ತು ಸಾವಿರ ಆನೆಗಳ ಬಲವಿತ್ತು (೨೩-೨೫). ಅವಳ ಹೆಸರು ತಾಟಕೆ. ರಾಮ, ನಿನಗೆ ಒಳ್ಳೆಯದಾಗಲಿ! ಅವಳು ಸುಂದ ಎಂಬುವವನ ಹೆಂಡತಿ ಮಾರೀಚ ಎಂಬ

---

* ಮಲ = ಅಶುಚಿತ್ವ, ಕರೂಷ = ಹಸಿವು.

ವೃತ್ತಬಾಹುರ್ಮಹಾಶೀರ್ಷೋ ವಿಪುಲಾಸ್ಯತನುರ್ಮಹಾನ್ ।
ರಾಕ್ಷಸೋ ಭೈರವಾಕಾರೋ ನಿತ್ಯಂ ತ್ರಾಸಯತೇ ಪ್ರಜಾಃ ॥ ೨೭
ಇಮೌ ಜನಪದೌ ನಿತ್ಯಂ ವಿನಾಶಯತಿ ರಾಘವ ।
ಮಲದಾಂಶ್ಚ ಕರೂಷಾಂಶ್ಚ ತಾಟಕಾ ದುಷ್ಟಚಾರಿಣೀ ॥ ೨೮
ಸೇಯಂ ಪಂಥಾನಮಾವೃತ್ಯ ವಸತ್ಯಧ್ಯರ್ಧಯೋಜನೇ ।
ಇತ ಏವ ಚ ಗಂತವ್ಯಂ ತಾಟಕಾಯಾ ವನಂ ಯತಃ ॥ ೨೯
ಸ್ವಬಾಹುಬಲಮಾಶ್ರಿತ್ಯ ಜಹೀಮಾಂ ದುಷ್ಟಚಾರಿಣೀಮ್ ।
ಮನ್ನಿಯೋಗಾದಿಮಂ ದೇಶಂ ಕುರು ನಿಷ್ಕಂಟಕಂ ಪುನಃ ॥ ೩೦
ನಹಿ ಕಶ್ಚಿದಿಮಂ ದೇಶಂ ಶಕ್ನೋತ್ಯಾಗಂತುಮೀದೃಶಮ್ ।
ಯಕ್ಷಿಣ್ಯಾ ಘೋರಯಾ ರಾಮ ಉತ್ಸಾದಿತಮಸಹ್ಯಯಾ ॥ ೩೧
ಏತತ್ತೇ ಸರ್ವಮಾಖ್ಯಾತಂ ಯಥೈತದ್ದಾರುಣಂ ವನಮ್ ।
ಯಕ್ಷ್ಯಾ ಚೋತ್ಸಾದಿತಂ ಸರ್ವಮದ್ಯಾಪಿ ನ ನಿವರ್ತತೇ ॥ ೩೨

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಚತುರ್ವಿಂಶಃ ಸರ್ಗಃ

---

ರಾಕ್ಷಸನು ಅವಳ ಮಗ; ಇಂದ್ರನಂತೆ ಪರಾಕ್ರಮಿ ಅವನ ತೋಳುಗಳು ದುಂಡಾಗಿ ತುಂಬಿಕೊಂಡಿವೆ. ದೊಡ್ಡ ತಲೆ, ಭಾರಿ ಶರೀರ ಭೈರವಾಕಾರದ ಆ ರಾಕ್ಷಸನು (ತಾಯಿಯೊಡನೆ ಸೇರಿಕೊಂಡು) ಜನರನ್ನು ಸದಾ ಹೆದರಿಸುತ್ತಿದ್ದಾನೆ (೨೬-೨೭) ಅವನೂ ತಾಟಕೆಯೂ ಸೇರಿ ಈ ಎರಡು ರಾಜ್ಯಗಳನ್ನೂ ನಾಶಮಾಡಿಬಿಟ್ಟಿದ್ದಾರೆ ಆ ದುಷ್ಟಳು ಇಲ್ಲಿಗೆ ಒಂದೂವರೆ ಯೋಜನ ದೂರದಲ್ಲಿದ್ದು ದಾರಿಯನ್ನು ಅಡ್ಡಗಟ್ಟುತ್ತಾಳೆ ಆದ್ದರಿಂದ ನಾವು ತಾಟಕೆ ಇರುವ ಅರಣ್ಯಕ್ಕೆ ಹೋಗಲೇಬೇಕು. ನೀನು ನಿನ್ನ ಬಾಹುಬಲದಿಂದ ಈ ದುಷ್ಟಳನ್ನು ಸಂಹಾರಮಾಡು. ನನ್ನ ಆಜ್ಞೆಯಂತೆ ಅವಳನ್ನು ಸಂಹರಿಸಿ ಈ ದೇಶಕ್ಕೆ ಬಂದ ಪೀಡೆಯನ್ನು ತೊಲಗಿಸು (೨೮-೩೦) ಈಗಿರುವ ಸ್ಥಿತಿಯಲ್ಲಿ ಈ ಸ್ಥಳಕ್ಕೆ ಯಾರಿಗೂ ಬರಲು ಸಾಧ್ಯವಿಲ್ಲ. ಆ ಘೋರ ಯಕ್ಷಿಯು ಈ ಪ್ರದೇಶವನ್ನು ವಿಧ್ವಂಸಮಾಡಿಬಿಟ್ಟಿದ್ದಾಳೆ. ಈ ಘೋರಾರಣ್ಯವು ಯಾವುದು ಏನು ಎಂಬುದೆಲ್ಲವನ್ನೂ ನಿನಗೆ ತಿಳಿಸಿದ್ದೇನೆ. ಆ ಯಕ್ಷಿಯು ವಿಧ್ವಂಸಕೃತ್ಯವನ್ನು ಇನ್ನೂ ಬಿಟ್ಟಿಲ್ಲ" ಎಂದರು (೩೧-೩೨)

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಇಪ್ಪತ್ತುನಾಲ್ಕನೆಯ ಸರ್ಗ

## ಪಂಚವಿಂಶಃ ಸರ್ಗಃ

### ತಾಟಕಾವೃತ್ತಾಂತಃ

ಅಥ ತಸ್ಯಾಪ್ರಮೇಯಸ್ಯ ಮುನೇರ್ವಚನಮುತ್ತಮಮ್ ।
ಶ್ರುತ್ವಾ ಪುರುಷಶಾರ್ದೂಲಃ ಪ್ರತ್ಯುವಾಚ ಶುಭಾಂ ಗಿರಮ್ ॥ ೧

ಅಲ್ಪವೀರ್ಯಾ ಯದಾ ಯಕ್ಷಾಃ ಶ್ರೂಯಂತೇ ಮುನಿಪುಂಗವ ।
ಕಥಂ ನಾಗಸಹಸ್ರಸ್ಯ ಧಾರಯತ್ಯಬಲಾ ಬಲಮ್ ॥ ೨

ತಸ್ಯ ತದ್ವಚನಂ ಶ್ರುತ್ವಾ ರಾಘವಸ್ಯ ಮಹಾತ್ಮನಃ ।
ಹರ್ಷಯನ್ ಶ್ಲಕ್ಷ್ಣಯಾ ವಾಚಾ ಸಲಕ್ಷ್ಮಣಮರಿಂದಮಮ್ ॥ ೩

ವಿಶ್ವಾಮಿತ್ರೋಽಬ್ರವೀದ್ವಾಕ್ಯಂ ಶೃಣು ಯೇನ ಬಲೋತ್ಕಟಾ ।
ವರದಾನಕೃತಂ ವೀರ್ಯಂ ಧಾರಯತ್ಯಬಲಾ ಬಲಮ್ ॥ ೪

ಪೂರ್ವಮಾಸೀನ್ಮಹಾಯಕ್ಷಃ ಸುಕೇತುರ್ನಾಮ ವೀರ್ಯವಾನ್ ।
ಅನಪತ್ಯಃ ಶುಭಾಚಾರಃ ಸ ಚ ತೇಪೇ ಮಹತ್ತಪಃ ॥ ೫

## ಸರ್ಗ ೨೫

### ತಾಟಕಾ ವೃತ್ತಾಂತ.

ವಿಶ್ವಾಮಿತ್ರಮುನಿಗಳ ಮಾತನ್ನು ಕೇಳಿ ಪುರುಷೋತ್ತಮನಾದ ಶ್ರೀರಾಮನು "ಮುನಿಗಳೆ, ಯಕ್ಷರು ಅಲ್ಪಬಲರೆಂದು ಕೇಳಿದ್ದೇನೆ. ಹೀಗಿರಲು ಯಕ್ಷಜಾತಿಯ ಒಬ್ಬ ಹೆಂಗಸಿಗೆ ಹತ್ತುಸಾವಿರ ಆನೆಗಳ ಬಲವಿರುವುದು ಹೇಗೆ?" ಎಂದನು. ವಿಶ್ವಾಮಿತ್ರರು ರಾಮಲಕ್ಷ್ಮಣರಿಗೆ ಸಂತೋಷವಾಗುವಂತೆ ಮೃದುವಾದ ಮಾತಿನಿಂದ "ರಾಮ, ಆ ವಿಷಯವನ್ನು ಹೇಳುತ್ತೇನೆ, ಕೇಳು. ವರಬಲದಿಂದ ಅಬಲೆಗೆ ಅಂಥ ಬಲ ಒದಗಿದೆ! (೧-೪). ಹಿಂದೆ ಸುಕೇತುವೆಂಬ ವೀರನಾದ ಮಹಾಯಕ್ಷನೊಬ್ಬನಿದ್ದನು. ಅವನ ನಡತೆ ಚೆನ್ನಾಗಿತ್ತು. ಅವನಿಗೆ ಮಕ್ಕಳಿರಲಿಲ್ಲ. ಆದ್ದರಿಂದ ಬ್ರಹ್ಮನನ್ನು ಕುರಿತು

ಪಿತಾಮಹಸ್ತು ಸುಪ್ರೀತಸ್ತಸ್ಯ ಯಕ್ಷಪತೇಸ್ತದಾ ।
ಕನ್ಯಾರತ್ನಂ ದದೌ ರಾಮ ತಾಟಕಾಂ ನಾಮ ನಾಮತಃ ॥ ೬

ದದೌ ನಾಗಸಹಸ್ರಸ್ಯ ಬಲಂ ಚಾಸ್ಯಾಃ ಪಿತಾಮಹಃ ।
ನ ತ್ವೇವ ಪುತ್ರಂ ಯಕ್ಷಾಯ ದದೌ ಬ್ರಹ್ಮಾ ಮಹಾಯಶಾಃ ॥ ೭

ತಾಂ ತು ಜಾತಾಂ ವಿವರ್ಧಂತೀಂ ರೂಪಯೌವನಶಾಲಿನೀಮ್ ।
ಜಂಭಪುತ್ರಾಯ ಸುಂದಾಯ ದದೌ ಭಾರ್ಯಾಂ ಯಶಸ್ವಿನೀಮ್ ॥

ಕಸ್ಯಚಿತ್ತ್ವಥ ಕಾಲಸ್ಯ ಯಕ್ಷೀ ಪುತ್ರಂ ವ್ಯಜಾಯತ ।
ಮಾರೀಚಂ ನಾಮ ದುರ್ಧರ್ಷಂ ಯಃ ಶಾಪಾದ್ರಾಕ್ಷಸೋಽಭವತ್ ॥

ಸುಂದೇ ತು ನಿಹತೇ ರಾಮ ಸಾಗಸ್ತ್ಯಮೃಷಿಸತ್ತಮಮ್ ।
ತಾಟಕಾ ಸಹ ಪುತ್ರೇಣ ಪ್ರಧರ್ಷಯಿತುಮಿಚ್ಛತಿ ॥ ೧೦

ಭಕ್ಷಾರ್ಥಂ ಜಾತಸಂರಂಭಾ ಗರ್ಜಂತೀ ಸಾಭ್ಯಧಾವತ ।
ಆಪತಂತೀಂ ತು ತಾಂ ದೃಷ್ಟ್ವಾ ಅಗಸ್ತ್ಯೋ ಭಗವಾನೃಷಿಃ ॥ ೧೧

---

ಕಠೋರವಾದ ತಪಸ್ಸನ್ನಾಚರಿಸಲು ಬ್ರಹ್ಮನು ಸುಪ್ರೀತನಾಗಿ ತಾಟಕಾ ಎಂಬ ಹೆಸರಿನ ಕನ್ಯಾರತ್ನವನ್ನು ಅನುಗ್ರಹಿಸಿದನು (೫-೬) ಬ್ರಹ್ಮನು ಆ ತಾಟಕೆಗೆ ಹತ್ತು ಸಾವಿರ ಆನೆಗಳ ಬಲವನ್ನು ದಯಪಾಲಿಸಿದನೇ ಹೊರತು ಸುಕೇತುವಿಗೆ ಗಂಡುಮಗನನ್ನು ಕರುಣಿಸಲಿಲ್ಲ. ಅನಂತರ ತಾಟಕೆಯು ರೂಪಯೌವನಸಂಪನ್ನೆಯಾಗಿ ಬೆಳೆಯುತ್ತಿರಲು, ಸುಕೇತುವು ಅವಳನ್ನು ಜಂಭ ಪುತ್ರನಾದ ಸುಂದನಿಗೆ ಮದುವೆಮಾಡಿಕೊಟ್ಟನು (೭-೮) ಕೆಲವು ಕಾಲದ ಮೇಲೆ ಆ ಯಕ್ಷಿಗೆ ಮಾರೀಚನೆಂಬ ಮಗನು ಹುಟ್ಟಿದನು. ಅವನು ಮಹಾ ಪರಾಕ್ರಮಿ. ಅವನು ಶಾಪವಶದಿಂದ ರಕ್ಷಸನಾಗಿಬಿಟ್ಟನು. ಸುಂದನು (ಅಗಸ್ತ್ಯರ ಶಾಪದಿಂದ) ಮೃತನಾದನು. ರಾಮ, ಆ ತಾಟಕೆಯು ಕ್ರೋಧ ದಿಂದ ಅಗಸ್ತ್ಯರನ್ನು ನುಂಗಿಬಿಡುತ್ತೇನೆಂದು ಗರ್ಜಿಸುತ್ತ ತನ್ನ ಪುತ್ರನೊಡ ಗೂಡಿ ಬಂದು ನುಗ್ಗಿದಳು (೯-೧೦). ಆಗ ಭಗವಾನ್ ಅಗಸ್ತ್ಯಮುನಿಗಳು ರೋಷದಿಂದ 'ನೀನು ರಾಕ್ಷಸನಾಗು' ಎಂದು ಮಾರೀಚನನ್ನು ಶಪಿಸಿ

ರಾಕ್ಷಸತ್ವಂ ಭಜಸ್ವೇತಿ ಮಾರೀಚಂ ವ್ಯಾಜಹಾರ ಸಃ ।
ಅಗಸ್ತ್ಯಃ ಪರಮಕ್ರುದ್ಧಸ್ತಾಟಕಾಮಪಿ ಶಪ್ತವಾನ್ ॥ ೧೨

ಪುರುಷಾದೀ ಮಹಾಯಕ್ಷೀ ವಿರೂಪಾ ವಿಕೃತಾನನಾ ।
ಇದಂ ರೂಪಂ ವಿಹಾಯಾಶು ದಾರುಣಂ ರೂಪಮಸ್ತು ತೇ ॥ ೧೩

ಸೈಷಾ ಶಾಪಕೃತಾಮರ್ಷಾ ತಾಟಕಾ ಕ್ರೋಧಮೂರ್ಛಿತಾ ।
ದೇಶಮುತ್ಸಾದಯತ್ಯೇನಮಗಸ್ತ್ಯಾಚರಿತಂ ಶುಭಮ್ ॥ ೧೪

ಏನಾಂ ರಾಘವ ದುರ್ವೃತ್ತಾಂ ಯಕ್ಷೀಂ ಪರಮದಾರುಣಾಮ್ ।
ಗೋಬ್ರಾಹ್ಮಣಹಿತಾರ್ಥಾಯ ಜಹಿ ದುಷ್ಟಪರಾಕ್ರಮಾಮ್ ॥ ೧೫

ನ ಹ್ಯೇನಾಂ ಶಾಪಸಂಸ್ಪೃಷ್ಟಾಂ ಕಶ್ಚಿದುತ್ಸಹತೇ ಪುಮಾನ್ ।
ನಿಹಂತುಂ ತ್ರಿಷು ಲೋಕೇಷು ತ್ವಾಮೃತೇ ರಘುನಂದನ ॥ ೧೬

ನ ಹಿ ತೇ ಸ್ತ್ರೀವಧಕೃತೇ ಘೃಣಾ ಕಾರ್ಯಾ ನರೋತ್ತಮ ।
ಚಾತುರ್ವರ್ಣ್ಯಹಿತಾರ್ಥಾಯ ಕರ್ತವ್ಯಂ ರಾಜಸೂನುನಾ ॥ ೧೭

---

ತಾಟಕೆಯನ್ನು ಕುರಿತು "ಎಲೌ, ನಿನಗೆ ಈ ರೂಪ ತೊಲಗಿ ಭೀಕರವಾದ ರೂಪ ಬರಲಿ ನೀನು ನರಭಕ್ಷಕಳಾಗು ನಿನಗೆ ಕರಾಳರೂಪ ಬಂದು ನಿನ್ನ ಮುಖವು ವಿಕಾರವಾಗಲಿ" ಎಂದು ಅವಳನ್ನು ಶಪಿಸಿದರು (೧೧-೧೩). ಈ ರೀತಿ ಶಾಪ ಬಂದದ್ದರಿಂದ ತಾಟಕೆಯು ಸೈರಣೆಯಿಲ್ಲದೆ ಕೋಪಾಟೋಪ ದಿಂದ ಹಿಂದೆ ಅಗಸ್ತ್ಯರು ಇದ್ದ ಸುಂದರವಾದ ಈ ದೇಶವನ್ನು ನಾಶಮಾಡು ತ್ತಿದ್ದಾಳೆ. ರಾಘವ, ದುಷ್ಟಳಾದ ಈ ಘೋರಯಕ್ಷಿಯನ್ನು ನೀನು ಸಂಹರಿಸು. ಇವಳು ತನ್ನ ಪರಾಕ್ರಮವನ್ನು ದುರ್ಮಾರ್ಗದಲ್ಲಿ ಉಪ ಯೋಗಿಸುತ್ತಾಳೆ. ಇವಳ ಸಂಹಾರದಿಂದ ಗೋಬ್ರಾಹ್ಮಣರಿಗೆ ಶುಭವಾಗು ವುದು (೧೪-೧೫) ಶಾಪಕ್ಕೆ ಗುರಿಯಾದ ಈಕೆಯನ್ನು ಕೊಲ್ಲುವುದಕ್ಕೆ ನಿನ್ನನ್ನು ಬಿಟ್ಟರೆ ಈ ಮೂರು ಲೋಕಗಳಲ್ಲಿ ಇನ್ನೊಬ್ಬನಿಗೆ ಸಾಧ್ಯವಿಲ್ಲ. ಹೆಂಗಸನ್ನು ಕೊಲ್ಲುವುದು ಹೇಗೆಂದು ಹಿಂಜರಿಯಬೇಡ. ರಾಜಪುತ್ರ ನಾದವನು ಚಾತುರ್ವರ್ಣ್ಯದ ಹಿತಕ್ಕಾಗಿ ಕೆಲಸಮಾಡುವಾಗ ಇದು

ನೃಶಂಸಮನೃಶಂಸಂ ವಾ ಪ್ರಜಾರಕ್ಷಣಕಾರಣಾತ್ ।
ಪಾತಕಂ ವಾ ಸದೋಷಂ ವಾ ಕರ್ತವ್ಯಂ ರಕ್ಷತಾ ಸತಾ ॥ ೧೮
ರಾಜ್ಯಭಾರನಿಯುಕ್ತಾನಾಮೇಷ ಧರ್ಮಃ ಸನಾತನಃ ।
ಅಧರ್ಮ್ಯಾಂ ಜಹಿ ಕಾಕುತ್ಸ್ಥ ಧರ್ಮೋ ಹ್ಯಸ್ಯಾ ನ ವಿದ್ಯತೇ ॥ ೧೯
ಶ್ರೂಯತೇ ಹಿ ಪುರಾ ಶಕ್ರೋ ವಿರೋಚನಸುತಾಂ ನೃಪ ।
ಪೃಥಿವೀಂ ಹಂತುಮಿಚ್ಛಂತೀಂ ಮಂಥರಾಮಭ್ಯಸೂದಯತ್ ॥ ೨೦
ವಿಷ್ಣುನಾ ಚ ಪುರಾ ರಾಮ ಭೃಗುಪತ್ನೀ ಪತಿವ್ರತಾ ।
ಅನಿಂದ್ರಂ ಲೋಕಮಿಚ್ಛಂತೀ ಕಾವ್ಯಮಾತಾ ನಿಷೂದಿತಾ ॥ ೨೧
ಏತೈರನ್ಯೈಶ್ಚ ಬಹುಭೀ ರಾಜಪುತ್ರೈರ್ಮಹಾತ್ಮಭಿಃ ।
ಅಧರ್ಮನಿರತಾ ನಾರ್ಯೋ ಹತಾಃ ಪುರುಷಸತ್ತಮೈಃ ॥ ೨೨
ತಸ್ಮಾದೇನಾಂ ಘೃಣಾಂ ತ್ಯಕ್ತ್ವಾ ಜಹಿ ಮಚ್ಛಾಸನಾನ್ನೃಪ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಪಂಚವಿಂಶಃ ಸರ್ಗಃ

---

ಕ್ರೂರವಾದದ್ದೆ, ಅಲ್ಲವೆ—ಎಂದು ವಿವೇಚಿಸಬೇಕಾಗಿಲ್ಲ ಪ್ರಜಾರಕ್ಷಣೆಗಾಗಿ ಮಾಡುವ ಕಾರ್ಯವು ಪಾಪಹೇತುವಾಗಿರಲಿ ದೋಷಯುಕ್ತವಾಗಿರಲಿ—ಮಾಡಲೇಬೇಕು (೧೬–೧೮). ರಾಜ್ಯಭಾರದಲ್ಲಿ ತೊಡಗಿದವರಿಗೆ ಇದು ಸನಾತನಧರ್ಮ. ರಾಮ, ಇವಳು ಧರ್ಮಭ್ರಷ್ಟಳು ಇವಳನ್ನು ವಧಿಸು ಇವಳಲ್ಲಿ ಯಾವ ಧರ್ಮವೂ ಇಲ್ಲ. ಹಿಂದೆ ಭೂದೇವಿಯನ್ನು ಕೊಲ್ಲಬೇಕೆಂದು ಹೊರಟಿದ್ದ ವಿರೋಚನ ಪುತ್ರಿಯಾದ ಮಂಥರೆಯನ್ನು ದೇವೇಂದ್ರನು ಸಂಹರಿಸಿದನೆಂಬುದನ್ನು ಕೇಳಿದ್ದೇವೆ (೧೯–೨೦). ಭೃಗುಋಷಿಗಳ ಪತ್ನಿ ಪತಿವ್ರತೆ, ಶುಕ್ರಾಚಾರ್ಯನ ತಾಯಿ. ಅಂಥವಳು ಲೋಕದಲ್ಲಿ ಇಂದ್ರನೇ ಇರಬಾರದೆಂದು ಬಯಸಿದಾಗ ವಿಷ್ಣುವು ಅವಳನ್ನು ವಧಿಸಿಬಿಟ್ಟನು.* ಇಷ್ಟೇ ಅಲ್ಲ ಪುರುಷಶ್ರೇಷ್ಠರೆಂದೂ ಮಹಾತ್ಮರೆಂದೂ ಪ್ರಖ್ಯಾತರಾದ ಬಹುಮಂದಿ ರಾಜಪುತ್ರರು ಅಧರ್ಮನಿರತರಾದ ಸ್ತ್ರೀಯರನ್ನು ಸಂಹರಿಸಿದ್ದಾರೆ. ಆದ್ದರಿಂದ, ರಾಜಪುತ್ರ, ಮರುಕವನ್ನು ಬದಿಗೊತ್ತಿ ನನ್ನ ಆಜ್ಞೆಯಂತೆ ಇವಳನ್ನು ಸಂಹರಿಸು!" ಎಂದು ನುಡಿದರು (೨೧–೨೨).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಇಪ್ಪತ್ತೈದನೆಯ ಸರ್ಗ

---

* ಅನುಬಂಧವನ್ನು ನೋಡಿ.

## ಷಡ್ವಿಂಶಃ ಸರ್ಗಃ

### ತಾಟಕಾವಧಃ

ಮುನೇರ್ವಚನಮಕ್ಲೀಬಂ ಶ್ರುತ್ವಾ ನರವರಾತ್ಮಜಃ ।
ರಾಘವಃ ಪ್ರಾಂಜಲಿರ್ಭೂತ್ವಾ ಪ್ರತ್ಯುವಾಚ ದೃಢವ್ರತಃ ॥ ೧

ಪಿತುರ್ವಚನನಿರ್ದೇಶಾತ್ ಪಿತುರ್ವಚನಗೌರವಾತ್ ।
ವಚನಂ ಕೌಶಿಕಸ್ಯೇತಿ ಕರ್ತವ್ಯಮವಿಶಂಕಯಾ ॥ ೨

ಅನುಶಿಷ್ಟೋಽಸ್ಮ್ಯಯೋಧ್ಯಾಯಾಂ ಗುರುಮಧ್ಯೇ ಮಹಾತ್ಮನಾ ।
ಪಿತ್ರಾ ದಶರಥೇನಾಹಂ ನಾವಜ್ಞೇಯಂ ಹಿ ತದ್ವಚಃ ॥ ೩

ಸೋಽಹಂ ಪಿತುರ್ವಚಃ ಶ್ರುತ್ವಾ ಶಾಸನಾದ್ಬ್ರಹ್ಮವಾದಿನಃ ।
ಕರಿಷ್ಯಾಮಿ ನ ಸಂದೇಹಸ್ತಾಟಿಕಾವಧಮುತ್ತಮಮ್ ॥ ೪

ಗೋಬ್ರಾಹ್ಮಣಹಿತಾರ್ಥಾಯ ದೇಶಸ್ಯಾಸ್ಯ ಸುಖಾಯ ಚ ।
ತವ ಚೈವಾಪ್ರಮೇಯಸ್ಯ ವಚನಂ ಕರ್ತುಮುದ್ಯತಃ ॥ ೫

## ಸರ್ಗ ೨೬

### ತಾಟಕಾವಧೆ

ವಿಶ್ವಾಮಿತ್ರಮುನಿಗಳ ಈ ಧೀರವಾಣಿಯನ್ನು ಕೇಳಿ ರಾಜಪುತ್ರನಾದ ರಾಘವನು ಕೈಮುಗಿದುಕೊಂಡು "ಮುನಿಗಳೆ, ನಮ್ಮ ತಂದೆಯು ವಿಶ್ವಾಮಿತ್ರರ ಮಾತನ್ನು ನಡಸಲೇಬೇಕೆಂದು ನನಗೆ ಆಜ್ಞೆಮಾಡಿದ್ದಾನೆ. ತಂದೆಯ ಮಾತನ್ನು ಗೌರವಿಸಿ ನಿಮ್ಮ ಆಜ್ಞೆಯನ್ನು ಹಿಂದೆಮುಂದೆ ನೋಡದೆ ನಾನು ನಡೆಸಲೇಬೇಕು. ಮಹಾತ್ಮನಾದ ನಮ್ಮ ತಂದೆಯು ಅಯೋಧ್ಯೆಯಲ್ಲಿ ಗುರುಗಳೆದುರಿಗೆ ವಿಶ್ವಾಮಿತ್ರರ ಅಪ್ಪಣೆಯನ್ನು ಎಂದಿಗೂ ಉಪೇಕ್ಷಿಸಬಾರದೆಂದು ನನಗೆ ಆಜ್ಞಾಪಿಸಿದ್ದಾನೆ (೧-೩). ಆದ್ದರಿಂದ ನಾನು ಬ್ರಹ್ಮಜ್ಞಾನಿಗಳಾದ ತಮ್ಮ ಆಜ್ಞೆಯಂತೆ ತಾಟಕೆಯನ್ನು ಸಂಹರಿಸುತ್ತೇನೆ. ಸಂದೇಹವೇ ಬೇಡ. ಗೋಬ್ರಾಹ್ಮಣರಿಗೂ ಈ ರಾಷ್ಟ್ರಕ್ಕೂ ಮಂಗಳ

ಏವಮುಕ್ತ್ವಾ ಧನುರ್ಮಧ್ಯೇ ಬದ್ಧ್ವಾ ಮುಷ್ಟಿಮರಿಂದಮಃ ।
ಜ್ಯಾಘೋಷಮಕರೋತ್ತೀವ್ರಂ ದಿಶಃ ಶಬ್ದೇನ ನಾದಯನ್ ॥ ೬

ತೇನ ಶಬ್ದೇನ ವಿತ್ರಸ್ತಾಸ್ತಾಟಕಾವನವಾಸಿನಃ ।
ತಾಟಕಾ ಚ ಸುಸಂಕ್ರುದ್ಧಾ ತೇನ ಶಬ್ದೇನ ಮೋಹಿತಾ ॥ ೭

ತಂ ಶಬ್ದಮಭಿನಿಧ್ಯಾಯ ರಾಕ್ಷಸೀ ಕ್ರೋಧಮೂರ್ಛಿತಾ ।
ಶ್ರುತ್ವಾ ಚಾಭ್ಯದ್ರವದ್ವೇಗಾದ್ಯತಃ ಶಬ್ದೋ ವಿನಿಃಸೃತಃ ॥ ೮

ತಾಂ ದೃಷ್ಟ್ವಾ ರಾಘವಃ ಕ್ರುದ್ಧಾಂ ವಿಕೃತಾಂ ವಿಕೃತಾನನಾಮ್ ।
ಪ್ರಮಾಣೇನಾತಿವೃದ್ಧಾಂ ಚ ಲಕ್ಷ್ಮಣಂ ಸೋಽಭ್ಯಭಾಷತ ॥ ೯

ಪಶ್ಯ ಲಕ್ಷ್ಮಣ ಯಕ್ಷಿಣ್ಯಾ ಭೈರವಂ ದಾರುಣಂ ವಪುಃ ।
ಭಿದ್ಯೇರನ್ ದರ್ಶನಾದಸ್ಯಾ ಭೀರೂಣಾಂ ಹೃದಯಾನಿ ಚ ॥ ೧೦

ಏನಾಂ ಪಶ್ಯ ದುರಾಧರ್ಷಾಂ ಮಾಯಾಬಲಸಮನ್ವಿತಾಮ್ ।
ವಿನಿವೃತ್ತಾಂ ಕರೋಮ್ಯದ್ಯ ಹೃತಕರ್ಣಾಗ್ರನಾಸಿಕಾಮ್ ॥ ೧೧

---

ವಾಗಲೆಂದು ಮಹಾಪ್ರಭಾವಶಾಲಿಗಳಾದ ತಮ್ಮ ಮಾತಿನಂತೆ ನಡೆಯಲು ಸಿದ್ಧನಾಗಿದ್ದೇನೆ" ಎಂದು ನುಡಿದು ಧನುರ್ಮಧ್ಯವನ್ನು ಮುಷ್ಟಿಯಿಂದ ಹಿಡಿದು ದಿಕ್ಕುಗಳೆಲ್ಲವೂ ಮೊಳಗುವಂತೆ ಹೆದೆಯನ್ನು ಮೀಟಿ ಝಂಕಾರ ಮಾಡಿದನು (೪-೬). ಆ ಶಬ್ದವನ್ನು ಕೇಳಿ ಅರಣ್ಯದಲ್ಲಿದ್ದವರೆಲ್ಲರೂ ಸಂಭ್ರಾಂತರಾದರು. ತಾಟಕೆಯು ದಿಕ್ಕುಗಾಣದೆ ರೋಷಾವಿಷ್ಟಳಾದಳು. ಅನಂತರ ಆ ರಾಕ್ಷಸಿಯು ಯಾವ ಕಡೆಯಿಂದ ಝಂಕಾರವು ಬರುತ್ತದೆ ಯೆಂಬುದನ್ನು ಆಲಿಸಿ ಕ್ರೋಧದಿಂದ ಅಲ್ಲಿಗೆ ಧಾವಿಸುತ್ತ ಬಂದಳು. ರಾಘವನು ಅವಳನ್ನು ಕಂಡನು. ಕರಾಳವಾದ ರೂಪ, ವಿಕಾರವಾದ ಮೋರೆ, ಬೃಹದಾಕಾರದ ಶರೀರ (೭-೯). ಅವಳನ್ನು ಲಕ್ಷ್ಮಣನಿಗೆ ತೋರಿಸುತ್ತಾ ಶ್ರೀರಾಮನು "ಲಕ್ಷ್ಮಣ, ಯಕ್ಷಿಣಿಯ ಘೋರವಾದ ಈ ಭೈರವಶರೀರ ವನ್ನು ನೋಡು. ಇವಳನ್ನು ಕಂಡರೆ ಸಾಕು, ಸಾಮಾನ್ಯ ಜನರ ಎದೆ ಒಡೆದುಹೋದೀತು. ಈಗ ನೋಡುತ್ತಿರು, ಮಾಯಾಬಲದಿಂದ ದುರ್ಧರ್ಷ ಳಾದ ಈಕೆಯ ಕಿವಿ ಮೂಗುಗಳನ್ನು ಕತ್ತರಿಸಿಹಾಕಿ ಈಕೆಯು ಹಿಂದಕ್ಕೆ

**ನ ಹ್ಯೇನಾಮುತ್ಸಹೇ ಹಂತುಂ ಸ್ತ್ರೀಸ್ವಭಾವೇನ ರಕ್ಷಿತಾಮ್ ।**
**ವೀರ್ಯಂ ಚಾಸ್ಯಾ ಗತಿಂ ಚಾಪಿ ಹನಿಷ್ಯಾಮೀತಿ ಮೇ ಮತಿಃ ॥ ೧೨**

**ಏವಂ ಬ್ರುವಾಣೇ ರಾಮೇ ತು ತಾಟಕಾ ಕ್ರೋಧಮೂರ್ಛಿತಾ ।**
**ಉದ್ಯಮ್ಯ ಬಾಹೂ ಗರ್ಜಂತೀ ರಾಮಮೇವಾಭ್ಯಧಾವತ ॥ ೧೩**

**ವಿಶ್ವಾಮಿತ್ರಸ್ತು ಬ್ರಹ್ಮರ್ಷಿರ್ಹುಂಕಾರೇಣಾಭಿಭರ್ತ್ಸ್ಯ ತಾಮ್ ।**
**ಸ್ವಸ್ತಿ ರಾಘವಯೋರಸ್ತು ಜಯಂ ಚೈವಾಭ್ಯಭಾಷತ ॥ ೧೪**

**ಉದ್ಧುನ್ವಾನಾ ರಜೋ ಘೋರಂ ತಾಟಕಾ ರಾಘವಾವುಭೌ ।**
**ರಜೋಮೋಹೇನ ಮಹತಾ ಮುಹೂರ್ತಂ ಸಾ ವ್ಯಮೋಹಯತ್**

**ತತೋ ಮಾಯಾಂ ಸಮಾಸ್ಥಾಯ ಶಿಲಾವರ್ಷೇಣ ರಾಘವೌ ।**
**ಅವಾಕಿರತ್ ಸುಮಹತಾ ತತಶ್ಚುಕ್ರೋಧ ರಾಘವಃ ॥ ೧೬**

**ಶಿಲಾವರ್ಷಂ ಮಹತ್ತಸ್ಯಾಃ ಶರವರ್ಷೇಣ ರಾಘವಃ ।**
**ಪ್ರತಿವಾರ್ಯೋಪಧಾವಂತ್ಯಾಃ ಕರೌ ಚಿಚ್ಛೇದ ಪತ್ರಿಭಿಃ ॥ ೧೭**

---

ಓಡಿಹೋಗುವಂತೆ ಮಾಡುವೆನು. ಇವಳನ್ನು ಕೊಲ್ಲಲು ನನಗೆ ಮನಸ್ಸಿಲ್ಲ. ಹೆಂಗಸೆಂಬುದೇ ಇವಳಿಗೆ ರಕ್ಷೆ. (ಕೈಕಾಲುಗಳನ್ನಾದರೂ ಕತ್ತರಿಸಿ) ಇವಳ ಪರಾಕ್ರಮವನ್ನೂ ಸಂಚಾರಶಕ್ತಿಯನ್ನೂ ಉಡುಗಿಸಬೇಕೆಂಬುದೇ ನನ್ನ ಉದ್ದೇಶ" ಎಂದನು (೧೦-೧೨). ಅಷ್ಟರಲ್ಲಿ ತಾಟಕೆಯು ಸಿಟ್ಟಿನಿಂದ ಕೈಯೆತ್ತಿಕೊಂಡು ಗರ್ಜಿಸುತ್ತ ರಾಮನ ಕಡೆಗೇ ಓಡಿಬಂದಳು. ವಿಶ್ವಾಮಿತ್ರ ಮಹರ್ಷಿಗಳು ಅವಳನ್ನು ದಿಟ್ಟಿಸುತ್ತ ಹುಂಕಾರಮಾಡಿ "ರಾಮಲಕ್ಷ್ಮಣರಿಗೆ ಮಂಗಳವಾಗಲಿ – ಜಯವಾಗಲಿ!" ಎಂದರು (೧೩-೧೪). ತಾಟಕೆಯು ರಾಮಲಕ್ಷ್ಮಣರ ಮೇಲೆ ಭಯಂಕರ ಧೂಳನ್ನು ಕೆದರಿ ಎರಚಿದಳು. ಮೋಡವು ಮುಸುಗಿದಂತಾಗಿ ಸ್ವಲ್ಪಹೊತ್ತು ಅವರಿಗೆ ಏನೂ ತೋರಲೇ ಇಲ್ಲ. ಆಮೇಲೆ ಆ ರಾಕ್ಷಸಿಯು ಮಾಯೆಯಿಂದ ಅಂತರ್ಧಾನಹೊಂದಿ ರಾಮಲಕ್ಷ್ಮಣರ ಮೇಲೆ ಕಲ್ಲುಗಳನ್ನು ಮಳೆಗರೆದಳು. ರಾಮನು ಕ್ರುದ್ಧನಾದನು. ತನ್ನ ಬಾಣಗಳಿಂದ ಅವುಗಳೆಲ್ಲವನ್ನೂ ನಿವಾರಿಸಿದನು. ತಾಟಕೆಯು (ಮತ್ತೆ ಪ್ರತ್ಯಕ್ಷಳಾಗಿ) ರಾಮನ ಕಡೆಗೆ ನುಗ್ಗಿದಳು. ರಾಮನು ತನ್ನ ಅಸ್ತ್ರಗಳಿಂದ ಅವಳ ಎರಡು

ತತಶ್ಛಿನ್ನಭುಜಾಂ ಶ್ರಾಂತಾಮಭ್ಯಾಶೇ ಪರಿಗರ್ಜತೀಮ್ ।
ಸೌಮಿತ್ರಿರಕರೋತ್ ಕ್ರೋಧಾದ್ ಹೃತಕರ್ಣಾಗ್ರನಾಸಿಕಾಮ್ ॥

ಕಾಮರೂಪಧರಾ ಸದ್ಯಃ ಕೃತ್ವಾ ರೂಪಾಣ್ಯನೇಕಶಃ ।
ಅಂತರ್ಧಾನಂ ಗತಾ ಯಕ್ಷೀ ಮೋಹಯಂತೀ ಸ್ವಮಾಯಯಾ ॥

ಅಶ್ಮವರ್ಷಂ ವಿಮುಂಚಂತೀ ಭೈರವಂ ವಿಚಚಾರ ಹ ।
ತತಸ್ತಾವಶ್ಮವರ್ಷೇಣ ಕೀರ್ಯಮಾಣೌ ಸಮಂತತಃ ॥ ೨೦

ದೃಷ್ಟ್ವಾ ಗಾಧಿಸುತಃ ಶ್ರೀಮಾನಿದಂ ವಚನಮಬ್ರವೀತ್ ।
ಅಲಂ ತೇ ಘೃಣಯಾ ರಾಮ ಪಾಪೈಷಾ ದುಷ್ಟಚಾರಿಣೀ ॥ ೨೧

ಯಜ್ಞವಿಘ್ನಕರೀ ಯಕ್ಷೀ ಪುರಾ ವರ್ಧೇತ ಮಾಯಯಾ ।
ವಧ್ಯತಾಂ ತಾವದೇವೈಷಾ ಪುರಾ ಸಂಧ್ಯಾ ಪ್ರವರ್ತತೇ ॥ ೨೨

ರಕ್ಷಾಂಸಿ ಸಂಧ್ಯಾಕಾಲೇಷು ದುರ್ಧರ್ಷಾಣಿ ಭವಂತಿ ಹಿ ।
ಇತ್ಯುಕ್ತಸ್ತು ತದಾ ಯಕ್ಷೀಮಶ್ಮವೃಷ್ಟ್ಯಾಭಿವರ್ಷತೀಮ್ ॥ ೨೩

ಕೈಗಳನ್ನೂ ಕತ್ತರಿಸಿಹಾಕಿದನು (೧೫-೧೭) ಕೈಗಳು ಕತ್ತರಿಸಿಹೋಗಲು ರಾಕ್ಷಸಿಯು ಸಂಕಟದಿಂದ ಗರ್ಜಿಸುತ್ತ ನಿಂತಳು ಲಕ್ಷ್ಮಣನು ಕೋಪದಿಂದ ಅವಳ ಕಿವಿ ಮೂಗುಗಳನ್ನು ಕತ್ತರಿಸಿಬಿಟ್ಟನು ಆದರೆ ತಾಟಕೆ ಮಹಾ ಮಾಯಾವಿನಿ. ಅವಳು ನಾನಾರೂಪಗಳನ್ನು ತೋರಿಸುತ್ತ ಪುನಃ ಅಂತರ್ಧಾನಹೊಂದಿ ಶಿಲಾವೃಷ್ಟಿಯನ್ನು ಭಯಂಕರವಾಗಿ ಸುರಿಸುತ್ತ ಅತ್ತಿಂದಿತ್ತ ಸಂಚರಿಸತೊಡಗಿದಳು (೧೮-೧೯). ಹೀಗೆ ಸುತ್ತಲೂ ಶಿಲಾವೃಷ್ಟಿಗೆ ರಾಮಲಕ್ಷ್ಮಣರು ಗುರಿಯಾದದ್ದನ್ನು ನೋಡಿ ವಿಶ್ವಾಮಿತ್ರರು “ರಾಮ, ಇವಳು ಹೆಂಗಸೆಂಬ ಮರುಕ ಬೇಡ. ಇವಳು ಪಾಪಿ, ಕೆಟ್ಟವಳು. ಯಜ್ಞಕ್ಕೆ ಕಲ್ಲುಹಾಕತಕ್ಕವಳು ಇವಳೇ. ಇನ್ನು ಸಾಯಂಕಾಲವಾಗುತ್ತ ಬಂದಿತು. ಮಾಯಾಶಕ್ತಿಯಿಂದ ಇನ್ನೂ ಹೆಚ್ಚಿಬಿಡುತ್ತಾಳೆ. ಅಷ್ಟರಲ್ಲಿ ಇವಳನ್ನು ವಧಿಸಿಬಿಡು. ಸಾಯಂಕಾಲವಾದಮೇಲೆ ರಾಕ್ಷಸರನ್ನು ಎದುರಿಸುವುದು ಕಷ್ಟ” ಎಂದರು (೨೦-೨೨). ಆಗ ಶ್ರೀರಾಮನು ತನ್ನ *ಶಬ್ದವೇಧಿತ್ವ ಶಕ್ತಿಯನ್ನು ತೋರಿಸಿ ಅಸ್ತ್ರಗಳಿಂದ ರಾಕ್ಷಸಿಯ ಶಿಲಾವೃಷ್ಟಿಯನ್ನು ತಡೆದು

* ಗುರಿಯು ಕಣ್ಣಿಗೆ ಕಾಣದಿದ್ದರೂ ಅದರ ಶಬ್ದವನ್ನು ಕೇಳಿ ಗುರಿಹೊಡೆಯುವ ಶಕ್ತಿ.

ದರ್ಶಯನ್ ಶಬ್ದವೇಧಿತ್ವಂ ತಾಂ ರುರೋಧ ಸ ಸಾಯಕೈಃ ।
ಸಾ ರುದ್ಧಾ ಶರಜಾಲೇನ ಮಾಯಾಬಲಸಮನ್ವಿತಾ ॥ ೨೪
ಅಭಿದುದ್ರಾವ ಕಾಕುತ್ಸ್ಥಂ ಲಕ್ಷ್ಮಣಂ ಚ ವಿನೇದುಷೀ ।
ತಾಮಾಪತಂತೀಂ ವೇಗೇನ ವಿಕ್ರಾಂತಾಮಶನೀಮಿವ ॥ ೨೫
ಶರೇಣೋರಸಿ ವಿವ್ಯಾಧ ಸಾ ಪಪಾತ ಮಮಾರ ಚ ।
ತಾಂ ಹತಾಂ ಭೀಮಸಂಕಾಶಾಂ ದೃಷ್ಟ್ವಾ ಸುರಪತಿಸ್ತದಾ ॥ ೨೬
ಸಾಧು ಸಾಧ್ವಿತಿ ಕಾಕುತ್ಸ್ಥಂ ಸುರಾಶ್ಚ ಸಮಪೂಜಯನ್ ।
ಉವಾಚ ಪರಮಪ್ರೀತಃ ಸಹಸ್ರಾಕ್ಷಃ ಪುರಂದರಃ ॥ ೨೭
ಸುರಾಶ್ಚ ಸರ್ವೇ ಸಂಹೃಷ್ಟಾ ವಿಶ್ವಾಮಿತ್ರಮಥಾಬ್ರುವನ್ ।
ಮುನೇ ಕೌಶಿಕ ಭದ್ರಂ ತೇ ಸೇಂದ್ರಾಃ ಸರ್ವೇ ಮರುದ್ಗಣಾಃ ॥ ೨೮
ತೋಷಿತಾಃ ಕರ್ಮಣಾನೇನ ಸ್ನೇಹಂ ದರ್ಶಯ ರಾಘವೇ ।
ಪ್ರಜಾಪತೇರ್ಭೃಶಾಶ್ವಸ್ಯ ಪುತ್ರಾನ್ ಸತ್ಯಪರಾಕ್ರಮಾನ್ ॥ ೨೯
ತಪೋಬಲಭೃತೋ ಬ್ರಹ್ಮನ್ ರಾಘವಾಯ ನಿವೇದಯ ।
ಪಾತ್ರಭೂತಶ್ಚ ತೇ ಬ್ರಹ್ಮಂಸ್ತವಾನುಗಮನೇ ಧೃತಃ ॥ ೩೦

---

ಆ ಮಾಯಾವಿನಿಯನ್ನು ಗಾಯಗೊಳಿಸಿದನು. ತಾಟಕೆಯು ಕೂಡಲೆ ಅಂತರ್ಧಾನವನ್ನು ಬದಿಗೊತ್ತಿ ಗರ್ಜಿಸುತ್ತ ಸಿಡಿಲಿನಂತೆ ರಾಮಲಕ್ಷ್ಮಣರ ಮೇಲೆ ರಭಸದಿಂದ ಎರಗಿದಳು (೨೪-೨೫) ಶ್ರೀರಾಮನು ಅವಳ ಎದೆಗೆ ಗುರಿಯಿಟ್ಟು ಒಂದು ಬಾಣವನ್ನು ಹೊಡೆಯಲು ತಾಟಕೆಯು ಉರುಳಿಬಿದ್ದು ಸತ್ತುಹೋದಳು. ಭೀಮಾಕಾರದ ರಾಕ್ಷಸಿಯು ಮೃತಳಾದ್ದನ್ನು ಕಂಡು ದೇವತೆಗಳೂ ದೇವೇಂದ್ರನೂ 'ಭಲೆ, ಭಲೆ' ಎನ್ನುತ್ತ ಶ್ರೀರಾಮನನ್ನು ಕೊಂಡಾಡಿದರು (೨೬-೨೭). ಇಂದ್ರನು "ಮಹರ್ಷಿ-ವಿಶ್ವಾಮಿತ್ರ, ನಿನಗೆ ಒಳ್ಳೆಯದಾಗಲಿ. ಈ ಕಾರ್ಯದಿಂದ ನಾವೆಲ್ಲರೂ ಸಂಪ್ರೀತರಾದೆವು. ರಾಘವನಲ್ಲಿ ಇನ್ನೂ ವಾತ್ಸಲ್ಯವನ್ನು ತೋರಿಸು. ಹೇ ಬ್ರಹ್ಮರ್ಷಿ, ಕೃಶಾಶ್ವಪ್ರಜಾಪತಿಯ ಪುತ್ರರೂ ಸತ್ಯಪರಾಕ್ರಮರೂ ತಪೋಬಲಾನ್ವಿತರೂ ಆದ (ದೇವತಾರೂಪದ) ಮಂತ್ರಾಸ್ತ್ರಗಳನ್ನು ರಾಮನಿಗೆ ಉಪದೇಶಿಸು. ಇವನು ನಿನಗೆ ಶಿಷ್ಯನಾಗಿ ಉಪದೇಶಕ್ಕೆ ಅರ್ಹನಾಗಿದ್ದಾನೆ. ಈ ರಾಜಪುತ್ರನು ದೇವತೆ

ಕರ್ತವ್ಯಂ ಚ ಮಹತ್ ಕರ್ಮ ಸುರಾಣಾಂ ರಾಜಸೂನುನಾ ।
ಏವಮುಕ್ತ್ವಾ ಸುರಾಃ ಸರ್ವೇ ಜಗ್ಮುರ್ಹೃಷ್ಟಾ ಯಥಾಗತಮ್ ॥

ವಿಶ್ವಾಮಿತ್ರಂ ಪೂಜಯಂತಸ್ತತಃ ಸಂಧ್ಯಾ ಪ್ರವರ್ತತೇ ।
ತತೋ ಮುನಿವರಃ ಪ್ರೀತಸ್ತಾಟಕಾವಧತೋಷಿತಃ ॥ ೩೨

ಮೂರ್ಧ್ನಿ ರಾಮಮುಪಾಘ್ರಾಯ ಇದಂ ವಚನಮಬ್ರವೀತ್ ।
ಇಹಾದ್ಯ ರಜನೀಂ ರಾಮ ವಸೇಮ ಶುಭದರ್ಶನ ॥ ೩೩

ಶ್ವಃ ಪ್ರಭಾತೇ ಗಮಿಷ್ಯಾಮಸ್ತದಾಶ್ರಮಪದಂ ಮಮ ।
ವಿಶ್ವಾಮಿತ್ರವಚಃ ಶ್ರುತ್ವಾ ಹೃಷ್ಟೋ ದಶರಥಾತ್ಮಜಃ ॥ ೩೪

ಉವಾಸ ರಜನೀಂ ತತ್ರ ತಾಟಕಾಯಾ ವನೇ ಸುಖಮ್ ।
ಮುಕ್ತಶಾಪಂ ವನಂ ತಚ್ಚ ತಸ್ಮಿನ್ನೇವ ತದಾಹನಿ ॥ ೩೫

ರಮಣೀಯಂ ವಿಬಭ್ರಾಜ ಯಥಾ ಚೈತ್ರರಥಂ ವನಮ್ ॥

ನಿಹತ್ಯ ತಾಂ ಯಕ್ಷಸುತಾಂ ಸ ರಾಮಃ
ಪ್ರಶಸ್ಯಮಾನಃ ಸುರಸಿದ್ಧಸಂಘೈಃ ।

---

ಗಳಿಗಾಗಿ ಇನ್ನೂ ಮಹತ್ತರ ಕಾರ್ಯಗಳನ್ನು ಎಸಗಬೇಕಾಗಿದೆ" ಎಂದು ಹೇಳಿ ಸಂತೋಷದಿಂದ ದೇವತೆಗಳೊಡನೆ ವಿಶ್ವಾಮಿತ್ರರನ್ನು ಹೊಗಳುತ್ತ ಹೊರಟುಹೋದನು (೨೮-೩೧). ಸಾಯಂಕಾಲವಾಯಿತು. ತಾಟಕೆಯನ್ನು ವಧಿಸಿದ್ದರಿಂದ ವಿಶ್ವಾಮಿತ್ರರು ಸಂತುಷ್ಟರಾಗಿ ವಾತ್ಸಲ್ಯದಿಂದ ಶ್ರೀರಾಮನ ಶಿರಸ್ಸನ್ನು ಆಘ್ರಾಣಿಸುತ್ತ "ರಾಮ-ಅಭಿರಾಮ, ಈ ರಾತ್ರಿ ಇಲ್ಲಿಯೇ ಇರೋಣ. ನಾಳೆ ಪ್ರಾತಃಕಾಲ ನನ್ನ ಆಶ್ರಮಕ್ಕೆ ಹೋಗೋಣ" ಎಂದರು-(೩೨-೩೩). ಶ್ರೀರಾಮನು ಸಂತೋಷದಿಂದ ಆ ರಾತ್ರಿಯನ್ನು ತಾಟಕಾವನದಲ್ಲಿ ಕಳೆದನು. ಆ ವನಕ್ಕೆ ಬಂದಿದ್ದ ಉಪದ್ರವವು ಆ ದಿನವೇ ತೊಲಗಿ ಹೋಯಿತು. ಅದು ಕುಬೇರನ ಚೈತ್ರರಥವೆಂಬ ಉದ್ಯಾನದಂತೆ ರಮಣೀಯವಾಗಿ ಕಂಗೊಳಿಸಿತು (೩೪-೩೫). ಈ ರೀತಿಯಲ್ಲಿ ಶ್ರೀರಾಮನು ತಾಟಕೆಯನ್ನು ಸಂಹರಿಸಿ ದೇವತೆಗಳ ಮತ್ತು ಸಿದ್ಧಪುರುಷರ ಪ್ರಶಂಸೆಗೆ ಪಾತ್ರನಾದನು. ಅಲ್ಲಿಯೇ ರಾತ್ರಿ ಕಳೆಯಿತು. ಉಷಃಕಾಲದಲ್ಲಿ ವಿಶ್ವಾಮಿತ್ರರು

ಉವಾಸ ತಸ್ಮಿನ್ ಮುನಿನಾ ಸಹೈವ
ಪ್ರಭಾತವೇಲಾಂ ಪ್ರತಿಬೋಧ್ಯಮಾನಃ ॥ ೩೬

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಷಡ್ವಿಂಶಃ ಸರ್ಗಃ

---

## ಸಪ್ತವಿಂಶಃ ಸರ್ಗಃ

### ಅಸ್ತ್ರಗ್ರಾಮಪ್ರದಾನಮ್

ಅಥ ತಾಂ ರಜನೀಮುಷ್ಯ ವಿಶ್ವಾಮಿತ್ರೋ ಮಹಾಯಶಾಃ ।
ಪ್ರಹಸ್ಯ ರಾಘವಂ ವಾಕ್ಯಮುವಾಚ ಮಧುರಾಕ್ಷರಮ್ ॥ ೧
ಪರಿತುಷ್ಟೋಽಸ್ಮಿ ಭದ್ರಂ ತೇ ರಾಜಪುತ್ರ ಮಹಾಯಶಃ ।
ಪ್ರೀತ್ಯಾ ಪರಮಯಾ ಯುಕ್ತೋ ದದಾಮ್ಯಸ್ತ್ರಾಣಿ ಸರ್ವಶಃ ॥ ೨
ದೇವಾಸುರಗಣಾನ್ ವಾಪಿ ಸಗಂಧರ್ವೋರಗಾನಪಿ ।
ಯೈರಮಿತ್ರಾನ್ ಪ್ರಸಹ್ಯಾಜೌ ವಶೀಕೃತ್ಯ ವಿಜೇಷ್ಯಸಿ ॥ ೩

---

ಕೌಸಲ್ಯಾ ಸುಪ್ರಜಾ ರಾಮ. ” ಎನ್ನುತ್ತಿರಲು ಶ್ರೀರಾಮನಿಗೆ ಎಚ್ಚರವಾಯಿತು (೩೬).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಇಪ್ಪತ್ತಾರನೆಯ ಸರ್ಗ

---

## ಸರ್ಗ ೨೭

### ವಿಶ್ವಾಮಿತ್ರರು ಮಂತ್ರಾಸ್ತ್ರಗಳನ್ನು ರಾಮನಿಗೆ ಉಪದೇಶಿಸುವುದು

ಆ ರಾತ್ರಿಯನ್ನು ಕಳೆದ ಮೇಲೆ ವಿಶ್ವಾಮಿತ್ರರು ರಾಘವನನ್ನು ಕುರಿತು ಮಂದಹಾಸದೊಡನೆ ಮಧುರವಾಗಿ ನುಡಿದರು : “ರಾಜಪುತ್ರ, ನಿನಗೆ ಮಂಗಳವಾಗಲಿ. ನನಗೆ ಆನಂದವಾಯಿತು. ಈಗ ಎಲ್ಲಾ ಬಗೆಯ ಮಂತ್ರಾಸ್ತ್ರಗಳನ್ನೂ ನಿನಗೆ ಉಪದೇಶಿಸುತ್ತೇನೆ. ಆ ಅಸ್ತ್ರಗಳ ಬಲದಿಂದ ದೇವಾಸುರರನ್ನೂ ಗಂಧರ್ವೋರಗರನ್ನೂ ನೀನು ಸಂಗ್ರಾಮದಲ್ಲಿ ಜಯಿಸಲು ಸಮರ್ಥ

ತಾನಿ ದಿವ್ಯಾನಿ ಭದ್ರಂ ತೇ ದದಾಮ್ಯಸ್ತ್ರಾಣಿ ಸರ್ವಶಃ ।
ದಂಡಚಕ್ರಂ ಮಹದ್ದಿವ್ಯಂ ತವ ದಾಸ್ಯಾಮಿ ರಾಘವ ॥ ೪
ಧರ್ಮಚಕ್ರಂ ತತೋ ವೀರ ಕಾಲಚಕ್ರಂ ತಥೈವ ಚ ।
ವಿಷ್ಣುಚಕ್ರಂ ತಥಾತ್ಯುಗ್ರಮೈಂದ್ರಮಸ್ತ್ರಂ ತಥೈವ ಚ ॥ ೫
ವಜ್ರಮಸ್ತ್ರಂ ನರಶ್ರೇಷ್ಠ ಶೈವಂ ಶೂಲವರಂ ತಥಾ ।
ಅಸ್ತ್ರಂ ಬ್ರಹ್ಮಶಿರಶ್ಚೈವ ಐಷೀಕಮಪಿ ರಾಘವ ॥ ೬
ದದಾಮಿ ತೇ ಮಹಾಬಾಹೋ ಬ್ರಾಹ್ಮಮಸ್ತ್ರಮನುತ್ತಮಮ್ ।
ಗದೇ ದ್ವೇ ಚೈವ ಕಾಕುತ್ಸ್ಥ ಮೋದಕೀ ಶಿಖರೀ ಉಭೇ ॥ ೭
ಪ್ರದೀಪ್ತೇ ನರಶಾರ್ದೂಲ ಪ್ರಯಚ್ಛಾಮಿ ನೃಪಾತ್ಮಜ ।
ಧರ್ಮಪಾಶಮಹಂ ರಾಮ ಕಾಲಪಾಶಂ ತಥೈವ ಚ ॥ ೮
ಪಾಶಂ ವಾರುಣಮಸ್ತ್ರಂ ಚ ದದಾಮ್ಯಹಮನುತ್ತಮಮ್ ।
ಅಶನೀ ದ್ವೇ ಪ್ರಯಚ್ಛಾಮಿ ಶುಷ್ಕಾರ್ದ್ರೇ ರಘುನಂದನ ॥ ೯
ದದಾಮಿ ಚಾಸ್ತ್ರಂ ಪೈನಾಕಮಸ್ತ್ರಂ ನಾರಾಯಣಂ ತಥಾ ।
ಆಗ್ನೇಯಮಸ್ತ್ರಂ ದಯಿತಂ ಶಿಖರಂ ನಾಮ ನಾಮತಃ ॥ ೧೦
ವಾಯವ್ಯಂ ಪ್ರಥನಂ ನಾಮ ದದಾಮಿ ಚ ತವಾನಘ ।
ಅಸ್ತ್ರಂ ಹಯಶಿರೋ ನಾಮ ಕ್ರೌಂಚಮಸ್ತ್ರಂ ತಥೈವ ಚ ॥ ೧೧
ಶಕ್ತಿದ್ವಯಂ ಚ ಕಾಕುತ್ಸ್ಥ ದದಾಮಿ ತವ ರಾಘವ ।
ಕಂಕಾಲಂ ಮುಸಲಂ ಘೋರಂ ಕಾಪಾಲಮಥ ಕಂಕಣಮ್ ॥ ೧೨

---

ನಾಗುವೆ (೧-೩). ದಿವ್ಯಾಸ್ತ್ರಗಳನ್ನು ನಿನಗೆ ಕೊಡುತ್ತೇನೆ. ನಿನಗೆ ಶುಭವಾಗಲಿ, ರಾಮ. ಅವು ಯಾವುವೆಂದರೆ: ದಂಡಚಕ್ರ, ಧರ್ಮಚಕ್ರ, ಕಾಲಚಕ್ರ, ವಿಷ್ಣುಚಕ್ರ, ಇಂದ್ರದೇವತಾಕವಾದ ವಜ್ರಾಸ್ತ್ರ, ಶಿವದೇವತಾಕವಾದ ಶೂಲವರಾಸ್ತ್ರ, ಬ್ರಹ್ಮಶಿರೋಸ್ತ್ರ, ಐಷೀಕಾಸ್ತ್ರ, ಬ್ರಹ್ಮಾಸ್ತ್ರ (೪-೭). ಮೋದಕೀ, ಶಿಖರೀ ಎಂಬ ಎರಡು ಗದೆಗಳು. ಧರ್ಮಪಾಶ, ಕಾಲಪಾಶ, ವರುಣಪಾಶ, ಶುಷ್ಕಾಶನಿ, ಆರ್ದ್ರಾಶನಿ ಮತ್ತು ಪೈನಾಕ, ನಾರಾಯಣ, ಅಗ್ನಿದೇವತಾಕವಾದ ಶಿಖರ, ವಾಯುದೇವತಾಕವಾದ ಪ್ರಥನ, ಹಯಶಿರಸ್ಸು, ಕ್ರೌಂಚ ಎಂಬ ಅಸ್ತ್ರಗಳು (೭-೧೧). ರಾಮ, ಇವುಗಳಲ್ಲದೆ ರುದ್ರಶಕ್ತಿ,

ವಧಾರ್ಥಂ ರಕ್ಷಸಾಂ ಯಾನಿ ದದಾಮ್ಯೇತಾನಿ ಸರ್ವಶಃ ।
ವೈದ್ಯಾಧರಂ ಮಹಾಸ್ತ್ರಂ ಚ ನಂದನಂ ನಾಮ ನಾಮತಃ ॥ ೧೩

ಅಸಿರತ್ನಂ ಮಹಾಬಾಹೋ ದದಾಮಿ ನೃವರಾತ್ಮಜ ।
ಗಾಂಧರ್ವಮಸ್ತ್ರಂ ದಯಿತಂ ಮಾನವಂ ನಾಮ ನಾಮತಃ ॥ ೧೪

ಪ್ರಸ್ವಾಪನಪ್ರಶಮನೇ ದದ್ಮಿ ಸೌರಂ ಚ ರಾಘವ ।
ವರ್ಷಣಂ ಶೋಷಣಂ ಚೈವ ಸಂತಾಪನವಿಲಾಪನೇ ॥ ೧೫

ಮಾದನಂ ಚೈವ ದುರ್ಧರ್ಷಂ ಕಂದರ್ಪದಯಿತಂ ತಥಾ ।
ಪೈಶಾಚಮಸ್ತ್ರಂ ದಯಿತಂ ಮೋಹನಂ ನಾಮ ನಾಮತಃ ॥ ೧೬

ಪ್ರತೀಚ್ಛ ನರಶಾರ್ದೂಲ ರಾಜಪುತ್ರ ಮಹಾಯಶಃ ।
ತಾಮಸಂ ನರಶಾರ್ದೂಲ ಸೌಮನಂ ಚ ಮಹಾಬಲಮ್ ॥ ೧೭

ಸಂವರ್ತಂ ಚೈವ ದುರ್ಧರ್ಷಂ ಮೌಸಲಂ ಚ ನೃಪಾತ್ಮಜ ।
ಸತ್ಯಮಸ್ತ್ರಂ ಮಹಾಬಾಹೋ ತಥಾ ಮಾಯಾಧರಂ ಪರಮ್ ॥ ೧೮

ಸೌರಂ ತೇಜಃಪ್ರಭಂ ನಾಮ ಪರತೇಜೋಽಪಕರ್ಷಣಮ್ ।
ಸೌಮ್ಯಾಸ್ತ್ರಂ ಶಿಶಿರಂ ನಾಮ ತ್ವಾಷ್ಟ್ರಮಸ್ತ್ರಂ ಚ ದಾರುಣಮ್ ॥ ೧೯

ದಾರುಣಂ ಚ ಭಗಸ್ಯಾಪಿ ಶೀತೇಷುಮಥ ಮಾನವಮ್ ।
ಏತಾನ್ ರಾಮ ಮಹಾಬಾಹೋ ಕಾಮರೂಪಾನ್ ಮಹಾಬಲಾನ್

---

ವಿಷ್ಣುಶಕ್ತಿ ಎಂಬ ಎರಡು ಶಕ್ತಿಗಳು. ಕಂಕಾಲ, ಮುಸಲ, ಕಾಪಾಲ, ಕಂಕಣ ಎಂಬ ಅಸ್ತ್ರಗಳು. ರಾಕ್ಷಸರನ್ನು ಸಂಹರಿಸುವುದ ಇವುಗಳನ್ನೆಲ್ಲ ನಿನಗೆ ಕೊಡುತ್ತೇನೆ. ವಿಧ್ಯಾಧರರಿಗೆ ಸಂಬಂಧಿಸಿದ ನಂದನ ಎಂಬ ಉತ್ತಮವಾದ ಒಂದು ಖಡ್ಗವಿದೆ. ಇದೊಂದು ಮಹತ್ತರವಾದ ಆಯುಧ. ಇದನ್ನೂ ನಿನಗೆ ಕೊಡುತ್ತೇನೆ (೧-೧೩). ಗಂಧರ್ವರ ಮಾನವಾಸ್ತ್ರವನ್ನೂ ಪ್ರಸ್ವಾಪನ, ಪ್ರಶಮನ, ಸೌರಾಸ್ತ್ರಗಳನ್ನೂ ಕೊಡುತ್ತೇನೆ. ಇವುಗಳಲ್ಲದೆ ವರ್ಷಣ, ಶೋಷಣ, ಸಂತಾಪನ, ವಿಲಾಪನ, ಮಾದನ, ಮೋಹನ, ತಾಮಸ, ಸೌಮನ, ಸಂವರ್ತ, ಮೌಸಲ ಎಂಬ ಅಸ್ತ್ರಗಳಿವೆ. ಸತ್ಯ, ಮಾಯಾಧರ, ತೇಜಃಪ್ರಭ, ಶಿಶಿರ, ತ್ವಾಷ್ಟ್ರ, ಭಗದೇವತಾಕವಾದ ದಾರುಣ ಮತ್ತು ಮನುದೇವತಾಕವಾದ

ಗೃಹಾಣ ಪರಮೋದಾರಾನ್ ಕ್ಷಿಪ್ರಮೇವ ನೃಪಾತ್ಮಜ ।
ಸ್ಥಿತಸ್ತು ಪ್ರಾಙ್ಮುಖೋ ಭೂತ್ವಾ ಶುಚಿರ್ಮುನಿವರಸ್ತದಾ ॥ ೨೦
ದದೌ ರಾಮಾಯ ಸುಪ್ರೀತೋ ಮಂತ್ರಗ್ರಾಮಮನುತ್ತಮಮ್ ।
ಸರ್ವಸಂಗ್ರಹಣಂ ಯೇಷಾಂ ದೈವತೈರಪಿ ದುರ್ಲಭಮ್ ॥ ೨೨
ತಾನ್ಯಸ್ತ್ರಾಣಿ ತದಾ ವಿಪ್ರೋ ರಾಘವಾಯ ನ್ಯವೇದಯತ್ ।
ಜಪತಸ್ತು ಮುನೇಸ್ತಸ್ಯ ವಿಶ್ವಾಮಿತ್ರಸ್ಯ ಧೀಮತಃ ॥ ೨೩
ಉಪತಸ್ಥುರ್ಮಹಾರ್ಹಾಣಿ ಸರ್ವಾಣ್ಯಸ್ತ್ರಾಣಿ ರಾಘವಮ್ ।
ಊಚುಶ್ಚ ಮುದಿತಾಃ ಸರ್ವೇ ರಾಮಂ ಪ್ರಾಂಜಲಯಸ್ತದಾ ॥ ೨೪
ಇಮೇ ಸ್ಮ ಪರಮೋದಾರಾಃ ಕಿಂಕರಾಸ್ತವ ರಾಘವ ।
ಯದ್ಯದಿಚ್ಛಸಿ ಭದ್ರಂ ತೇ ತತ್ ಸರ್ವಂ ಕರವಾಮ ವೈ ॥ ೨೫
ತತೋ ರಾಮಃ ಪ್ರಸನ್ನಾತ್ಮಾ ತೈರಿತ್ಯುಕ್ತೋ ಮಹಾಬಲೈಃ ।
ಪ್ರತಿಗೃಹ್ಯ ಚ ಕಾಕುತ್ಸ್ಥಃ ಸಮಾಲಭ್ಯ ಚ ಪಾಣಿನಾ ॥ ೨೬

---

ಶೀತೇಷು ಎಂಬ ಅಸ್ತ್ರಗಳಿವೆ. ಇವೆಲ್ಲವೂ ಕಾಮರೂಪಿಗಳು, ಮಹಾಬಲಶಾಲಿಗಳು. ರಾಮ, ಈ (ಐವತ್ತು) ಅಸ್ತ್ರಗಳನ್ನೂ ನೀನು ಸ್ವೀಕರಿಸು" (೧೪-೨೧). ಹೀಗೆ ನುಡಿದು ಆ ಮಹರ್ಷಿಗಳು ಶುಚೀಭೂತರಾಗಿ ಕುಳಿತು ಮಂತ್ರರಾಶಿಯನ್ನು ಶ್ರೀರಾಮನಿಗೆ ಉಪದೇಶಿಸಿದರು. ಆ ಮಂತ್ರಾಸ್ತ್ರಗಳೆಲ್ಲವನ್ನೂ ತಿಳಿದುಕೊಳ್ಳುವುದು ದೇವತೆಗಳಿಗೂ ಅಶಕ್ಯ. ಅಂಥ ಮಂತ್ರಾಸ್ತ್ರಗಳನ್ನು ವಿಶ್ವಾಮಿತ್ರರು ರಾಘವನಿಗೆ* ಉಪದೇಶಿಸಿದರು (೨೨-೨೩). (ಅಲ್ಲದೆ ಆ ಮಂತ್ರಗಳಿಗೆ ವೀರ್ಯವತ್ತ್ವಾಸಂಪಾದನಾರ್ಥವಾಗಿ) ವಿಶ್ವಾಮಿತ್ರರು ಮಂತ್ರಗಳನ್ನು ಜಪಿಸುತ್ತಿರಲು ಸಕಲ ಮಂತ್ರಾಸ್ತ್ರಗಳೂ ದಿವ್ಯರೂಪದಿಂದ ಪ್ರತ್ಯಕ್ಷವಾಗಿ "ರಾಘವ, ನಾವು ನಿನಗೆ ಕಿಂಕರರಾಗಿದ್ದೇವೆ. ನೀನು ಏನು ಬಯಸಿದರೂ ಅದೆಲ್ಲವನ್ನೂ ನಾವು ಸಾಧಿಸಿಕೊಡುತ್ತೇವೆ. ನಿನಗೆ ಶುಭವಾಗಲಿ" ಎಂದು ಕೈಮುಗಿದುಕೊಂಡು ಹೇಳಿದವು (೨೪-೨೫). ಶ್ರೀರಾಮನು ಪ್ರಸನ್ನನಾಗಿ ಕೈಯಿಂದ ಅವುಗಳನ್ನು ಸ್ಪರ್ಶಿಸಿ "ನೀವು ನನ್ನ ಹೃದಯದಲ್ಲಿ

---

* ರಾಘವನೆಂದರೆ ಲಕ್ಷ್ಮಣನೂ ಆಗಬಹುದು. ಆದ್ದರಿಂದ ರಾಮಲಕ್ಷ್ಮಣರಿಬ್ಬರಿಗೂ ಉಪದೇಶಿಸಿದರೆಂದು ಕೆಲವರು ಅರ್ಥಮಾಡುತ್ತಾರೆ.

ಮಾನಸಾ ಮೇ ಭವಿಷ್ಯಧ್ವಮಿತಿ ತಾನಭ್ಯಚೋದಯತ್ ।
ತತಃ ಪ್ರೀತಮನಾ ರಾಮೋ ವಿಶ್ವಾಮಿತ್ರಂ ಮಹಾಮುನಿಮ್ ॥ ೨೭
ಅಭಿವಾದ್ಯ ಮಹಾತೇಜಾ ಗಮನಾಯೋಪಚಕ್ರಮೇ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಸಪ್ತವಿಂಶಃ ಸರ್ಗಃ

---

## ಅಷ್ಟಾವಿಂಶಃ ಸರ್ಗಃ

### ಅಸ್ತ್ರಸಂಹಾರಗ್ರಹಣಮ್

ಪ್ರತಿಗೃಹ್ಯ ತತೋಽಸ್ತ್ರಾಣಿ ಪ್ರಹೃಷ್ಟವದನಃ ಶುಚಿಃ ।
ಗಚ್ಛನ್ನೇವಾಥ ಕಾಕುತ್ಸ್ಥೋ ವಿಶ್ವಾಮಿತ್ರಮಥಾಬ್ರವೀತ್ ॥ ೧
ಗೃಹೀತಾಸ್ತ್ರೋಽಸ್ಮಿ ಭಗವನ್ ದುರಾಧರ್ಷಃ ಸುರಾಸುರೈಃ ।
ಅಸ್ತ್ರಾಣಾಂ ತ್ವಹಮಿಚ್ಛಾಮಿ ಸಂಹಾರಾನ್ ಮುನಿಪುಂಗವ ॥ ೨

---

ನೆಲೆಸಿರಿ" (ಸ್ಮರಿಸಿದಾಗ ಉಪಸ್ಥಿತರಾಗಬೇಕು) ಎಂದು ಸೂಚಿಸಿದನು. ಅನಂತರ ಅವನು ವಿಶ್ವಾಮಿತ್ರಮಹರ್ಷಿಗಳಿಗೆ ಅಭಿವಾದನೆ ಮಾಡಿ ಮುಂದಕ್ಕೆ ಪ್ರಯಾಣಮಾಡಲು ಸಿದ್ಧನಾದನು (೨೬-೨೭)

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಇಪ್ಪತ್ತೇಳನೆಯ ಸರ್ಗ

---

## ಸರ್ಗ ೨೮

ವಿಶ್ವಾಮಿತ್ರರು ಶ್ರೀರಾಮನಿಗೆ ಮಂತ್ರಾಸ್ತ್ರಗಳ ಉಪಸಂಹಾರಕ್ರಮವನ್ನು ಬೋಧಿಸಿ ಇನ್ನೂ ಕೆಲವು ಮಂತ್ರಾಸ್ತ್ರಗಳನ್ನು ಉಪದೇಶಿಸುವುದು.

ಶ್ರೀರಾಮನು ಶುಚಿಯಾಗಿ ವಿಶ್ವಾಮಿತ್ರರಿಂದ ಮಂತ್ರಾಸ್ತ್ರಗಳ ಉಪದೇಶವನ್ನು ಪಡೆದು ಪ್ರಯಾಣಮಾಡುತ್ತಿರುವಾಗ "ಮಹರ್ಷಿಗಳೆ, ತಮ್ಮಿಂದ ಅಸ್ತ್ರಗಳ ಉಪದೇಶವನ್ನು ಪಡೆದು ದೇವತೆಗಳಿಗೂ ನಾನು ಅಜೇಯನಾಗಿದ್ದೇನೆ. ಆದರೆ ಇವುಗಳ ಉಪಸಂಹಾರಕ್ರಮವನ್ನು ತಿಳಿದುಕೊಳ್ಳಲು ನನಗೆ

ಏವಂ ಬ್ರುವತಿ ಕಾಕುತ್ಸ್ಥೇ ವಿಶ್ವಾಮಿತ್ರೋ ಮಹಾಮತಿಃ ।
ಸಂಹಾರಾನ್ ವ್ಯಾಜಹಾರಾಥ ಧೃತಿಮಾನ್ ಸುವ್ರತಃ ಶುಚಿಃ ॥ ೩

ಸತ್ಯವಂತಂ ಸತ್ಯಕೀರ್ತಿಂ ಧೃಷ್ಟಂ ರಭಸಮೇವ ಚ ।
ಪ್ರತಿಹಾರತರಂ ನಾಮ ಪರಾಙ್ಮುಖಮವಾಙ್ಮುಖಮ್ ॥ ೪

ಲಕ್ಷ್ಯಾಲಕ್ಷ್ಯಾವಿಮೌ ಚೈವ ದೃಢನಾಭಸುನಾಭಕೌ ।
ದಶಾಕ್ಷಶತವಕ್ತ್ರೌ ಚ ದಶಶೀರ್ಷಶತೋದರೌ ॥ ೫

ಪದ್ಮನಾಭಮಹಾನಾಭೌ ದುಂದುನಾಭಸ್ವನಾಭಕೌ ।
ಜ್ಯೋತಿಷಂ ಕೃಶನಂ ಚೈವ ನೈರಾಸ್ಯವಿಮಲಾವುಭೌ ॥ ೬

ಯೌಗಂಧರವಿನಿದ್ರೌ ಚ ದೈತ್ಯಪ್ರಮಥನೌ ತಥಾ ।
ಶುಚಿಬಾಹುರ್ಮಹಾಬಾಹುರ್ನಿಷ್ಕುಲಿರ್ವಿರುಚಿಸ್ತಥಾ ॥ ೭

ಸಾರ್ಚಿರ್ಮಾಲೀ ಧೃತಿಮಾಲೀ ವೃತ್ತಿಮಾನ್ ರುಚಿರಸ್ತಥಾ ।
ಪಿತ್ರ್ಯಂ ಸೌಮನಸಂ ಚೈವ ವಿಧೂತಮಕರಾವುಭೌ ॥ ೮

ಕರವೀರಕರಂ ಚೈವ ಧನಧಾನ್ಯೌ ಚ ರಾಘವ ।
ಕಾಮರೂಪಂ ಕಾಮರುಚಿಂ ಮೋಹಮಾವರಣಂ ತಥಾ ॥ ೯

---

ಇಚ್ಛೆಯಾಗಿದೆ" ಎಂದನು (೧-೨). ಅದನ್ನು ಕೇಳಿ ಸತ್ಯಸಂಕಲ್ಪರಾದ ಆ ತಪೋನಿಧಿಗಳಿಗೆ ಸಂತೋಷವಾಯಿತು. ಅವರು ರಾಮನಿಗೆ ಮಂತ್ರಾಸ್ತ್ರಗಳ ಉಪಸಂಹಾರಕ್ರಮವನ್ನೆಲ್ಲಾ ಬೋಧಿಸಿ, ಸಂಹಾರಗಳೆಂಬ ಇನ್ನೂ ಕೆಲವು ದಿವ್ಯಾಸ್ತ್ರಗಳನ್ನು ಉಪದೇಶಿಸಿದರು. "ರಾಮ, ಈ ಅಸ್ತ್ರಗಳನ್ನೂ ನಿನಗೆ ಉಪದೇಶಿಸುತ್ತೇನೆ: ಸತ್ಯವಂತ, ಸತ್ಯಕೀರ್ತಿ, ಧೃಷ್ಟ, ರಭಸ, ಪ್ರತಿಹಾರತರ, ಪರಾಙ್ಮುಖ, ಅವಾಙ್ಮುಖ, ಲಕ್ಷ್ಯ, ಅಲಕ್ಷ್ಯ, ದೃಢನಾಭ, ಸುನಾಭ, ದಶಾಕ್ಷ, ಶತವಕ್ತ್ರ, ದಶಶೀರ್ಷ, ಶತೋದರ, ಪದ್ಮನಾಭ, ಮಹಾನಾಭ, ದುಂದುನಾಭ, ಸ್ವನಾಭ, ಜ್ಯೋತಿಷ, ನೈರಾಸ್ಯ, ವಿಮಲ, ಯುಗಂಧರ, ವಿನಿದ್ರ, ದೈತ್ಯ, ಪ್ರಮಥನ, ಶುಚಿಬಾಹು, ಮಹಾಬಾಹು, ನಿಷ್ಕುಲಿ, ವಿರುಚಿ (೩-೭). ಅರ್ಚಿರ್ಮಾಲಿ, ಧೃತಿಮಾಲಿ, ವೃತ್ತಿಮಾನ್, ರುಚಿರ, ಪಿತ್ರ್ಯ, ಸೌಮನಸ, ವಿಧೂತ, ಮಕರ, ಕರವೀರಕರ, ಧನ, ಧಾನ್ಯ, ಕಾಮರೂಪ, ಕಾಮರುಚಿ, ಮೋಹ, ಆವರಣ, ಜೃಂಭಕ, ಸರ್ವ

ಜೃಂಭಕಂ ಸರ್ವನಾಭಂ ಚ ಸಂಧಾನವರಣೌ ತಥಾ ।
ಭೃಶಾಶ್ವತನಯಾನ್ ರಾಮ ಭಾಸ್ವರಾನ್ ಕಾಮರೂಪಿಣಃ ॥ ೧೦
ಪ್ರತೀಚ್ಛ ಮಮ ಭದ್ರಂ ತೇ ಪಾತ್ರಭೂತೋಽಸಿ ರಾಘವ ।
ಬಾಢಮಿತ್ಯೇವ ಕಾಕುತ್ಸ್ಥಃ ಪ್ರಹೃಷ್ಟೇನಾಂತರಾತ್ಮನಾ ॥ ೧೧
ದಿವ್ಯಭಾಸ್ವರದೇಹಾಶ್ಚ ಮೂರ್ತಿಮಂತಃ ಸುಖಪ್ರದಾಃ ।
ಕೇಚಿದಂಗಾರಸದೃಶಾಃ ಕೇಚಿದ್ಧೂಮೋಪಮಾಸ್ತಥಾ ॥ ೧೨
ಚಂದ್ರಾರ್ಕಸದೃಶಾಃ ಕೇಚಿತ್ ಪ್ರಹ್ವಾಂಜಲಿಪುಟಾಸ್ತಥಾ ।
ರಾಮಂ ಪ್ರಾಂಜಲಯೋ ಭೂತ್ವಾಽಬ್ರುವನ್ ಮಧುರಭಾಷಿಣಃ ॥
ಇಮೇ ಸ್ಮ ನರಶಾರ್ದೂಲ ಶಾಧಿ ಕಿಂ ಕರವಾಮ ತೇ ।
ಮಾನಸಾಃ ಕಾರ್ಯಕಾಲೇಷು ಸಾಹಾಯ್ಯಂ ಮೇ ಕರಿಷ್ಯಥ ॥ ೧೪
ಗಮ್ಯತಾಮಿತಿ ತಾನಾಹ ಯಥೇಷ್ಟಂ ರಘುನಂದನಃ ।
ಅಥ ತೇ ರಾಮಮಾಮಂತ್ರ್ಯ ಕೃತ್ವಾ ಚಾಪಿ ಪ್ರದಕ್ಷಿಣಮ್ ॥ ೧೫

ನಾಭ, ಸಂಧಾನ, ವರಣ (೮-೯). ಇವು ಕಾಮರೂಪಿಗಳೂ ತೇಜಸ್ವಿಗಳೂ ಆದ ಕೃಶಾಶ್ವಪುತ್ರರು. ರಾಘವ, ನಿನಗೆ ಕಲ್ಯಾಣವಾಗಲಿ. ಇವುಗಳ ಉಪದೇಶಕ್ಕೆ ನೀನು ಪಾತ್ರನಾಗಿದ್ದೀಯೆ. ಸ್ವೀಕರಿಸು" ಎಂದರು. ಶ್ರೀರಾಮನು ಮನಸ್ಸಿನಲ್ಲಿಯೇ ಹರ್ಷದಿಂದ ಹಿಗ್ಗುತ್ತ "ತಥಾಸ್ತು" ಎಂದು ನುಡಿದು ಅವುಗಳ ಉಪದೇಶವನ್ನು ಪಡೆದನು.* (೧೦-೧೧). ಆ ಐವತ್ತು ಮಂತ್ರಾಸ್ತ್ರಗಳು ದಿವ್ಯದೇಹವನ್ನು ಧರಿಸಿ ಪ್ರತ್ಯಕ್ಷವಾದವು. ಅವುಗಳಲ್ಲಿ ಕೆಲವು ಬೆಂಕಿಯ ಕೆಂಡದಂತೆಯೂ ಕೆಲವು ಹೊಗೆಯಂತೆಯೂ ಕೆಲವು ಸೂರ್ಯಚಂದ್ರರಂತೆಯೂ ಥಳಥಳಿಸುತ್ತಿದ್ದವು. ಆ ಮಂತ್ರಾಸ್ತ್ರದೇವತೆಗಳು ಕೈಮುಗಿದುಕೊಂಡು ರಾಮನನ್ನು ಕುರಿತು "ಪುರುಷೋತ್ತಮ, ಇಗೋ ಬಂದಿದ್ದೇವೆ. ನಾವು ಏನು ಮಾಡಬೇಕು? ಅಪ್ಪಣೆಯಾಗಲಿ" ಎಂದು ಮಧುರವಾಗಿ ನುಡಿದವು (೧೨-೧೩). ರಾಮನು "ಎಲೈ ಮಂತ್ರಾಸ್ತ್ರದೇವತೆಗಳೆ, ಈಗ ನೀವು ಹೋಗಿರಿ. ಕಾರ್ಯ ಒದಗಿದಾಗ ಸ್ಮರಿಸಿಕೊಳ್ಳುತ್ತೇನೆ. ಆಗ

* ಸತ್ಯವಂತ ಮೊದಲಾದವು ಉಪಸಂಹಾರಮಂತ್ರಗಳ ಹೆಸರುಗಳೆಂದು ಕೆಲವರು ಅಭಿಪ್ರಾಯಪಡುತ್ತಾರೆ.

ಏವಮಸ್ತ್ವಿತಿ ಕಾಕುತ್ಸ್ಥಮುಕ್ತ್ವಾ ಜಗ್ಮುರ್ಯಥಾಗತಮ್ ।
ಸ ಚ ತಾನ್ ರಾಘವೋ ಜ್ಞಾತ್ವಾ ವಿಶ್ವಾಮಿತ್ರಂ ಮಹಾಮುನಿಮ್

ಗಚ್ಛನ್ನೇವಾಥ ಮಧುರಂ ಶ್ಲಕ್ಷ್ಣಂ ವಚನಮಬ್ರವೀತ್ ।
ಕಿಂ ನ್ವೇತನ್ಮೇಘಸಂಕಾಶಂ ಪರ್ವತಸ್ಯಾವಿದೂರತಃ ॥ ೧೭

ವೃಕ್ಷಷಂಡಮಿವಾಭಾತಿ ಪರಂ ಕೌತೂಹಲಂ ಹಿ ಮೇ ।
ದರ್ಶನೀಯಂ ಮೃಗಾಕೀರ್ಣಂ ಮನೋಹರಮತೀವ ಚ ॥ ೧೮

ನಾನಾಪ್ರಕಾರೈಃ ಶಕುನೈರ್ವಲ್ಗುನಾದೈರಲಂಕೃತಮ್ ।
ನಿಃಸೃತಾಃ ಸ್ಮ ಮುನಿಶ್ರೇಷ್ಠ ಕಾಂತಾರಾದ್ರೋಮಹರ್ಷಣಾತ್ ॥

ಅನಯಾ ತ್ವವಗಚ್ಛಾಮಿ ದೇಶಸ್ಯ ಸುಖವತ್ತಯಾ ।
ಸರ್ವಂ ಮೇ ಶಂಸ ಭಗವನ್ ಕಸ್ಯಾಶ್ರಮಪದಂ ತ್ವಿದಮ್ ॥ ೨೦

ಸಂಪ್ರಾಪ್ತಾ ಯತ್ರ ತೇ ಪಾಪಾ ಬ್ರಹ್ಮಘ್ನಾ ದುಷ್ಟಚಾರಿಣಃ ।
ತವ ಯಜ್ಞಸ್ಯ ವಿಘ್ನಾಯ ದುರಾತ್ಮಾನೋ ಮಹಾಮುನೇ ॥ ೨೧

---

ಬಂದು ನನಗೆ ಸಹಾಯಮಾಡಿರಿ" ಎಂದನು. ಹಾಗೆಯೇ ಆಗಲೆಂದು ಮಂತ್ರಾಸ್ತ್ರದೇವತೆಗಳು ಅಂತರ್ಹಿತವಾದವು (೧೪-೧೬). ಶ್ರೀರಾಮನು ಹೀಗೆ ಮಂತ್ರಾಸ್ತ್ರಗಳನ್ನೆಲ್ಲಾ ಕಲಿತುಕೊಂಡು ಮುಂದೆ ಹೋಗುತ್ತಿರುವಾಗ ವಿಶ್ವಾಮಿತ್ರಮುನಿಗಳನ್ನುದ್ದೇಶಿಸಿ ಮಧುರಸ್ವರದಿಂದ "ಹೇ ಭಗವನ್, ಈ ಪರ್ವತದ ಸಮೀಪದಲ್ಲಿ ಮೋಡದಂತೆ ಕಪ್ಪಗೆ ಮರಗಳ ಗುಂಪು ಕಾಣಿಸುವುದಲ್ಲ, ಅದೇನು? ಮೃಗಗಳು ಸಂಚರಿಸುತ್ತಿವೆ. ಬಹಳ ಮನೋಹರವಾಗಿ ನೋಡತಕ್ಕದ್ದಾಗಿದೆ. ನಾನಾ ಪ್ರಕಾರದ ಹಕ್ಕಿಗಳು ಇಂಪಾಗಿ ಕಲಕಲಧ್ವನಿ ಮಾಡುತ್ತಿವೆ. ಮುನಿಗಳೆ, ಮೈನವಿರೇಳಿಸತಕ್ಕ ಆ ಕಾಡನ್ನು ದಾಟಿದೆವು (೧೭-೧೯). ಈ ಸ್ಥಳವು ಸುಖಕರವಾಗಿರುವುದರಿಂದ ಇದು ಯಾರದೋ ಆಶ್ರಮವೆಂದು ಕಾಣುತ್ತದೆ. ಇದು ಯಾವುದು? ದಯವಿಟ್ಟು ನನಗೆ ತಿಳಿಸಬೇಕು. ತಮ್ಮ ಯಜ್ಞಕ್ಕೆ ವಿಘ್ನಮಾಡತಕ್ಕ ಪಾಪಿಗಳೂ ಬ್ರಹ್ಮಘಾತುಕರೂ ಆದ ಆ ದುರಾತ್ಮರು ನೆಲೆಸಿರತಕ್ಕ ಸ್ಥಳ ಯಾವುದು? (೨೦-೨೧).

ಭಗವಂಸ್ತಸ್ಯ ಕೋ ದೇಶಃ ಸಾ ಯತ್ರ ತವ ಯಾಜ್ಞಿಕೀ ।
ರಕ್ಷಿತವ್ಯಾ ಕ್ರಿಯಾ ಬ್ರಹ್ಮನ್ ಮಯಾ ವಧ್ಯಾಶ್ಚ ರಾಕ್ಷಸಾಃ ॥ ೨೨
ಏತತ್ ಸರ್ವಂ ಮುನಿಶ್ರೇಷ್ಠ ಶ್ರೋತುಮಿಚ್ಛಾಮಿ ಸುವ್ರತ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಅಷ್ಟಾವಿಂಶಃ ಸರ್ಗಃ

---

## ಏಕೋನತ್ರಿಂಶಃ ಸರ್ಗಃ

### ಸಿದ್ಧಾಶ್ರಮಃ

ಅಥ ತಸ್ಯಾಪ್ರಮೇಯಸ್ಯ ತದ್ವಚನಂ ಪರಿಪೃಚ್ಛತಃ ।
ವಿಶ್ವಾಮಿತ್ರೋ ಮಹಾತೇಜಾ ವ್ಯಾಖ್ಯಾತುಮುಪಚಕ್ರಮೇ ॥ ೧

ಇಹ ರಾಮ ಮಹಾಬಾಹೋ ವಿಷ್ಣುರ್ದೇವವರಃ ಪ್ರಭುಃ ।
ವರ್ಷಾಣಿ ಸುಬಹೂನೀಹ ತಥಾ ಯುಗಶತಾನಿ ಚ ॥ ೨

ತಪಶ್ಚರಣಯೋಗಾರ್ಥಮುವಾಸ ಸುಮಹಾತಪಾಃ ।
ಏಷ ಪೂರ್ವಾಶ್ರಮೋ ರಾಮ ವಾಮನಸ್ಯ ಮಹಾತ್ಮನಃ ॥ ೩

---

ತಮ್ಮ ಯಜ್ಞಭೂಮಿ ಯಾವುದು? ತಮ್ಮ ಯಜ್ಞಕಾರ್ಯವನ್ನು ರಕ್ಷಿಸುತ್ತ ನಾನು ರಾಕ್ಷಸರನ್ನು ಕೊಲ್ಲಬೇಕಾದದ್ದು ಎಲ್ಲಿ? ಸ್ವಾಮಿ, ಇದೆಲ್ಲವನ್ನೂ ನಾನು ತಿಳಿದುಕೊಳ್ಳಬೇಕು" ಎಂದು ಹೇಳಿದನು (೨೨).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಇಪ್ಪತ್ತೆಂಟನೆಯ ಸರ್ಗ

---

## ಸರ್ಗ ೨೯

### ಸಿದ್ಧಾಶ್ರಮದ ಪೂರ್ವಕಥೆ, ವಿಶ್ವಾಮಿತ್ರರು ರಾಮಲಕ್ಷ್ಮಣರೊಡನೆ ಅಲ್ಲಿಗೆ ಹೋಗುವುದು.

ಈ ಪ್ರಕಾರ ಶ್ರೀರಾಮನು ಹೇಳಲಾಗಿ ವಿಶ್ವಾಮಿತ್ರರು ನುಡಿದರು: "ರಾಮ, ಹಿಂದೆ ವಾಮನಾವತಾರವನ್ನೆತ್ತುವುದಕ್ಕೆ ಪೂರ್ವದಲ್ಲಿ ಮಹಾವಿಷ್ಣುವು ಈ ಸ್ಥಳದಲ್ಲಿ ಬಹುಕಾಲ ತಪಶ್ಚರಣಮಾಡುತ್ತಿದ್ದನು. ವಾಮನಾವತಾರದಲ್ಲಿಯೂ ಆ ಮಹಾತ್ಮನು ತಪಸ್ಸುಮಾಡುತ್ತಿದ್ದ ಆಶ್ರಮವಿದು (೧-೩).

ಸಿದ್ಧಾಶ್ರಮ ಇತಿ ಖ್ಯಾತಃ ಸಿದ್ಧೋ ಹ್ಯತ್ರ ಮಹಾತಪಾಃ ।
ಏತಸ್ಮಿನ್ನೇವ ಕಾಲೇ ತು ರಾಜಾ ವೈರೋಚನಿರ್ಬಲಿಃ ॥ ೪

ನಿರ್ಜಿತ್ಯ ದೈವತಗಣಾನ್ ಸೇಂದ್ರಾಂಶ್ಚ ಸಮರುದ್ಗಣಾನ್ ।
ಕಾರಯಾಮಾಸ ತದ್ರಾಜ್ಯಂ ತ್ರಿಷು ಲೋಕೇಷು ವಿಶ್ರುತಃ ॥ ೫

ಯಜ್ಞಂ ಚಕಾರ ಸುಮಹಾನಸುರೇಂದ್ರೋ ಮಹಾಬಲಃ ।
ಬಲೇಸ್ತು ಯಜಮಾನಸ್ಯ ದೇವಾಃ ಸಾಗ್ನಿಪುರೋಗಮಾಃ ॥ ೬

ಸಮಾಗಮ್ಯ ಸ್ವಯಂ ಚೈವ ವಿಷ್ಣುಮೂಚುರಿಹಾಶ್ರಮೇ ।
ಬಲಿರ್ವೈರೋಚನಿರ್ವಿಷ್ಣೋ ಯಜತೇ ಯಜ್ಞಮುತ್ತಮಮ್ ॥ ೭

ಅಸಮಾಪ್ತೇ ಕ್ರತೌ ತಸ್ಮಿನ್ ಸ್ವಕಾರ್ಯಮಭಿಪದ್ಯತಾಮ್ ।
ಯೇ ಚೈನಮಭಿವರ್ತಂತೇ ಯಾಚಿತಾರ ಇತಸ್ತತಃ ॥ ೮

ಯಚ್ಚ ಯತ್ರ ಯಥಾವಚ್ಚ ಸರ್ವಂ ತೇಭ್ಯಃ ಪ್ರಯಚ್ಛತಿ ।
ಸ ತ್ವಂ ಸುರಹಿತಾರ್ಥಾಯ ಮಾಯಾಯೋಗಮುಪಾಗತಃ ॥ ೯

---

ಇದಕ್ಕೆ ಸಿದ್ಧಾಶ್ರಮವೆಂದು ಹೆಸರು. ಮಹಾತಪಸ್ವಿಯಾದ * ವಿಷ್ಣುವು ತಪಃಸಿದ್ಧನಾದ ಸ್ಥಳವಿದು. ಆತನು ತಪಸ್ಸುಮಾಡುತ್ತಿದ್ದ ಸಮಯದಲ್ಲಿ † ವಿರೋಚನಪುತ್ರನಾದ ಬಲಿಚಕ್ರವರ್ತಿಯು ಇಂದ್ರಸಹಿತರಾದ ದೇವತೆಗಳನ್ನೂ ಮರುದ್ಗಣಗಳನ್ನೂ ಜಯಿಸಿ ತ್ರಿಲೋಕವಿಖ್ಯಾತನಾಗಿ ಅವರ ರಾಜ್ಯವನ್ನು ಆಳುತ್ತಿದ್ದನು (೪-೫). ಆ ದೈತ್ಯರಾಜನು ಮಹಾಬಲಶಾಲಿಯೆನಿಸಿ ಒಂದಾನೊಂದು ಯಜ್ಞವನ್ನು ಆರಂಭಿಸಿದನು. ಆಗ ಅಗ್ನಿಪ್ರಮುಖರಾದ ದೇವತೆಗಳು ಈ ಸಿದ್ಧಾಶ್ರಮಕ್ಕೆ ಬಂದು ವಿಷ್ಣುವನ್ನು ಪ್ರಾರ್ಥಿಸಿದರು: "ಹೇ ಮಹಾವಿಷ್ಣೋ, ವಿರೋಚನಪುತ್ರನಾದ ಬಲಿಯು ಯಜ್ಞವನ್ನು ಮಾಡುತ್ತಿದ್ದಾನೆ. ಅವನು ಯಜ್ಞದೀಕ್ಷೆಯನ್ನು ಸಮಾಪ್ತಿಗೊಳಿಸುವುದರೊಳಗೆ ನಮ್ಮ ಕಾರ್ಯವನ್ನು ನೆರವೇರಿಸಿಕೊಡು (೬- ಯಾಚಕರು ಹೋಗಿ ಅವನಲ್ಲಿ ಏನನ್ನು ಯಾಚಿಸಿದರೂ ಅದೆಲ್ಲಕ್ಕೆ ಆದರದಿಂದ ಅವರಿಗೆ ಕೊಟ್ಟುಬಿಡುತ್ತಿದ್ದಾನೆ. ನೀನು ಈಗ ದೇವಹಿತಕ್ಕೋಸ್ಕರ ಮಾಯೆ

---

* ಕಶ್ಯಪನೆಂದು ಕೆಲವರು ಹೇಳುತ್ತಾರೆ.

† ವಿರೋಚನನು ಪ್ರಹ್ಲಾದನ ಮಗ.

ವಾಮನತ್ವಂ ಗತೋ ವಿಷ್ಣೋ ಕುರು ಕಲ್ಯಾಣಮುತ್ತಮಮ್ ।
ಏತಸ್ಮಿನ್ನಂತರೇ ರಾಮ ಕಾಶ್ಯಪೋಽಗ್ನಿಸಮಪ್ರಭಃ ॥ ೧೦
ಅದಿತ್ಯಾ ಸಹಿತೋ ರಾಮ ದೀಪ್ಯಮಾನ ಇವೌಜಸಾ ।
ದೇವೀಸಹಾಯೋ ಭಗವಾನ್ ದಿವ್ಯಂ ವರ್ಷಸಹಸ್ರಕಮ್ ॥ ೧೧
ವ್ರತಂ ಸಮಾಪ್ಯ ವರದಂ ತುಷ್ಟಾವ ಮಧುಸೂದನಮ್ ।
ತಪೋಮಯಂ ತಪೋರಾಶಿಂ ತಪೋಮೂರ್ತಿಂ ತಪೋಧನಮ್ ॥
ತಪಸಾ ತ್ವಾಂ ಸುತಪ್ತೇನ ಪಶ್ಯಾಮಿ ಪುರುಷೋತ್ತಮಮ್ ।
ಶರೀರೇ ತವ ಪಶ್ಯಾಮಿ ಜಗತ್ ಸರ್ವಮಿದಂ ಪ್ರಭೋ ॥ ೧೩
ತ್ವಮನಾದಿರನಿರ್ದೇಶ್ಯಸ್ತ್ವಾಮಹಂ ಶರಣಂ ಗತಃ ।
ತಮುವಾಚ ಹರಿಃ ಪ್ರೀತಃ ಕಶ್ಯಪಂ ಧೂತಕಲ್ಮಷಮ್ ॥ ೧೪
ವರಂ ವರಯ ಭದ್ರಂ ತೇ ವರಾರ್ಹೋಽಸಿ ಮತೋ ಮಮ ।
ತಚ್ಛ್ರುತ್ವಾ ವಚನಂ ತಸ್ಯ ಮಾರೀಚಃ ಕಶ್ಯಪೋಽಬ್ರವೀತ್ ॥ ೧೫

---

ಯಿಂದ ವಾಮನನಾಗಿ ನಮಗೆ ಕಲ್ಯಾಣವನ್ನು ಮಾಡು" (೮-೯). ದೇವತೆಗಳು ಹೀಗೆ ಪ್ರಾರ್ಥಿಸುವ ಸಮಯದಲ್ಲಿ, ರಾಮ, ಭಗವಾನ್ ಕಶ್ಯಪನು ಪತ್ನಿಯಾದ ಅದಿತೀದೇವಿಯೊಡನೆ ಅಗ್ನಿಯಂತೆ ತೇಜಸ್ಸಿನಿಂದ ಜ್ವಲಿಸುತ್ತ, ಸಾವಿರ ದಿವ್ಯವರ್ಷಗಳ ಪರ್ಯಂತ ವಿಷ್ಣುವನ್ನು ಕುರಿತು ತಪಸ್ಸನ್ನಾಚರಿಸಿದ್ದನು. ತಪಸ್ಸು ಸಮಾಪ್ತವಾದಮೇಲೆ ವರವನ್ನು ಕೊಡಲು ಪ್ರತ್ಯಕ್ಷನಾಗಿದ್ದ ವಿಷ್ಣುವನ್ನು ಹೀಗೆ ಸ್ತುತಿಸಿದನು (೧೦-೧೧): "ಹೇ ದೇವ, ಮಹಾತಪಸ್ವಿಯೂ ತಪಸ್ಸಿನ ಫಲದಾತನೂ ತಪಃಸ್ವರೂಪನೂ ಜ್ಞಾನಾತ್ಮಕನೂ ಆದ ಪುರುಷೋತ್ತಮನು ನೀನೇ. ಮಹಾತಪಸ್ಸಿನ ಫಲವಾಗಿ ನಿನ್ನನ್ನು ನೋಡುತ್ತಿದ್ದೇನೆ. ಸ್ವಾಮಿ, ನಿನ್ನ ದೇಹದಲ್ಲಿ ಸಮಸ್ತಪ್ರಪಂಚವೂ ಅಡಕವಾಗಿರುವು ಕಾಣುತ್ತಿದ್ದೇನೆ. ಅನಾದಿಪುರುಷ ನೀನು. ನಿನ್ನ ನಿಜಸ್ವರೂಪವನ ಯಲು ಶಕ್ಯವಿಲ್ಲ. ನಿನಗೆ ನಾನು ಶರಣಾಗತನಾಗಿದ್ದೇನೆ" (೧೨-೧೩). ಆಗ ವಿಷ್ಣುವು ಸಂಪ್ರೀತನಾಗಿ ಶುದ್ಧಾತ್ಮನಾದ ಕಶ್ಯಪನನ್ನು ಕುರಿತು "ಕಶ್ಯಪ, ನಿನಗೆ ಶುಭವಾಗಲಿ, ನನಗೆ ಮೆಚ್ಚಿಕೆಯಾಯಿತು. ವರವನ್ನು ಪಡೆಯಲು ನೀನು ಅರ್ಹ. ನಿನ್ನ ಅಭೀಷ್ಟವೇನು? ಕೇಳಿಕೊ"

ಅದಿತ್ಯಾ ದೇವತಾನಾಂ ಚ ಮಮ ಚೈವಾನುಯಾಚತಃ ।
ವರಂ ವರದ ಸುಪ್ರೀತೋ ದಾತುಮರ್ಹಸಿ ಸುವ್ರತ ॥ ೧೬

ಪುತ್ರತ್ವಂ ಗಚ್ಛ ಭಗವನ್ನದಿತ್ಯಾಂ ಮಮ ಚಾನಘ ।
ಭ್ರಾತಾ ಭವ ಯವೀಯಾಂಸ್ತ್ವಂ ಶಕ್ರಸ್ಯಾಸುರಸೂದನ ॥ ೧೭

ಶೋಕಾರ್ತಾನಾಂ ತು ದೇವಾನಾಂ ಸಾಹಾಯ್ಯಂ ಕರ್ತುಮರ್ಹಸಿ ।
ಅಯಂ ಸಿದ್ಧಾಶ್ರಮೋ ನಾಮ ಪ್ರಸಾದಾತ್ತೇ ಭವಿಷ್ಯತಿ ॥ ೧೮

ಸಿದ್ಧೇ ಕರ್ಮಣಿ ದೇವೇಶ ಉತ್ತಿಷ್ಠ ಭಗವನ್ನಿತಃ ।
ಅಥ ವಿಷ್ಣುರ್ಮಹಾತೇಜಾ ಅದಿತ್ಯಾಂ ಸಮಜಾಯತ ॥ ೧೯

ವಾಮನಂ ರೂಪಮಾಸ್ಥಾಯ ವೈರೋಚನಿಮುಪಾಗಮತ್ ।
ತ್ರೀನ್ ಕ್ರಮಾನಥ ಭಿಕ್ಷಿತ್ವಾ ಪ್ರತಿಗೃಹ್ಯ ಚ ಮೇದಿನೀಮ್ ॥ ೨೦

ಆಕ್ರಮ್ಯ ಲೋಕಾನ್ ಲೋಕಾತ್ಮಾ ಸರ್ವಲೋಕಹಿತೇ ರತಃ ।
ಮಹೇಂದ್ರಾಯ ಪುನಃ ಪ್ರಾದಾನ್ನಿಯಮ್ಯ ಬಲಿಮೋಜಸಾ ॥ ೨೧

---

ಎಂದನು. ಅದನ್ನು ಕೇಳಿ ಮರೀಚಿಪುತ್ರನಾದ ಆ ಕಶ್ಯಪಮುನಿಯು "ಸ್ವಾಮಿ, ಅದಿತಿಗೂ ದೇವತೆಗಳಿಗೂ ನನಗೂ ಸಮ್ಮತವಾದ ಒಂದು ಪ್ರಾರ್ಥನೆ ಇದೆ. ಹೇ ವರದ, ಆ ವರವನ್ನು ನೀನು ದಯಪಾಲಿಸಬೇಕು (೧೪-೧೬). ಭಗವನ್, ನೀನು ಅದಿತಿಗೂ ನನಗೂ ಪುತ್ರನಾಗಿ ಜನಿಸಬೇಕು. ಇಂದ್ರನಿಗೆ ನೀನು ತಮ್ಮನಾಗು. ದುಃಖದಿಂದ ಕೊರಗುತ್ತಿರುವ ದೇವತೆಗಳಿಗೆ ಸಹಾಯ ಮಾಡು. ನಿನ್ನ ಪ್ರಸಾದದಿಂದ ಈ ಆಶ್ರಮವು ಸಿದ್ಧಾಶ್ರಮವೆಂದು ಪ್ರಸಿದ್ಧವಾಗಲಿ. ಹೇ ದೇವೇಶ್ವರ, ನಿನ್ನ ತಪಃಕಾರ್ಯವು ಸಿದ್ಧವಾದಮೇಲೆ ಈ ಆಶ್ರಮದಿಂದ ಎದ್ದು ಅವತಾರ ಕಾರ್ಯದಲ್ಲಿ ಪ್ರವೃತ್ತನಾಗು" ಎಂದನು (೧೭-೧೮). ಅನಂತರ ಮಹಾವಿಷ್ಣುವು ಅದಿತಿಯಲ್ಲಿ ವಾಮನರೂಪದಿಂದ ಅವತರಿಸಿ ಬಲಿಚಕ್ರವರ್ತಿಯ ಸಮೀಪಕ್ಕೆ ಹೋದನು. ಅಲ್ಲಿ ಸರ್ವಲೋಕ ಹಿತಾರ್ಥವಾಗಿ ಬಲಿಯಿಂದ ಮೂರು ಹೆಜ್ಜೆಯಷ್ಟು ಸ್ಥಳವನ್ನು ಭಿಕ್ಷೆಬೇಡಿದನು. ವಾಮನನು ಒಂದು ಹೆಜ್ಜೆಯಿಂದ ಇಡೀ ಪೃಥ್ವಿಯನ್ನೇ ಆಕ್ರಮಿಸಿ ಮೂರು ಲೋಕಗಳನ್ನೂ ವಶಪಡಿಸಿಕೊಂಡು ಬಲಿಯನ್ನು ಬಂಧಿಸಿ ತ್ರಿಲೋಕ

ತ್ರೈಲೋಕ್ಯಂ ಸ ಮಹಾತೇಜಾಶ್ಚಕ್ರೇ ಶಕ್ರವಶಂ ಪುನಃ ।
ತೇನೈಷ ಪೂರ್ವಮಾಕ್ರಾಂತ ಆಶ್ರಮಃ ಶ್ರಮನಾಶನಃ ॥ ೨೨
ಮಯಾಪಿ ಭಕ್ತ್ಯಾ ತಸ್ಯೈಷ ವಾಮನಸ್ಯೋಪಭುಜ್ಯತೇ ।
ಏತಮಾಶ್ರಮಮಾಯಾಂತಿ ರಾಕ್ಷಸಾ ವಿಘ್ನಕಾರಿಣಃ ॥ ೨೩
ಅತ್ರ ತೇ ಪುರುಷವ್ಯಾಘ್ರ ಹಂತವ್ಯಾ ದುಷ್ಟಚಾರಿಣಃ ।
ಅಥ ಗಚ್ಛಾಮಹೇ ರಾಮ ಸಿದ್ಧಾಶ್ರಮಮನುತ್ತಮಮ್ ॥ ೨೪
ತದಾಶ್ರಮಪದಂ ತಾತ ತವಾಪ್ಯೇತದ್ಯಥಾ ಮಮ ।
ಇತ್ಯುಕ್ತ್ವಾ ಪರಮಪ್ರೀತೋ ಗೃಹ್ಯ ರಾಮಂ ಸಲಕ್ಷ್ಮಣಮ್ ॥ ೨೫
ಪ್ರವಿಶನ್ನಾಶ್ರಮಪದಂ ವ್ಯರೋಚತ ಮಹಾಮುನಿಃ ।
ಶಶೀವ ಗತನೀಹಾರಃ ಪುನರ್ವಸುಸಮನ್ವಿತಃ ॥ ೨೬
ತಂ ದೃಷ್ಟ್ವಾ ಮುನಯಃ ಸರ್ವೇ ಸಿದ್ಧಾಶ್ರಮನಿವಾಸಿನಃ ।
ಉತ್ಪತ್ಯೋತ್ಪತ್ಯ ಸಹಸಾ ವಿಶ್ವಾಮಿತ್ರಮಪೂಜಯನ್ ॥ ೨೭
ಯಥಾರ್ಹಂ ಚಕ್ರಿರೇ ಪೂಜಾಂ ವಿಶ್ವಾಮಿತ್ರಾಯ ಧೀಮತೇ ।
ತಥೈವ ರಾಜಪುತ್ರಾಭ್ಯಾಮಕುರ್ವನ್ನತಿಥಿಕ್ರಿಯಾಮ್ ॥ ೨೮

---

ವನ್ನೂ ದೇವೇಂದ್ರನ ವಶಕ್ಕೆ ಕೊಡಿಸಿದನು (೧೯-೨೧). ಹೀಗೆ ಪೂರ್ವದಲ್ಲಿ ವಾಮನನು ಇದ್ದ ಆಶ್ರಮವಿದು. ಇಲ್ಲಿದ್ದರೆ ಆಯಾಸವೆಲ್ಲ ಪರಿಹಾರವಾಗುತ್ತದೆ. ವಾಮನಮೂರ್ತಿಯ ಮೇಲಿನ ಭಕ್ತಿಯಿಂದ ನಾನೂ ಕೂಡ ಇದನ್ನೇ ಆಶ್ರಯಿಸಿದ್ದೇನೆ. ಈ ಆಶ್ರಮಕ್ಕೆ ವಿಘ್ನಕಾರಿಗಳಾದ ರಾಕ್ಷಸರು ಬರುತ್ತಾರೆ (೨೨-೨೩). ರಾಮ, ಆ ದುರಾತ್ಮರನ್ನು ನೀನು ಇಲ್ಲಿ ಸಂಹರಿಸಬೇಕು. ಇನ್ನು ನಾವು ಸಿದ್ಧಾಶ್ರಮಕ್ಕೆ ಹೋಗೋಣ ಮಗು, ಈ ಆಶ್ರಮವು ನನ್ನದು ಮಾತ್ರವೇ ಅಲ್ಲ, ನಿನ್ನದೂ ಹೌದು" ಹೀಗೆ ಹೇಳುತ್ತ ವಿಶ್ವಾಮಿತ್ರ ಮಹರ್ಷಿಗಳು ರಾಮಲಕ್ಷ್ಮಣರನ್ನು ಕರೆದುಕೊಂಡು, * ಪುನರ್ವಸು ನಕ್ಷತ್ರಗಳಿಂದ ಕೂಡಿ ಹಿಮದ ಮುಸುಕಿಲ್ಲದ ಶುಭ್ರಚಂದ್ರನಂತೆ ಸಂತೋಷದಿಂದ ಸಿದ್ಧಾಶ್ರಮವನ್ನು ಪ್ರವೇಶಿಸಿದರು (೨೪-೨೬). ವಿಶ್ವಾಮಿತ್ರರು ಬಂದುದನ್ನು ಕಂಡು ಸಿದ್ಧಾಶ್ರಮದಲ್ಲಿದ್ದ ಮುನಿಗಳೆಲ್ಲರೂ ಆನಂದದಿಂದ ಓಡುತ್ತಬಂದು

---

* ಪುನರ್ವಸುವಿನಲ್ಲಿ ಎರಡು ತಾರೆಗಳಿರುತ್ತವೆ.

ಮುಹೂರ್ತಮಿವ ವಿಶ್ರಾಂತೌ ರಾಜಪುತ್ರಾವರಿಂದಮೌ ।
ಪ್ರಾಂಜಲೀ ಮುನಿಶಾರ್ದೂಲಮೂಚತೂ ರಘುನಂದನೌ ॥ ೨೯
ಅದ್ಯೈವ ದೀಕ್ಷಾಂ ಪ್ರವಿಶ ಭದ್ರಂ ತೇ ಮುನಿಪುಂಗವ ।
ಸಿದ್ಧಾಶ್ರಮೋಽಯಂ ಸಿದ್ಧಃ ಸ್ಯಾತ್ ಸತ್ಯಮಸ್ತು ವಚಸ್ತವ ॥ ೩೦
ಏವಮುಕ್ತೋ ಮಹಾತೇಜಾ ವಿಶ್ವಾಮಿತ್ರೋ ಮಹಾಮುನಿಃ ।
ಪ್ರವಿವೇಶ ತತೋ ದೀಕ್ಷಾಂ ನಿಯತೋ ನಿಯತೇಂದ್ರಿಯಃ ॥ ೩೧
ಕುಮಾರಾವಪಿ ತಾಂ ರಾತ್ರಿಮುಷಿತ್ವಾ ಸುಸಮಾಹಿತೌ ।
ಪ್ರಭಾತಕಾಲೇ ಚೋತ್ಥಾಯ ಪೂರ್ವಾಂ ಸಂಧ್ಯಾಮುಪಾಸ್ಯ ಚ ॥
ಸ್ಪೃಷ್ಟೋದಕೌ ಶುಚಿ ಂ ಸಮಾಪ್ಯ ನಿಯಮೇನ ಚ ।
ಹುತಾಗ್ನಿಹೋತ್ರಮಾಸೀನಂ ವಿಶ್ವಾಮಿತ್ರಮವಂದತಾಮ್ ॥ ೩೩

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕೋನತ್ರಿಂಶಃ ಸರ್ಗಃ

---

ಅಭಿವಂದಿಸಿ ಗೌರವಿಸಿದರು. ವಿಶ್ವಾಮಿತ್ರಋಷಿಗಳನ್ನು ಯಥಾಯೋಗ್ಯವಾಗಿ ಆದರಿಸಿ ರಾಜಕುಮಾರರಿಗೆ ಅತಿಥಿಸತ್ಕಾರವನ್ನು ನೀಡಿದರು (೨೭-೨೮). ವೀರರಾದ ರಾಮಲಕ್ಷ್ಮಣರು ಸ್ವಲ್ಪಹೊತ್ತು ವಿಶ್ರಮಿಸಿಕೊಂಡು ವಿಶ್ವಾಮಿತ್ರರನ್ನು ಕುರಿತು "ಮಹರ್ಷಿಗಳೆ, ತಮಗೆ ಶ್ರೇಯಸ್ಸಾಗಲಿ. ಈ ದಿನವೇ ತಾವು ಯಜ್ಞದೀಕ್ಷೆಯನ್ನು ಸ್ವೀಕರಿಸಬಹುದಲ್ಲವೆ? (ಯಜ್ಞಸಿದ್ಧಿಯಿಂದ) ಸಿದ್ಧಾಶ್ರಮವೆಂಬುದು ಸಾರ್ಥಕವಾಗಲಿ. (ರಾಕ್ಷಸರನ್ನು ಸಂಹರಿಸಬೇಕೆಂಬ) ತಮ್ಮ ಮಾತು ಸತ್ಯವಾಗಲಿ" ಎಂದರು (೨೯-೩೦). ಅದನ್ನು ಕೇಳಿ ಜಿತೇಂದ್ರಿಯರಾದ ವಿಶ್ವಾಮಿತ್ರಮುನಿಗಳು ನಿಯಮಬದ್ಧರಾಗಿ ಯಜ್ಞದೀಕ್ಷೆಯನ್ನು ಸ್ವೀಕರಿಸಿದರು. ರಾಮಲಕ್ಷ್ಮಣರೂ ಸಹ ಏಕಾಗ್ರತೆಯಿಂದ ಆ ರಾತ್ರಿಯನ್ನು ಕಳೆದರು. ಪ್ರಭಾತಕಾಲದಲ್ಲೆದ್ದು (ಸ್ನಾನಮಾಡಿ) ಶುಚಿಗಳಾಗಿ ಸಂಧ್ಯಾವಂದನೆ ಗಾಯತ್ರೀಜಪಗಳನ್ನು ಆಚರಿಸಿದರು. ಅನಂತರ ಔಪಾಸನ ಹೋಮವನ್ನು ಮಾಡಿ ಕುಳಿತಿದ್ದ ವಿಶ್ವಾಮಿತ್ರರನ್ನು ಕಂಡು ವಂದಿಸಿದರು (೩೧-೩೩).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಇಪ್ಪತ್ತೊಂಬತ್ತನೆಯ ಸರ್ಗ

*

## ತ್ರಿಂಶಃ ಸರ್ಗಃ

### ಯಜ್ಞರಕ್ಷಣಮ್

ಅಥ ತೌ ದೇಶಕಾಲಜ್ಞೌ ರಾಜಪುತ್ರಾವರಿಂದಮೌ ।
ದೇಶೇ ಕಾಲೇ ಚ ವಾಕ್ಯಜ್ಞಾವಬ್ರೂತಾಂ ಕೌಶಿಕಂ ವಚಃ । ೧

ಭಗವನ್ ಶ್ರೋತುಮಿಚ್ಛಾವೋ ಯಸ್ಮಿನ್ ಕಾಲೇ ನಿಶಾಚರೌ ।
ಸಂರಕ್ಷಣೀಯೌ ತೌ ಬ್ರಹ್ಮನ್ನಾತಿವರ್ತೇತ ತತ್ಕ್ಷಣಮ್ ॥ ೨

ಏವಂ ಬ್ರುವಾಣೌ ಕಾಕುತ್ಸ್ಥೌ ತ್ವರಮಾಣೌ ಯುಯುತ್ಸಯಾ ॥
ಸರ್ವೇ ತೇ ಮುನಯಃ ಪ್ರೀತಾಃ ಪ್ರಶಶಂಸುರ್ನೃಪಾತ್ಮಜೌ ॥ ೩

ಅದ್ಯ ಪ್ರಭೃತಿ ಷಡ್ರಾತ್ರಂ ರಕ್ಷತಂ ರಾಘವೌ ಯುವಾಮ್ ।
ದೀಕ್ಷಾಂ ಗತೋ ಹ್ಯೇಷ ಮುನಿರ್ಮೌನಿತ್ವಂ ಚ ಗಮಿಷ್ಯತಿ ॥ ೪

ತೌ ಚ ತದ್ವಚನಂ ಶ್ರುತ್ವಾ ರಾಜಪುತ್ರೌ ಯಶಸ್ವಿನೌ ।
ಅನಿದ್ರೌ ಷಡಹೋರಾತ್ರಂ ತಪೋವನಮರಕ್ಷತಾಮ್ ॥ ೫

## ಸರ್ಗ ೩೦

### ಮಾರೀಚ ಸುಬಾಹು ಮುಂತಾದ ರಾಕ್ಷಸರನ್ನು ನಿವಾರಿಸಿ ರಾಮನು ಯಜ್ಞವನ್ನು ರಕ್ಷಿಸುವುದು.

ಆ ರಾಜಪುತ್ರರು ದೇಶಕಾಲಜ್ಞರಾದ್ದರಿಂದ ಸಮಯವರಿತು "ಮಹರ್ಷಿಗಳೆ, ಆ ರಾಕ್ಷಸರು ಬರುವ ಕಾಲ ಯಾವುದು? ನಮಗೆ ತಿಳಿಯದೆ ಕಾಲವು ಮೀರಿಹೋದೀತು" ಎಂದರು (೧-೨). ಹೀಗೆ ಯುದ್ಧಕುತೂಹಲದಿಂದ ಸಿದ್ಧರಾಗಿ ಬಂದು ಮಾತನಾಡಿದ ರಾಮಲಕ್ಷ್ಮಣರನ್ನು ಮುನಿಗಳೆಲ್ಲರೂ ಕೊಂಡಾಡುತ್ತ "ರಾಮ, ಲಕ್ಷ್ಮಣ, ಇಂದಿನಿಂದ ಆರು ರಾತ್ರಿಗಳವರೆಗೆ ಸತತವಾಗಿ ನೀವು ಕಾವಲಾಗಿರಿ. ವಿಶ್ವಾಮಿತ್ರರು ದೀಕ್ಷೆಯಲ್ಲಿದ್ದಾರೆ. ಅವರು ಮಾತನಾಡುವುದಿಲ್ಲ" ಎಂದರು (೩-೪). ಆಗ ರಾಜಪುತ್ರರು ಆರು ಹಗಲು ಆರು ರಾತ್ರಿ ನಿದ್ರೆಯನ್ನು ತೊರೆದು ತಪೋವನವನ್ನು ಕಾಯಲಾರಂಭಿಸಿದರು.

ಉಪಾಸಾಂಚಕ್ರತುರ್ವೀರೌ ಯತ್ತೌ ಪರಮಧನ್ವಿನೌ ।
ರರಕ್ಷತುರ್ಮುನಿವರಂ ವಿಶ್ವಾಮಿತ್ರಮರಿಂದಮೌ ॥ ೬

ಅಥ ಕಾಲೇ ಗತೇ ತಸ್ಮಿನ್ ಷಷ್ಠೇಽಹನಿ ಸಮಾಗತೇ ।
ಸೌಮಿತ್ರಿಮಬ್ರವೀದ್ರಾಮೋ ಯತ್ತೋ ಭವ ಸಮಾಹಿತಃ ॥ ೭

ರಾಮಸ್ಯೈವಂ ಬ್ರುವಾಣಸ್ಯ ತ್ವರಿತಸ್ಯ ಯುಯುತ್ಸಯಾ ।
ಪ್ರಜಜ್ವಾಲ ತತೋ ವೇದಿಃ ಸೋಪಾಧ್ಯಾಯಪುರೋಹಿತಾ ॥ ೮

ಸದರ್ಭಚಮಸಸ್ರುಕ್ಕಾ ಸಸಮಿತ್ಕುಸುಮೋಚ್ಚಯಾ ।
ವಿಶ್ವಾಮಿತ್ರೇಣ ಸಹಿತಾ ವೇದಿರ್ಜಜ್ವಾಲ ಸರ್ತ್ವಿಜಾ ॥ ೯

ಮಂತ್ರವಚ್ಚ ಯಥಾನ್ಯಾಯಂ ಯಜ್ಞೋಽಸೌ ಸಂಪ್ರವರ್ತತೇ ।
ಆಕಾಶೇ ಚ ಮಹಾನ್ ಶಬ್ದಃ ಪ್ರಾದುರಾಸೀದ್ಭಯಾನಕಃ ॥ ೧೦

ಆವಾರ್ಯ ಗಗನಂ ಮೇಘೋ ಯಥಾ ಪ್ರಾವೃಷಿ ನಿರ್ಗತಃ ।
ತಥಾ ಮಾಯಾಂ ವಿಕುರ್ವಾಣೌ ರಾಕ್ಷಸಾವಭ್ಯಧಾವತಾಮ್ ॥ ೧೧

---

ಆ ವೀರರು ಕವಚವನ್ನು ಧರಿಸಿ ಧನುರ್ಧಾರಿಗಳಾಗಿ ವಿಶ್ವಾಮಿತ್ರರ ಯಜ್ಞವನ್ನು ರಕ್ಷಿಸುತ್ತಿದ್ದರು (೫-೬). ಹೀಗೆ ಐದು ದಿವಸಗಳು ಕಳೆದವು. (ಪೂರ್ಣಾಹುತಿಯನ್ನು ಕೊಡುವ) ಆರನೆಯ ದಿವಸ ಬಂದಿತು. ರಾಮನು "ಲಕ್ಷ್ಮಣ, ಈ ದಿನ ಪೂರ್ಣ ಎಚ್ಚರಿಕೆಯಲ್ಲಿರಬೇಕು. ಸಜ್ಜಾಗಿರು" ಎಂದನು. ಈ ರೀತಿಯಲ್ಲಿ ರಾಮನು ಯುದ್ಧೋತ್ಸಾಹದಲ್ಲಿರಲು, ಇತ್ತ ವಿಶ್ವಾಮಿತ್ರರೂ ಋತ್ವಿಜರೂ ಸುತ್ತಲೂ ಕುಳಿತಿದ್ದ ಯಜ್ಞಕುಂಡವು ಧಗ್ಗನೆ ಜ್ವಲಿಸಲಾರಂಭಿಸಿತು (೭-೮). ದರ್ಭೆ, ಚಮಸ, ಸ್ರುಕ್ಕು, ಸಮಿತ್ತು, ಪುಷ್ಪರಾಶಿ— ಇವುಗಳು ಸುತ್ತಲೂ ಹರಡಿದ್ದವು. ವಿಶ್ವಾಮಿತ್ರರು ಕುಳಿತಿದ್ದರು. ಯಜ್ಞಕುಂಡವು ಧಗ್ಗನೆ ಜ್ವಲಿಸಲಾರಂಭಿಸಿತು.* ವಿಧಿವತ್ತಾಗಿ ಮಂತ್ರಗಳನ್ನು ಹೇಳುತ್ತಿದ್ದರು. ಯಜ್ಞವು ನಡೆಯುತ್ತಿತ್ತು. ಇದ್ದಕ್ಕಿದ್ದಂತೆ ಆಕಾಶದಲ್ಲಿ ಭಯಂಕರವಾದ ಕೋಲಾಹಲ ಶಬ್ದವಾಯಿತು (೯-೧೦). ಮಳೆಗಾಲದಲ್ಲಿ ಮೋಡವು ಗಗನವನ್ನು ಆವರಿಸಿ (ಸಿಡಿಲು, ಗುಡುಗು, ಮಳೆಗಳನ್ನು) ಸುರಿಸು

---

* ಹೀಗೆ ವೇದಿಯು ಇದ್ದಕ್ಕಿದ್ದಂತೆ ಜ್ವಲಿಸುವುದು ಉತ್ಪಾತಚಿಹ್ನೆ.

ಮಾರೀಚಶ್ಚ ಸುಬಾಹುಶ್ಚ ತಯೋರನುಚರಾಸ್ತಥಾ ।
ಆಗಮ್ಯ ಭೀಮಸಂಕಾಶಾ ರುಧಿರೌಘಾನವಾಸೃಜನ್ ॥ ೧೨

ತಾಂ ತೇನ ರುಧಿರೌಘೇಣ ವೇದಿಂ ವೀಕ್ಷ್ಯ ಸಮುಕ್ಷಿತಾಮ್ ।
ಸಹಸಾಭಿದ್ರುತೋ ರಾಮಸ್ತಾನಪಶ್ಯತ್ತತೋ ದಿವಿ ॥ ೧೩

ತಾವಾಪತಂತೌ ಸಹಸಾ ದೃಷ್ಟ್ವಾ ರಾಜೀವಲೋಚನಃ ।
ಲಕ್ಷ್ಮಣಂ ತ್ವಥ ಸಂಪ್ರೇಕ್ಷ್ಯ ರಾಮೋ ವಚನಮಬ್ರವೀತ್ ॥ ೧೪

ಪಶ್ಯ ಲಕ್ಷ್ಮಣ ದುರ್ವೃತ್ತಾನ್ ರಾಕ್ಷಸಾನ್ ಪಿಶಿತಾಶನಾನ್ ।
ಮಾನವಾಸ್ತ್ರಸಮಾಧೂತಾನನಿಲೇನ ಯಥಾ ಘನಾನ್ ॥ ೧೫

ಕರಿಷ್ಯಾಮಿ ನ ಸಂದೇಹೋ ನೋತ್ಸಹೇ ಹಂತುಮೀದೃಶಾನ್ ।
ಇತ್ಯುಕ್ತ್ವಾ ವಚನಂ ರಾಮಶ್ಚಾಪಂ ಸಂಧಾಯ ವೇಗವಾನ್ ॥ ೧೬

ಮಾನವಂ ಪರಮೋದಾರಮಸ್ತ್ರಂ ಪರಮಭಾಸ್ವರಮ್ ।
ಚಿಕ್ಷೇಪ ಪರಮಕ್ರುದ್ಧೋ ಮಾರೀಚೋರಸಿ ರಾಘವಃ ॥ ೧೭

---

ವಂತೆ, ಇಬ್ಬರು ರಾಕ್ಷಸರು ಮಾಯಾಬಲದಿಂದ ನಾನಾ ವಿಕಾರಗಳನ್ನು ಪ್ರದರ್ಶಿಸುತ್ತ ಗಗನಮಾರ್ಗದಲ್ಲಿ ನುಗ್ಗಿಬಂದರು. ಒಬ್ಬ ಮಾರೀಚ, ಇನ್ನೊಬ್ಬ ಸುಬಾಹು. ಅವರಿಬ್ಬರ ಹಿಂದೆ ಬೆಂಬಲಿಗರಾದ ಇತರ ರಾಕ್ಷಸರು. ಘೋರಾಕಾರದ ಆ ರಾಕ್ಷಸರು ನುಗ್ಗಿಬಂದು ರಕ್ತರಾಶಿಯನ್ನು ಚೆಲ್ಲಿದರು (೧೧-೧೨). ಯಜ್ಞವೇದಿಯ ಸಮೀಪದಲ್ಲಿ ರಕ್ತವು ಸುರಿದುದನ್ನು ಕಂಡು ರಾಮನು ಓಡುತ್ತ ಬಂದನು. (ಅಲ್ಲಿ-ಯಾರನ್ನೂ ಕಾಣದೆ) ಮೇಲೆ ನೋಡಲು ಆಕಾಶದಲ್ಲಿ ಮಾರೀಚ, ಸುಬಾಹುಗಳೂ ಇತರ ರಾಕ್ಷಸರೂ ನುಗ್ಗಿಬರುವುದು ಕಾಣಿಸಿತು. ರಾಮನು ಲಕ್ಷ್ಮಣನನ್ನು ಕುರಿತು "ಲಕ್ಷ್ಮಣ, ನೋಡುತ್ತಿರು. ಮಾಂಸಾಹಾರಿಗಳಾದ ಈ ದುಷ್ಟರಾಕ್ಷಸರನ್ನು, ಗಾಳಿಯು ಮೋಡಗಳನ್ನು ಚದರಿಸಿ ಹಾರಿಸುವಂತೆ ಮಾನವಾಸ್ತ್ರದಿಂದ ಈಗಲೇ ಹಾರಿಸಿಬಿಡುತ್ತೇನೆ. ಸಂದೇಹವೇನು? (೧೩-೧೫). ಇವರನ್ನು ಕೊಲ್ಲುವುದಕ್ಕೆ ಮನಸ್ಸಾಗದು" ಎಂದು ಹೇಳುತ್ತ ಪರಮಶ್ರೇಷ್ಠವಾದ ಪ್ರಜ್ವಲಿಸುವ ಮಾನವಾಸ್ತ್ರವನ್ನು ಧನುಸ್ಸಿಗೆ ಹೂಡಿ ಕ್ರೋಧದಿಂದ ಮಾರೀಚನ ಎದೆಗೆ ಗುರಿಯಿಟ್ಟು ಹೊಡೆ

**ಸ ತೇನ ಪರಮಾಸ್ತ್ರೇಣ ಮಾನವೇನ ಸಮಾಹಿತಃ ।**
**ಸಂಪೂರ್ಣಂ ಯೋಜನಶತಂ ಕ್ಷಿಪ್ತಃ ಸಾಗರಸಂಪ್ಲವೇ ॥ ೧೮**
**ವಿಚೇತನಂ ವಿಘೂರ್ಣಂತಂ ಶೀತೇಷುಬಲಪೀಡಿತಮ್ ।**
**ನಿರಸ್ತಂ ದೃಶ್ಯ ಮಾರೀಚಂ ರಾಮೋ ಲಕ್ಷ್ಮಣಮಬ್ರವೀತ್ ॥ ೧೯**
**ಪಶ್ಯ ಲಕ್ಷ್ಮಣ ಶೀತೇಷುಂ ಮಾನವಂ ಧರ್ಮಸಂಹಿತಮ್ ।**
**ಮೋಹಯಿತ್ವಾ ನಯತ್ಯೇನಂ ನ ಚ ಪ್ರಾಣೈರ್ವ್ಯಯುಜ್ಯತ ॥ ೨೦**
**ಇಮಾನಪಿ ವಧಿಷ್ಯಾಮಿ ನಿರ್ಘೃಣಾನ್ ದುಷ್ಟಚಾರಿಣಃ ।**
**ರಾಕ್ಷಸಾನ್ ಪಾಪಕರ್ಮಸ್ಥಾನ್ ಯಜ್ಞಘ್ನಾನ್ ಪಿಶಿತಾಶನಾನ್ ॥**
**ಇತ್ಯುಕ್ತ್ವಾ ಲಕ್ಷ್ಮಣಂ ಚಾಶು ಲಾಘವಂ ದರ್ಶಯನ್ನಿವ ।**
**ಸಂಗೃಹ್ಯ ಸುಮಹಚ್ಚಾಪಮಾಗ್ನೇಯಂ ರಘುನಂದನಃ ॥ ೨೨**
**ಸುಬಾಹೂರಸಿ ಚಿಕ್ಷೇಪ ಸ ವಿದ್ಧಃ ಪ್ರಾಪತದ್ಭುವಿ ।**
**ಶೇಷಾನ್ ವಾಯವ್ಯಮಾದಾಯ ನಿಜಘಾನ ಮಹಾಯಶಾಃ ॥ ೨೩**
**ರಾಘವಃ ಪರಮೋದಾರೋ ಮುನೀನಾಂ ಮುದಮಾವಹನ್ ।**
**ಸ ಹತ್ವಾ ರಾಕ್ಷಸಾನ್ ಸರ್ವಾನ್ ಯಜ್ಞಘ್ನಾನ್ ರಘುನಂದನಃ ॥**

---

ದನು (೧೬-೧೭). ಆ ಮಾನವಾಸ್ತ್ರವು ಮಾರೀಚನಿಗೆ ತಾಕಿ ಅವನನ್ನು ನೂರು ಯೋಜನ ದೂರ ಹಾರಿಸಿ ಸಮುದ್ರದಲ್ಲಿ ಕೆಡವಿತು. ಶೀತೇಷುವೆಂಬ ಆ ಮಾನವಾಸ್ತ್ರದ ಹೊಡೆತಕ್ಕೆ ತಲೆತಿರುಗಿ ಎಚ್ಚರದಪ್ಪಿ ತಳ್ಳಿಹೋಗುತ್ತಿದ್ದ ಮಾರೀಚನನ್ನು ನೋಡುತ್ತ ರಾಮನು "ಲಕ್ಷ್ಮಣ, ಶೀತಾಂಶುವೆಂಬ ಈ ಮಾನವಾಸ್ತ್ರವನ್ನು ನೋಡು. ಅವನನ್ನು ಎಚ್ಚರದಪ್ಪಿಸಿ ತಳ್ಳಿಕೊಂಡು ಹೋಗುತ್ತಿದೆ. ಅವನು ಸಾಯಲಿಲ್ಲ (೧೮-೨೦). ಈ ರಾಕ್ಷಸರು ನಿರ್ದಯರು ; ದುಷ್ಟರು ; ಪಾಪಿಗಳು ; ಯಜ್ಞಕ್ಕೆ ವಿಘ್ನಮಾಡತಕ್ಕವರು ; ರಕ್ತಪಾಯಿಗಳು. ಇವರನ್ನು ನಾಶಮಾಡುತ್ತೇನೆ" ಎಂದು ಹೇಳಿ ಕೈಚಳಕದಿಂದ ಮರುಕ್ಷಣ ದಲ್ಲಿ ಆಗ್ನೇಯಾಸ್ತ್ರವನ್ನು ಸುಬಾಹುವಿನ ಎದೆಗೆ ಹೊಡೆದನು ಸುಬಾಹುವು (ಸತ್ತು) ನೆಲದಮೇಲೆ ಬಿದ್ದನು. ಆಮೇಲೆ ರಾಮನು ವಾಯವ್ಯಾಸ್ತ್ರವನ್ನು ಪ್ರಯೋಗಿಸಿ ಉಳಿದ ರಾಕ್ಷಸರನ್ನು ವಿಧ್ವಂಸಗೊಳಿಸಿದನು (೨೧-೨೩). ಮುನಿಗಳಿಗೆ ಪರಮಾನಂದವಾಯಿತು. ಈ ಪ್ರಕಾರ ರಘುನಂದನನು ಯಜ್ಞ

ಋಷಿಭಿಃ ಪೂಜಿತಸ್ತತ್ರ ಯಥೇಂದ್ರೋ ವಿಜಯೀ ಪುರಾ ।
ಅಥ ಯಜ್ಞೇ ಸಮಾಪ್ತೇ ತು ವಿಶ್ವಾಮಿತ್ರೋ ಮಹಾಮುನಿಃ ॥ ೨೫

ನಿರೀತಿಕಾ ದಿಶೋ ದೃಷ್ಟ್ವಾ ಕಾಕುತ್ಸ್ಥಮಿದಮಬ್ರವೀತ್ ।
ಕೃತಾರ್ಥೋಽಸ್ಮಿ ಮಹಾಬಾಹೋ ಕೃತಂ ಗುರುವಚಸ್ತ್ವಯಾ ॥

ಸಿದ್ಧಾಶ್ರಮಮಿದಂ ಸತ್ಯಂ ಕೃತಂ ರಾಮ ಮಹಾಯಶಃ ।
ಸ ಹಿ ರಾಮಂ ಪ್ರಶಸ್ಯೈವಂ ತಾಭ್ಯಾಂ ಸಂಧ್ಯಾಮುಪಾಗಮತ್ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ತ್ರಿಂಶಃ ಸರ್ಗಃ



ವಿಘ್ನಕಾರಿಗಳಾದ ರಾಕ್ಷಸರನ್ನು ನಾಶಗೊಳಿಸಲು, ಅಸುರರನ್ನು ಗೆದ್ದುಬಂದ ದೇವೇಂದ್ರನನ್ನು ಸಂಮಾನಿಸುವಂತೆ ಋಷಿಗಳು ಅವನನ್ನು ಗೌರವಿಸಿದರು ಆನಂತರ ಯಜ್ಞವು ಸಮಾಪ್ತವಾಯಿತು (೨೪–೨೫). ವಿಶ್ವಾಮಿತ್ರಮುನಿಗಳು (ಸುತ್ತಲೂ ನೋಡಿ) ದಿಕ್ಕುಗಳೆಲ್ಲವೂ ನಿರ್ಬಾಧವಾಗಿರುವುದನ್ನು ಕಂಡು ಶ್ರೀರಾಮನನ್ನು ಹತ್ತಿರ ಕರೆದು "ಹೇ ಮಹಾಬಾಹು—ರಾಮ, ನನ್ನ ಉದ್ದೇಶ ನೆರವೇರಿತು ಗುರ್ವಾಜ್ಞೆಯನ್ನು ನಡೆಸಿದ್ದೀಯೆ. ಈ ಸಿದ್ಧಾಶ್ರಮವು ನಿಜವಾಗಿ ಸಿದ್ಧಾಶ್ರಮವೇ ಆಯಿತು" ಎಂದು ಹೇಳಿ ರಾಮಲಕ್ಷ್ಮಣರೊಡನೆ ಕುಳಿತು ಸಂಧ್ಯಾವಂದನೆಯನ್ನಾಚರಿಸಿದರು (೨೬–೨೭)

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಮೂವತ್ತನೆಯ ಸರ್ಗ



## ಏಕತ್ರಿಂಶಃ ಸರ್ಗಃ

### ಮಿಥಿಲಾಪ್ರಸ್ಥಾನಮ್

ಅಥ ತಾಂ ರಜನೀಂ ತತ್ರ ಕೃತಾರ್ಥೌ ರಾಮಲಕ್ಷ್ಮಣೌ ।
ಊಷತುರ್ಮುದಿತೌ ವೀರೌ ಪ್ರಹೃಷ್ಟೇನಾಂತರಾತ್ಮನಾ ॥ ೧

ಪ್ರಭಾತಾಯಾಂ ತು ಶರ್ವರ್ಯಾಂ ಕೃತಪೌರ್ವಾಹ್ಣಿಕಕ್ರಿಯೌ ।
ವಿಶ್ವಾಮಿತ್ರಮೃಷೀಂಶ್ಚಾನ್ಯಾನ್ ಸಹಿತಾವಭಿಜಗ್ಮತುಃ ॥ ೨

ಅಭಿವಾದ್ಯ ಮುನಿಶ್ರೇಷ್ಠಂ ಜ್ವಲಂತಮಿವ ಪಾವಕಮ್ ।
ಊಚತುರ್ಮಧುರೋದಾರಂ ವಾಕ್ಯಂ ಮಧುರಭಾಷಿಣೌ ॥ ೩

ಇಮೌ ಸ್ಮೋ ಮುನಿಶಾರ್ದೂಲ ಕಿಂಕರೌ ಸಮುಪಸ್ಥಿತೌ ।
ಆಜ್ಞಾಪಯ ಯಥೇಷ್ಟಂ ವೈ ಶಾಸನಂ ಕರವಾವ ಕಿಮ್ ॥ ೪

ಏವಮುಕ್ತಾಸ್ತತಸ್ತಾಭ್ಯಾಂ ಸರ್ವ ಏವ ಮಹರ್ಷಯಃ ।
ವಿಶ್ವಾಮಿತ್ರಂ ಪುರಸ್ಕೃತ್ಯ ರಾಮಂ ವಚನಮಬ್ರುವನ್ ॥ ೫

## ಸರ್ಗ ೩೧

ಶ್ರೀರಾಮನಿಗೆ ಶಿವಧನುಸ್ಸನ್ನು ತೋರಿಸಬೇಕೆಂಬ ಉದ್ದೇಶದಿಂದ
ವಿಶ್ವಾಮಿತ್ರರು ರಾಮಲಕ್ಷ್ಮಣರೊಡನೆ ಜನಕರಾಜನ
ಪಟ್ಟಣಕ್ಕೆ ಪ್ರಯಾಣ ಮಾಡುವುದು.

ಹೀಗೆ ವಿಶ್ವಾಮಿತ್ರರ ಕಾರ್ಯವನ್ನು ನೆರವೇರಿಸಿಕೊಟ್ಟುದಕ್ಕಾಗಿ ರಾಮಲಕ್ಷ್ಮಣರ ಅಂತರಂಗಕ್ಕೆ ತೃಪ್ತಿಯಾಯಿತು. ಆ ವೀರರು ಸಂತೋಷದಿಂದ ಆ ರಾತ್ರಿಯನ್ನು ಯಜ್ಞಶಾಲೆಯಲ್ಲಿ ಕಳೆದರು. ಬೆಳಗಾಗುವುದರಲ್ಲೆದ್ದು ಪ್ರಾತರಾಹ್ನಿಕವನ್ನು ಮುಗಿಸಿ ವಿಶ್ವಾಮಿತ್ರರೂ ಋಷಿಗಳೂ ಇದ್ದಲ್ಲಿಗೆ ಹೋದರು (೧-೨). ಅಲ್ಲಿ ಅಗ್ನಿಯಂತೆ ವಿರಾಜಿಸುತ್ತಿದ್ದ ವಿಶ್ವಾಮಿತ್ರ ಮುನಿಗಳಿಗೆ ಅಭಿವಾದನೆಮಾಡಿ ಮಧುರವಾದ ನುಡಿಯಿಂದ "ಮಹರ್ಷಿಗಳೆ, ತಮ ಸೇವಕರಾದ ನಾವು ಬಂದಿದ್ದೇವೆ. ನಾವು ಏನುಮಾಡಬೇಕು? ಅಪ್ಪಣೆಯಾಗಲಿ" ಎಂದರು (೩-೪). ಅಲ್ಲಿದ್ದ ಋಷಿಗಳೆಲ್ಲರೂ ವಿಶ್ವಾಮಿತ್ರ

ಮೈಥಿಲಸ್ಯ ನರಶ್ರೇಷ್ಠ ಜನಕಸ್ಯ ಭವಿಷ್ಯತಿ ।
ಯಜ್ಞಃ ಪರಮಧರ್ಮಿಷ್ಠಸ್ತತ್ರ ಯಾಸ್ಯಾಮಹೇ ವಯಮ್ ॥ ೬

ತ್ವಂ ಚೈವ ನರಶಾರ್ದೂಲ ಸಹಾಸ್ಮಾಭಿರ್ಗಮಿಷ್ಯಸಿ ।
ಅದ್ಭುತಂ ಚ ಧನೂರತ್ನಂ ತತ್ರೈಕಂ ದ್ರಷ್ಟುಮರ್ಹಸಿ ॥ ೭

ತದ್ಧಿ ಪೂರ್ವಂ ನರಶ್ರೇಷ್ಠ ದತ್ತಂ ಸದಸಿ ದೈವತೈಃ ।
ಅಪ್ರಮೇಯಬಲಂ ಘೋರಂ ಮಖೇ ಪರಮಭಾಸ್ವರಮ್ ॥ ೮

ನಾಸ್ಯ ದೇವಾ ನ ಗಂಧರ್ವಾ ನಾಸುರಾ ನ ಚ ರಾಕ್ಷಸಾಃ ।
ಕರ್ತುಮಾರೋಪಣಂ ಶಕ್ತಾ ನ ಕಥಂಚನ ಮಾನುಷಾಃ ॥ ೯

ಧನುಷಸ್ತಸ್ಯ ವೀರ್ಯಂ ತು ಜಿಜ್ಞಾಸಂತೋ ಮಹೀಕ್ಷಿತಃ ।
ನ ಶೇಕುರಾರೋಪಯಿತುಂ ರಾಜಪುತ್ರಾ ಮಹಾಬಲಾಃ ॥ ೧೦

ತದ್ಧನುರ್ನರಶಾರ್ದೂಲ ಮೈಥಿಲಸ್ಯ ಮಹಾತ್ಮನಃ ।
ತತ್ರ ದ್ರಕ್ಷ್ಯಸಿ ಕಾಕುತ್ಸ್ಥ ಯಜ್ಞಂ ಚಾದ್ಭುತದರ್ಶನಮ್ ॥ ೧೧

---

ರೊಡನೆ ಧ್ವನಿಗೂಡಿ " ರಾಮ, ಮಿಥಿಲಾಧಿಪತಿಯಾದ ಜನಕಮಹಾರಾಜನು ಧರ್ಮಸಾಧಕವಾದ ಒಂದು ಯಜ್ಞವನ್ನು ಮಾಡುವನು. ನಾವೆಲ್ಲರೂ ಅಲ್ಲಿಗೆ ಹೋಗುತ್ತೇವೆ. ನೀನೂ ನಮ್ಮೊಡನೆ ಆಗಮಿಸು. ಅಲ್ಲಿ ಒಂದು ಅದ್ಭುತವಾದ ಧನುಸ್ಸಿದೆ. ನೀನು ನೋಡಬೇಕಾದ ಧನುಸ್ಸು (೫-೭). ಅದನ್ನು ಹಿಂದೆ ಯಜ್ಞಮಾಡುವಾಗ ಸಭೆಯಲ್ಲಿ (ಜನಕರಾಜನಿಗೆ) ದೇವತೆಗಳು ಕೊಟ್ಟಿದ್ದಾರೆ. ಘೋರವಾದ ಆ ಧನುಸ್ಸು ಅಪರಿಮಿತಶಕ್ತಿಯುಳ್ಳದ್ದು. ದಿವ್ಯಪ್ರಭೆಯಿಂದ ಬೆಳಗುತ್ತಿದೆ. ಅದರ ಹೆದೆಯನ್ನೇರಿಸಲು ದೇವ ಗಂಧರ್ವರಿಗೂ ಸಾಧ್ಯವಿಲ್ಲ, ಅಸುರರಾಕ್ಷಸರಿಗೂ ಸಾಧ್ಯವಿಲ್ಲ. ಇನ್ನು ಮಾನವರಿಗೆ ಶಕ್ಯವೆ? (೮-೯). ಎಷ್ಟೋ ಮ ಮಹಾಬಲಶಾಲಿಗಳಾದ ಭೂಪಾಲರೂ ರಾಜಪುತ್ರರೂ ಆ ಧನುಸ್ಸಿನ ವೀರ್ಯವನ್ನು ಪರೀಕ್ಷೆಮಾಡಬೇಕೆಂದು ಪ್ರಯತ್ನಿಸಿದರು. ಯಾರಿಗೂ ಹೆದೆಯನ್ನೇರಿಸಲು ಸಾಧ್ಯವಾಗಲಿಲ್ಲ. ಪುರುಷೋತ್ತಮ-ರಾಮ, ಮಹಾತ್ಮನಾದ ಮಿಥಿಲಾಧಿಪತಿಯ ಆ ಧನುಸ್ಸನ್ನು ನೀನು ಅಲ್ಲಿ ನೋಡಬಹುದು. ಅದ್ಭುತವಾದ ಆ ಯಜ್ಞವನ್ನೂ ನೋಡಬಹುದು (೧೦-೧೧).

ತದ್ಧಿ ಯಜ್ಞಫಲಂ ತೇನ ಮೈಥಿಲೇನೋತ್ತಮಂ ಧನುಃ ।
ಯಾಚಿತಂ ನರಶಾರ್ದೂಲ ಸುನಾಭಂ ಸರ್ವದೈವತೈಃ ॥ ೧೨

ಆಯಾಗಭೂತಂ ನೃಪತೇಸ್ತಸ್ಯ ವೇಶ್ಮನಿ ರಾಘವ ।
ಅರ್ಚಿತಂ ವಿವಿಧೈರ್ಗಂಧೈರ್ಧೂಪೈಶ್ಚಾಗರುಗಂಧಿಭಿಃ ॥ ೧೩

ಏವಮುಕ್ತ್ವಾ ಮುನಿವರಃ ಪ್ರಸ್ಥಾನಮಕರೋತ್ತದಾ ।
ಸರ್ಷಿಸಂಘಃ ಸಕಾಕುತ್ಸ್ಥ ಆಮಂತ್ರ್ಯ ವನದೇವತಾಃ ॥ ೧೪

ಸ್ವಸ್ತಿ ವೋಽಸ್ತು ಗಮಿಷ್ಯಾಮಿ ಸಿದ್ಧಃ ಸಿದ್ಧಾಶ್ರಮಾದಹಮ್ ।
ಉತ್ತರೇ ಜಾಹ್ನವೀತೀರೇ ಹಿಮವಂತಂ ಶಿಲೋಚ್ಚಯಮ್ ॥ ೧೫

ಪ್ರದಕ್ಷಿಣಂ ತತಃ ಕೃತ್ವಾ ಸಿದ್ಧಾಶ್ರಮಮನುತ್ತಮಮ್ ।
ಉತ್ತರಾಂ ದಿಶಮುದ್ದಿಶ್ಯ ಪ್ರಸ್ಥಾತುಮುಪಚಕ್ರಮೇ ॥ ೧೬

---

ಜನಕನು ಹಿಂದೆ ಯಜ್ಞಮಾಡಿದಾಗ ದೇವತೆಗಳು ಸುಪ್ರೀತರಾದರು. ಆಗ ಮಿಥಿಲಾಧಿಪತಿಯು ಯಜ್ಞಫಲವಾಗಿ ಆ ಧನುಸ್ಸನ್ನು ಅನುಗ್ರಹಿಸಬೇಕೆಂದು ಪ್ರಾರ್ಥಿಸಿಕೊಳ್ಳಲು, ದೇವತೆಗಳು ರಮಣೀಯ ಮುಷ್ಟಿಬಂಧನವುಳ್ಳ ಆ ಧನುಸ್ಸನ್ನು ಜನಕನಿಗೆ ಕೊಟ್ಟಿದ್ದಾರೆ.* ಆ ಧನುಸ್ಸನ್ನು ಯಜ್ಞದೇವತೆಯಂತೆ ರಾಜನ ಅರಮನೆಯಲ್ಲಿಟ್ಟು ವಿವಿಧ ಗಂಧಮಾಲ್ಯಾದಿಗಳಿಂದ ಅರ್ಚಿಸುತ್ತಿದ್ದಾರೆ" ಎಂದು ಹೇಳಿದರು (೧೨-೧೩). (ರಾಮಲಕ್ಷ್ಮಣರೂ ಅಲ್ಲಿಗೆ ಹೊರಡಲು ಸಿದ್ಧರಾದರು.) ವಿಶ್ವಾಮಿತ್ರಮುನಿಗಳು ಅವರ ಜೊತೆಗೂಡಿ ಋಷಿಸಂಘದೊಡನೆ ಪ್ರಯಾಣೋನ್ಮುಖರಾದರು. ತಪೋಧನರಾದ ವಿಶ್ವಾಮಿತ್ರರು ವನದೇವತೆಗಳನ್ನುದ್ದೇಶಿಸಿ "ವನದೇವತೆಗಳೆ, ನಿಮಗೆ ಮಂಗಳವಾಗಲಿ. ನಿರ್ವಿಘ್ನವಾಗಿ ನನ್ನ ಯಜ್ಞವು ಸಿದ್ಧಿಸಿತು. ಇನ್ನು ನಾನು ಸಿದ್ಧಾಶ್ರಮದಿಂದ ಹೊರಡುವೆನು ಉತ್ತರ ದಿಕ್ಕಿನಲ್ಲಿ ಗಂಗಾ

---

* ಜನಕ ಎಂಬುದು ವಂಶದ ಹೆಸರು. ದೇವರಾತನೆಂಬ ಪ್ರಾಚೀನ ಜನಕರಾಜನಿಗೆ ದೇವತೆಗಳಿಂದ ಸಮೇತನಾಗಿ ಶಿವನು ಆ ಧನುಸ್ಸನ್ನು ಅನುಗ್ರಹಿಸಿದ್ದನು. ಅದು ವಂಶಪರಂಪರೆಯಿಂದ ಸೀತಾದೇವಿಯ ತಂದೆಯ ವಶಕ್ಕೆ ಬಂದಿತು.

ಪ್ರೀತಶ್ಚ ಭಗವಾನೀಶಸ್ತ್ರಿಶೂಲೀ ನೀಲಲೋಹಿತಃ ।
ಪ್ರದದೌ ಶತ್ರುನಾಶಾರ್ಥಂ ಜನಕಾಯಾದ್ಭುತಂ ಧನುಃ ॥

—ಕೂರ್ಮಪುರಾಣ

ತಂ ಪ್ರಯಾಂತಂ ಮುನಿವರಮನ್ವಯಾದನುಸಾರಿಣಾಮ್ ।
ಶಕಟೀಶತಮಾತ್ರಂ ಚ ಪ್ರಯಾಣೇ ಬ್ರಹ್ಮವಾದಿನಾಮ್ ॥ ೧೭

ಮೃಗಪಕ್ಷಿಗಣಾಶ್ಚೈವ ಸಿದ್ಧಾಶ್ರಮನಿವಾಸಿನಃ ।
ಅನುಜಗ್ಮುರ್ಮಹಾತ್ಮಾನಂ ವಿಶ್ವಾಮಿತ್ರಂ ಮಹಾಮುನಿಮ್ ॥ ೧೮

ನಿವರ್ತಯಾಮಾಸ ತತಃ ಪಕ್ಷಿಸಂಘಾನ್ ಮೃಗಾನಪಿ ।
ತೇ ಗತ್ವಾ ದೂರಮಧ್ವಾನಂ ಲಂಬಮಾನೇ ದಿವಾಕರೇ ॥ ೧೯

ವಾಸಂ ಚಕ್ರುರ್ಮುನಿಗಣಾಃ ಶೋಣಾಕೂಲೇ ಸಮಾಹಿತಾಃ ।
ತೇಽಸ್ತಂ ಗತೇ ದಿನಕರೇ ಸ್ನಾತ್ವಾ ಹುತಹುತಾಶನಾಃ ॥ ೨೦

ವಿಶ್ವಾಮಿತ್ರಂ ಪುರಸ್ಕೃತ್ಯ ನಿಷೇದುರಮಿತೌಜಸಃ ।
ರಾಮೋಽಪಿ ಸಹಸೌಮಿತ್ರಿರ್ಮುನೀಂಸ್ತಾನಭಿಪೂಜ್ಯ ಚ ॥ ೨೧

ಅಗ್ರತೋ ನಿಷಸಾದಾಥ ವಿಶ್ವಾಮಿತ್ರಸ್ಯ ಧೀಮತಃ ।
ಅಥ ರಾಮೋ ಮಹಾತೇಜಾ ವಿಶ್ವಾಮಿತ್ರಂ ಮಹಾಮುನಿಮ್ ॥

---

ನದೀ ತೀರದಲ್ಲಿ ಪ್ರಸರಿಸಿರುವ ಹಿಮಾಲಯಪರ್ವತದ ಕಡೆಗೆ ಹೋಗುತ್ತೇನೆ" ಎಂದು ನುಡಿದು ಹೊರಟರು (೧೪-೧೭). ಅವರ ಹಿಂದೆ ಒಂದು ನೂರು ಗಾಡಿಗಳಲ್ಲಿ (ಅಗ್ನಿಹೋತ್ರಸಂಭಾರಾದಿಗಳನ್ನು ಹೇರಿಕೊಂಡು) ಬ್ರಹ್ಮವಾದಿಗಳಾದ ಋಷಿಗಳ ಗುಂಪು ಹೊರಟಿತು. ಸಿದ್ಧಾಶ್ರಮದಲ್ಲಿದ್ದ ಮೃಗಪಕ್ಷಿಗಳೂ ಕೂಡ ಗುಂಪುಕೂಡಿ (ಭಕ್ತಿಯಿಂದ) ವಿಶ್ವಾಮಿತ್ರಮುನಿಗಳ ಹಿಂದೆ ಹೊರಟವು (೧೭-೧೮). ಅವುಗಳಿಗೆ ಬರಬೇಡಿರೆಂದು ಹೇಳಿ ತಡೆದು ಋಷಿಗಳೆಲ್ಲರೂ ಬಹುದೂರ ಪ್ರಯಾಣಮಾಡಿದರು. ಸೂರ್ಯನು ಮುಳುಗುವ ಹೊತ್ತಿಗೆ ಶೋಣಾನದೀತೀರವನ್ನು ಸೇರಿದರು. ಸೂರ್ಯಾಸ್ತವಾಗಲು ಅವರೆಲ್ಲರೂ ಸ್ನಾನಮಾಡಿ ಅಗ್ನಿಕಾರ್ಯಾದಿಗಳನ್ನು ಮುಗಿಸಿ ವಿಶ್ವಾಮಿತ್ರರನ್ನು ಮುಂದೆಮಾಡಿಕೊಂಡು ಕುಳಿತರು. ರಾಮಲಕ್ಷ್ಮಣರು ಮುನಿಗಳಿಗೆ ಅಭಿವಂದಿಸಿ ವಿಶ್ವಾಮಿತ್ರರ ಎದುರಿಗೆ ಕುಳಿತುಕೊಂಡರು (೧೯-೨೧). ಶ್ರೀರಾಮನು ಕುತೂಹಲದಿಂದ ವಿಶ್ವಾಮಿತ್ರರನ್ನು ಕುರಿತು "ಭಗವನ್, ಸಮೃದ್ಧವನಗಳಿಂದ ಶೋಭಿಸುವ ಈ ದೇಶ ಯಾವುದು? ಇದರ ವೃತ್ತಾಂತ

ಚಪ್ರಚ್ಛ ನರಶಾರ್ದೂಲಃ ಕೌತೂಹಲಸಮನ್ವಿತಃ ।
ಭಗವನ್ ಕೋನ್ವಯಂ ದೇಶಃ ಸಮೃದ್ಧವನಶೋಭಿತಃ ॥ ೨೩

ಶ್ರೋತುಮಿಚ್ಛಾಮಿ ಭದ್ರಂ ತೇ ವಕ್ತುಮರ್ಹಸಿ ತತ್ತ್ವತಃ ।
ಚೋದಿತೋ ರಾಮವಾಕ್ಯೇನ ಕಥಯಾಮಾಸ ಸುವ್ರತಃ ॥ ೨೪

ತಸ್ಯ ದೇಶಸ್ಯ ನಿಖಿಲಮೃಷಿಮಧ್ಯೇ ಮಹಾತಪಾಃ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕತ್ರಿಂಶಃ ಸರ್ಗಃ



ವನ್ನು ಕೇಳಲು ಇಚ್ಛಿಸುತ್ತೇನೆ" ಎಂದನು. ರಾಮವಾಕ್ಯವು ವಿಶ್ವಾಮಿತ್ರರನ್ನು ಮಾತನಾಡುವಂತೆ ಪ್ರೇರಿಸಿತು. ಅವರು ಋಷಿಮಧ್ಯದಲ್ಲಿ ಸಕಲ ವೃತ್ತಾಂತವನ್ನೂ ಹೇಳತೊಡಗಿದರು (೨೨-೨೪).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಮೂವತ್ತೊಂದನೆಯ ಸರ್ಗ



## ದ್ವಾತ್ರಿಂಶಃ ಸರ್ಗಃ

### ಕುಶನಾಭಕನ್ಯೋಪಾಖ್ಯಾನಮ್

ಬ್ರಹ್ಮಯೋನಿರ್ಮಹಾನಾಸೀತ್ ಕುಶೋ ನಾಮ ಮಹಾತಪಾಃ ।
ಅಕ್ಲಿಷ್ಟವ್ರತಧರ್ಮಜ್ಞಃ ಸಜ್ಜನಪ್ರತಿಪೂಜಕಃ ॥ ೧

ಸ ಮಹಾತ್ಮಾ ಕುಲೀನಾಯಾಂ ಯುಕ್ತಾಯಾಂ ಸುಗುಣೋಲ್ಬಣಾ
ವೈದರ್ಭ್ಯಾಂ ಜನಯಾಮಾಸ ಚತುರಃ ಸದೃಶಾನ್ ಸುತಾನ್ ॥ ೨

ಕುಶಾಂಬಂ ಕುಶನಾಭಂ ಚ ಅಧೂರ್ತರಜಸಂ ವಸುಮ್ ।
ದೀಪ್ತಿಯುಕ್ತಾನ್ ಮಹೋತ್ಸಾಹಾನ್ ಕ್ಷತ್ರಧರ್ಮಚಿಕೀರ್ಷಯಾ

ತಾನುವಾಚ ಕುಶಃ ಪುತ್ರಾನ್ ಧರ್ಮಿಷ್ಠಾನ್ ಸತ್ಯವಾದಿನಃ ।
ಕ್ರಿಯತಾಂ ಪಾಲನಂ ಪುತ್ರಾ ಧರ್ಮಂ ಪ್ರಾಪ್ಸ್ಯಥ ಪುಷ್ಕಲಮ್ ॥

## ಸರ್ಗ ೩೨

ಕುಶನಾಭವೃತ್ತಾಂತ. ಅವನ ನೂರುಮಂದಿ ಹೆಣ್ಣುಮಕ್ಕಳನ್ನು ವಾಯುವು ಕಾಮಿಸುವುದು. ಅವರು ವಾಯುವನ್ನು ಸ್ವಯಂವರ ಮಾಡಿಕೊಳ್ಳಲು ನಿರಾಕರಿಸುವುದು. ವಾಯುವಿನ ಪ್ರಭಾವದಿಂದ ಅವರು ಕುಬ್ಜೆಯರಾಗುವುದು.

ವಿಶ್ವಾಮಿತ್ರಮುನಿಗಳು ಹೇಳಿದರು : "ಪೂರ್ವದಲ್ಲಿ ಬ್ರಹ್ಮನ ಮಾನಸ ಪುತ್ರನಾದ ಕುಶನೆಂಬ ಮಹಾತ್ಮನಿದ್ದನು. ಅವನು ವ್ರತನಿಷ್ಠನೂ ಧರ್ಮಜ್ಞನೂ ಸಜ್ಜನಪೂಜಕನೂ ಆಗಿದ್ದನು. ಅವನಿಗೆ ಕುಲೀನಳಾದ ವೈದರ್ಭಿಯು ಪತ್ನಿ. ಕುಶನಿಗೆ ಅವಳಲ್ಲಿ ವೀರರಾದ ನಾಲ್ವರು ಪುತ್ರರು ಹುಟ್ಟಿದರು (೧-೨). ಕುಶಾಂಬ, ಕುಶನಾಭ, ಅಧೂರ್ತರಜಸ, ವಸು— ಎಂದು ಅವರ ಹೆಸರು. ಅವರೆಲ್ಲರೂ ತೇಜಸ್ವಿಗಳು, ಉತ್ಸಾಹಶಾಲಿಗಳು. ಕುಶನು ಕ್ಷತ್ರಧರ್ಮವನ್ನು ಪರಿಪಾಲಿಸುವ ಉದ್ದೇಶದಿಂದ ಅವರಿಗೆ "ಮಕ್ಕಳಿರಾ, ಪ್ರಜಾಪಾಲನೆಯನ್ನು ಮಾಡಿ ಧರ್ಮವನ್ನು ಸಂಪಾದಿಸಿರಿ"

**ಕುಶಸ್ಯ ವಚನಂ ಶ್ರುತ್ವಾ ಚತ್ವಾರೋ ಲೋಕಸಂಮತಾಃ ।**
**ನಿವೇಶಂ ಚಕ್ರಿರೇ ಸರ್ವೇ ಪುರಾಣಾಂ ನೃವರಾಸ್ತದಾ ॥ ೫**

**ಕುಶಾಂಬಸ್ತು ಮಹಾತೇಜಾಃ ಕೌಶಾಂಬೀಮಕರೋತ್ ಪುರೀಮ್**
**ಕುಶನಾಭಸ್ತು ಧರ್ಮಾತ್ಮಾ ಪುರಂ ಚಕ್ರೇ ಮಹೋದಯಮ್ ॥ ೬**

**ಅಧೂರ್ತರಜಸೋ ರಾಮ ಧರ್ಮಾರಣ್ಯಾಂ ಮಹೀಪತಿಃ ।**
**ಚಕ್ರೇ ಪುರವರಂ ರಾಜಾ ವಸುಶ್ಚಕ್ರೇ ಗಿರಿವ್ರಜಮ್ ॥ ೭**

**ಏಷಾ ವಸುಮತೀ ರಾಮ ವಸೋಸ್ತಸ್ಯ ಮಹಾತ್ಮನಃ ।**
**ಏತೇ ಶೈಲವರಾಃ ಪಂಚ ಪ್ರಕಾಶಂತೇ ಸಮಂತತಃ ॥ ೮**

**ಸುಮಾಗಧೀ ನದೀ ಪುಣ್ಯಾ ಮಗಧಾ ವಿಶ್ರುತಾ ಯಯೌ ।**
**ಪಂಚಾನಾಂ ಶೈಲಮುಖ್ಯಾನಾಂ ಮಧ್ಯೇ ಮಾಲೇವ ಶೋಭತೇ ॥**

**ಸೈಷಾ ಹಿ ಮಾಗಧೀ ರಾಮ ವಸೋಸ್ತಸ್ಯ ಮಹಾತ್ಮನಃ ।**
**ಪೂರ್ವಾಭಿಚರಿತಾ ರಾಮ ಸುಕ್ಷೇತ್ರಾ ಸಸ್ಯಮಾಲಿನೀ ॥ ೧೦**

**ಕುಶನಾಭಸ್ತು ರಾಜರ್ಷಿಃ ಕನ್ಯಾಶತಮನುತ್ತಮಮ್ ।**
**ಜನಯಾಮಾಸ ಧರ್ಮಾತ್ಮಾ ಘೃತಾಚ್ಯಾಂ ರಘುನಂದನ ॥ ೧೧**

---

ಎಂದು ಬೋಧಿಸಿದನು (೩-೪). ಆ ನಾಲ್ವರು ಮಕ್ಕಳೂ ತಂದೆಯ ಮಾತಿನಂತೆ ನಗರಗಳನ್ನು ಸ್ಥಾಪಿಸಿಕೊಂಡರು. ಕುಶಾಂಬನು ಕೌಶಾಂಬಿ, ಕುಶನಾಭನು ಮಹೋದಯ, ಅಧೂರ್ತರಜಸನು ಧರ್ಮಾರಣ್ಯ, ವಸುವು ಗಿರಿವ್ರಜ ಎಂಬ ನಗರಗಳನ್ನು ನಿರ್ಮಿಸಿಕೊಂಡರು (೫-೭). ಗಿರಿವ್ರಜಕ್ಕೆ ವಸುಮತಿ ಎಂದು ಇನ್ನೊಂದು ಹೆಸರು. ಇದೇ ವಸುವಿಗೆ ಸೇರಿದ ವಸುಮತಿ. ಇಲ್ಲಿ ಸುತ್ತಲೂ ಐದು ಪರ್ವತಗಳಿವೆ. ಈ ಶೋಣಾನದಿಯು ಮಗಧದೇಶದಲ್ಲಿ ಹರಿಯುವುದರಿಂದ ಮಾಗಧಿ ಎನ್ನುತ್ತಾರೆ. ಇದು ಈ ಐದು ಪರ್ವತಗಳ ಮಧ್ಯದಲ್ಲಿ ಮಾಲಾಕಾರವಾಗಿ ಹರಿಯುತ್ತದೆ (೮-೯). ರಾಮ, ಇದು ಮಹಾತ್ಮನಾದ ವಸುವಿಗೆ ಸೇರಿದ್ದು. ಈ ನದಿಯು ಪೂರ್ವಾಭಿಮುಖವಾಗಿ ಹರಿಯುತ್ತ ಇಕ್ಕೆಲಗಳಲ್ಲಿ ಗದ್ದೆಗಳಿಂದಲೂ ಸಸ್ಯಗಳಿಂದಲೂ ಶೋಭಿಸುತ್ತದೆ. ರಾಜರ್ಷಿಯಾದ ಕುಶನಾಭನಿಗೆ ಘೃತಾಚಿಯಲ್ಲಿ ನೂರುಮಂದಿ ಹೆಣ್ಣು

**ತಾಸ್ತು ಯೌವನಶಾಲಿನ್ಯೋ ರೂಪವತ್ಯಃ ಸ್ವಲಂಕೃತಾಃ ।**
**ಉದ್ಯಾನಭೂಮಿಮಾಗಮ್ಯ ಪ್ರಾವೃಷೀವ ಶತಹ್ರದಾಃ ॥ ೧೨**

**ಗಾಯಂತ್ಯೋ ನೃತ್ಯಮಾನಾಶ್ಚ ವಾದಯಂತ್ಯಶ್ಚ ಸರ್ವಶಃ ।**
**ಆಮೋದಂ ಪರಮಂ ಜಗ್ಮುರ್ವರಾಭರಣಭೂಷಿತಾಃ ॥ ೧೩**

**ಅಥ ತಾಶ್ಚಾರುಸರ್ವಾಂಗ್ಯೋ ರೂಪೇಣಾಪ್ರತಿಮಾ ಭುವಿ ।**
**ಉದ್ಯಾನಮಧ್ಯೇ ಶೋಭಂತೇ ತಾರಾ ಇವ ಘನಾಂತರೇ ॥ ೧೪**

**ತಾಃ ಸರ್ವಗುಣಸಂಪನ್ನಾ ರೂಪಯೌವನಸಂಯುತಾಃ ।**
**ದೃಷ್ಟ್ವಾ ಸರ್ವಾತ್ಮಕೋ ವಾಯುರಿದಂ ವಚನಮಬ್ರವೀತ್ ॥ ೧೫**

**ಅಹಂ ವಃ ಕಾಮಯೇ ಸರ್ವಾ ಭಾರ್ಯಾ ಮಮ ಭವಿಷ್ಯಥ ।**
**ಮಾನುಷಸ್ತ್ಯಜ್ಯತಾಂ ಭಾವೋ ದೀರ್ಘಮಾಯುರವಾಪ್ಸ್ಯಥ ॥ ೧೬**

**ಚಲಂ ಹಿ ಯೌವನಂ ನಿತ್ಯಂ ಮಾನುಷೇಷು ವಿಶೇಷತಃ ।**
**ಅಕ್ಷಯ್ಯಂ ಯೌವನಂ ಪ್ರಾಪ್ತಾ ಅಮರ್ಯಶ್ಚ ಭವಿಷ್ಯಥ ॥ ೧೭**

---

ಮಕ್ಕಳು ಜನಿಸಿದರು (೧೦-೧೧). ಅವರೆಲ್ಲರಿಗೂ ಯೌವನ ಬಂದಿತು. ಒಂದು ಸಲ ಆ ಸುಂದರಿಯರು ಚೆನ್ನಾಗಿ ಅಲಂಕರಿಸಿಕೊಂಡು ಉಧ್ಯಾನವನಕ್ಕೆ ಹೋದರು. ಸರ್ವಾಭರಣಭೂಷಿತರಾದ ಆ ಕನ್ಯೆಯರು ಮಳೆಗಾಲದ ಮಿಂಚು ಗಳಂತೆ ಕಂಗೊಳಿಸುತ್ತ ಹಾಡುತ್ತ ಕುಣಿಯುತ್ತ ವಾದ್ಯವನ್ನು ಬಾರಿಸುತ್ತ ಆನಂದಮಗ್ನರಾಗಿದ್ದರು. ಆ ಸರ್ವಾಂಗಸುಂದರಿಯರು ಮೋಡಗಳ ಸಂದಿನಲ್ಲಿ ಕಾಣುವ ತಾರೆಗಳಂತೆ ಉದ್ಯಾನವನದಲ್ಲಿ ವಿಹರಿಸುತ್ತಿದ್ದರು (೧೨-೧೪). ಗುಣಸಂಪನ್ನರೂ ರೂಪಯೌವನ ಶಾಲಿಗಳೂ ಆದ ಆ ಕನ್ಯೆಯರನ್ನು ಸರ್ವಸಂಚಾರಿಯಾದ ವಾಯುವು ಕಂಡು "ಎಲೌ ತರುಣಿಯರೆ, ನಾನು ನಿಮ್ಮನ್ನು ಪ್ರೀತಿಸುತ್ತೇನೆ. ನೀವೆಲ್ಲರೂ ನನ್ನ ಪತ್ನಿಯರಾಗಿರಿ. ಮನುಷ್ಯಭಾವವನ್ನು ತ್ಯಜಿಸಿ ದೇವತೆಗಳಾಗಿರಿ. ಅದರಿಂದ ದೀರ್ಘಾಯುಸ್ಸನ್ನು ಪಡೆಯುವಿರಿ. ಮನುಷ್ಯರಲ್ಲಿ ಯೌವನವು ಸ್ಥಿರವಲ್ಲ. ದೇವಸ್ತ್ರೀಯರಾಗಿ ಸ್ಥಿರವಾದ ಯೌವನವನ್ನು ಪಡೆಯಿರಿ" ಎಂದು ಹೇಳಿದನು (೧೫-೧೭). ವಾಯುವಿನ ಮಾತನ್ನು ಕೇಳಿ ಆ ಕನ್ಯೆಯರು ನಕ್ಕುಬಿಟ್ಟರು. ವಾಯುವನ್ನು

ತಸ್ಯ ತದ್ವಚನಂ ಶ್ರುತ್ವಾ ವಾಯೋರಕ್ಲಿಷ್ಟಕರ್ಮಣಃ ।
ಅಪಹಾಸ್ಯ ತತೋ ವಾಕ್ಯಂ ಕನ್ಯಾಶತಮಥಾಬ್ರವೀತ್ ॥ ೧೮

ಅಂತಶ್ಚರಸಿ ಭೂತಾನಾಂ ಸರ್ವೇಷಾಂ ತ್ವಂ ಸುರೋತ್ತಮ ।
ಪ್ರಭಾವಜ್ಞಾಶ್ಚ ತೇ ಸರ್ವಾಃ ಕಿಮಸ್ಮಾನವಮನ್ಯಸೇ ॥ ೧೯

ಕುಶನಾಭಸುತಾಃ ಸರ್ವಾಃ ಸಮರ್ಥಾಸ್ತ್ವಾಂ ಸುರೋತ್ತಮ ।
ಸ್ಥಾನಾಚ್ಚ್ಯಾವಯಿತುಂ ದೇವಂ ರಕ್ಷಾಮಸ್ತು ತಪೋ ವಯಮ್ ॥

ಮಾ ಭೂತ್ಸ ಕಾಲೋ ದುರ್ಮೇಧಃ ಪಿತರಂ ಸತ್ಯವಾದಿನಮ್ ।
ಅವಮನ್ಯ ಸ್ವಧರ್ಮೇಣ ಸ್ವಯಂವರಮುಪಾಸ್ಮಹೇ ॥ ೨೧

ಪಿತಾ ಹಿ ಪ್ರಭುರಸ್ಮಾಕಂ ದೈವತಂ ಪರಮಂ ಚ ನಃ ।
ಯಸ್ಯ ನೋ ದಾಸ್ಯತಿ ಪಿತಾ ಸ ನೋ ಭರ್ತಾ ಭವಿಷ್ಯತಿ ॥ ೨೨

ತಾಸಾಂ ತದ್ವಚನಂ ಶ್ರುತ್ವಾ ವಾಯುಃ ಪರಮಕೋಪನಃ ।
ಪ್ರವಿಶ್ಯ ಸರ್ವಗಾತ್ರಾಣಿ ಬಭಂಜ ಭಗವಾನ್ ಪ್ರಭುಃ ॥ ೨೩

---

ಕುರಿತು "ಎಲೈ ದೇವೋತ್ತಮ, ಸಕಲ ದೇಹಿಗಳ ಒಳಗೂ (ಪ್ರಾಣರೂಪನಾಗಿ) ನೀನು ಸಂಚರಿಸುತ್ತೀಯೆ. ನಿನ್ನ ಮಹಿಮೆ ನಮಗೆ ಗೊತ್ತಿದೆ ನಮ್ಮನ್ನೇಕೆ ಅವಮಾನಪಡಿಸುತ್ತೀಯೆ? (೧೮-೧೯) ನಾವೆಲ್ಲರೂ ಕುಶನಾಭನ ಮಕ್ಕಳು. ನಿನ್ನನ್ನು ಅಧಿಕಾರದಿಂದ ಚ್ಯುತಿಗೊಳಿಸುವ ಶಕ್ತಿ ನಮಗುಂಟು. ಆದರೆ ನಮ್ಮ ಧರ್ಮವನ್ನು ರಕ್ಷಿಸಿಕೊಳ್ಳಬೇಕೆಂದು ಸುಮ್ಮನಿದ್ದೇವೆ. ಎಲೈ ದುರ್ಬುದ್ಧಿಯವನೆ, ಸತ್ಯವಾದಿಯಾದ ನಮ್ಮ ತಂದೆಯನ್ನು ಅಲಕ್ಷಿಸಿ ಸ್ವತಂತ್ರರಾಗಿ ನಾವೇ ಸ್ವಯಂವರವನ್ನು ಮಾಡಿಕೊಳ್ಳುತ್ತೇವೆಯೆ? ಅಂತಹ ಕಾಲ ಎಂದಿಗೂ ಬರದಿರಲಿ (೨೦-೨೧). ನಮಗೆ ತಂದೆಯೇ ಪ್ರಭು. ತಂದೆಯೇ ಪರಮ ದೇವತೆ. ನಮ್ಮ ತಂದೆಯು ನಮ್ಮನ್ನು ಯಾರಿಗೆ ಕೊಡುವನೋ ಅವನೇ ನಮ್ಮ ಪತಿ" ಎಂದು ಹೇಳಿದರು. ಅವರ ಮಾತನ್ನು ಕೇಳಿ ವಾಯುವಿಗೆ ಬಹಳ ಕೋಪ ಬಂದಿತು. ಆ ಸ್ವಾಮಿಯು ಆ ಕನ್ನಿಕೆಯರ ದೇಹವನ್ನು ಹೊಕ್ಕು ಅವರ ಗಾತ್ರಗಳನ್ನು ಸೆಳೆದು ಕುಬ್ಜರನ್ನಾಗಿಮಾಡಿಬಿಟ್ಟನು (೨೨-೨೩). ಆಗ ಕನ್ನಿಕೆಯರು ಅತ್ಯಂತ ದುಃಖಿತರಾಗಿ ಕಣ್ಣೀರು

**ತಾಃ ಕನ್ಯಾ ವಾಯುನಾ ಭಗ್ನಾ ವಿವಿಶುರ್ನೃಪತೇರ್ಗೃಹಮ್ ।**
**ಪ್ರಾಪತನ್ ಭುವಿ ಸಂಭ್ರಾಂತಾಃ ಸಲಜ್ಜಾಃ ಸಾಶ್ರುಲೋಚನಾಃ ॥**

**ಸ ಚ ತಾ ದಯಿತಾ ದೀನಾಃ ಕನ್ಯಾಃ ಪರಮಶೋಭನಾಃ ।**
**ದೃಷ್ಟ್ವಾ ಭಗ್ನಾಸ್ತದಾ ರಾಜಾ ಸಂಭ್ರಾಂತ ಇದಮಬ್ರವೀತ್ ॥ ೨೫**

**ಕಿಮಿದಂ ಕಥ್ಯತಾಂ ಪುತ್ರ್ಯಃ ಕೋ ಧರ್ಮಮವಮನ್ಯತೇ ।**
**ಕುಬ್ಜಾಃ ಕೇನ ಕೃತಾಃ ಸರ್ವಾ ಚೇಷ್ಟಂತ್ಯೋ ನಾಭಿಭಾಷಥ ॥ ೨೬**

**ಶ್ರೋತುಮಿಚ್ಛಾಮಿ ತತ್ಪುತ್ರ್ಯೋ ಯಸ್ಯೇದಂ ಕರ್ಮ ಗರ್ಹಿತಮ್**
**ಏವಂ ರಾಜಾ ವಿನಿಃಶ್ವಸ್ಯ ಸಮಾಧಿಂ ಸಂದಧೇ ತತಃ ॥ ೨೭**

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ದ್ವಾತ್ರಿಂಶಃ ಸರ್ಗಃ



ಸುರಿಸುತ್ತ ಲಜ್ಜೆಯಿಂದ ಅರಮನೆಗೆ ಹೋದರು. ಕುಶನಾಭನು ತನ್ನ ಪರಮಸುಂದರಿಯರಾದ ಪ್ರೀತಿಯ ಪುತ್ರಿಯರು ಹೀಗೆ ದೀನರಾಗಿ ಬಂದುದನ್ನು ಕಂಡು “ಮಕ್ಕಳೆ, ಏನಿದು? ಹೇಳಿ (೨೪–೨೫). ಯಾವನು ಧರ್ಮವನ್ನು ಉಲ್ಲಂಘಿಸಿ ನಡೆದನು? ಯಾವನು ನಿಮ್ಮನ್ನು ಹೀಗೆ ಕುಬ್ಜೆಯರನ್ನಾಗಿ ಮಾಡಿದನು? ಚೇಷ್ಟೆಯಿಂದಲೇ ದುಃಖವನ್ನು ತೋಡಿಕೊಳ್ಳುವಿರೇ ಹೊರತು ಮಾತನ್ನೇ ಆಡುವುದಿಲ್ಲವಲ್ಲ?” ಎಂದು ನುಡಿದು ನಿಟ್ಟುಸಿರು ಬಿಡುತ್ತ ಅವರ ಉತ್ತರವನ್ನು ನಿರೀಕ್ಷಿಸುತ್ತಿದ್ದನು” (೨೬-೨೭).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಮೂವತ್ತೆರಡನೆಯ ಸರ್ಗ



# ತ್ರಯಸ್ತ್ರಿಂಶಃ ಸರ್ಗಃ

## ಬ್ರಹ್ಮದತ್ತವಿವಾಹಃ

ತಸ್ಯ ತದ್ವಚನಂ ಶ್ರುತ್ವಾ ಕುಶನಾಭಸ್ಯ ಧೀಮತಃ ।
ಶಿರೋಭಿಶ್ಚರಣೌ ಸ್ಪೃಷ್ಟ್ವಾ ಕನ್ಯಾಶತಮಭಾಷತ ॥ ೧
ವಾಯುಃ ಸರ್ವಾತ್ಮಕೋ ರಾಜನ್ ಪ್ರಧರ್ಷಯಿತುಮಿಚ್ಛತಿ ।
ಅಶುಭಂ ಮಾರ್ಗಮಾಸ್ಥಾಯ ನ ಧರ್ಮಂ ಪ್ರತ್ಯವೇಕ್ಷತೇ ॥ ೨
ಪಿತೃಮತ್ಯಃ ಸ್ಮ ಭದ್ರಂ ತೇ ಸ್ವಚ್ಛಂದೇ ನ ವಯಂ ಸ್ಥಿತಾಃ ।
ಪಿತರಂ ನೋ ವೃಣೀಷ್ವ ತ್ವಂ ಯದಿ ನೋ ದಾಸ್ಯತೇ ತವ ॥ ೩
ತೇನ ಪಾಪಾನುಬಂಧೇನ ವಚನಂ ನ ಪ್ರತೀಚ್ಛತಾ ।
ಏವಂ ಬ್ರುವತ್ಯಃ ಸರ್ವಾಃ ಸ್ಮ ವಾಯುನಾ ನಿಹತಾ ಭೃಶಮ್ ॥ ೪
ತಾಸಾಂ ತದ್ವಚನಂ ಶ್ರುತ್ವಾ ರಾಜಾ ಪರಮಧಾರ್ಮಿಕಃ ।
ಪ್ರತ್ಯುವಾಚ ಮಹಾತೇಜಾಃ ಕನ್ಯಾಶತಮನುತ್ತಮಮ್ ॥ ೫

## ಸರ್ಗ ೩೩

ಕುಶನಾಭನು ಪುತ್ರಿಯರ ಕುಬ್ಜತೆಗೆ ಕಾರಣವನ್ನು ತಿಳಿದು ಮಂತ್ರಿಗಳೊಡನೆ
ಸಮಾಲೋಚಿಸಿ ಅವರನ್ನು ಬ್ರಹ್ಮದತ್ತನಿಗೆ ಕೊಟ್ಟು ಮದುವೆ
ಮಾಡುವುದು ಅವರ ಕುಬ್ಜತ್ವದ ನಿವಾರಣೆ.

ವಿಶ್ವಾಮಿತ್ರರು ಹೇಳಿದರು: ರಘುನಂದನ, "ಈ ರೀತಿ ಕುಶನಾಭನು ಕೇಳಲಾಗಿ ನೂರುಮಂದಿ ಕನ್ಯೆಯರೂ ತಂದೆಯ ಕಾಲಿಗೆ ತಲೆಮುಟ್ಟಿ ನಮಸ್ಕರಿಸಿ "ಮಹಾರಾಜ, ಸರ್ವಾತ್ಮಕನಾದ ವಾಯುವು ಬಲಾತ್ಕಾರಮಾಡಲಿಚ್ಛಿಸುತ್ತಾನೆ. ಅವನು ತಪ್ಪುದಾರಿಯನ್ನು ಹಿಡಿದು ಧರ್ಮವನ್ನು ಕಡೆಗಣಿಸಿದ್ದಾನೆ. ನಾವು ಹೇಳಿದೆವು: 'ಒಳ್ಳೆಯದು. ನಮಗೆ ತಂದೆ ಇದ್ದಾನೆ. ನಾವು ಸ್ವಚ್ಛಂದವಾಗಿ ನಡೆಯತಕ್ಕವರಲ್ಲ. ನಮ್ಮನ್ನು ನಿನಗೆ ಕೊಡುತ್ತಾನೋ ಎಂದು ಅವನನ್ನು ಕೇಳಿ ನೋಡು' (೧-೩). ಆದರೆ ಆ ಪಾಪಬುದ್ಧಿಯ ವಾಯುವು ನಮ್ಮ ಮಾತನ್ನು ಕೇಳದೆ, ಧರ್ಮದ ಮಾತನ್ನಾಡದ ನಮಗೇ ಬಲವಾದ ಪೆಟ್ಟನ್ನು ಕೊಟ್ಟು ಹೀಗೆ ಮಾಡಿದ್ದಾನೆ" ಎಂದು ಹೇಳಿ

ಕ್ಷಾಂತಂ ಕ್ಷಮಾವತಾಂ ಪುತ್ರ್ಯಃ ಕರ್ತವ್ಯಂ ಸುಮಹತ್ ಕೃತಮ್ ।
ಐಕಮತ್ಯಮುಪಾಗಮ್ಯ ಕುಲಂ ಚಾವೇಕ್ಷಿತಂ ಮಮ ॥ ೬

ಅಲಂಕಾರೋ ಹಿ ನಾರೀಣಾಂ ಕ್ಷಮಾ ತು ಪುರುಷಸ್ಯ ವಾ ।
ದುಷ್ಕರಂ ತದ್ಧಿ ವಃ ಕ್ಷಾಂತಂ ತ್ರಿದಶೇಷು ವಿಶೇಷತಃ ॥ ೭

ಯಾದೃಶೀ ವಃ ಕ್ಷಮಾ ಪುತ್ರ್ಯಃ ಸರ್ವಾಸಾಮವಿಶೇಷತಃ ।
ಕ್ಷಮಾ ದಾನಂ ಕ್ಷಮಾ ಸತ್ಯಂ ಕ್ಷಮಾ ಯಜ್ಞಶ್ಚ ಪುತ್ರಿಕಾಃ ॥ ೮

ಕ್ಷಮಾ ಯಶಃ ಕ್ಷಮಾ ಧರ್ಮಃ ಕ್ಷಮಯಾ ವಿಷ್ಠಿತಂ ಜಗತ್ ।
ವಿಸೃಜ್ಯ ಕನ್ಯಾಃ ಕಾಕುತ್ಸ್ಥ ರಾಜಾ ತ್ರಿದಶವಿಕ್ರಮಃ ॥ ೯

ಮಂತ್ರಜ್ಞೋ ಮಂತ್ರಯಾಮಾಸ ಪ್ರದಾನಂ ಸಹ ಮಂತ್ರಿಭಿಃ ।
ದೇಶೇ ಕಾಲೇ ಚ ಕರ್ತವ್ಯಂ ಸದೃಶೇ ಪ್ರತಿಪಾದನಮ್ ॥ ೧೦

ಏತಸ್ಮಿನ್ನೇವ ಕಾಲೇ ತು ಚೂಲೀ ನಾಮ ಮಹಾಮುನಿಃ ।
ಊರ್ಧ್ವರೇತಾಃ ಶುಭಾಚಾರೋ ಬ್ರಾಹ್ಮಂ ತಪ ಉಪಾಗಮತ್ ॥

---

ದರು. ಆಗ ಪರಮಧಾರ್ಮಿಕನಾದ ಕುಶನಾಭನು ಹೀಗೆಂದನು (೪-೫): "ಮಕ್ಕಳೆ, ಕ್ಷಮಾಶೀಲರಲ್ಲಿ ಇರಬೇಕಾದ ದೊಡ್ಡ ಕ್ಷಮಾಗುಣವನ್ನು ತೋರಿಸಿದ್ದೀರಿ. ನೀವೆಲ್ಲರೂ ಕುಲೋಚಿತವಾದ ನನ್ನ ಮರ್ಯಾದೆಯನ್ನು ಕಾಪಾಡಿದ್ದೀರಿ. ಹೆಂಗಸರಿಗಾಗಲಿ ಗಂಡಸರಿಗಾಗಲಿ ಕ್ಷಮೆಯೇ ಭೂಷಣ. ಅದು ದೇವತೆಗಳಿಗೂ ದುರ್ಲಭ. ಅಂಥ ತಾಳ್ಮೆಯನ್ನು ನೀವು ಪ್ರದರ್ಶಿಸಿದ್ದೀರಿ. ಮಕ್ಕಳೆ, ತಾಳ್ಮೆಯೇ ದಾನ, ತಾಳ್ಮೆಯೇ ಸತ್ಯ, ತಾಳ್ಮೆಯೇ ಯಜ್ಞ (೬-೮). ತಾಳ್ಮೆಯಿಂದಲೇ ಯಶಸ್ಸು. ತಾಳ್ಮೆಯಿಂದಲೇ ಧರ್ಮ. ತಾಳ್ಮೆಯಿಂದಲೇ ಜಗತ್ತು ಉಳಿದಿದೆ." ಹೀಗೆ ಅವರಿಗೆ ಸಮಾಧಾನವನ್ನು ಹೇಳಿ ಕಳುಹಿಸಿ ಆ ರಾಜನು ಕನ್ಯೆಯರನ್ನು ಯಾರಿಗೆ ಕೊಟ್ಟು ಮದುವೆ ಮಾಡಬೇಕೆಂದು ದೇಶಕಾಲಪಾತ್ರಗಳ ವಿಷಯದಲ್ಲಿ ಮಂತ್ರಿಗಳೊಡನೆ ಸಮಾಲೋಚನೆ ಮಾಡಿದನು (೯-೧೦). ಈ ಸಮಯದಲ್ಲಿ ಏನಾಯಿತೆಂದರೆ, ಚೂಲಿ ಎಂಬ ಒಬ್ಬ ಆಚಾರಶೀಲನು ಬ್ರಹ್ಮಚರ್ಯವ್ರತದಲ್ಲಿದ್ದು ಬ್ರಹ್ಮನನ್ನು ಕುರಿತು ತಪಸ್ಸನ್ನಾಚರಿಸುತ್ತಿದ್ದನು. ಆ ತಪಸ್ವಿಯ ಹತ್ತಿರ ಊರ್ಮಿಳೆಯ ಮಗಳಾದ ಸೋಮದೆ

ತಪ್ಯಂತಂ ತಮೃಷಿಂ ತತ್ರ ಗಂಧರ್ವೀ ಪರ್ಯುಪಾಸತೇ ।
ಸೋಮದಾ ನಾಮ ಭದ್ರಂ ತೇ ಊರ್ಮಿಲಾತನಯಾ ತದಾ ॥ ೧೨
ಸ ಚ ತಂ ಪ್ರಣತಾ ಭೂತ್ವಾ ಶುಶ್ರೂಷಣಪರಾಯಣಾ ।
ಉವಾಸ ಕಾಲೇ ಧರ್ಮಿಷ್ಠಾ ತಸ್ಯಾಸ್ತುಷ್ಟೋಽಭವದ್ ಗುರುಃ ೧೩
ಸ ಚ ತಾಂ ಕಾಲಯೋಗೇನ ಪ್ರೋವಾಚ ರಘುನಂದನ ।
ಪರಿತುಷ್ಟೋಽಸ್ಮಿ ಭದ್ರಂ ತೇ ಕಿಂ ಕರೋಮಿ ತವ ಪ್ರಿಯಮ್ ॥೧೪
ಪರಿತುಷ್ಟಂ ಮುನಿಂ ಜ್ಞಾತ್ವಾ ಗಂಧರ್ವೀ ಮಧುರಸ್ವರಾ ।
ಉವಾಚ ಪರಮಪ್ರೀತಾ ವಾಕ್ಯಜ್ಞಾ ವಾಕ್ಯಕೋವಿದಮ್ ॥ ೧೫
ಲಕ್ಷ್ಮ್ಯಾ ಸಮುದಿತೋ ಬ್ರಾಹ್ಮ್ಯಾ ಬ್ರಹ್ಮಭೂತೋ ಮಹಾತಪಾಃ ।
ಬ್ರಾಹ್ಮೇಣ ತಪಸಾ ಯುಕ್ತಂ ಪುತ್ರಮಿಚ್ಛಾಮಿ ಧಾರ್ಮಿಕ ॥ ೧೬
ಅಪತಿಶ್ಚಾಸ್ಮಿ ಭದ್ರಂ ತೇ ಭಾರ್ಯಾ ಚಾಸ್ಮಿ ನ ಕಸ್ಯಚಿತ್ ।
ಬ್ರಾಹ್ಮೇಣೋಪಗತಾಯಾಶ್ಚ ದಾತುಮರ್ಹಸಿ ಮೇ ಸುತಮ್ ॥
ತಸ್ಯಾಃ ಪ್ರಸನ್ನೋ ಬ್ರಹ್ಮರ್ಷಿರ್ದದೌ ಪುತ್ರಮನುತ್ತಮಮ್ ।
ಬ್ರಹ್ಮದತ್ತ ಇತಿ ಖ್ಯಾತಂ ಮಾನಸಂ ಚೂಲಿನಃ ಸುತಮ್ ॥ ೧೮

---

ಯೆಂಬ ಗಂಧರ್ವಿಯು ಪರಿಚರ್ಯೆ ಮಾಡಿಕೊಂಡಿದ್ದಳು (೧೧-೧೨). ಅವಳು ವಿನಯದಿಂದ ಶುಶ್ರೂಷೆಮಾಡಿಕೊಂಡಿರಲು ಕೆಲವು ಕಾಲದ ಮೇಲೆ ಆ ಋಷಿಯು ಪ್ರಸನ್ನನಾಗಿ "ಸೌಮ್ಯಳೆ, ಶುಭವಾಗಲಿ. ನಾನು ಸಂತುಷ್ಟನಾಗಿದ್ದೇನೆ! ನಿನಗೆ ಏನು ಬೇಕು?" ಎಂದು ಕೇಳಿದನು (೧೩-೧೪). ಮುನಿಯು ಪ್ರಸನ್ನನಾದನೆಂದು ತಿಳಿದು ಆ ಗಂಧರ್ವಿಯು "ಮಹಾತ್ಮ, ನೀನು ಬ್ರಹ್ಮತೇಜಸ್ಸಿನಿಂದ ವಿರಾಜಿಸುತ್ತ ಬ್ರಹ್ಮಸ್ವರೂಪನಾಗಿ ಮಹಾತಪಸ್ವಿಯಾಗಿದ್ದೀಯೆ. ಬ್ರಹ್ಮತೇಜಸ್ಸಿನಿಂದ ಕೂಡಿದ ಧಾರ್ಮಿಕನಾದ ಒಬ್ಬ ಪುತ್ರನು ಬೇಕೆಂದು ನನ್ನ ಅಪೇಕ್ಷೆ (೧೫-೧೬). ನನಗೆ ಪತಿ ಇಲ್ಲ ನಾನು ಯಾರ ಪತ್ನಿಯೂ ಆಗಿಲ್ಲ ಇದರಿಂದ ನಿನಗೂ ಶ್ರೇಯಸ್ಸುಂಟು. ನಿನ್ನ ಸೇವೆ ಮಾಡುತ್ತಿರುವ ನನಗೆ ತಪೋಬಲದಿಂದ ಒಬ್ಬ ಪುತ್ರನನ್ನು ಕರುಣಿಸು" ಎಂದು ಬೇಡಿದಳು. ಆಗ ಬ್ರಹ್ಮರ್ಷಿಯಾದ ಚೂಲಿಯು ಅವಳಿಗೆ ತಪೋಬಲದಿಂದ ಒಬ್ಬ ಮಾನಸಪುತ್ರನನ್ನು ಕರುಣಿಸಿದನು ಆ ಪುತ್ರನಿಗೆ ಬ್ರಹ್ಮದತ್ತ

**ಸ ರಾಜಾ ಸೌಮದೇಯಸ್ತು ಪುರೀಮಧ್ಯವಸತ್ತದಾ ।**
**ಕಾಂಪಿಲ್ಯಾಂ ಪರಯಾ ಲಕ್ಷ್ಮ್ಯಾ ದೇವರಾಜೋ ಯಥಾ ದಿವಮ್ ॥**

**ಸ ಬುದ್ಧಿಂ ಕೃತವಾನ್ ರಾಜಾ ಕುಶನಾಭಃ ಸುಧಾರ್ಮಿಕಃ ।**
**ಬ್ರಹ್ಮದತ್ತಾಯ ಕಾಕುತ್ಸ್ಥ ದಾತುಂ ಕನ್ಯಾಶತಂ ತದಾ ॥ ೨೦**

**ತಮಾಹೂಯ ಮಹಾತೇಜಾ ಬ್ರಹ್ಮದತ್ತಂ ಮಹೀಪತಿಃ ।**
**ದದೌ ಕನ್ಯಾಶತಂ ರಾಜಾ ಸುಪ್ರೀತೇನಾಂತರಾತ್ಮನಾ ॥ ೨೧**

**ಯಥಾಕ್ರಮಂ ತತಃ ಪಾಣೀನ್ ಜಗ್ರಾಹ ರಘುನಂದನ ।**
**ಬ್ರಹ್ಮದತ್ತೋ ಮಹೀಪಾಲಸ್ತಾಸಾಂ ದೇವಪತಿರ್ಯಥಾ ॥ ೨೨**

**ಸ್ಪೃಷ್ಟಮಾತ್ರೇ ತದಾ ಪಾಣೌ ವಿಕುಬ್ಜಾ ವಿಗತಜ್ವರಾಃ ।**
**ಯುಕ್ತಾಃ ಪರಮಯಾ ಲಕ್ಷ್ಮ್ಯಾ ಬಭುಃ ಕನ್ಯಾಃ ಶತಂ ತದಾ ॥ ೨೩**

**ಸ ದೃಷ್ಟ್ವಾ ವಾಯುನಾ ಮುಕ್ತಾಃ ಕುಶನಾಭೋ ಮಹೀಪತಿಃ ।**
**ಬಭೂವ ಪರಮಪ್ರೀತೋ ಹರ್ಷಂ ಲೇಭೇ ಪುನಃ ಪುನಃ ॥ ೨೪**

---

ನೆಂದು ಹೆಸರಾಯಿತು (೧೭-೧೮). ಆ ಬ್ರಹ್ಮದತ್ತನು ಕಾಂಪಿಲ್ಯಾ ನಗರದಲ್ಲಿ ರಾಜನಾಗಿ ದೇವೇಂದ್ರನಂತೆ ರಾಜ್ಯಪಾಲನೆ ಮಾಡಿಕೊಂಡಿದ್ದನು ಹೀಗಿರುವಲ್ಲಿ ಧಾರ್ಮಿಕನಾದ ಕುಶನಾಭನು ಬ್ರಹ್ಮದತ್ತನಿಗೆ ತನ್ನ ಪುತ್ರಿಯರನ್ನು ಕೊಟ್ಟು ವಿವಾಹಮಾಡಬೇಕೆಂದು ನಿಶ್ಚಯಿಸಿದನು. ಅವನು ಬ್ರಹ್ಮದತ್ತನನ್ನು ಕರೆಯಿಸಿ ತನ್ನ ನೂರುಮಂದಿ ಪುತ್ರಿಯರನ್ನೂ ಅವನಿಗೆ ಮನಃಪೂರ್ವಕವಾಗಿ ಸಂತೋಷದಿಂದ ಧಾರೆಯೆರೆದುಕೊಟ್ಟನು (೧೯-೨೧). ದೇವೇಂದ್ರನಂತೆ ವಿರಾಜಿಸುತ್ತಿದ್ದ ಬ್ರಹ್ಮದತ್ತಮಹಾರಾಜನು ಆ ಕನ್ಯೆಯರನ್ನು ವಿಧಿವತ್ತಾಗಿ ಪಾಣಿಗ್ರಹಣ ಮಾಡಿಕೊಂಡನು. ರಾಮ, ಬ್ರಹ್ಮದತ್ತನು ಒಬ್ಬೊಬ್ಬ ವಧುವಿನ ಪಾಣಿಯನ್ನು ಮುಟ್ಟುತ್ತಲೇ ಅವರ ಕುಬ್ಜತ್ವವು ತೊಲಗಿ ಅವರ ಕಷ್ಟವು ಪರಿಹಾರವಾಯಿತು. ನೂರುಮಂದಿ ಕನ್ಯೆಯರೂ ಮೊದಲಿನಂತೆ ರೂಪ ಲಾವಣ್ಯಗಳನ್ನು ಪಡೆದು ಪ್ರಕಾಶಿಸಿದರು (೨೨-೨೩). ಅವರು ವಾಯುವಿನಿಂದ ವಿಮುಕ್ತರಾದ್ದನ್ನು ಕಂಡು ಕುಶನಾಭನ ಆನಂದಕ್ಕೆ ಪಾರವೇ ಉಳಿಯಲಿಲ್ಲ. ಮತ್ತೆ ಮತ್ತೆ ಅವರನ್ನು ನೋಡಿ ಆನಂದಿಸಿದನು. ಅನಂತರ ವಿವಾಹ ಕಾರ್ಯವೆಲ್ಲವೂ ನಡೆದಮೇಲೆ ಬ್ರಹ್ಮದತ್ತರಾಜನನ್ನು ಅವನ ಪತ್ನಿಯರೊಡನೆ

ಕೃತೋದ್ವಾಹಂ ತು ರಾಜಾನಂ ಬ್ರಹ್ಮದತ್ತಂ ಮಹೀಪತಿಃ ।
ಸದಾರಂ ಪ್ರೇಷಯಾಮಾಸ ಸೋಪಾಧ್ಯಾಯಗಣಂ ತದಾ ॥ ೨೫

ಸೋಮದಾಪಿ ಸುಸಂಹೃಷ್ಟಾ ಪುತ್ರಸ್ಯ ಸದೃಶೀಂ ಕ್ರಿಯಾಮ್ ।
ಯಥಾನ್ಯಾಯಂ ಚ ಗಂಧರ್ವೀ ಸ್ನುಷಾಸ್ತಾಃ ಪ್ರತ್ಯನಂದತ ॥ ೨೬

ಸ್ಪೃಷ್ಟ್ವಾ ಸ್ಪೃಷ್ಟ್ವಾ ಚ ತಾಃ ಕನ್ಯಾಃ ಕುಶನಾಭಂ ಪ್ರಶಸ್ಯ ಚ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ತ್ರಯಸ್ತ್ರಿಂಶಃ ಸರ್ಗ



ಕಾಂಪಿಲ್ಯಾನಗರಕ್ಕೆ ಕಳಿಸಿಕೊಟ್ಟನು. ಜೊತೆಯಲ್ಲಿ ಅನೇಕಮಂದಿ ವೈದಿಕರನ್ನೂ ಕಳಿಸಿದನು (೨೪-೨೫) ಇತ್ತ ಗಂಧರ್ವಿಯಾದ ಸೋಮದೆಯು ಮಗನಿಗೆ ಮದುವೆಯಾದ್ದನ್ನು ಕಂಡು ಸಂತೋಷಪಟ್ಟಳು ತನ್ನ ಸೊಸೆಯರನ್ನು ಮುಟ್ಟಿಮುಟ್ಟಿ ನೋಡಿ ಹಿಗ್ಗಿದಳು (ಅವರನ್ನು ಮದುವೆಮಾಡಿಕೊಟ್ಟ) ಕುಶನಾಭನನ್ನು ಕೊಂಡಾಡಿದಳು" (೨೬).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಮೂವತ್ತುಮೂರನೆಯ ಸರ್ಗ



## ಚತುಸ್ತ್ರಿಂಶಃ ಸರ್ಗಃ

### ವಿಶ್ವಾಮಿತ್ರವಂಶವರ್ಣನಮ್

ಕೃತೋದ್ವಾಹೇ ಗತೇ ತಸ್ಮಿನ್ ಬ್ರಹ್ಮದತ್ತೇ ಚ ರಾಘವ ।
ಅಪುತ್ರಃ ಪುತ್ರಲಾಭಾಯ ಪೌತ್ರೀಮಿಷ್ಟಿಮಕಲ್ಪಯತ್ ॥ ೧

ಇಷ್ಟ್ಯಾಂ ತು ವರ್ತಮಾನಾಯಾಂ ಕುಶನಾಭಂ ಮಹೀಪತಿಮ್ ।
ಉವಾಚ ಪರಮೋದಾರಃ ಕುಶೋ ಬ್ರಹ್ಮಸುತಸ್ತದಾ ॥ ೨

ಪುತ್ರ ತೇ ಸದೃಶಃ ಪುತ್ರೋ ಭವಿಷ್ಯತಿ ಸುಧಾರ್ಮಿಕಃ ।
ಗಾಧಿಂ ಪ್ರಾಪ್ಸ್ಯಸಿ ತೇನ ತ್ವಂ ಕೀರ್ತಿಂ ಲೋಕೇ ಚ ಶಾಶ್ವತೀಮ್

ಏವಮುಕ್ತ್ವಾ ಕುಶೋ ರಾಮ ಕುಶನಾಭಂ ಮಹೀಪತಿಮ್ ।
ಜಗಾಮಾಕಾಶಮಾವಿಶ್ಯ ಬ್ರಹ್ಮಲೋಕಂ ಸನಾತನಮ್ ॥ ೪

### ಸರ್ಗ ೩೪

ಕುಶನಾಭನು ಪುತ್ರಕಾಮೇಷ್ಟಿಯನ್ನು ಮಾಡಿ ಗಾಧಿ ಎಂಬ ಪುತ್ರನನ್ನು
ಪಡೆಯುವುದು ಗಾಧಿಯ ಮಗಳಾದ ಸತ್ಯವತಿಯ ವರ್ಣನೆ.
ತಾವು ಸತ್ಯವತಿಯ ತಮ್ಮನೆಂದು ವಿಶ್ವಾಮಿತ್ರರು ತಿಳಿಸುವುದು.

ವಿಶ್ವಾಮಿತ್ರರು ಹೇಳಿದರು : "ಶ್ರೀರಾಮ, ಹೀಗೆ ಬ್ರಹ್ಮದತ್ತನು ವಿವಾಹವಾದಮೇಲೆ ತನ್ನ ಪತ್ನಿಯರನ್ನು ಕರೆದುಕೊಂಡು ಹೊರಟುಹೋದನು. ಆಗ ಗಂಡುಮಗನಿಲ್ಲದ ಚಿಂತೆಯಿಂದ ಕುಶನಾಭನು ಪುತ್ರಕಾಮೇಷ್ಟಿಯನ್ನು ಮಾಡಿದನು (೧) ಇಷ್ಟಿಯು ನಡೆಯುತ್ತಿರುವಾಗ ಬ್ರಹ್ಮಪುತ್ರನೂ (ಕುಶನಾಭನ ತಂದೆಯೂ) ಆದ ಕುಶನು ಆಗಮಿಸಿ "ಪುತ್ರ, ನಿನಗೆ ತಕ್ಕಂತಹ ಧಾರ್ಮಿಕನಾದ ಪುತ್ರನೋರ್ವನು ಜನಿಸುವನು. ಅವನಿಗೆ 'ಗಾಧಿ' ಎಂದು ನಾಮಕರಣಮಾಡು. ಅವನಿಂದ ನಿನಗೆ ಶಾಶ್ವತವಾದ ಕೀರ್ತಿಯು ಲಭಿಸುತ್ತವೆ" ಎಂದು ಹೇಳಿ ಆಕಾಶಮಾರ್ಗವಾಗಿ ಬ್ರಹ್ಮಲೋಕಕ್ಕೆ ಹೊರಟು

**ಕಸ್ಯಚಿತ್ತ್ವಥ ಕಾಲಸ್ಯ ಕುಶನಾಭಸ್ಯ ಧೀಮತಃ ।**
**ಜಜ್ಞೇ ಪರಮಧರ್ಮಿಷ್ಠೋ ಗಾಧಿರಿತ್ಯೇವ ನಾಮತಃ ॥** ೫

**ಸ ಪಿತಾ ಮಮ ಕಾಕುತ್ಸ್ಥ ಗಾಧಿಃ ಪರಮಧಾರ್ಮಿಕಃ ।**
**ಕುಶವಂಶಪ್ರಸೂತೋಽಸ್ಮಿ ಕೌಶಿಕೋ ರಘುನಂದನ ॥** ೬

**ಪೂರ್ವಜಾ ಭಗಿನೀ ಚಾಪಿ ಮಮ ರಾಘವ ಸುವ್ರತಾ ।**
**ನಾಮ್ನಾ ಸತ್ಯವತೀ ನಾಮ ಋಚೀಕೇ ಪ್ರತಿಪಾದಿತಾ ॥** ೭

**ಸಶರೀರಾ ಗತಾ ಸ್ವರ್ಗಂ ಭರ್ತಾರಮನುವರ್ತಿನೀ ।**
**ಕೌಶಿಕೀ ಪರಮೋದಾರಾ ಸಾ ಪ್ರವೃತ್ತಾ ಮಹಾನದೀ ॥** ೮

**ದಿವ್ಯಾ ಪುಣ್ಯೋದಕಾ ರಮ್ಯಾ ಹಿಮವಂತಮುಪಾಶ್ರಿತಾ ।**
**ಲೋಕಸ್ಯ ಹಿತಕಾರ್ಯಾರ್ಥಂ ಪ್ರವೃತ್ತಾ ಭಗಿನೀ ಮಮ ॥** ೯

**ತತೋಽಹಂ ಹಿಮವತ್ಪಾರ್ಶ್ವೇ ವಸಾಮಿ ನಿರತಃ ಸುಖಮ್ ।**
**ಭಗಿನ್ಯಾಂ ಸ್ನೇಹಸಂಯುಕ್ತಃ ಕೌಶಿಕ್ಯಾಂ ರಘುನಂದನ ॥** ೧೦

---

ಹೋದನು (೨-೪) ಕೆಲವು ಕಾಲದಮೇಲೆ ಕುಶನಾಭನಿಗೆ ಒಬ್ಬ ಪುತ್ರನು ಹುಟ್ಟಿದನು. ಅವನು ಪರಮ ಧರ್ಮಿಷ್ಠ. ಆತನಿಗೆ 'ಗಾಧಿ' ಎಂದು ನಾಮಕರಣವಾಯಿತು. ಕಾಕುತ್ಸ್ಥ – ರಾಮ, ಅವನೇ ನನ್ನ ತಂದೆ ನಾನು ಕುಶವಂಶದಲ್ಲಿ ಹುಟ್ಟಿದ್ದರಿಂದ ನನ್ನನ್ನು 'ಕೌಶಿಕ' ಎಂದು ಹೇಳುತ್ತಾರೆ (೫-೬). ನನಗೆ ಹಿರಿಯ ಸೋದರಿಯೊಬ್ಬಳಿದ್ದಳು. ಒಳ್ಳೆಯ ಆಚಾರ ಸಂಪನ್ನೆ. ಅವಳ ಹೆಸರು ಸತ್ಯವತಿ. ಅವಳನ್ನು ಋಚೀಕನೆಂಬ ಮುನಿಗೆ ಕೊಟ್ಟು ವಿವಾಹವಾಯಿತು ಪತಿವ್ರತೆಯಾದ ಅವಳು ಪತಿಯನ್ನು ಹಿಂ ನಶರೀರಳಾಗಿ ಸ್ವರ್ಗಕ್ಕೆ ಹೋದಳು. ಅವಳು ತನ್ನ ಮಹಿಮೆಯಿಂದ ಕೌಶಿಕೀ ಎಂಬ ಮಹಾನದಿಯಾಗಿ ಪ್ರವಹಿಸುತ್ತಿದ್ದಾಳೆ (೭-೮). ಅದು ಪುಣ್ಯೋದಕದಿಂದ ಕೂಡಿದ ರಮಣೀಯವಾದ ದಿವ್ಯನದಿ ಹಿಮಾಲಯ ಪರ್ವತದ ಬಳಿ ಹರಿಯುತ್ತಿದೆ. ಲೋಕಹಿತಕ್ಕಾಗಿ ನನ್ನ ಅಕ್ಕನು ನದಿಯಾಗಿ ಪ್ರವಹಿಸಿದಳು. ರಾಮ, ನಾನು ಅಕ್ಕನ ಮೇಲಿನ ಪ್ರೀತಿಯಿಂದ ಹಿಮಾಲಯಪರ್ವತದ ತೊಪ್ಪಲಿನಲ್ಲಿ ಕೌಶಿಕೀತೀರದಲ್ಲಿಯೇ ಹೆಚ್ಚಾಗಿ ವಾಸ ಮಾಡುತ್ತೇನೆ. ಅಲ್ಲಿ ನನಗೆ ಸುಖವೆನಿಸುನಿಸುತ್ತದೆ (೯-೧೦)

ಸಾ ತು ಸತ್ಯವತೀ ಪುಣ್ಯಾ ಸತ್ಯೇ ಧರ್ಮೇ ಪ್ರತಿಷ್ಠಿತಾ ।
ಪತಿವ್ರತಾ ಮಹಾಭಾಗಾ ಕೌಶಿಕೀ ಸರಿತಾಂ ವರಾ ॥ ೧೧
ಅಹಂ ಹಿ ನಿಯಮಾದ್ರಾಮ ಹಿತ್ವಾ ತಾಂ ಸಮುಪಾಗತಃ ।
ಸಿದ್ಧಾಶ್ರಮಮನುಪ್ರಾಪ್ಯ ಸಿದ್ಧೋಽಸ್ಮಿ ತವ ತೇಜಸಾ ॥ ೧೨
ಏಷಾ ರಾಮ ಮಮೋತ್ಪತ್ತಿಃ ಸ್ವಸ್ಯ ವಂಶಸ್ಯ ಕೀರ್ತಿತಾ ।
ದೇಶಸ್ಯ ಚ ಮಹಾಬಾಹೋ ಯನ್ಮಾಂ ತ್ವಂ ಪರಿಪೃಚ್ಛಸಿ ॥ ೧೩
ಗತೋಽರ್ಧರಾತ್ರಃ ಕಾಕುತ್ಸ್ಥ ಕಥಾಃ ಕಥಯತೋ ಮಮ ।
ನಿದ್ರಾಮಭ್ಯೇಹಿ ಭದ್ರಂ ತೇ ಮಾ ಭೂದ್ವಿಘ್ನೋಽಧ್ವನೀಹ ನಃ ॥
ನಿಷ್ಪಂದಾಸ್ತರವಃ ಸರ್ವೇ ನಿಲೀನಾ ಮೃಗಪಕ್ಷಿಣಃ ।
ನೈಶೇನ ತಮಸಾ ವ್ಯಾಪ್ತಾ ದಿಶಶ್ಚ ರಘುನಂದನ ॥ ೧೫
ಶನೈರ್ವಿಯುಜ್ಯತೇ ಸಂಧ್ಯಾ ನಭೋ ನೇತ್ರೈರಿವಾವೃತಮ್ ।
ನಕ್ಷತ್ರತಾರಾಗಹನಂ ಜ್ಯೋತಿರ್ಭಿರವಭಾಸತೇ ॥ ೧೬
ಉತ್ತಿಷ್ಠತಿ ಚ ಶೀತಾಂಶುಃ ಶಶೀ ಲೋಕತಮೋನುದಃ ।
ಹ್ಲಾದಯನ್ ಪ್ರಾಣಿನಾಂ ಲೋಕೇ ಮನಾಂಸಿ ಪ್ರಭಯಾ ಸ್ವಯಾ

ಆ ಸತ್ಯವತಿ ಸತ್ಯಧರ್ಮಗಳನ್ನು ಪೂರ್ತಿಯಾಗಿ ನಂಬಿದ್ದ ಪುಣ್ಯವಂತೆ; ಪತಿವ್ರತೆ. ಅವಳು ಕೌಶಿಕಿ ಎಂಬ ಶ್ರೇಷ್ಠನದಿಯಾಗಿದ್ದಾಳೆ. ನಾನು ಒಂದು ನಿಯಮಪಾಲನೆಗಾಗಿ ಅಲ್ಲಿಂದ ಸಿದ್ಧಾಶ್ರಮಕ್ಕೆ ಬಂದೆ ರಾಮ, ನಿನ್ನ ತೇಜೋಬಲದಿಂದ ನನ್ನ ಕಾರ್ಯ ಸಿದ್ಧಿಸಿತು (೧೧-೧೨) ಇದಿಷ್ಟು ನನ್ನ, ನನ್ನ ವಂಶದ ಕಥೆ. ನೀನು ಕೇಳಿದಂತೆ ಈ ದೇಶದ ಚರಿತ್ರೆಯನ್ನು ಹೇಳಿದ್ದೇನೆ. ನಾನು ಕಥೆ ಹೇಳುವುದರಲ್ಲಿ ಅರ್ಧರಾತ್ರಿ ಕಳೆದುಹೋಯಿತು. ಒಳ್ಳೆಯದು ಇನ್ನು ನಿದ್ರೆಮಾಡು. (ನಾಳೆ) ದಾರಿಯಲ್ಲಿ ತೊಂದರೆಯಾದೀತು (೧೩-೧೪). ಮರಗಳು ನಿಶ್ಚಲವಾಗಿವೆ. ಮೃಗಪಕ್ಷಿಗಳು ಮಲಗಿಕೊಂಡಿವೆ. ಕತ್ತಲು ಸುತ್ತಲೂ ವ್ಯಾಪಿಸಿದೆ. ರಾತ್ರಿಯ ಪೂರ್ವಭಾಗವು ಮೆಲ್ಲಗೆ ಕಳೆದು ಹೋಯಿತು ಗಗನದಲ್ಲಿ ನಿಬಿಡವಾದ ನಕ್ಷತ್ರಗಳು ಪ್ರಕಾಶಮಯವಾದ ಕಣ್ಣುಗಳಂತೆ ಹೊಳೆಯುತ್ತಿವೆ (೧೫-೧೬). ಶೀತಕಿರಣನು ಕತ್ತಲೆಯನ್ನು ಹೋಗಲಾಡಿಸುತ್ತ ಬೆಳದಿಂಗಳನ್ನು ಚಲ್ಲಿ ಜನರ ಮನಸ್ಸಿಗೆ ಆಹ್ಲಾದವನ್ನು

ನೈಶಾನಿ ಸರ್ವಭೂತಾನಿ ಪ್ರಚರಂತಿ ತತಸ್ತತಃ ।
ಯಕ್ಷರಾಕ್ಷಸಸಂಘಾಶ್ಚ ರೌದ್ರಾಶ್ಚ ಪಿಶಿತಾಶನಾಃ ॥ ೧೮

ಏವಮುಕ್ತ್ವಾ ಮಹಾತೇಜಾ ವಿರರಾಮ ಮಹಾಮುನಿಃ ।
ಸಾಧು ಸಾಧ್ವಿತಿ ತಂ ಸರ್ವೇ ಮುನಯೋ ಹ್ಯಭ್ಯಪೂಜಯನ್ ॥

ಕುಶಿಕಾನಾಮಯಂ ವಂಶೋ ಮಹಾನ್ ಧರ್ಮಪರಃ ಸದಾ ।
ಬ್ರಹ್ಮೋಪಮಾ ಮಹಾತ್ಮಾನಃ ಕುಶವಂಶ್ಯಾ ನರೋತ್ತಮಾಃ ॥

ವಿಶೇಷೇಣ ಭವಾನೇವ ವಿಶ್ವಾಮಿತ್ರೋ ಮಹಾಯಶಾಃ ।
ಕೌಶಿಕೀ ಚ ಸರಿಚ್ಛ್ರೇಷ್ಠಾ ಕುಲೋದ್ದ್ಯೋತಕರೀ ತವ ॥ ೨೦

ಇತಿ ತೈರ್ಮುನಿಶಾರ್ದೂಲೈಃ ಪ್ರಶಸ್ತಃ ಕುಶಿಕಾತ್ಮಜಃ ।
ನಿದ್ರಾಮುಪಾಗಮಚ್ಛ್ರೀಮಾನಸ್ತಂಗತ ಇವಾಂಶುಮಾನ್ ॥ ೨೨

ರಾಮೋಽಪಿ ಸಹಸೌಮಿತ್ರಿಃ ಕಿಂಚಿದಾಗತವಿಸ್ಮಯಃ ।
ಪ್ರಶಸ್ಯ ಮುನಿಶಾರ್ದೂಲಂ ನಿದ್ರಾಂ ಸಮುಪಸೇವತೇ ॥ ೨೩

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಚತುಸ್ತ್ರಿಂಶಃ ಸರ್ಗಃ

---

ಬೀರುತ್ತ ಉದಯಿಸುತ್ತಿದ್ದಾನೆ (೧೭). ಇದು ರಾತ್ರಿ ಸಂಚಾರಿಗಳಾದ ಪ್ರಾಣಿಗಳೂ ಮಾಂಸಾಹಾರಿಗಳಾದ ಯಕ್ಷರಾಕ್ಷಸರೂ ತಿರುಗಾಡುವ ಕಾಲ" ಎಂದು ಹೇಳಿ ವಿಶ್ವಾಮಿತ್ರರು ಸುಮ್ಮನಾದರು. ಋಷಿಗಳೆಲ್ಲರೂ 'ಸಾಧು ಸಾಧು' ಎಂದು ಹೇಳುತ್ತ "ಈ ಕುಶಿಕವಂಶವು ಧರ್ಮನಿರತವಾದ ಮಹಾ ವಂಶ. ಈ ವಂಶದಲ್ಲಿ ಜನಿಸಿದ ಪುರುಷಶ್ರೇಷ್ಠರು ಸಾಕ್ಷಾತ್ ಬ್ರಹ್ಮನಿಗೆ ಸದೃಶರಾದ ಮಹಾತ್ಮರು (೧೮-೨೦). ಅದರಲ್ಲಿಯೂ ವಿಶ್ವಾಮಿತ್ರರೆ, ನೀವೇ ವಿಶೇಷ ಕೀರ್ತಿಶಾಲಿಗಳು ಶ್ರೇಷ್ಠನದಿಯಾದ ಕೌಶಿಕಿಯು ನಿಮ್ಮ ಕುಲ ವನ್ನು ಬೆಳಗಿಸುತ್ತಿದ್ದಾಳೆ" ಎಂಬುದಾಗಿ ಆ ಕೌಶಿಕಮುನಿಗಳನ್ನು ಕೊಂಡಾಡಿ ದರು. ವಿಶ್ವಾಮಿತ್ರರು ಅಸ್ತಂಗತನಾದ ಸೂರ್ಯನಂತೆ ನಿದ್ರಾವಶರಾದರು. ಅವರು ಹೇಳಿದ ಕಥೆಯನ್ನು ಕೇಳಿ ರಾಮಲಕ್ಷ್ಮಣರು ವಿಸ್ಮಿತರಾದರು. ಅವರು ಆ ಮುನಿಗಳ ಮಹಿಮೆಯನ್ನು ಹೊಗಳುತ್ತ ನಿದ್ರಿಸಿದರು (೨೧-೨೩).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಮೂವತ್ತುನಾಲ್ಕನೆಯ ಸರ್ಗ

## ಪಂಚತ್ರಿಂಶಃ ಸರ್ಗಃ

### ಉಮಾಗಂಗಾವೃತ್ತಾಂತಸಂಕ್ಷೇಪಃ

ಉಪಾಸ್ಯ ರಾತ್ರಿಶೇಷಂ ತು ಶೋಣಾಕೂಲೇ ಮಹರ್ಷಿಭಿಃ ।
ನಿಶಾಯಾಂ ಸುಪ್ರಭಾತಾಯಾಂ ವಿಶ್ವಾಮಿತ್ರೋಽಭ್ಯಭಾಷತ ॥ ೧

ಸುಪ್ರಭಾತಾ ನಿಶಾ ರಾಮ ಪೂರ್ವಾ ಸಂಧ್ಯಾ ಪ್ರವರ್ತತೇ ।
ಉತ್ತಿಷ್ಠೋತ್ತಿಷ್ಠ ಭದ್ರಂ ತೇ ಗಮನಾಯಾಭಿರೋಚಯ ॥ ೨

ತಚ್ಛ್ರುತ್ವಾ ವಚನಂ ತಸ್ಯ ಕೃತ್ವಾ ಪೌರ್ವಾಹ್ಣಿಕೀಂ ಕ್ರಿಯಾಮ್ ।
ಗಮನಂ ರೋಚಯಾಮಾಸ ವಾಕ್ಯಂ ಚೇದಮುವಾಚ ಹ ॥ ೩

ಅಯಂ ಶೋಣಃ ಶುಭಜಲೋಽಗಾಧಃ ಪುಲಿನಮಂಡಿತಃ ।
ಕತರೇಣ ಪಥಾ ಬ್ರಹ್ಮನ್ ಸಂತರಿಷ್ಯಾಮಹೇ ವಯಮ್ ॥ ೪

ಏವಮುಕ್ತಸ್ತು ರಾಮೇಣ ವಿಶ್ವಾಮಿತ್ರೋಽಬ್ರವೀದಿದಮ್ ।
ಏಷ ಪಂಥಾ ಮಯೋದ್ದಿಷ್ಟೋ ಯೇನ ಯಾಂತಿ ಮಹರ್ಷಯಃ ॥

## ಸರ್ಗ ೩೫

### ಗಂಗಾನದಿಯ ವೃತ್ತಾಂತ.

ವಿಶ್ವಾಮಿತ್ರರು ಋಷಿಗಳೊಡನೆ ಶೋಣಾತೀರದಲ್ಲಿ ಆ ರಾತ್ರಿಯನ್ನು ಕಳೆದು ಬೆಳಗಾಗುತ್ತಿರುವಾಗ "ರಾಮ, ಬೆಳಗಾಯಿತು. ಪ್ರಾತಃಸಂಧ್ಯಾ ಕಾಲವು ಬಂದಿತು. ಏಳು, ಏಳು ಪ್ರಯಾಣಕ್ಕೆ ಸಿದ್ಧನಾಗು" ಎಂದರು (೧-೨). ಕೂಡಲೆ ಶ್ರೀರಾಮನು (ನಿದ್ರೆಯಿಂದೆದ್ದು) ಪ್ರಾತಃಕೃತ್ಯಗಳನ್ನು ಮುಗಿಸಿ ಪ್ರಯಾಣಕ್ಕೆ ಸಿದ್ಧನಾದನು. ಅವನು "ಋಷಿಗಳೆ, ತಿಳಿನೀರಿನಿಂದ ತುಂಬಿದ ಈ ಶೋಣಾ ನದಿಯು ಮರಳುದಿಣ್ಣೆಗಳಿಂದ ರಮ್ಯವಾಗಿದೆ. ಇದು ಆಳವಾಗಿದೆ. ಇದನ್ನು ಎಲ್ಲಿ ದಾಟೋಣ?" ಎಂದು ಕೇಳಿದನು (೩-೪). ವಿಶ್ವಾಮಿತ್ರರು "ನಾನು ಉದ್ದೇಶಿಸಿರುವ ಮಾರ್ಗ ಇದು. ಋಷಿಗಳು ತಿರುಗಾಡುವುದು

ತೇ ಗತ್ವಾ ದೂರಮಧ್ವಾನಂ ಗತೇಽರ್ಧದಿವಸೇ ತದಾ ।
ಜಾಹ್ನವೀಂ ಸರಿತಾಂ ಶ್ರೇಷ್ಠಾಂ ದದೃಶುರ್ಮುನಿಸೇವಿತಾಮ್ ॥ ೬

ತಾಂ ದೃಷ್ಟ್ವಾ ಪುಣ್ಯಸಲಿಲಾಂ ಹಂಸಸಾರಸಸೇವಿತಾಮ್ ।
ಬಭೂವುರ್ಮುನಯಃ ಸರ್ವೇ ಮುದಿತಾಃ ಸಹರಾಘವಾಃ ॥ ೭

ತಸ್ಯಾಸ್ತೀರೇ ತದಾ ಸರ್ವೇ ಚಕ್ರುರ್ವಾಸಪರಿಗ್ರಹಮ್ ।
ತತಃ ಸ್ನಾತ್ವಾ ಯಥಾನ್ಯಾಯಂ ಸಂತರ್ಪ್ಯ ಪಿತೃದೇವತಾಃ ॥ ೮

ಹುತ್ವಾ ಚೈವಾಗ್ನಿಹೋತ್ರಾಣಿ ಪ್ರಾಶ್ಯ ಚಾಮೃತವದ್ಧವಿಃ ।
ವಿವಿಶುರ್ಜಾಹ್ನವೀತೀರೇ ಶುಭಾ ಮುದಿತಮಾನಸಾಃ ॥ ೯

ವಿಶ್ವಾಮಿತ್ರಂ ಮಹಾತ್ಮಾನಂ ಪರಿವಾರ್ಯ ಸಮಂತತಃ ।
ಸಂಪ್ರಹೃಷ್ಟಮನಾ ರಾಮೋ ವಿಶ್ವಾಮಿತ್ರಮಥಾಬ್ರವೀತ್ ॥ ೧೦

ಭಗವನ್ ಶ್ರೋತುಮಿಚ್ಛಾಮಿ ಗಂಗಾಂ ತ್ರಿಪಥಗಾಂ ನದೀಮ್ ।
ತ್ರೈಲೋಕ್ಯಂ ಕಥಮಾಕ್ರಮ್ಯ ಗತಾ ನದನದೀಪತಿಮ್ ॥ ೧೧

---

ಇಲ್ಲಿಯೇ" ಎಂದು ಆ ಸ್ಥಳವನ್ನು ತೋರಿಸಲಾಗಿ ಎಲ್ಲರೂ ಆ ಮಾರ್ಗದಲ್ಲಿ ನದಿಯನ್ನು ದಾಟಿ ಬಹುದೂರ ಪ್ರಯಾಣಮಾಡಿದರು. ಮಧ್ಯಾಹ್ನದ ಹೊತ್ತಿಗೆ ಅನೇಕ ಮುನಿಜನಸೇವಿತವಾದ ಗಂಗಾನದಿಯನ್ನು ಕಂಡರು (೫-೬). ಪುಣ್ಯಜಲಸಮೃದ್ಧವಾಗಿ ಹಂಸಸಾರಸಪಕ್ಷಿಗಳಿಂದ ತುಂಬಿದ ಗಂಗಾನದಿಯನ್ನು ನೋಡಿ ಮುನಿಗಳಿಗೂ ರಾಮಲಕ್ಷ್ಮಣರಿಗೂ ಆನಂದವಾಯಿತು. ಅವರೆಲ್ಲರೂ ಗಂಗಾತೀರದಲ್ಲಿ ಪ್ರಯಾಣವನ್ನು ನಿಲ್ಲಿಸಿ ಇಳಿದುಕೊಂಡರು. ವಿಧಿಪೂರ್ವಕವಾಗಿ ಸ್ನಾನಮಾಡಿ ಪಿತೃಗಳಿಗೆ ತರ್ಪಣವನ್ನು ಕೊಟ್ಟು, ಅಗ್ನಿಹೋತ್ರಾದಿ ವಿಧಿಗಳನ್ನು ನೆರವೇರಿಸಿ ಅಮೃತಸಮಾನವಾದ ಹವಿಸ್ಸನ್ನು ಭುಂಜಿಸಿದರು (೭-೯). ಆಮೇಲೆ ಗಂಗಾತೀರದಲ್ಲೊಂದು ಕಡೆ ಸಂತೋಷದಿಂದ ವಿಶ್ವಾಮಿತ್ರರ ಸುತ್ತಲೂ ಬಂದು ಕುಳಿತರು ಆಗ ಶ್ರೀರಾಮನು ವಿಶ್ವಾಮಿತ್ರರನ್ನು ಕುರಿತು "ಮಹಾತ್ಮರೆ, ಈ ಗಂಗಾನದಿಯ ವಿಷಯವನ್ನು ಕೇಳಬೇಕೆಂದಿದ್ದೇನೆ. ಇದು ತ್ರಿಲೋಕವನ್ನು ವ್ಯಾಪಿಸಿ ತ್ರಿಪಥಗೆಯೆನಿಸಿ ಸಾಗರವನ್ನು ಸೇರಿದ ಪ್ರಕಾರವೇನು ?" ಎಂದು ಕೇಳಿದನು (೧೦-೧೧).

ಚೋದಿತೋ ರಾಮವಾಕ್ಯೇನ ವಿಶ್ವಾಮಿತ್ರೋ ಮಹಾಮುನಿಃ ।
ವೃದ್ಧಿಂ ಜನ್ಮ ಚ ಗಂಗಾಯಾ ವಕ್ತುಮೇವೋಪಚಕ್ರಮೇ ॥ ೧೨

ಶೈಲೇಂದ್ರೋ ಹಿಮವಾನ್ನಾಮ ಧಾತೂನಾಮಾಕರೋ ಮಹಾನ್ ।
ತಸ್ಯ ಕನ್ಯಾದ್ವಯಂ ಜಾತಂ ರೂಪೇಣಾಪ್ರತಿಮಂ ಭುವಿ ॥ ೧೩

ಯಾ ಮೇರುದುಹಿತಾ ರಾಮ ತಯೋರ್ಮಾತಾ ಸುಮಧ್ಯಮಾ ।
ಮೇನಾ ಮನೋರಮಾ ದೇವೀ ಪತ್ನೀ ಹಿಮವತಃ ಪ್ರಿಯಾ ॥ ೧೪

ತಸ್ಯಾಂ ಗಂಗೇಯಮಭವಜ್ಜ್ಯೇಷ್ಠಾ ಹಿಮವತಃ ಸುತಾ ।
ಉಮಾ ನಾಮ ದ್ವಿತೀಯಾಭೂತ್ಕನ್ಯಾ ತಸ್ಯೈವ ರಾಘವ ॥ ೧೫

ಅಥ ಜ್ಯೇಷ್ಠಾಂ ಸುರಾಃ ಸರ್ವೇ ದೇವಕಾರ್ಯಚಿಕೀರ್ಷಯಾ ।
ಶೈಲೇಂದ್ರಂ ವರಯಾಮಾಸುರ್ಗಂಗಾಂ ತ್ರಿಪಥಗಾಂ ನದೀಮ್ ॥

ದದೌ ಧರ್ಮೇಣ ಹಿಮವಾಂಸ್ತನಯಾಂ ಲೋಕಪಾವನೀಮ್ ।
ಸ್ವಚ್ಛಂದಪಥಗಾಂ ಗಂಗಾಂ ತ್ರೈಲೋಕ್ಯಹಿತಕಾಮ್ಯಯಾ ॥ ೧೭

ಪ್ರತಿಗೃಹ್ಯ ತತೋ ದೇವಾಸ್ತ್ರೈಲೋಕ್ಯಹಿತಕಾರಿಣಃ ।
ಗಂಗಾಮಾದಾಯ ತೇಽಗಚ್ಛನ್ ಕೃತಾರ್ಥೇನಾಂತರಾತ್ಮನಾ ॥ ೧೮

---

ಆಗ ವಿಶ್ವಾಮಿತ್ರರು ಗಂಗೆಯ ಜನನವನ್ನೂ ಅದು ತ್ರಿಲೋಕವನ್ನು ವ್ಯಾಪಿಸಿದ ಪ್ರಕಾರವನ್ನೂ ವಿವರಿಸಲಾರಂಭಿಸಿದರು (೧೨) : "ರಾಮ, ನಾನಾಧಾತುಗಳಿಗೆ ಆಕರನಾದ ಹಿಮವಂತನೆಂಬ ಪರ್ವತರಾಜನಿದ್ದಾನೆ. ಆತನಿಗೆ ಪರಮಸುಂದರಿಯರಾದ ಇಬ್ಬರು ಪುತ್ರಿಯರು. ಮೇರುಪುತ್ರಿಯಾದ ಮೇನೆ ಎಂಬುವಳು ಆ ಪುತ್ರಿಯರ ಜನನಿ. ಅವಳು ಹಿಮವಂತನ ಪ್ರಿಯಪತ್ನಿ. ಹಿಮವಂತನ ಹಿರಿಯ ಮಗಳೇ ಈ ಗಂಗೆ ಎರಡನೆಯ ಮಗಳು ಉಮೆ (೧೩-೧೫). ಒಂದು ನಲ ದೇವತೆಗಳು ದೇವಕಾರ್ಯಕ್ಕಾಗಿ ಗಂಗೆಯನ್ನು ಸಮರ್ಪಿಸಬೇಕೆಂದು ಹಿಮವಂತನಲ್ಲಿ ಬೇಡಿಕೊಂಡರು. ಹಿಮವಂತನು ಲೋಕಪಾವನಿಯಾದ ಈ ತನಯಳನ್ನು ತ್ರಿಲೋಕಹಿತಕ್ಕಾಗಿ ಸಮರ್ಪಿಸಿದನು. ಇವಳು ಸ್ವೇಚ್ಛೆಯಿಂದ ಯಾವ ಮಾರ್ಗದಲ್ಲಾದರೂ ಸಂಚರಿಸಲು ಸಮರ್ಥೆ (೧೬-೧೭). ದೇವತೆಗಳು ತಾವು ಕೃತಾರ್ಥರಾದೆವೆಂದು ಭಾವಿಸಿ ಮೂರು

ಯಾ ಚಾನ್ಯಾ ಶೈಲದುಹಿತಾ ಕನ್ಯಾಸೀದ್ರಘುನಂದನ ।
ಉಗ್ರಂ ಸಾ ವ್ರತಮಾಸ್ಥಾಯ ತಪಸ್ತೇಪೇ ತಪೋಧನಾ ॥ ೧೯
ಉಗ್ರೇಣ ತಪಸಾ ಯುಕ್ತಾಂ ದದೌ ಶೈಲವರಃ ಸುತಾಮ್ ।
ರುದ್ರಾಯಾಪ್ರತಿರೂಪಾಯ ಉಮಾಂ ಲೋಕನಮಸ್ಕೃತಾಮ್ ॥
ಏತೇ ತೇ ಶೈಲರಾಜಸ್ಯ ಸುತೇ ಲೋಕನಮಸ್ಕೃತೇ ।
ಗಂಗಾ ಚ ಸರಿತಾಂ ಶ್ರೇಷ್ಠಾ ಉಮಾ ದೇವೀ ಚ ರಾಘವ ॥ ೨೦
ಏತತ್ತೇ ಸರ್ವಮಾಖ್ಯಾತಂ ಯಥಾ ತ್ರಿಪಥಗಾ ನದೀ ।
ಖಂ ಗತಾ ಪ್ರಥಮಂ ತಾತ ಗತಿಂ ಗತಿಮತಾಂ ವರ ॥ ೨೨
ಸೈಷಾ ಸುರನದೀ ರಮ್ಯಾ ಶೈಲೇಂದ್ರಸ್ಯ ಸುತಾ ತದಾ ।
ಸುರಲೋಕಂ ಸಮಾರೂಢಾ ವಿಪಾಪಾ ಜಲವಾಹಿನೀ ॥ ೨೩

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಪಂಚತ್ರಿಂಶಃ ಸರ್ಗಃ



ಲೋಕಗಳ ಹಿತಕ್ಕಾಗಿ ಗಂಗೆಯನ್ನು ಕರೆದುಕೊಂಡು ಹೋದರು. ಹಿಮವಂತನಿಗೆ ಇನ್ನೊಬ್ಬ ಮಗಳಿದ್ದಳಲ್ಲ—ಉಮಾ ಎಂಬವಳು, ಅವಳು ವ್ರತನಿಷ್ಠಳಾಗಿ (ಶಿವನನ್ನು ಕುರಿತು) ಉಗ್ರವಾದ ತಪಸ್ಸನ್ನಾಚರಿಸಿದಳು (೧೮-೧೯). ಕಡೆಗೆ ಹಿಮವಂತನು ಆ ಉಮಾದೇವಿಯನ್ನು ಮಹಾಮಹಿಮನಾದ ಶಿವನಿಗೆ ಕೊಟ್ಟು ವಿವಾಹಮಾಡಿದನು ಉಮೆಯು ಸರ್ವಲೋಕ ನಮಸ್ಕೃತಳಾದಳು. ರಾಘವ, ತ್ರಿಪಥಗೆಯು ಮೊದಲು ಆಕಾಶವನ್ನು ಸೇರಿ ಅನಂತರ ಪುಣ್ಯವಂತರಿಗೆ ಲಭ್ಯವಾದ ಸ್ವರ್ಗಕ್ಕೆ ಹೋಗಿ ಜಲಸಮೃದ್ಧಳಾಗಿ ದೇವನದಿ ಎನಿಸಿಕೊಂಡಳು ಇವಳು ಸಕಲ ಪಾಪವನ್ನೂ ಪರಿಹರಿಸುವಳು" ಎಂದರು(೨೦-೨೩).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಮೂವತ್ತೈದನೆಯ ಸರ್ಗ



## ಷಟ್ತ್ರಿಂಶಃ ಸರ್ಗಃ

### ಉಮಾಮಹಾತ್ಮ್ಯಮ್

ಉಕ್ತವಾಕ್ಯೇ ಮುನೌ ತಸ್ಮಿನ್ನುಭೌ ರಾಘವಲಕ್ಷ್ಮಣೌ ।
ಪ್ರತಿನಂದ್ಯ ಕಥಾಂ ವೀರಾವೂಚತುರ್ಮುನಿಪುಂಗವಮ್ ॥ ೧

ಧರ್ಮಯುಕ್ತಮಿದಂ ಬ್ರಹ್ಮನ್ ಕಥಿತಂ ಪರಮಂ ತ್ವಯಾ ।
ದುಹಿತುಃ ಶೈಲರಾಜಸ್ಯ ಜ್ಯೇಷ್ಠಾಯಾ ವಕ್ತುಮರ್ಹಸಿ ॥ ೨

ವಿಸ್ತರಂ ವಿಸ್ತರಜ್ಞೋಽಸಿ ದಿವ್ಯಮಾನುಷಸಂಭವಮ್ ।
ತ್ರೀನ್ ಪಥೋ ಹೇತುನಾ ಕೇನ ಪ್ಲಾವಯೇಲ್ಲೋಕಪಾವನೀ ॥ ೩

ಕಥಂ ಗಂಗಾ ತ್ರಿಪಥಗಾ ವಿಶ್ರುತಾ ಸರಿದುತ್ತಮಾ ।
ತ್ರಿಷು ಲೋಕೇಷು ಧರ್ಮಜ್ಞ ಕರ್ಮಭಿಃ ಕೈಃ ಸಮನ್ವಿತಾ ॥ ೪

ತಥಾ ಬ್ರುವತಿ ಕಾಕುತ್ಸ್ಥೇ ವಿಶ್ವಾಮಿತ್ರಸ್ತಪೋಧನಃ ।
ನಿಖಿಲೇನ ಕಥಾಂ ಸರ್ವಾಮೃಷಿಮಧ್ಯೇ ನ್ಯವೇದಯತ್ ॥ ೫

## ಸರ್ಗ ೩೬

### ಉಮಾಮಹೇಶ್ವರರ ವಿಹಾರ, ಉಮೆಯು ದೇವತೆಗಳಿಗೂ ಭೂಮಿಗೂ ಶಾಪವನ್ನು ಕೊಡುವುದು

ವಿಶ್ವಾಮಿತ್ರರು ಹೇಳಿದ ಕಥೆಯನ್ನು ಕೇಳಿ ರಾಮಲಕ್ಷ್ಮಣರಿಗೆ ಕುತೂಹಲವುಂಟಾಯಿತು. ಆ ವೀರರು "ಮುನಿಗಳೆ, ಪುಣ್ಯಕರವಾದ ವಿಷಯವನ್ನು ಹೇಳಿದಿರಿ ಪರ್ವತರಾಜನ ಜ್ಯೇಷ್ಠಪುತ್ರಿಯ ಚರಿತ್ರೆಯನ್ನು ದಯವಿಟ್ಟು ವಿಸ್ತಾರವಾಗಿ ಹೇಳಬೇಕು. ಅವಳು ಸ್ವರ್ಗಲೋಕದಲ್ಲಿಯೂ ಭೂಲೋಕದಲ್ಲಿಯೂ ನಡೆಸಿದ ವಿಶೇಷವೇನು ? ತಮಗೆ ಸಕಲವೂ ಗೊತ್ತಿದೆ (೧-೨) ಆ ಲೋಕಪಾವನಿಯು ಮೂರು ಪಥಗಳನ್ನೂ ವ್ಯಾಪಿಸಿದ್ದು ಹೇಗೆ? ತ್ರಿಪಥಗಾ ಎಂಬ ಹೆಸರು ಹೇಗೆ ಪ್ರಸಿದ್ಧಿಯಾಯಿತು ? ಅವಳು ಮೂರು ಲೋಕಗಳಲ್ಲಿ ಯಾವ ಕೆಲಸಗಳನ್ನು ಮಾಡಿದಳು ? " ಎಂದು ಕೇಳಿದರು (೩-೪). ಆಗ ವಿಶ್ವಾಮಿತ್ರರು ಎಲ್ಲವನ್ನೂ ವಿಸ್ತಾರವಾಗಿ ನಿರೂಪಿಸಿದರು :

ಪುರಾ ರಾಮ ಕೃತೋದ್ವಾಹಃ ಶಿತಿಕಂಠೋ ಮಹಾತಪಾಃ ।
ದೃಷ್ಟ್ವಾ ಚ ಸ್ಪೃಹಯಾ ದೇವೀಂ ಮೈಥುನಾಯೋಪಚಕ್ರಮೇ ॥
ತಸ್ಯ ಸಂಕ್ರೀಡಮಾನಸ್ಯ ಮಹಾದೇವಸ್ಯ ಧೀಮತಃ ।
ಶಿತಿಕಂಠಸ್ಯ ದೇವಸ್ಯ ದಿವ್ಯಂ ವರ್ಷಶತಂ ಗತಮ್ ॥ ೭

ನ ಚಾಪಿ ತನಯೋ ರಾಮ ತಸ್ಯಾಮಾಸೀತ್ ಪರಂತಪ ।
ತತೋ ದೇವಾಃ ಸಮುದ್ವಿಗ್ನಾಃ ಪಿತಾಮಹಪುರೋಗಮಾಃ ॥ ೮

ಯದಿಹೋತ್ಪದ್ಯತೇ ಭೂತಂ ಕಸ್ತತ್ ಪ್ರತಿಸಹಿಷ್ಯತೇ ।
ಅಭಿಗಮ್ಯ ಸುರಾಃ ಸರ್ವೇ ಪ್ರಣಿಪತ್ಯೇದಮಬ್ರುವನ್ ॥ ೯

ದೇವದೇವ ಮಹಾದೇವ ಲೋಕಸ್ಯಾಸ್ಯ ಹಿತೇ ರತ ।
ಸುರಾಣಾಂ ಪ್ರಣಿಪಾತೇನ ಪ್ರಸಾದಂ ಕರ್ತುಮರ್ಹಸಿ ॥ ೧೦

ನ ಲೋಕಾ ಧಾರಯಿಷ್ಯಂತಿ ತವ ತೇಜಃ ಸುರೋತ್ತಮ ।
ಬ್ರಾಹ್ಮೇಣ ತಪಸಾ ಯುಕ್ತೋ ದೇವ್ಯಾ ಸಹ ತಪಶ್ಚರ ॥ ೧೧

ತ್ರೈಲೋಕ್ಯಹಿತಕಾಮಾರ್ಥಂ ತೇಜಸ್ತೇಜಸಿ ಧಾರಯ ।
ರಕ್ಷ ಸರ್ವಾನಿಮಾನ್ ಲೋಕಾನ್ನಾಲೋಕಂ ಕರ್ತುಮರ್ಹಸಿ ॥ ೧೨

---

“ರಾಮ, ಮಹಾತಪಸ್ವಿಯಾದ ನೀಲಕಂಠನು ಉಮಾದೇವಿಯನ್ನು ಮದುವೆಯಾದಮೇಲೆ ಅವಳೊಡನೆ ಕ್ರೀಡಿಸಲಾರಂಭಿಸಿದನು. ಅನಂತರ ನೂರು ದಿವ್ಯವರ್ಷಗಳು ಕಳೆದುಹೋದವು. ಉಮಾದೇವಿಯಲ್ಲಿ ಪುತ್ರನು ಜನಿಸಲಿಲ್ಲ. ಬ್ರಹ್ಮಾದಿದೇವತೆಗಳಿಗೆ ‘ಈ ಮಹಾದೇವನಿಂದ ಹುಟ್ಟುವ ತೇಜಸ್ಸನ್ನು ಯಾರು ಸಹಿಸಿಕೊಂಡಾರು’ ಎಂಬ ದೊಡ್ಡ ಚಿಂತೆ ಉತ್ಪನ್ನವಾಯಿತು (೬-೭). ಅವರೆಲ್ಲರೂ ಹೋಗಿ ಶಿವನಿಗೆ ನಮಸ್ಕರಿಸಿ “ದೇವದೇವ, ಮಹಾದೇವ, ನೀನು ಲೋಕಹಿತಕ್ಕಾಗಿ ಉದ್ಯುಕ್ತನಾಗಿದ್ದೀಯೆ. ನಾವು ದೇವತೆಗಳು ನಿನ್ನ ಕಾಲಿಗೆ ಬಿದ್ದಿದ್ದೇವೆ. ಪ್ರಸನ್ನನಾಗು. ನಿನ್ನ ತೇಜಸ್ಸನ್ನು ಧರಿಸಲು ಈ ಲೋಕದಲ್ಲಿ ಯಾರಿಗೂ ಸಾಮರ್ಥ್ಯವಿಲ್ಲ. ನೀನು ದೇವಿಯೊಡನೆ ವೇದಪ್ರಸಿದ್ಧವಾದ ತಪಶ್ಚರಣೆಯಲ್ಲಿ ನಿರತನಾಗು (೮-೧೧). ತ್ರಿಲೋಕಹಿತಕ್ಕಾಗಿ ತೇಜಸ್ಸನ್ನು ತೇಜೋಮಯವಾದ ನಿನ್ನ ದೇಹದಲ್ಲಿಯೇ ಧರಿಸು. ಈ ಲೋಕಗಳನ್ನು ರಕ್ಷಿಸು. ಲೋಕವೇ ಇಲ್ಲದಂತೆ ಮಾಡಬೇಡ” ಎಂದು

ದೇವತಾನಾಂ ವಚಃ ಶ್ರುತ್ವಾ ಸರ್ವಲೋಕಮಹೇಶ್ವರಃ ।
ಬಾಢಮಿತ್ಯಬ್ರವೀತ್ ಸರ್ವಾನ್ ಪುನಶ್ಚೇದಮುವಾಚ ಹ ॥ ೧೩
ಧಾರಯಿಷ್ಯಾಮ್ಯಹಂ ತೇಜಸ್ತೇಜಸ್ಯೇವ ಸಹೋಮಯಾ ।
ತ್ರಿದಶಾಃ ಪೃಥಿವೀ ಚೈವ ನಿರ್ವಾಣಮಧಿಗಚ್ಛತು ॥ ೧೪
ಯದಿದಂ ಕ್ಷುಭಿತಂ ಸ್ಥಾನಾನ್ಮಮ ತೇಜೋ ಹ್ಯನುತ್ತಮಮ್ ।
ಧಾರಯಿಷ್ಯತಿ ಕಸ್ತನ್ಮೇ ಬ್ರುವಂತು ಸುರಸತ್ತಮಾಃ ॥ ೧೫
ಏವಮುಕ್ತಾಸ್ತತೋ ದೇವಾಃ ಪ್ರತ್ಯೂಚುರ್ವೃಷಭಧ್ವಜಮ್ ।
ಯತ್ತೇಜಃ ಕ್ಷುಭಿತಂ ಹ್ಯೇತತ್ತದ್ಧರಾ ಧಾರಯಿಷ್ಯತಿ ॥ ೧೬
ಏವಮುಕ್ತಃ ಸುರಪತಿಃ ಪ್ರಮುಮೋಚ ಮಹೀತಲೇ ।
ತೇಜಸಾ ಪೃಥಿವೀ ಯೇನ ವ್ಯಾಪ್ತಾ ಸಗಿರಿಕಾನನಾ ॥ ೧೭
ತತೋ ದೇವಾಃ ಸಗಂಧರ್ವಾಃ ಪುನರೂಚುರ್ಹುತಾಶನಮ್ ।
ಪ್ರವಿಶ ತ್ವಂ ಮಹಾತೇಜೋ ರೌದ್ರಂ ವಾಯುಸಮನ್ವಿತಃ ॥ ೧೮
ತದಗ್ನಿನಾ ಪುನರ್ವ್ಯಾಪ್ತಂ ಸಂಜಾತಃ ಶ್ವೇತಪರ್ವತಃ ।
ದಿವ್ಯಂ ಶರವಣಂ ಚೈವ ಪಾವಕಾದಿತ್ಯಸಂನಿಭಮ್ ॥ ೧೯

---

ಪ್ರಾರ್ಥಿಸಿದರು (೧೨). ಅವರ ಪ್ರಾರ್ಥನೆಯನ್ನಾಲಿಸಿ ಪರಮೇಶ್ವರನು 'ಅಸ್ತು' ಎಂದು ನುಡಿದು, "ಎಲೈ ದೇವತೆಗಳೆ, ನನ್ನ ತೇಜಸ್ಸನ್ನು ನನ್ನಲ್ಲಿಯೇ ಧರಿಸುತ್ತೇನೆ. ಉಮೆಯೂ ಸಹಕರಿಸುವಳು. ನೀವು, ಪೃಥ್ವಿ—ಎಲ್ಲರೂ ಶಾಂತಿಯಿಂದಿರಿ. ಆದರೆ ಈಗಾಗಲೇ ಸ್ಖಲಿತವಾದ ನನ್ನ ತೇಜೋಽಂಶವನ್ನು ಧರಿಸತಕ್ಕವರಾರು? ಹೇಳಿರಿ" ಎಂದು ಕೇಳಿದನು (೧೩-೧೫). ದೇವತೆಗಳು 'ಅದನ್ನು ಪೃಥ್ವಿಯು ಧರಿಸುವಳು' ಎಂದರು. ಆಗ ಮಹಾಬಲಶಾಲಿಯಾದ ಆ ದೇವೇಶ್ವರನು ತನ್ನ ತೇಜೋಂಶವನ್ನು ವಿಸರ್ಜಿಸಿದನು. ಅದು ಪರ್ವತಾರಣ್ಯಸಹಿತವಾಗಿ ಸಮಸ್ತ ಪೃಥ್ವಿಯನ್ನು ವ್ಯಾಪಿಸಿತು (೧೬-೧೭). (ಪೃಥ್ವಿಯು ಅದನ್ನು ತಡೆದುಕೊಳ್ಳಲಾರಳೆಂಬ ಭಯದಿಂದ) ದೇವತೆಗಳು ಅಗ್ನಿಯನ್ನು ಕರೆದು "ನೀನು ವಾಯುವಿನೊಡನೆ ಸೇರಿ ರುದ್ರನ ಈ ಮಹಾ ತೇಜಸ್ಸನ್ನು ಧರಿಸು" ಎಂದರು. ಅಗ್ನಿಯಂತೆಯೂ ಆದಿತ್ಯನಂತೆಯೂ ಪ್ರಜ್ವಲಿಸುತ್ತಿದ್ದ ಆ ತೇಜಸ್ಸನ್ನು ಅಗ್ನಿಯು ಧರಿಸಲಾಗಿ ಆ ತೇಜೋಭಾಗವು

**ಯತ್ರ ಜಾತೋ ಮಹಾತೇಜಾಃ ಕಾರ್ತಿಕೇಯೋऽಗ್ನಿಸಂಭವಃ ।**
**ಅಥೋಮಾಂ ಚ ಶಿವಂ ಚೈವ ದೇವಾಃ ಸರ್ಷಿಗಣಾಸ್ತದಾ ॥ ೨೦**

**ಪೂಜಯಾಮಾಸುರತ್ಯರ್ಥಂ ಸುಪ್ರೀತಮನಸಸ್ತತಃ ।**
**ಅಥ ಶೈಲಸುತಾ ರಾಮ ತ್ರಿದಶಾನಿದಮಬ್ರವೀತ್ ॥ ೨೧**

**ಅಪ್ರಿಯಸ್ಯ ಕೃತಸ್ಯಾದ್ಯ ಫಲಂ ಪ್ರಾಪ್ಸ್ಯಥ ಮೇ ಸುರಾಃ ।**
**ಇತ್ಯುಕ್ತ್ವಾ ಸಲಿಲಂ ಗೃಹ್ಯ ಪಾರ್ವತೀ ಭಾಸ್ಕರಪ್ರಭಾ ॥ ೨೨**

**ಸಮನ್ಯುರಶಪತ್ ಸರ್ವಾನ್ ಕ್ರೋಧಸಂರಕ್ತಲೋಚನಾ ।**
**ಯಸ್ಮಾನ್ನಿವಾರಿತಾ ಚಾಹಂ ಸಂಗತಾ ಪುತ್ರಕಾಮ್ಯಯಾ ॥ ೨೩**

**ಅಪತ್ಯಂ ಸ್ವೇಷು ದಾರೇಷು ನೋತ್ಪಾದಯಿತುಮರ್ಹಥ ।**
**ಅದ್ಯಪ್ರಭೃತಿ ಯುಷ್ಮಾಕಮಪ್ರಜಾಃ ಸಂತು ಪತ್ನಯಃ ॥ ೨೪**

**ಏವಮುಕ್ತ್ವಾ ಸುರಾನ್ ಸರ್ವಾನ್ ಶಶಾಪ ಪೃಥಿವೀಮಪಿ ।**
**ಅವನೇ ನೈಕರೂಪಾ ತ್ವಂ ಬಹುಭಾರ್ಯಾ ಭವಿಷ್ಯಸಿ ॥ ೨೫**

---

ಶ್ವೇತಪರ್ವತವಾಯಿತು. (ಅದರ ಮಹಿಮೆಯಿಂದ ಸಮೀಪದಲ್ಲಿ ಒಂದು ದಿವ್ಯವಾದ ಶರವಣವು* ಉತ್ಪನ್ನವಾಯಿತು (೧೮-೧೯). ಆ ಶರವಣದಲ್ಲಿ ಪರಮ ತೇಜಸ್ವಿಯಾದ ಕಾರ್ತಿಕೇಯನು (ಶಿವನ ತೇಜೋಂಶದಿಂದ) ಉದ್ಭವಿಸಿದನು. ಅವನಿಗೆ ಅಗ್ನಿಸಂಭವ ಎಂದೂ ಹೆಸರಾಯಿತು†. ಅನಂತರ ದೇವತೆಗಳೂ ಋಷಿಗಳೂ ಸುಪ್ರೀತರಾಗಿ ಉಮಾಮಹೇಶ್ವರರನ್ನು ಸ್ತೋತ್ರ ಮಾಡಿದರು. ರಾಮ, ಶೈಲಸುತೆಗೆ ಮಾತ್ರ ರೋಷ ಹುಟ್ಟಿತು. ಅವಳ ಕಣ್ಣುಗಳು ಕೆಂಡವಾದವು (೨೦-೨೧). ಅವಳು ಕೈಯಲ್ಲಿ ನೀರನ್ನು ತೆಗೆದುಕೊಂಡು "ದೇವತೆಗಳೆ, ನಾನು ಪುತ್ರಾರ್ಥಿಯಾಗಿರುವಾಗ ನೀವು ನನಗೆ ವಿಘ್ನಮಾಡಿದಿರಿ. ಇದರ ಫಲವನ್ನನುಭವಿಸಿರಿ. ನಿಮ್ಮ ಹೆಂಡತಿಯರಲ್ಲಿ ನಿಮಗೆ ಸಂತಾನವಾಗದೆ ಹೋಗಲಿ. ಇಂದಿನಿಂದ ನಿಮ್ಮ ಪತ್ನಿಯರು ಬಂಜೆಯರಾಗಲಿ" ಎಂದು ಅವರನ್ನು ಶಪಿಸಿಬಿಟ್ಟಳು (೨೨-೨೪). ಅನಂತರ

---

* ಶರವಣ = ದರ್ಭೆಯ ವನ.

† ಅಗ್ನಿಯು ತೇಜಸ್ಸನ್ನು ಸ್ವಲ್ಪಕಾಲ ಧರಿಸಿದ್ದರಿಂದ ಅಗ್ನಿಸಂಭವ; ಕೃತ್ತಿಕೆಯರು ಪೋಷಿಸಿದ್ದರಿಂದ ಕಾರ್ತಿಕೇಯ.

ನ ಚ ಪುತ್ರಕೃತಾಂ ಪ್ರೀತಿಂ ಮತ್ಕ್ರೋಧಕಲುಷೀಕೃತಾ ।
ಪ್ರಾಪ್ಸ್ಯಸಿ ತ್ವಂ ಸುದುರ್ಮೇಧೇ ಮಮ ಪುತ್ರಮನಿಚ್ಛತೀ ॥ ೨೬
ತಾನ್ ಸರ್ವಾನ್ ವ್ರೀಡಿತಾನ್ ದೃಷ್ಟ್ವಾ ಸುರಾನ್ ಸುರಪತಿಸ್ತದಾ।
ಗಮನಾಯೋಪಚಕ್ರಾಮ ದಿಶಂ ವರುಣಪಾಲಿತಾಮ್ ॥ ೨೭
ಸ ಗತ್ವಾ ತಪ ಆತಿಷ್ಠತ್ ಪಾರ್ಶ್ವೇ ತಸ್ಯೋತ್ತರೇ ಗಿರೇಃ ।
ಹಿಮವತ್ಪ್ರಭವೇ ಶೃಂಗೇ ಸಹ ದೇವ್ಯಾ ಮಹೇಶ್ವರಃ ॥ ೨೮
ಏಷ ತೇ ವಿಸ್ತರೋ ರಾಮ ಶೈಲಪುತ್ರ್ಯಾ ನಿವೇದಿತಃ ।
ಗಂಗಾಯಾಃ ಪ್ರಭವಂ ಚೈವ ಶೃಣು ಮೇ ಸಹಲಕ್ಷ್ಮಣಃ ॥ ೨೯

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಷಟ್‌ತ್ರಿಂಶಃ ಸರ್ಗಃ



ಭೂದೇವಿಯ ಕಡೆಗೆ ತಿರುಗಿ "ಎಲೌ ಪೃಥ್ವಿ, ನೀನು ನಾನಾ ರೂಪಳಾಗಿ ನಾನಾ ಜನರಿಗೆ ಹೆಂಡತಿಯಾಗು. ದುರ್ಬುದ್ಧಿಯವಳೆ, ನನಗೆ ಪುತ್ರನು ಜನಿಸುವದು ನಿನಗೆ ಇಷ್ಟವಾಗಲಿಲ್ಲ. ನಿನ್ನಮೇಲೆ ನನಗೆ ಕ್ರೋಧ ಉಂಟಾಗಿದೆ. ಪುತ್ರನಿಂದ ದೊರೆಯಬೇಕಾದ ಸುಖ ನಿನಗೆ ದೊರೆಯದೆ ಹೋಗಲಿ" ಎಂದು ಶಪಿಸಿದಳು (೨೫–೨೬). ದೇವತೆಗಳೆಲ್ಲರೂ ದುಃಖಿತ ರಾದರು. ಪರಮೇಶ್ವರನು ಅವರನ್ನು (ಮರುಕದಿಂದ) ನೋಡಿ ಮೆಲ್ಲನೆ ಪಶ್ಚಿಮದಿಕ್ಕಿಗೆ ಹೊರಟನು. ಅಲ್ಲಿ ಹಿಮಾಲಯದ ಉತ್ತರಪಾರ್ಶ್ವದಲ್ಲಿದ್ದ ಒಂದು ಶಿಖರದಲ್ಲಿ ಪಾರ್ವತೀದೇವಿಯೊಡನೆ ತಪೋನಿಷ್ಠನಾದನು. ರಾಮ, ಲಕ್ಷ್ಮಣ, ಈಗ ಪಾರ್ವತಿಯ ವೃತ್ತಾಂತವನ್ನು ತಿಳಿಸಿದ್ದೇನೆ. ಇನ್ನು ಗಂಗೆಯ ಮಹಿಮೆಯನ್ನು ಕೇಳಿರಿ" (೨೭–೨೯).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಮೂವತ್ತಾರನೆಯ ಸರ್ಗ



## ಸಪ್ತತ್ರಿಂಶಃ ಸರ್ಗಃ

### ಕುಮಾರೋತ್ಪತ್ತಿಃ

ತಪ್ಯಮಾನೇ ತಪೋ ದೇವೇ ದೇವಾಃ ಸರ್ಷಿಗಣಾಃ ಪುರಾ ।
ಸೇನಾಪತಿಮಭೀಪ್ಸಂತಃ ಪಿತಾಮಹಮುಪಾಗಮನ್ ॥ ೧

ತತೋಽಬ್ರುವನ್ ಸುರಾಃ ಸರ್ವೇ ಭಗವಂತಂ ಪಿತಾಮಹಮ್ ।
ಪ್ರಣಿಪತ್ಯ ಸುರಾಃ ಸರ್ವೇ ಸೇಂದ್ರಾಃ ಸಾಗ್ನಿಪುರೋಗಮಾಃ ॥ ೨

ಯೋ ನಃ ಸೇನಾಪತಿರ್ದೇವ ದತ್ತೋ ಭಗವತಾ ಪುರಾ ।
ಸ ನ ಜಾತೋಽದ್ಯ ಭಗವನ್ನಸ್ಮದ್ವೈರಿನಿಬರ್ಹಣಃ ॥ ೩

ತತ್ಪಿತಾ ಭಗವಾನ್ ಶರ್ವೋ ಹಿಮವಚ್ಛಿಖರೇಽದ್ಯ ವೈ ।
ತಪಃ ಪರಮಮಾಸ್ಥಾಯ ತಪ್ಯತೇ ಸ್ಮ ಸಹೋಮಯಾ ॥ ೪

ಯದತ್ರಾನಂತರಂ ಕಾರ್ಯಂ ಲೋಕಾನಾಂ ಹಿತಕಾಮ್ಯಯಾ ।
ಸಂವಿಧತ್ಸ್ವ ವಿಧಾನಜ್ಞ ತ್ವಂ ಹಿ ನಃ ಪರಮಾ ಗತಿಃ ॥ ೫

ದೇವತಾನಾಂ ವಚಃ ಶ್ರುತ್ವಾ ಸರ್ವಲೋಕಪಿತಾಮಹಃ ।
ಸಾಂತ್ವಯನ್ ಮಧುರೈರ್ವಾಕ್ಯೈಸ್ತ್ರಿದಶಾನಿದಮಬ್ರವೀತ್ ॥ ೬

### ಸರ್ಗ ೩೭

ಕಾರ್ತಿಕೇಯನ ಉತ್ಪತ್ತಿಯನ್ನು ವಿಸ್ತಾರವಾಗಿ ವರ್ಣಿಸುವುದು.

"ಈಶ್ವರನು ತಪಸ್ಸುಮಾಡಲಾರಂಭಿಸಲು ಇಂದ್ರ, ಅಗ್ನಿ ಮುಂತಾದ ದೇವತೆಗಳು ಬ್ರಹ್ಮನ ಸಮೀಪಕ್ಕೆ ಹೋಗಿ "ದೇವ, ನಮ್ಮ ಸೇನಾಪತಿಯನ್ನು ಸೃಜಿಸುವುದಕ್ಕಾಗಿ ಶಿವನು ತೇಜೋಽಂಶವನ್ನು ವಿಸರ್ಜಿಸಿ ಉಮಾದೇವಿಯೊಡನೆ ಉಗ್ರವಾದ ತಪಸ್ಸನ್ನು ಆಚರಿಸುತ್ತಿದ್ದಾನೆ. ಮುಂದೆ ಲೋಕಹಿತಕ್ಕಾಗಿ ಮಾಡಬೇಕಾದ್ದೇನು? ನೀನೇ ನಮಗೆ ಗತಿ" ಎಂದು ಹೇಳಿದರು (೧-೪). ಆಗ ಬ್ರಹ್ಮನು ಅವರಿಗೆ ಸಮಾಧಾನ ಹೇಳುತ್ತ "ಪಾರ್ವತಿಯು

ಶೈಲಪುತ್ರ್ಯಾ ಯದುಕ್ತಂ ತನ್ನ ಪ್ರಜಾಃ ಸ್ವಾಸು ಪತ್ನಿಷು ।
ತಸ್ಯಾ ವಚನಮಕ್ಲಿಷ್ಟಂ ಸತ್ಯಮೇವ ನ ಸಂಶಯಃ ॥ ೭

ಇಯಮಾಕಾಶಗಾ ಗಂಗಾ ಯಸ್ಯಾಂ ಪುತ್ರಂ ಹುತಾಶನಃ ।
ಜನಯಿಷ್ಯತಿ ದೇವಾನಾಂ ಸೇನಾಪತಿಮರಿಂದಮಮ್ ॥ ೮

ಜ್ಯೇಷ್ಠಾ ಶೈಲೇಂದ್ರದುಹಿತಾ ಮಾನಯಿಷ್ಯತಿ ತಂ ಸುತಮ್ ।
ಉಮಾಯಾಸ್ತದ್ಬಹುಮತಂ ಭವಿಷ್ಯತಿ ನ ಸಂಶಯಃ ॥ ೯

ತಚ್ಛ್ರುತ್ವಾ ವಚನಂ ತಸ್ಯ ಕೃತಾರ್ಥಾ ರಘುನಂದನ ।
ಪ್ರಣಿಪತ್ಯ ಸುರಾಃ ಸರ್ವೇ ಪಿತಾಮಹಮಪೂಜಯನ್ ॥ ೧೦

ತೇ ಗತ್ವಾ ಪರ್ವತಂ ರಾಮ ಕೈಲಾಸಂ ಧಾತುಮಂಡಿತಮ್ ।
ಅಗ್ನಿಂ ನಿಯೋಜಯಾಮಾಸುಃ ಪುತ್ರಾರ್ಥಂ ಸರ್ವದೇವತಾಃ ॥

ದೇವಕಾರ್ಯಮಿದಂ ದೇವ ಸಂವಿಧತ್ಸ್ವ ಹುತಾಶನ ।
ಶೈಲಪುತ್ರ್ಯಾಂ ಮಹಾತೇಜೋ ಗಂಗಾಯಾಂ ತೇಜ ಉತ್ಸೃಜ ॥

ದೇವತಾನಾಂ ಪ್ರತಿಜ್ಞಾಯ ಗಂಗಾಮಭ್ಯೇತ್ಯ ಪಾವಕಃ ।
ಗರ್ಭಂ ಧಾರಯ ವೈ ದೇವಿ ದೇವತಾನಾಮಿದಂ ಪ್ರಿಯಮ್ ॥ ೧೩

---

ನಿಮಗೆ ಪತ್ನಿಯರಲ್ಲಿ ಸಂತಾನವಾಗುವುದಿಲ್ಲವೆಂದು ಹೇಳಿದ ಮಾತು ಸತ್ಯವಾಗುತ್ತದೆ. ಎಂದಿಗೂ ಹುಸಿಯಾಗುವುದಿಲ್ಲ. ಅಗ್ನಿಯು ಈ ಆಕಾಶಗಂಗೆಯಲ್ಲಿ ನಿಮ್ಮ ಸೇನಾಪತಿಯನ್ನು ಪಡೆಯುವನು (೭-೮) ಹಿಮವಂತನ ಹಿರಿಯ ಮಗಳಾದ ಗಂಗೆಯು (ಶಿವತೇಜಸ್ಸನ್ನು ಧರಿಸಿ) ಪುತ್ರನನ್ನು ಪಡೆಯಲು ಸಂಮತಿಸುವಳು ಅದಕ್ಕೆ ಪಾರ್ವತಿಯೂ ಸಂಮತಿಯನ್ನೀಯುವಳು. ಸಂದೇಹವಿಲ್ಲ" ಎಂದು ನುಡಿದನು ದೇವತೆಗಳು ಬ್ರಹ್ಮನಿಗೆ ವಂದಿಸಿ ಕೈಲಾಸಕ್ಕೆ ಹೋಗಿ ಅಗ್ನಿಯನ್ನು ಕುರಿತು "ಅಗ್ನಿಯೆ, ಇದು ದೇವಕಾರ್ಯ ಗಂಗೆಯಲ್ಲಿ ಈಶ್ವರನ ಮಹಾತೇಜಸ್ಸನ್ನು ವಿಸರ್ಜಿಸು" ಎಂದರು. (೯-೧೨). ಅಗ್ನಿಯು ಅದಕ್ಕೆ ಒಪ್ಪಿ ಗಂಗೆಯನ್ನುದ್ದೇಶಿಸಿ "ದೇವಿ, ಇದನ್ನು ಗರ್ಭದಲ್ಲಿ ಧರಿಸು. ಈ ಕಾರ್ಯವು ದೇವತೆಗಳಿಗೆ ಇಷ್ಟವಾದದ್ದು" ಎಂದು

ಅಗ್ನೇಸ್ತು ವಚನಂ ಶ್ರುತ್ವಾ ದಿವ್ಯಂ ರೂಪಮಧಾರಯತ್ ।
ದೃಷ್ಟ್ವಾ ತನ್ಮಹಿಮಾನಂ ಸ ಸಮಂತಾದವಕೀರ್ಯತ ॥ ೧೪
ಸಮಂತತಸ್ತದಾ ದೇವೀಮಭ್ಯಷಿಂಚತ ಪಾವಕಃ ।
ಸರ್ವಸ್ರೋತಾಂಸಿ ಪೂರ್ಣಾನಿ ಗಂಗಾಯಾ ರಘುನಂದನ ॥ ೧೫
ತಮುವಾಚ ತತೋ ಗಂಗಾ ಸರ್ವದೇವಪುರೋಗಮಮ್ ।
ಅಶಕ್ತಾ ಧಾರಣೇ ದೇವ ತವ ತೇಜಃ ಸಮುದ್ಧತಮ್ ॥ ೧೬
ದಹ್ಯಮಾನಾಗ್ನಿನಾ ತೇನ ಸಂಪ್ರವ್ಯಥಿತಚೇತಸಾ ।
ಅಥಾಬ್ರವೀದಿದಂ ಗಂಗಾಂ ಸರ್ವದೇವಪುರೋಹಿತಃ ॥ ೧೭
ಇಹ ಹೈಮವತೇ ಪಾದೇ ಗರ್ಭೋಽಯಂ ಸಂನಿವೇಶ್ಯತಾಮ್ ।
ಶ್ರುತ್ವಾ ತ್ವಗ್ನಿವಚೋ ಗಂಗಾ ತಂ ಗರ್ಭಮತಿಭಾಸ್ವರಮ್ ॥ ೧೮
ಉತ್ಸಸರ್ಜ ಮಹಾತೇಜಾಃ ಸ್ರೋತೋಭ್ಯೋ ಹಿ ತದಾನಘ ।
ಯದಸ್ಯಾ ನಿರ್ಗತಂ ತಸ್ಮಾತ್ತಪ್ತಜಾಂಬೂನದಪ್ರಭಮ್ ॥ ೧೯
ಕಾಂಚನಂ ಧರಣೀಂ ಪ್ರಾಪ್ತಂ ಹಿರಣ್ಯಮತುಲಪ್ರಭಮ್ ।
ತಾಮ್ರಂ ಕಾರ್ಷ್ಣಾಯಸಂ ಚೈವ ತೈಕ್ಷ್ಣ್ಯಾದೇವಾಭ್ಯಜಾಯತ ॥
ಮಲಂ ತಸ್ಯಾಭವತ್ತತ್ರ ತ್ರಪು ಸೀಸಕಮೇವ ಚ ।
ತದೇತದ್ಧರಣೀಂ ಪ್ರಾಪ್ಯ ನಾನಾಧಾತುರವರ್ಧತ ॥ ೨೦

---

ಹೇಳಲು, ಅವಳು ದಿವ್ಯರೂಪವನ್ನು ಧರಿಸಿ ನಿಂತಳು. ಅವಳ ಮಹಿಮೆಯನ್ನು ಕಂಡು ಅಗ್ನಿಯು ಶಿವನ ತೇಜಸ್ಸನ್ನು ಅವಳಮೇಲೆ ಸುರಿದನು. ಗಂಗಾ ಪ್ರವಾಹವು ಉಕ್ಕಿತು (೧೩-೧೫). ಗಂಗೆಯು ಆ ತೇಜಸ್ಸನ್ನು ತಡೆದುಕೊಳ್ಳಲಾರದೆ ತಾನು ಅದನ್ನು ಧರಿಸಲು ಅಶಕ್ತಳೆಂದು ಹೇಳಿದಳು. "ಹಾಗಾದರೆ ಅದನ್ನು ಹಿಮವಂತನ ಪಾರ್ಶ್ವದಲ್ಲಿ ತ್ಯಜಿಸಿಬಿಡು" ಎಂದು ಅಗ್ನಿಯು ಹೇಳಿದನು. ಆಗ ಗಂಗೆಯು ಆ ದಿವ್ಯ ತೇಜಸ್ಸನ್ನು ತನ್ನ ಪ್ರವಾಹದಿಂದ ಹೊರಕ್ಕೆ ಚಲ್ಲಿದಳು (೧೬-೧೮). ಕಾದ ಅಪರಂಜಿಯಂತಿದ್ದ ಆ ತೇಜಸ್ಸಿನ ಒಂದು ಭಾಗವು ಭೂಮಿಯಲ್ಲಿ ಬಿದ್ದು ಚಿನ್ನವೂ (ಬೆಳ್ಳಿಯೂ) ಆಯಿತು. ಅದರ ಕಾವು ತಟ್ಟಿದ ವಸ್ತುವು ತಾಮ್ರವೂ ಕಬ್ಬಿಣವೂ ಆಯಿತು. ಆ ವಸ್ತುವಿನ ಕಶ್ಮಲಭಾಗವು ತವರವೂ ಸೀಸವೂ ಆಯಿತು. ಹೀಗೆ ಆ ತೇಜಸ್ಸಿನಿಂದ

ನಿಕ್ಷಿಪ್ತಮಾತ್ರೇ ಗರ್ಭೇ ತು ತೇಜೋಭಿರಭಿರಂಜಿತಮ್ ।
ಸರ್ವಂ ಪರ್ವತಸಂನದ್ಧಂ ಸೌವರ್ಣಮಭವದ್ವನಮ್ ॥ ೨೨

ಜಾತರೂಪಮಿತಿ ಖ್ಯಾತಂ ತದಾಪ್ರಭೃತಿ ರಾಘವ ।
ಸುವರ್ಣಂ ಪುರುಷವ್ಯಾಘ್ರ ಹುತಾಶನಸಮಪ್ರಭಮ್ ॥ ೨೩

ತೃಣವೃಕ್ಷಲತಾಗುಲ್ಮಂ ಸರ್ವಂ ಭವತಿ ಕಾಂಚನಮ್ ।
ತಂ ಕುಮಾರಂ ತತೋ ಜಾತಂ ಸೇಂದ್ರಾಃ ಸಹಮರುದ್ಗಣಾಃ ॥

ಕ್ಷೀರಸಂಭಾವನಾರ್ಥಾಯ ಕೃತ್ತಿಕಾಃ ಸಮಯೋಜಯನ್ ।
ತಾಃ ಕ್ಷೀರಂ ಜಾತಮಾತ್ರಸ್ಯ ಕೃತ್ವಾ ಸಮಯಮುತ್ತಮಮ್ ॥ ೨೫

ದದುಃ ಪುತ್ರೋಽಯಮಸ್ಮಾಕಂ ಸರ್ವಾಸಾಮಿತಿ ನಿಶ್ಚಿತಾಃ ।
ತತಸ್ತು ದೇವತಾಃ ಸರ್ವಾಃ ಕಾರ್ತಿಕೇಯ ಇತಿ ಬ್ರುವನ್ ॥ ೨೬

ಪುತ್ರಸ್ತ್ರೈಲೋಕ್ಯವಿಖ್ಯಾತೋ ಭವಿಷ್ಯತಿ ನ ಸಂಶಯಃ ।
ತೇಷಾಂ ತದ್ವಚನಂ ಶ್ರುತ್ವಾ ಸ್ಕನ್ನಂ ಗರ್ಭಪರಿಸ್ರವೇ ॥ ೨೭

---

ನಾನಾ ಲೋಹಗಳು ಹುಟ್ಟಿದವು (೧೯-೨೧). ಗಂಗೆಯು ತೇಜಸ್ಸನ್ನು ಚಲ್ಲಿದ ಕೂಡಲೇ ಬಳಿಯಲ್ಲಿದ್ದ ಅರಣ್ಯವು ಪರ್ವತಸಹಿತವಾಗಿ ಸುವರ್ಣಮಯವಾಗಿ ಗೋಚರಿಸಿತು. ಚಿನ್ನವು ಜಾತ=ಪ್ರಕಟವಾದ, ರೂಪ=ಅಪೂರ್ವರೂಪ ಉಳ್ಳದ್ದು ಎಂಬ ಕಾರಣದಿಂದ ಜಾತರೂಪವೆಂದು ಪ್ರಸಿದ್ಧವಾಗಿದೆ. ಇದು ಅಗ್ನಿಯಂತೆ ಪ್ರಭೆಯನ್ನು ಬೀರುತ್ತದೆ (೨೨-೨೩). (ಇತ್ತ ಶರವಣದಲ್ಲಿ ಬಿದ್ದ ತೇಜಸ್ಸಿನಿಂದ) ಒಬ್ಬ ಕುಮಾರನು ಉದಯಿಸಿದನು. ಅವನಿಗೆ ಸ್ತನ್ಯ ಪಾನ ಮಾಡಿಸುವುದಕ್ಕಾಗಿ ಇಂದ್ರಾದಿ ದೇವತೆಗಳು ಕೃತ್ತಿಕೆಯರನ್ನು ನೇಮಿಸಿದರು. ಆಗ ಕೃತ್ತಿಕೆಯರು ಈ ಬಾಲಕನು ನಮ್ಮ ಪುತ್ರನೆಂದು ಪರಿಗಣಿತನಾಗಬೇಕೆಂದು ದೇವತೆಗಳಿಗೆ ಹೇಳಿದರು. ಅವರು ಹಾಗೆಯೇ ಆಗಲೆಂದೂ ಬಾಲಕನು ಕಾರ್ತಿಕೇಯ ಎಂಬ ಹೆಸರಿನಿಂದ ತ್ರಿಲೋಕವಿಖ್ಯಾತನಾಗುವನೆಂದೂ ನುಡಿದರು (೨೪-೨೬). ಆಗ ಕೃತ್ತಿಕಾದೇವಿಯರು ಈಶ್ವರನಿಂದ *ಸ್ಕನ್ನನಾಗಿ ಗಂಗೆಯ ಗರ್ಭಪ್ರವಾಹದಲ್ಲಿ ಬಂದು ಅಗ್ನಿಯಂತೆ ದಿವ್ಯಪ್ರಭೆಯಿಂದ ಬೆಳಗುತ್ತಿದ್ದ ಆ ಕುಮಾರನನ್ನು ಸ್ನಾನಮಾಡಿಸಿದರು. ಆತನು

---

* ಸ್ಕನ್ನ = ನಿರ್ಗತ, ಜಾರಿದವನು.

ಸ್ನಾಪಯನ್ ಪರಯಾ ಲಕ್ಷ್ಮ್ಯಾ ದೀಪ್ಯಮಾನಂ ಯಥಾನಲಮ್ ।
ಸ್ಕಂದ ಇತ್ಯಬ್ರುವನ್ ದೇವಾಃ ಸ್ಕನ್ನಂ ಗರ್ಭಪರಿಸ್ರವಾತ್ ॥ ೨೮
ಕಾರ್ತಿಕೇಯಂ ಮಹಾಭಾಗಂ ಕಾಕುತ್ಸ್ಥ ಜ್ವಲನೋಪಮಮ್ ।
ಪ್ರಾದುರ್ಭೂತಂ ತತಃ ಕ್ಷೀರಂ ಕೃತ್ತಿಕಾನಾಮನುತ್ತಮಮ್ ॥ ೨೯
ಷಣ್ಣಾಂ ಷಡಾನನೋ ಭೂತ್ವಾ ಜಗ್ರಾಹ ಸ್ತನಜಂ ಪಯಃ ।
ಗೃಹೀತ್ವಾ ಕ್ಷೀರಮೇಕಾಹ್ನಾ ಸುಕುಮಾರವಪುಸ್ತದಾ ॥ ೩೦
ಅಜಯತ್ ಸ್ವೇನ ವೀರ್ಯೇಣ ದೈತ್ಯಸೈನ್ಯಗಣಾನ್ ವಿಭುಃ ।
ಸುರಸೇನಾಗಣಪತಿಂ ತತಸ್ತಮಮಲದ್ಯುತಿಮ್ ॥ ೩೧
ಅಭ್ಯಷಿಂಚನ್ ಸುರಗಣಾಃ ಸಮೇತ್ಯಾಗ್ನಿಪುರೋಗಮಾಃ ।
ಏಷ ತೇ ರಾಮ ಗಂಗಾಯಾ ವಿಸ್ತರೋಽಭಿಹಿತೋ ಮಯಾ ॥ ೩೨
ಕುಮಾರಸಂಭವಶ್ಚೈವ ಧನ್ಯಃ ಪುಣ್ಯಸ್ತಥೈವ ಚ ।
ಭಕ್ತಶ್ಚ ಯಃ ಕಾರ್ತಿಕೇಯೇ ಕಾಕುತ್ಸ್ಥ ಭುವಿ ಮಾನವಃ ॥ ೩೩
ಆಯುಷ್ಮಾನ್ ಪುತ್ರಪೌತ್ರೈಶ್ಚ ಸ್ಕಂದಸಾಲೋಕ್ಯತಾಂ ವ್ರಜೇತ್ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಸಪ್ತತ್ರಿಂಶಃ ಸರ್ಗಃ

---

ಸ್ಕನ್ನನಾದ್ದರಿಂದ ಸ್ಕಂದನೆಂದೂ ಕೃತ್ತಿಕೆಯರ ಪಾಲನೆಗೆ ಒಳಗಾದ್ದರಿಂದ ಕಾರ್ತಿಕೇಯನೆಂದೂ ಕರೆದರು (೨೭-೨೮). ಆಗ ಆರುಮಂದಿ ಕೃತ್ತಿಕಾದೇವಿಯರಿಗೂ ಶ್ರೇಷ್ಠವಾದ ಸ್ತನ್ಯವು ಪ್ರಾದುರ್ಭವಿಸಿತು. ಕುಮಾರನು ಅವರೆಲ್ಲರ ಮೊಲೆಹಾಲನ್ನೂ ಒಟ್ಟಿಗೆ ಕುಡಿಯಲಪೇಕ್ಷಿಸಲು ಅವನಿಗೆ ಆರುಮುಖಗಳು ಉದಿಸಿದವು. ಸ್ಕಂದನು ಷಣ್ಮುಖನಾದನು. ಆ ಸುಕುಮಾರನು ಒಂದು ದಿವಸ ಪೂರ್ತಿ ಮೊಲೆಹಾಲನ್ನು ಕುಡಿದು ಬೆಳೆದನು (೨೯-೩೦). ಅಗ್ನಿ ಮುಂತಾದ ದೇವತೆಗಳೆಲ್ಲರೂ ಬಂದು ಕುಮಾರನನ್ನು ದೇವಸೇನಾನಿಯಾಗಿ ಪಟ್ಟಾಭಿಷೇಕಮಾಡಿದರು. ಆ ಸ್ವಾಮಿಯು ತನ್ನ ಪರಾಕ್ರಮದಿಂದ ದೈತ್ಯಸೈನ್ಯವನ್ನು ಗೆದ್ದನು. ರಾಮ, ಗಂಗೆಯ ಚರಿತ್ರೆಯನ್ನು ವಿಸ್ತಾರವಾಗಿ ಹೇಳಿದ್ದೇನೆ. ಪುಣ್ಯಕರವಾದ ಕುಮಾರಸಂಭವವನ್ನು ವರ್ಣಿಸಿದ್ದೇನೆ. ಕಾರ್ತಿಕೇಯನ ಭಕ್ತನಾದವನು ಪುತ್ರಪೌತ್ರರೊಡನೆ ಆಯುಷ್ಮಂತನಾಗಿ ಬಾಳಿ ಮುಂದೆ ಕುಮಾರಸ್ವಾಮಿಯ ಸಾಂನಿಧ್ಯವನ್ನು ಪಡೆಯುತ್ತಾನೆ." (೩೧-೩೩)

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಮೂವತ್ತೇಳನೆಯ ಸರ್ಗ

## ಅಷ್ಟಾತ್ರಿಂಶಃ ಸರ್ಗಃ

### ಸಗರಪುತ್ರಜನ್ಮ

ತಾಂ ಕಥಾಂ ಕೌಶಿಕೋ ರಾಮೇ ನಿವೇದ್ಯ ಮಧುರಾಕ್ಷರಾಮ್ ।
ಪುನರೇವಾಪರಂ ವಾಕ್ಯಂ ಕಾಕುತ್ಸ್ಥಮಿದಮಬ್ರವೀತ್ ॥ ೧

ಅಯೋಧ್ಯಾಧಿಪತಿಃ ಶೂರಃ ಪೂರ್ವಮಾಸೀನ್ನರಾಧಿಪಃ ।
ಸಗರೋ ನಾಮ ಧರ್ಮಾತ್ಮಾ ಪ್ರಜಾಕಾಮಃ ಸ ಚಾಪ್ರಜಾಃ ॥ ೨

ವೈದರ್ಭದುಹಿತಾ ರಾಮ ಕೇಶಿನೀ ನಾಮ ನಾಮತಃ ।
ಜ್ಯೇಷ್ಠಾ ಸಗರಪತ್ನೀ ಸಾ ಧರ್ಮಿಷ್ಠಾ ಸತ್ಯವಾದಿನೀ ॥ ೩

ಅರಿಷ್ಟನೇಮಿದುಹಿತಾ ರೂಪೇಣಾಪ್ರತಿಮಾ ಭುವಿ ।
ದ್ವಿತೀಯಾ ಸಗರಸ್ಯಾಸೀತ್ ಪತ್ನೀ ಸುಮತಿಸಂಜ್ಞಿತಾ ॥ ೪

ತಾಭ್ಯಾಂ ಸಹ ತದಾ ರಾಜಾ ಪತ್ನೀಭ್ಯಾಂ ತಪ್ತವಾಂಸ್ತಪಃ ।
ಹಿಮವಂತಂ ಸಮಾಸಾದ್ಯ ಭೃಗುಪ್ರಸ್ರವಣೇ ಗಿರೌ ॥ ೫

## ಸರ್ಗ ೩೮

### ಸಗರೋಪಾಖ್ಯಾನ: ಸಗರನಿಗೆ ಅರವತ್ತು ಸಾವಿರ ಪುತ್ರರ ಜನನ. ಸಗರನ ಯಜ್ಞಾರಂಭ

ಈ ರೀತಿಯಲ್ಲಿ ಕೌಶಿಕಮಹರ್ಷಿಗಳು ಕುಮಾರೋತ್ಪತ್ತಿಯ ಕಥೆಯನ್ನು ವರ್ಣಿಸಿ ಮತ್ತೆ ಹೇಳತೊಡಗಿದರು: "ಪೂರ್ವದಲ್ಲಿ ಸಗರನೆಂಬ ಧರ್ಮಾತ್ಮನು ಅಯೋಧ್ಯೆಗೆ ಅಧಿಪತಿಯಾಗಿದ್ದನು. ಅವನಿಗೆ ಸಂತತಿ ಇಲ್ಲದ್ದರಿಂದ ಮಕ್ಕಳಿಗಾಗಿ ಹಂಬಲಿಸುತ್ತಿದ್ದನು ವಿದರ್ಭರಾಜನ ಮಗಳಾದ ಕೇಶಿನಿ ಎಂಬವಳು ಅವನ ಹಿರಿಯ ಹೆಂಡತಿ ಅವಳು ಧರ್ಮಿಷ್ಠಳು ಸತ್ಯಸಂಧೆ (೧-೩). ಸುಮತಿ ಎಂಬುವವಳು-ಅವನ ಎರಡನೆಯ ಮಡದಿ. ಅವಳು ಕಶ್ಯಪಋಷಿಯ ಮಗಳು. ಗರುತ್ಮಂತನ ಭಗಿನಿ. ಸಗರನು ತನ್ನ ಪತ್ನಿಯರೊಂದಿಗೆ ಹಿಮವತ್ಪರ್ವತಕ್ಕೆ ಹೋಗಿ (ಭೃಗುಮುನಿಗಳಿದ್ದ) ಭೃಗುಪ್ರಸ್ರವಣವೆಂಬ ಉಪಗಿರಿಯಲ್ಲಿ ತಪ

ಅಥ ವರ್ಷಶತೇ ಪೂರ್ಣೇ ತಪಸಾರಾಧಿತೋ ಮುನಿಃ ।
ಸಗರಾಯ ವರಂ ಪ್ರಾದಾದ್ ಭೃಗುಃ ಸತ್ಯವತಾಂ ವರಃ ॥ ೬

ಅಪತ್ಯಲಾಭಃ ಸುಮಹಾನ್ ಭವಿಷ್ಯತಿ ತವಾನಘ ।
ಕೀರ್ತಿಂ ಚಾಪ್ರತಿಮಾಂ ಲೋಕೇ ಪ್ರಾಪ್ಸ್ಯಸೇ ಪುರುಷರ್ಷಭ ॥

ಏಕಾ ಜನಯಿತಾ ತಾತ ಪುತ್ರಂ ವಂಶಕರಂ ತವ ।
ಷಷ್ಟಿಂ ಪುತ್ರಸಹಸ್ರಾಣಿ ಹ್ಯಪರಾ ಜನಯಿಷ್ಯತಿ ॥ ೮

ಭಾಷಮಾಣಂ ಮಹಾತ್ಮಾನಂ ರಾಜಪುತ್ರ್ಯೌ ಪ್ರಸಾದ್ಯ ತಮ್ ।
ಊಚತುಃ ಪರಮಪ್ರೀತೇ ಕೃತಾಂಜಲಿಪುಟೇ ತದಾ ॥ ೯

ಏಕಃ ಕಸ್ಯಾಃ ಸುತೋ ಬ್ರಹ್ಮನ್ ಕಾ ಬಹೂನ್ ಜನಯಿಷ್ಯತಿ ।
ಶ್ರೋತುಮಿಚ್ಛಾವಹೇ ಸಮ್ಯಕ್ ಸತ್ಯಮಸ್ತು ವಚಸ್ತವ ॥ ೧೦

ತಯೋಸ್ತದ್ವಚನಂ ಶ್ರುತ್ವಾ ಭೃಗುಃ ಪರಮಧಾರ್ಮಿಕಃ ।
ಉವಾಚ ಪರಮಾಂ ವಾಣೀಂ ಸ್ವಚ್ಛಂದೋಽತ್ರ ವಿಧೀಯತಾಮ್ ॥

ಏಕೋ ವಂಶಕರೋ ವಾಸ್ತು ಬಹವೋ ವಾ ಮಹಾಬಲಾಃ ।
ಕೀರ್ತಿಮಂತೋ ಮಹೋತ್ಸಾಹಾಃ ಕಾ ವಾ ಕಂ ವರಮಿಚ್ಛತಿ ॥

---

ಸ್ಸನ್ನಾರಂಭಿಸಿದನು (೪-೫). ನೂರು ವರ್ಷ ತಪಸ್ಸು ನಡೆಯಿತು. ಭೃಗುಮುನಿಗಳು ತಪಸ್ಸಿಗೆ ಸಂತುಷ್ಟರಾಗಿ "ರಾಜ, ನಿನಗೆ ದೊಡ್ಡ ಸಂತಾನಲಾಭವಾಗುತ್ತದೆ. ಮಹತ್ತರವಾದ ಕೀರ್ತಿಯನ್ನು ಗಳಿಸುತ್ತೀಯೆ. ನಿನ್ನ ಪತ್ನಿಯರಲ್ಲಿ ಒಬ್ಬಳಿಗೆ ವಂಶವನ್ನು ನಡೆಸುವ ಒಬ್ಬ ಪುತ್ರನು ಜನಿಸುವನು. ಇನ್ನೊಬ್ಬಳಿಗೆ ಅರವತ್ತುಸಾವಿರ ಪುತ್ರರು ಹುಟ್ಟುವರು" ಎಂದು ವರವನ್ನು ಕೊಟ್ಟರು (೬-೮). ರಾಜಪತ್ನಿಯರಿಗೆ ಬಹಳ ಸಂತೋಷವಾಯಿತು. ಅವರು ಕೈಮುಗಿದು ವಿನಯದಿಂದ "ಬ್ರಹ್ಮರ್ಷಿಗಳೆ, ಯಾರಿಗೆ ಒಬ್ಬ ಪುತ್ರನು ಜನಿಸುವನು? ಯಾರಿಗೆ ಬಹುಮಂದಿ ಪುತ್ರರು?-ಎಂಬುದನ್ನು ತಿಳಿದುಕೊಳ್ಳಬೇಕೆಂದಿದ್ದೇವೆ. ನಿಮ್ಮ ಮಾತು ಸತ್ಯವಾಗಲಿ" ಎಂದರು (೯-೧೦). ಭೃಗುಮಹರ್ಷಿಗಳು "ನಿಮ್ಮ ಇಷ್ಟವಿದ್ದಂತಾಗುವುದು. ವಂಶವನ್ನು ನಡೆಸುವ ಒಬ್ಬ ಪುತ್ರನು ಯಾರಿಗೆ ಬೇಕು? ಮಹಾಬಲಶಾಲಿಗಳೂ ಕೀರ್ತಿಶಾಲಿಗಳೂ ಆದ ಅರವತ್ತು

ಮುನೇಸ್ತು ವಚನಂ ಶ್ರುತ್ವಾ ಕೇಶಿನೀ ರಘುನಂದನ ।
ಪುತ್ರಂ ವಂಶಕರಂ ರಾಮ ಜಗ್ರಾಹ ನೃಪಸಂನಿಧೌ ॥ ೧೩

ಷಷ್ಟಿಂ ಪುತ್ರಸಹಸ್ರಾಣಿ ಸುಪರ್ಣಭಗಿನೀ ತದಾ ।
ಮಹೋತ್ಸಾಹಾನ್ ಕೀರ್ತಿಮತೋ ಜಗ್ರಾಹ ಸುಮತಿಃ ಸುತಾನ್ ॥

ಪ್ರದಕ್ಷಿಣಮೃಷಿಂ ಕೃತ್ವಾ ಶಿರಸಾಭಿಪ್ರಣಮ್ಯ ಚ ।
ಜಗಾಮ ಸ್ವಪುರಂ ರಾಜಾ ಸಭಾರ್ಯೋ ರಘುನಂದನ ॥ ೧೫

ಅಥ ಕಾಲೇ ಗತೇ ತಸ್ಮಿನ್ ಜ್ಯೇಷ್ಠಾ ಪುತ್ರಂ ವ್ಯಜಾಯತ ।
ಅಸಮಂಜ ಇತಿ ಖ್ಯಾತಂ ಕೇಶಿನೀ ಸಗರಾತ್ಮಜಮ್ ॥ ೧೬

ಸುಮತಿಸ್ತು ನರವ್ಯಾಘ್ರ ಗರ್ಭತುಂಬಂ ವ್ಯಜಾಯತ ।
ಷಷ್ಟಿಃ ಪುತ್ರಸಹಸ್ರಾಣಿ ತುಂಬಭೇದಾದ್ವಿನಿಃಸೃತಾಃ ॥ ೧೭

ಘೃತಪೂರ್ಣೇಷು ಕುಂಭೇಷು ಧಾತ್ರ್ಯಸ್ತಾನ್ ಸಮವರ್ಧಯನ್ ।
ಕಾಲೇನ ಮಹತಾ ಸರ್ವೇ ಯೌವನಂ ಪ್ರತಿಪೇದಿರೇ ॥ ೧೮

ಅಥ ದೀರ್ಘೇಣ ಕಾಲೇನ ರೂಪಯೌವನಶಾಲಿನಃ ।
ಷಷ್ಟಿಃ ಪುತ್ರಸಹಸ್ರಾಣಿ ಸಗರಸ್ಯಾಭವಂಸ್ತದಾ ॥ ೧೯

---

ಸಾವಿರ ಪುತ್ರರು ಯಾರಿಗೆ ಬೇಕು?" ಎಂದರು. ಆಗ ಕೇಶಿನಿಯು ತನಗೆ ಒಬ್ಬ ಪುತ್ರನಿರಲೆಂದೂ ಸುಮತಿಯು ತನಗೆ ಅರವತ್ತುಸಹಸ್ರ ಪುತ್ರರಾಗಲೆಂದೂ ಅಂಗೀಕರಿಸಿದರು (೧೧-೧೪). ಆಮೇಲೆ ಸಗರನು ಪತ್ನಿಯರೊಂದಿಗೆ ಭೃಗುಮಹರ್ಷಿಗಳಿಗೆ ಪ್ರದಕ್ಷಿಣೆಮಾಡಿ ತಲೆಬಾಗಿ ವಂದಿಸಿ ತನ್ನ ರಾಜಧಾನಿಗೆ ಬಂದನು. ಕೆಲವುಕಾಲ ಕಳೆಯಿತು. ಹಿರಿಯಳಾದ ಕೇಶಿನಿಯು ಒಬ್ಬ ಮಗನನ್ನು ಹಡೆದಳು. ಅವನಿಗೆ ಮುಂದೆ ಅಸಮಂಜನೆಂದು ಹೆಸರಾಯಿತು. (೧೫-೧೬) ಸುಮತಿಯು ಸೋರೆಕಾಯಿಯಂತಿರುವ ಒಂದು ಗರ್ಭಪಿಂಡವನ್ನು ಹಡೆದಳು. ಅನಂತರ ಪಿಂಡವು ಒಡೆದು ಅರುವತ್ತುಸಾವಿರ ಶಿಶುಗಳು ಹೊರಕ್ಕೆ ಬಂದವು. ಅವುಗಳನ್ನು ದಾದಿಯರು ಘೃತಪೂರ್ಣವಾದ ಕುಂಭಗಳಲ್ಲಿಟ್ಟು ಸಾಕಿದರು. ಕಾಲಕ್ರಮದಲ್ಲಿ ಅವರೆಲ್ಲರೂ ಬೆಳೆದು ಯೌವನವನ್ನು ಪಡೆದರು (೧೭-೧೮). ಹೀಗೆ ಸಗರಚಕ್ರವರ್ತಿಗೆ ರೂಪಯೌವನಶಾಲಿಗಳಾದ ಅರವತ್ತುಸಾವಿರ ಮಕ್ಕಳು ಲಭಿಸಿದರು. (ಆದರೆ ಸಗರನ ಹಿರಿಯ

ಸ ಚ ಜ್ಯೇಷ್ಠೋ ನರಶ್ರೇಷ್ಠಃ ಸಗರಸ್ಯಾತ್ಮಸಂಭವಃ ।
ಬಾಲಾನ್ ಗೃಹೀತ್ವಾ ತು ಜಲೇ ಸರಯ್ವಾ ರಘುನಂದನ ॥ ೨೦

ಪ್ರಕ್ಷಿಪ್ಯ ಪ್ರಾಹಸನ್ನಿತ್ಯಂ ಮಜ್ಜತಸ್ತಾನ್ನಿರೀಕ್ಷ್ಯ ವೈ ।
ಏವಂ ಪಾಪಸಮಾಚಾರಃ ಸಜ್ಜನಪ್ರತಿಬಾಧಕಃ ॥ ೨೧

ಪೌರಾಣಾಮಹಿತೇ ಯುಕ್ತಃ ಪಿತ್ರಾ ನಿರ್ವಾಸಿತಃ ಪುರಾತ್ ।
ತಸ್ಯ ಪುತ್ರೋಽಂಶುಮಾನ್ನಾಮ ಅಸಮಂಜಸ್ಯ ವೀರ್ಯವಾನ್ ॥

ಸಂಮತಃ ಸರ್ವಲೋಕಸ್ಯ ಸರ್ವಸ್ಯಾಪಿ ಪ್ರಿಯಂವದಃ ।
ತತಃ ಕಾಲೇನ ಮಹತಾ ಮತಿಃ ಸಮಭಿಜಾಯತ ॥ ೨೩

ಸಗರಸ್ಯ ನರಶ್ರೇಷ್ಠ ಯಜೇಯಮಿತಿ ನಿಶ್ಚಿತಾ ।
ಸ ಕೃತ್ವಾ ನಿಶ್ಚಯಂ ರಾಮ ಸೋಪಾಧ್ಯಾಯಗಣಸ್ತದಾ ॥ ೨೪
ಯಜ್ಞಕರ್ಮಣಿ ವೇದಜ್ಞೋ ಯಷ್ಟುಂ ಸಮುಪಚಕ್ರಮೇ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಅಷ್ಟಾತ್ರಿಂಶಃ ಸರ್ಗಃ



ಮಗನಾದ ಅಸಮಂಜನ ನಡತೆ ಚೆನ್ನಾಗಿರಲಿಲ್ಲ.) ಅವನು ಚಿಕ್ಕ ಬಾಲಕರನ್ನು ಎತ್ತಿಕೊಂಡು ಹೋಗಿ ಸರಯೂನದಿಗೆ ಎಸೆದು ಅವರು ಮುಳುಗಿಹೋಗುವುದನ್ನು ನೋಡುತ್ತ ಕೇಕೆಹಾಕಿ ನಗುತ್ತಿದ್ದನು. ಹೀಗೆ ಅವನು ಕೆಟ್ಟ ನಡತೆಯವನಾಗಿ ಸಜ್ಜನರನ್ನು ಪೀಡಿಸುತ್ತಿದ್ದನು (೧೯-೨೧) ಪ್ರಜಾಪೀಡಕನಾದ ಅವನನ್ನು ತಂದೆಯು ದೇಶಭ್ರಷ್ಟನನ್ನಾಗಿ ಓಡಿಸಿದನು. ಅಸಮಂಜನಿಗೆ ಅಂಶುಮಂತನೆಂಬ ಮಗನಿದ್ದನು. ಅವನು ವೀರನೂ ಪ್ರಿಯಂವದನೂ ಆಗಿ ಸಕಲರಿಗೂ ಪ್ರೀತಿಪಾತ್ರನಾಗಿದ್ದನು. ಬಹಳ ಕಾಲ ಕಳೆದಮೇಲೆ ಸಗರನಿಗೆ ಯಜ್ಞಮಾಡಬೇಕೆಂದು ಅಪೇಕ್ಷೆ ಹುಟ್ಟಿತು. ಅವನು ಯಜ್ಞಮಾಡಬೇಕೆಂದು ನಿಶ್ಚಯಿಸಿ ಋತ್ವಿಜರೊಡನೆ ಯಜ್ಞವನ್ನಾರಂಭಿಸಿದನು." (೨೨-೨೪).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಮೂವತ್ತೆಂಟನೆಯ ಸರ್ಗ



## ಏಕೋನಚತ್ವಾರಿಂಶಃ ಸರ್ಗಃ

### ಪೃಥಿವೀವಿದಾರಣಮ್

ವಿಶ್ವಾಮಿತ್ರವಚಃ ಶ್ರುತ್ವಾ ಕಥಾಂತೇ ರಘುನಂದನಃ ।
ಉವಾಚ ಪರಮಪ್ರೀತೋ ಮುನಿಂ ದೀಪ್ತಮಿವಾನಲಮ್ ॥ ೧

ಶ್ರೋತುಮಿಚ್ಛಾಮಿ ಭದ್ರಂ ತೇ ವಿಸ್ತರೇಣ ಕಥಾಮಿಮಾಮ್ ।
ಪೂರ್ವಕೋ ಮೇ ಕಥಂ ಬ್ರಹ್ಮನ್ ಯಜ್ಞಂ ವೈ ಸಮುಪಾಹರತ್ ॥

ತಸ್ಯ ತದ್ವಚನಂ ಶ್ರುತ್ವಾ ಕೌತೂಹಲಸಮನ್ವಿತಃ ।
ವಿಶ್ವಾಮಿತ್ರಸ್ತು ಕಾಕುತ್ಸ್ಥಮುವಾಚ ಪ್ರಹಸನ್ನಿವ ॥ ೩

ಶ್ರೂಯತಾಂ ವಿಸ್ತರೋ ರಾಮ ಸಗರಸ್ಯ ಮಹಾತ್ಮನಃ ।
ಶಂಕರಶ್ವಶುರೋ ನಾಮ ಹಿಮವಾನಚಲೋತ್ತಮಃ ॥ ೪

ವಿಂಧ್ಯಪರ್ವತಮಾಸಾದ್ಯ ನಿರೀಕ್ಷೇತೇ ಪರಸ್ಪರಮ್ ।
ತಯೋರ್ಮಧ್ಯೇ ಪ್ರವೃತ್ತೋಽಭೂದ್ಯಜ್ಞಃ ಸ ಪುರುಷೋತ್ತಮ॥ ೫

### ಸರ್ಗ ೩೯

ಸಗರನ ಯಜ್ಞಾಶ್ವವನ್ನು ಇಂದ್ರನು ಅಪಹರಿಸಲು ಸಗರಪುತ್ರರು ಅಶ್ವವನ್ನು
ಹುಡುಕುವುದಕ್ಕಾಗಿ ಭೂಮಿಯನ್ನು ಅಗೆಯುವುದು. ದೇವತೆಗಳು
ಭಯದಿಂದ ಈ ವಿಷಯವನ್ನು ಬ್ರಹ್ಮನಿಗೆ ತಿಳಿಸುವುದು.

ವಿಶ್ವಾಮಿತ್ರರು ಹೇಳುತ್ತಿದ್ದ ಕಥೆಯಿಂದ ಶ್ರೀರಾಮನು ಆಹ್ಲಾದಿತನಾಗಿ "ಸ್ವಾಮಿ, ಈ ಕಥೆಯನ್ನು ವಿಸ್ತಾರವಾಗಿ ಕೇಳಬೇಕೆಂದಿದ್ದೇನೆ. ನನ್ನ ಪೂರ್ವಜನಾದ ಸಗರನು ಯಾಗವನ್ನು ಹೇಗೆ ನಡೆಸಿದನು ?" ಎಂದು ಕೇಳಿದನು. ವಿಶ್ವಾಮಿತ್ರರು ಮಂದಹಾಸಯುಕ್ತರಾಗಿ ಹೇಳತೊಡಗಿದರು (೧-೩): "ವಿಸ್ತಾರವಾಗಿಯೇ ಹೇಳುತ್ತೇನೆ. ಈಶ್ವರನ ಮಾವನಾದ ಹಿಮಾಲಯ ಪರ್ವತವೂ ವಿಂಧ್ಯಪರ್ವತವೂ (ಉನ್ನತವಾಗಿ ನಿಂತು) ಒಬ್ಬರನ್ನೊಬ್ಬರು ನೋಡುತ್ತಿರುವಂತೆ ಕಾಣುತ್ತವೆ. ಆ ಪರ್ವತಗಳ ಮಧ್ಯದಲ್ಲಿರುವ ಆರ್ಯಾವರ್ತದೇಶದಲ್ಲಿ ಸಗರಚಕ್ರವರ್ತಿಯ ಯಜ್ಞವು ನಡೆಯಿತು. ಅದು

ಸ ಹಿ ದೇಶೋ ನರವ್ಯಾಘ್ರ ಪ್ರಶಸ್ತೋ ಯಜ್ಞಕರ್ಮಣಿ ।
ತಸ್ಯಾಶ್ವಚರ್ಯಾಂ ಕಾಕುತ್ಸ್ಥ ದೃಢಧನ್ವಾ ಮಹಾರಥಃ ॥ ೬

ಅಂಶುಮಾನಕರೋತ್ತಾತ ಸಗರಸ್ಯ ಮತೇ ಸ್ಥಿತಃ ।
ತಸ್ಯ ಪರ್ವಣಿ ತಂ ಯಜ್ಞಂ ಯಜಮಾನಸ್ಯ ವಾಸವಃ ॥ ೭

ರಾಕ್ಷಸೀಂ ತನುಮಾಸ್ಥಾಯ ಯಜ್ಞಿಯಾಶ್ವಮಪಾಹರತ್ ।
ಹ್ರಿಯಮಾಣೇ ತು ಕಾಕುತ್ಸ್ಥ ತಸ್ಮಿನ್ನಶ್ವೇ ಮಹಾತ್ಮನಃ ॥ ೮

ಉಪಾಧ್ಯಾಯಗಣಾಃ ಸರ್ವೇ ಯಜಮಾನಮಥಾಬ್ರುವನ್ ।
ಅಯಂ ಪರ್ವಣಿ ವೇಗೇನ ಯಜ್ಞಿಯಾಶ್ವೋಽಪನೀಯತೇ ॥ ೯

ಹರ್ತಾರಂ ಜಹಿ ಕಾಕುತ್ಸ್ಥ ಹಯಶ್ಚೈವೋಪನೀಯತಾಮ್ ।
ಯಜ್ಞಚ್ಛಿದ್ರಂ ಭವತ್ಯೇತತ್ಸರ್ವೇಷಾಮಶಿವಾಯ ನಃ ॥ ೧೦

ತತ್ತಥಾ ಕ್ರಿಯತಾಂ ರಾಜನ್ ಯಥಾಽಚ್ಛಿದ್ರಃ ಕ್ರತುರ್ಭವೇತ್ ।
ಉಪಾಧ್ಯಾಯವಚಃ ಶ್ರುತ್ವಾ ತಸ್ಮಿನ್ ಸದಸಿ ಪಾರ್ಥಿವಃ ॥ ೧೧

ಷಷ್ಟಿಂ ಪುತ್ರಸಹಸ್ರಾಣಿ ವಾಕ್ಯಮೇತದುವಾಚ ಹ ।
ಗತಿಂ ಪುತ್ರಾ ನ ಪಶ್ಯಾಮಿ ರಕ್ಷಸಾಂ ಪುರುಷರ್ಷಭಾಃ ॥ ೧೨

---

ಯಜ್ಞವನ್ನು ನಡೆಸಲು ಪ್ರಶಸ್ತವಾದ ದೇಶ (೪-೫). ಸಗರನ ಆಜ್ಞೆಯಂತೆ ಮಹಾರಥನಾದ ಅಂಶುಮಂತನು ಧನುರ್ಧಾರಿಯಾಗಿ ಯಜ್ಞಾಶ್ವವನ್ನು ಹಿಂಬಾಲಿಸಿ ರಕ್ಷಿಸಿಕೊಂಡು ಬಂದನು. ಅಶ್ವಾಲಂಭನ ಮಾಡಬೇಕಾದ ಪರ್ವ ದಿನದಲ್ಲಿ ದೇವೇಂದ್ರನು ಮಾಯೆಯಿಂದ ರಾಕ್ಷಸಶರೀರವನ್ನು ಧರಿಸಿ ಆ ಯಜ್ಞಾಶ್ವವನ್ನು ಅಪಹರಿಸಿಬಿಟ್ಟನು (೬-೮). ಆಗ ಋತ್ವಿಜರೆಲ್ಲರೂ ಯಜಮಾನನಾದ ಸಗರನನ್ನು ಕುರಿತು "ರಾಜ, ಈ ಪರ್ವದಿನದಲ್ಲಿ ಯಜ್ಞಾಶ್ವವನ್ನು ಯಾವನೋ ಅಪಹರಿಸಿದ್ದಾನೆ. ಅವನನ್ನು ಸಂಹರಿಸಿ ಯಜ್ಞಾಶ್ವವನ್ನು ತರಿಸು. ಇಲ್ಲದಿದ್ದರೆ, ಯಜ್ಞಭಂಗವಾಗಿ ನಮ್ಮೆಲ್ಲರಿಗೂ ಕೇಡು ಸಂಭವಿಸುತ್ತದೆ. ಯಜ್ಞಭಂಗವಾಗದಂತೆ ಮಾಡು" ಎಂದರು(೯-೧೧). ಸದಸ್ಸಿನಲ್ಲಿ ಕುಳಿತಿದ್ದ ರಾಜನು ತನ್ನ ಅರುವತ್ತುಸಾವಿರ ಮಕ್ಕಳನ್ನು ಕರೆದು "ಪುತ್ರರೇ, ಈ ಮಹಾಯಾಗವನ್ನು ಮಂತ್ರಪೂತರಾದ ಮಹಾತ್ಮರು ನಡೆಸು

ಮಂತ್ರಪೂತೈರ್ಮಹಾಭಾಗೈರಾಸ್ಥಿತೋ ಹಿ ಮಹಾಕ್ರತುಃ ।
ತದ್ಗಚ್ಛತ ವಿಚಿನ್ವಧ್ವಂ ಪುತ್ರಕಾ ಭದ್ರಮಸ್ತು ವಃ ॥ ೧೩

ಸಮುದ್ರಮಾಲಿನೀಂ ಸರ್ವಾಂ ಪೃಥಿವೀಮುಪಗಚ್ಛತ ।
ಏಕೈಕಂ ಯೋಜನಂ ಪುತ್ರಾ ವಿಸ್ತಾರಮಭಿಗಚ್ಛತ ॥ ೧೪

ಯಾವತ್ತುರಗಸಂದರ್ಶಸ್ತಾವತ್ಖನತ ಮೇದಿನೀಮ್ ।
ತಂ ಚೈವ ಹಯಹರ್ತಾರಂ ಮಾರ್ಗಮಾಣಾ ಮಮಾಜ್ಞಯಾ ॥ ೧೫

ದೀಕ್ಷಿತಃ ಪೌತ್ರಸಹಿತಃ ಸೋಪಾಧ್ಯಾಯಗಣೋ ಹ್ಯಹಮ್ ।
ಇಹ ಸ್ಥಾಸ್ಯಾಮಿ ಭದ್ರಂ ವೋ ಯಾವತ್ತುರಗದರ್ಶನಮ್ ॥ ೧೬

ತೇ ಸರ್ವೇ ಹೃಷ್ಟಮನಸೋ ರಾಜಪುತ್ರಾ ಮಹಾಬಲಾಃ ।
ಜಗ್ಮುರ್ಮಹೀತಲಂ ರಾಮ ಪಿತುರ್ವಚನಯಂತ್ರಿತಾಃ ॥ ೧೭

ಗತ್ವಾ ತು ಪೃಥಿವೀಂ ಸರ್ವಾಮದೃಷ್ಟ್ವಾ ತಂ ಮಹಾಬಲಾಃ ।
ಯೋಜನಾಯಾಮವಿಸ್ತಾರಮೇಕೈಕೋ ಧರಣೀತಲಮ್ ॥ ೧೮

ಬಿಭಿದುಃ ಪುರುಷವ್ಯಾಘ್ರಾ ವಜ್ರಸ್ಪರ್ಶಸಮೈರ್ನಖೈಃ ।
ಶೂಲೈರಶನಿಕಲ್ಪೈಶ್ಚ ಹಲೈಶ್ಚಾಪಿ ಸುದಾರುಣೈಃ ॥ ೧೯

---

ತ್ತಿದ್ದರೂ ಇಲ್ಲಿ ರಾಕ್ಷಸರು ಹೇಗೆ ಬಂದರೋ ತಿಳಿಯದು. ನೀವು ಯಜ್ಞಾಶ್ವವನ್ನು ಹುಡುಕಿ ತರಬೇಕು. ಮಕ್ಕಳೆ, ನಿಮಗೆ ಕಲ್ಯಾಣವಾಗಲಿ (೧೨-೧೩). ಒಂದೊಂದು ಯೋಜನವಾಗಿ ಹುಡುಕುತ್ತ ಸಮುದ್ರದವರೆಗೂ ಪೃಥ್ವಿಯನ್ನು ಶೋಧಿಸಿರಿ. ಅಶ್ವವು ಸಿಗುವವರೆಗೂ ಬಿಡಬೇಡಿ ಆ ಕುದುರೆಯ ಕಳ್ಳನನ್ನು ಹುಡುಕುವುಕ್ಕಾಗಿ ಭೂಮಿಯನ್ನಾದರೂ ಅಗೆಯಿರಿ. ಇದು ನನ್ನ ಆಜ್ಞೆ (೧೪-೧೫). ನಾನು ದೀಕ್ಷಿತನಾಗಿದ್ದೇನೆ. ಆದ್ದರಿಂದ ಅಶ್ವವು ದೊರಕುವವರೆಗೆ ಅಂಶುಮಂತ ಮತ್ತು ಋತ್ವಿಜರೊಡನೆ ಇಲ್ಲಿಯೇ ಇರುತ್ತೇನೆ. ನಿಮಗೆ ಮಂಗಳವಾಗಲಿ" ಎಂದನು. ತಂದೆಯ ಆಜ್ಞೆಯಂತೆ ಮಹಾಬಲಶಾಲಿಗಳಾದ ಆ ರಾಜಪುತ್ರರು ಒಂದೊಂದು ಯೋಜನವಾಗಿ ಪ್ರತಿಯೊಬ್ಬರೂ ಪೃಥ್ವಿಯನ್ನು ಶೋಧಿಸಿದರು (೧೬-೧೮). (ಎಲ್ಲಿಯೂ ಯಜ್ಞಾಶ್ವವನ್ನು ಕಾಣದೆ) ಅವರು ಹರಿತವಾದ ಶೂಲಗಳಿಂದಲೂ ಹಲಗಳಿಂದಲೂ ಭೂಮಿ

ಭಿದ್ಯಮಾನಾ ವಸುಮತೀ ನನಾದ ರಘುನಂದನ ।
ನಾಗಾನಾಂ ವಧ್ಯಮಾನಾನಾಮಸುರಾಣಾಂ ಚ ರಾಘವ ॥ ೨೦

ರಾಕ್ಷಸಾನಾಂ ಚ ದುರ್ಧರ್ಷಃ ಸತ್ತ್ವಾನಾಂ ನಿನದೋಽಭವತ್ ।
ಯೋಜನಾನಾಂ ಸಹಸ್ರಾಣಿ ಷಷ್ಟಿಂ ತು ರಘುನಂದನ ॥ ೨೧

ಬಿಭಿದುರ್ಧರಣೀಂ ವೀರಾ ರಸಾತಲಮನುತ್ತಮಮ್ ।
ಏವಂ ಪರ್ವತಸಂಬಾಧಂ ಜಂಬೂದ್ವೀಪಂ ನೃಪಾತ್ಮಜಾಃ ॥ ೨೨

ಖನಂತೋ ನೃಪಶಾರ್ದೂಲ ಸರ್ವತಃ ಪರಿಚಕ್ರಮುಃ ।
ತತೋ ದೇವಾಃ ಸಗಂಧರ್ವಾಃ ಸಾಸುರಾಃ ಸಹಪನ್ನಗಾಃ ॥ ೨೩

ಸಂಭ್ರಾಂತಮನಸಃ ಸರ್ವೇ ಪಿತಾಮಹಮುಪಾಗಮನ್ ।
ತೇ ಪ್ರಸಾದ್ಯ ಮಹಾತ್ಮಾನಂ ವಿಷಣ್ಣವದನಾಸ್ತದಾ ॥ ೨೪

ಊಚುಃ ಪರಮಸಂತ್ರಸ್ತಾಃ ಪಿತಾಮಹಮಿದಂ ವಚಃ ।
ಭಗವನ್ ಪೃಥಿವೀ ಸರ್ವಾ ಖನ್ಯತೇ ಸಗರಾತ್ಮಜೈಃ ॥ ೨೫

ಬಹವಶ್ಚ ಮಹಾತ್ಮಾನೋ ವಧ್ಯಂತೇ ಜಲಚಾರಿಣಃ ।
ಅಯಂ ಯಜ್ಞಹರೋಽಸ್ಮಾಕಮನೇನಾಶ್ವೋಽಪನೀಯತೇ ॥ ೨೬

ಇತಿ ತೇ ಸರ್ವಭೂತಾನಿ ಹಿಂಸಂತಿ ಸಗರಾತ್ಮಜಾಃ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕೋನಚತ್ವಾರಿಂಶಃ ಸರ್ಗಃ

---

ಯನ್ನು ಭೇದಿಸತೊಡಗಿದರು. ಭೂಮಿಯು ಮೊಳಗುತ್ತಿತ್ತು. ಅವರ ಹೊಡೆತಕ್ಕೆ ಸಿಕ್ಕಿದ ನಾಗರೂ ಅಸುರರೂ ಕಿರಿಚಿದರು. ಹೀಗೆ ಜಂಬೂದ್ವೀಪದಲ್ಲಿ ಅರುವತ್ತುಸಾವಿರ ಯೋಜನಗಳವರೆಗೆ ಭೂತಳವನ್ನು ಭೇದಿಸಿದರು (೧೯-೨೨). ಆಗ ದೇವಗಂಧರ್ವಾದಿಗಳು ಭೀತರಾಗಿ ಬ್ರಹ್ಮನನ್ನು ಸಮೀಪಿಸಿ ವಿಷಾದದಿಂದ “ಸ್ವಾಮಿ, ಸಗರಪುತ್ರರು ಭೂಮಿಯನ್ನು ಅಗೆಯುತ್ತಿದ್ದಾರೆ. ಬಹುಮಂದಿ ಮಹಾತ್ಮರಿಗೆ ಪೀಡೆಯಾಗುತ್ತಿದೆ. ಯಜ್ಞಾಶ್ವವನ್ನು ಯಾರೋ ಅಪಹರಿಸಿದರೆಂದು ಸಕಲ ಪ್ರಾಣಿಗಳಿಗೂ ಅವರು ಹಿಂಸೆ ಕೊಡುತ್ತಿದ್ದಾರೆ” ಎಂದು ದೂರು ಹೇಳಿದರು (೨೩-೨೬).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಮೂವತ್ತೊಂಬತ್ತನೆಯ ಸರ್ಗ

## ಚತ್ವಾರಿಂಶಃ ಸರ್ಗಃ

### ಕಪಿಲದರ್ಶನಮ್

ದೇವತಾನಾಂ ವಚಃ ಶ್ರುತ್ವಾ ಭಗವಾನ್ ವೈ ಪಿತಾಮಹಃ ।
ಪ್ರತ್ಯುವಾಚ ಸುಸಂತ್ರಸ್ತಾನ್ ಕೃತಾಂತಬಲಮೋಹಿತಾನ್ ॥ ೧

ಯಸ್ಯೇಯಂ ವಸುಧಾ ಕೃತ್ಸ್ನಾ ವಾಸುದೇವಸ್ಯ ಧೀಮತಃ ।
ಮಹಿಷೀ ಮಾಧವಸ್ಯೈಷಾ ಸ ಏಷ ಭಗವಾನ್ ಪ್ರಭುಃ ॥ ೨

ಕಾಪಿಲಂ ರೂಪಮಾಸ್ಥಾಯ ಧಾರಯತ್ಯನಿಶಂ ಧರಾಮ್ ।
ತಸ್ಯ ಕೋಪಾಗ್ನಿನಾ ದಗ್ಧಾ ಭವಿಷ್ಯಂತಿ ನೃಪಾತ್ಮಜಾಃ ॥ ೩

ಪೃಥಿವ್ಯಾಶ್ಚಾಪಿ ನಿರ್ಭೇದೋ ದೃಷ್ಟ ಏವ ಸನಾತನಃ ।
ಸಗರಸ್ಯ ಚ ಪುತ್ರಾಣಾಂ ವಿನಾಶೋಽದೀರ್ಘಜೀವಿನಾಮ್ ॥ ೪

## ಸರ್ಗ ೪೦

ಕಪಿಲರ ಕೋಪದಿಂದ ಸಗರಪುತ್ರರು ನಾಶವಾಗುತ್ತಾರೆಂದು ಬ್ರಹ್ಮನು ದೇವತೆಗಳಿಗೆ ಸಮಾಧಾನ ಹೇಳುವುದು  ಕಪಿಲರ ಕೋಪದಿಂದ ಸಗರಪುತ್ರರ ಭಸ್ಮೀಭಾವ.

ವಿಶ್ವಾಮಿತ್ರರು ಹೇಳಿದರು: "ಆಗ ಬ್ರಹ್ಮನು ಲೋಕನಾಶಕ್ಕೆ ತೊಡಗಿದ ಸಗರಪುತ್ರರ ಬಲದಿಂದ ದಿಕ್ಕುಗಾಣದೆ ಭಯಗ್ರಸ್ತರಾಗಿದ್ದ ಆ ದೇವತೆಗಳನ್ನು ಕುರಿತು "ಈ ಸಮಸ್ತ ಪೃಥ್ವಿಯೂ ಸರ್ವಜ್ಞನಾದ ವಾಸುದೇವನಿಗೆ ಸೇರಿದ್ದು. ಅವನು ಈಗ ಕಪಿಲಋಷಿಯ ರೂಪವನ್ನು ಧರಿಸಿ ಭೂಮಂಡಲವನ್ನು ರಕ್ಷಿಸುತ್ತಿದ್ದಾನೆ. ಅವನ ಕೋಪಾಗ್ನಿಯಿಂದ ಈ ರಾಜಪುತ್ರರು ಸುಟ್ಟು ಬೂದಿಯಾಗುವರು (೧-೩). ಪೃಥಿವೀಭೇದನವು (ಪ್ರತಿ ಕಲ್ಪದಲ್ಲಿಯೂ) ಸನಾತನವಾಗಿ ನಡೆಯುತ್ತಲೇ ಇದೆ. ಅಲ್ಪಾಯುಗಳಾದ ಸಗರಪುತ್ರರ ವಿನಾಶವೂ ಆಗುತ್ತಿದೆ" ಎಂದು ಸಮಾಧಾನ ಹೇಳಿದನು.

ಪಿತಾಮಹವಚಃ ಶ್ರುತ್ವಾ ತ್ರಯಸ್ತ್ರಿಂಶದರಿಂದಮ ।
ದೇವಾಃ ಪರಮಸಂಹೃಷ್ಟಾಃ ಪುನರ್ಜಗ್ಮುರ್ಯಥಾಗತಮ್ ॥ ೫

ಸಗರಸ್ಯ ಚ ಪುತ್ರಾಣಾಂ ಪ್ರಾದುರಾಸೀನ್ಮಹಾತ್ಮನಾಮ್ ।
ಪೃಥಿವ್ಯಾಂ ಭಿದ್ಯಮಾನಾಯಾಂ ನಿರ್ಘಾತಸಮನಿಃಸ್ವನಃ ॥ ೬

ತತೋ ಭಿತ್ವಾ ಮಹೀಂ ಸರ್ವೇ ಕೃತ್ವಾ ಚಾಪಿ ಪ್ರದಕ್ಷಿಣಮ್ ।
ಸಹಿತಾಃ ಸಾಗರಾಃ ಸರ್ವೇ ಪಿತರಂ ವಾಕ್ಯಮಬ್ರುವನ್ ॥ ೭

ಪರಿಕ್ರಾಂತಾ ಮಹೀ ಸರ್ವಾ ಸತ್ತ್ವವಂತಶ್ಚ ಸೂದಿತಾಃ ।
ದೇವದಾನವರಕ್ಷಾಂಸಿ ಪಿಶಾಚೋರಗಪನ್ನಗಾಃ ॥ ೮

ನ ಚ ಪಶ್ಯಾಮಹೇಽಶ್ವಂ ತಮಶ್ವಹರ್ತಾರಮೇವ ಚ ।
ಕಿಂ ಕರಿಷ್ಯಾಮ ಭದ್ರಂ ತೇ ಬುದ್ಧಿರತ್ರ ವಿಚಾರ್ಯತಾಮ್ ॥ ೯

ತೇಷಾಂ ತದ್ವಚನಂ ಶ್ರುತ್ವಾ ಪುತ್ರಾಣಾಂ ರಾಜಸತ್ತಮಃ ।
ಸಮನ್ಯುರಬ್ರವೀದ್ವಾಕ್ಯಂ ಸಗರೋ ರಘುನಂದನ ॥ ೧೦

---

ಅದನ್ನು ಕೇಳಿ ಮೂವತ್ತುಮೂರು ವಿಧದ* ದೇವತೆಗಳೂ ಗಂಧರ್ವಾದಿಗಳೂ ಹರ್ಷದಿಂದ ಹೊರಟುಹೋದರು (೪-೫). ಇತ್ತ ಸಗರಪುತ್ರರು ಭೂಮಿಯನ್ನು ಅಗೆಯುತ್ತಿರುವಾಗ ಸಿಡಿಲಿನಂತೆ ಶಬ್ದವು ಉತ್ಪನ್ನವಾಗುತ್ತಿತ್ತು. ಅವರು ಭೂಮಿಯನ್ನು ಅಗೆದು ಸುತ್ತಾಡಿ ಕಡೆಗೆ ತಂದೆಯ ಬಳಿಗೆ ಹೋಗಿ "ಭೂಮಿಯನ್ನೆಲ್ಲಾ ಸುತ್ತಿದೆವು. ಬಲಶಾಲಿಗಳಾದ ದೇವದಾನವಾದಿಗಳನ್ನು ಸದೆಬಡಿದೆವು. ಅಶ್ವವಾಗಲಿ ಅದನ್ನು ಅಪಹರಿಸಿದವನಾಗಲಿ ಸಿಗಲಿಲ್ಲ ಈಗ ಏನು ಮಾಡೋಣ? ನಿಮ್ಮ ಅಭಿಪ್ರಾಯವೇನು?" ಎಂದು ಕೇಳಿದರು (೬-೯). ಪುತ್ರರ ಮಾತನ್ನಾಲಿಸಿ ಸಗರಚಕ್ರವರ್ತಿಯು ಕುಪಿತನಾಗಿ "ಒಳ್ಳೆಯದು ಇನ್ನೂ ಅಗೆಯಿರಿ. ಭೂತಳವನ್ನೂ ಭೇದಿಸಿ ಕುದುರೆಯ

---

* ಅಷ್ಟವಸುಗಳು, ಏಕಾದಶರುದ್ರರು, ದ್ವಾದಶಾದಿತ್ಯರು, ಇಬ್ಬರು ಅಶ್ವಿನೀ ದೇವತೆಗಳು—ಹೀಗೆ ದೇವತೆಗಳು ಮೂವತ್ತುಮೂರು ವಿಧ. ಇವರು ಮುಖ್ಯರು. ಇವರೊಡನೆ ಇತರ ದೇವತೆಗಳನ್ನೂ ಸೇರಿಸಿಕೊಳ್ಳಬೇಕು.

*

ಭೂಯಃ ಖನತ ಭದ್ರಂ ವೋ ನಿರ್ಭಿದ್ಯ ವಸುಧಾತಲಮ್ ।
ಅಶ್ವಹರ್ತಾರಮಾಸಾದ್ಯ ಕೃತಾರ್ಥಾಶ್ಚ ನಿವರ್ತಥ ॥ ೧೧

ಪಿತುರ್ವಚನಮಾಸಾದ್ಯ ಸಗರಸ್ಯ ಮಹಾತ್ಮನಃ ।
ಷಷ್ಟಿಃ ಪುತ್ರಸಹಸ್ರಾಣಿ ರಸಾತಲಮಭಿದ್ರವನ್ ॥ ೧೨

ಖನ್ಯಮಾನೇ ತತಸ್ತಸ್ಮಿನ್ ದದೃಶುಃ ಪರ್ವತೋಪಮಮ್ ।
ದಿಶಾಗಜಂ ವಿರೂಪಾಕ್ಷಂ ಧಾರಯಂತಂ ಮಹೀತಲಮ್ ॥ ೧೩

ಸಪರ್ವತವನಾಂ ಕೃತ್ಸ್ನಾಂ ಪೃಥಿವೀಂ ರಘುನಂದನ ।
ಶಿರಸಾ ಧಾರಯಾಮಾಸ ವಿರೂಪಾಕ್ಷೋ ಮಹಾಗಜಃ ॥ ೧೪

ಯದಾ ಪರ್ವಣಿ ಕಾಕುತ್ಸ್ಥ ವಿಶ್ರಮಾರ್ಥಂ ಮಹಾಗಜಃ ।
ಖೇದಾಚ್ಚಾಲಯತೇ ಶೀರ್ಷಂ ಭೂಮಿಕಂಪಸ್ತದಾ ಭವೇತ್ ॥ ೧೫

ತಂ ತೇ ಪ್ರದಕ್ಷಿಣಂ ಕೃತ್ವಾ ದಿಶಾಪಾಲಂ ಮಹಾಗಜಮ್ ।
ಮಾನಯಂತೋ ಹಿ ತೇ ರಾಮ ಜಗ್ಮುರ್ಭಿತ್ವಾ ರಸಾತಲಮ್ ॥

ತತಃ ಪೂರ್ವಾಂ ದಿಶಂ ಭಿತ್ವಾ ದಕ್ಷಿಣಾಂ ಬಿಭಿದುಃ ಪುನಃ ।
ದಕ್ಷಿಣಸ್ಯಾಮಪಿ ದಿಶಿ ದದೃಶುಸ್ತೇ ಮಹಾಗಜಮ್ ॥ ೧೭

ಮಹಾಪದ್ಮಂ ಮಹಾತ್ಮಾನಂ ಸುಮಹತ್ಪರ್ವತೋಪಮಮ್ ।
ಶಿರಸಾ ಧಾರಯಂತಂ ಗಾಂ ವಿಸ್ಮಯಂ ಜಗ್ಮುರುತ್ತಮಮ್ ॥ ೧೮

ತತಃ ಪ್ರದಕ್ಷಿಣಂ ಕೃತ್ವಾ ಸಗರಸ್ಯ ಮಹಾತ್ಮನಃ ।
ಷಷ್ಟಿಃ ಪುತ್ರಸಹಸ್ರಾಣಿ ಪಶ್ಚಿಮಾಂ ಬಿಭಿದುರ್ದಿಶಮ್ ॥ ೧೯

---

ಕಳ್ಳನನ್ನು ಹಿಡಿದು ಕಾರ್ಯವನ್ನು ಸಾಧಿಸಿಕೊಂಡೇ ಬನ್ನಿರಿ” ಎಂದನು. ಅನಂತರ ಸಗರಪುತ್ರರು ಮತ್ತೆ ಭೂಮಿಯನ್ನು ಅಗೆದು ರಸಾತಳಕ್ಕೆ ಹೋದರು (೧೦-೧೨). ಅವರು ಭೂಮಿಯನ್ನು ಅಗೆದಾಗ ಭೂಮಿಯನ್ನು ಹೊತ್ತು ನಿಂತಿದ್ದ ವಿರೂಪಾಕ್ಷನೆಂಬ ಮಹತ್ತರವಾದ ದಿಗ್ಗಜವನ್ನು ಕಂಡರು. ಅದು ಪರ್ವಕಾಲದಲ್ಲಿ ಶಿರಸ್ಸನ್ನು ಅಲ್ಲಾಡಿಸಿದಾಗ ಭೂಕಂಪವಾಗುತ್ತದೆ. ಅದಕ್ಕೆ ಪ್ರದಕ್ಷಿಣ ನಮಸ್ಕಾರವನ್ನು ಮಾಡಿ ಮುಂದೆ ಹೋದರು (೧೩-೧೬). ಅವರು ಪೂರ್ವದಿಂದ ದಕ್ಷಿಣಕ್ಕೆ ಹೋಗಿ ಮಹಾಪದ್ಮವೆಂಬ ದಿಗ್ಗಜವನ್ನೂ

ಪಶ್ಚಿಮಾಯಾಮಪಿ ದಿಶಿ ಮಹಾಂತಮಚಲೋಪಮಮ್ ।
ದಿಶಾಗಜಂ ಸೌಮನಸಂ ದದೃಶುಸ್ತೇ ಮಹಾಬಲಾಃ ॥ ೨೦

ತಂ ತೇ ಪ್ರದಕ್ಷಿಣಂ ಕೃತ್ವಾ ಪೃಷ್ಟ್ವಾ ಚಾಪಿ ನಿರಾಮಯಮ್ ।
ಖನಂತಃ ಸಮುಪಕ್ರಾಂತಾ ದಿಶಂ ಹೈಮವತೀಂ ತತಃ ॥ ೨೧

ಉತ್ತರಸ್ಯಾಂ ರಘುಶ್ರೇಷ್ಠ ದದೃಶುರ್ಹಿಮಪಾಂಡರಮ್ ।
ಭದ್ರಂ ಭದ್ರೇಣ ವಪುಷಾ ಧಾರಯಂತಂ ಮಹೀಮಿಮಾಮ್ ॥ ೨೨

ಸಮಾಲಭ್ಯ ತತಃ ಸರ್ವೇ ಕೃತ್ವಾ ಚೈನಂ ಪ್ರದಕ್ಷಿಣಮ್ ।
ಷಷ್ಟಿಃ ಪುತ್ರಸಹಸ್ರಾಣಿ ಬಿಭಿದುರ್ವಸುಧಾತಲಮ್ ॥ ೨೩

ತತಃ ಪ್ರಾಗುತ್ತರಾಂ ಗತ್ವಾ ಸಾಗರಾಃ ಪ್ರಥಿತಾಂ ದಿಶಮ್ ।
ರೋಷಾದಭ್ಯಖನನ್ ಸರ್ವೇ ಪೃಥಿವೀಂ ಸಗರಾತ್ಮಜಾಃ ॥ ೨೪

ತೇ ತು ಸರ್ವೇ ಮಹಾತ್ಮಾನೋ ಭೀಮವೇಗಾ ಮಹಾಬಲಾಃ ।
ದದೃಶುಃ ಕಪಿಲಂ ತತ್ರ ವಾಸುದೇವಂ ಸನಾತನಮ್ ॥ ೨೫

ಹಯಂ ಚ ತಸ್ಯ ದೇವಸ್ಯ ಚರಂತಮವಿದೂರತಃ ।
ಪ್ರಹರ್ಷಮತುಲಂ ಪ್ರಾಪ್ತಾಃ ಸರ್ವೇ ತೇ ರಘುನಂದನ ॥ ೨೬

ತೇ ತಂ ಹಯಹರಂ ಜ್ಞಾತ್ವಾ ಕ್ರೋಧಪರ್ಯಾಕುಲೇಕ್ಷಣಾಃ ।
ಖನಿತ್ರಲಾಂಗಲಧರಾ ನಾನಾವೃಕ್ಷಶಿಲಾಧರಾಃ ॥ ೨೭

---

ಪಶ್ಚಿಮದಲ್ಲಿ ಸೌಮನಸವನ್ನೂ ಉತ್ತರದಲ್ಲಿ ಭದ್ರವನ್ನೂ ಕಂಡು ಆ ದಿಗ್ಗಜಗಳಿಗೆ ನಮಸ್ಕರಿಸಿದರು (೧೭-೨೩). ಆಮೇಲೆ ಸಗರಪುತ್ರರು ಈಶಾನ್ಯದಿಕ್ಕಿಗೆ ಹೋಗಿ ಅಲ್ಲಿ ಕಪಿಲಾವತಾರದಲ್ಲಿದ್ದ ಸನಾತನನಾದ ವಾಸುದೇವನನ್ನು ಕಂಡರು ಆತನಿಗೆ ಸ್ವಲ್ಪ ದೂರದಲ್ಲಿ ಯಜ್ಞಾಶ್ವವು ಮೇಯುತ್ತಿದ್ದಿತು. ಅದನ್ನು ನೋಡಿ ಸಗರಪುತ್ರರಿಗೆ ಪರಮಾನಂದವಾಯಿತು (೨೪-೨೬). ಅವರು ಕಪಿಲಋಷಿಯೇ ಯಜ್ಞಕ್ಕೆ ವಿಘ್ನವನ್ನು ತಂದವನೆಂದು ಭ್ರಮಿಸಿದರು. ಕೂಡಲೇ ಕೋಪದಿಂದ ಕಣ್ಣಾಲಿಗಳನ್ನು ತಿರುಗಿಸುತ್ತ ಗುದ್ದಲಿ, ನೇಗಿಲು, ವೃಕ್ಷ, ಶಿಲೆಗಳನ್ನು ಎತ್ತಿಹಿಡಿದುಕೊಂಡು "ನಿಲ್ಲು, ನಿಲ್ಲು. ನಮ್ಮ ಯಜ್ಞಾಶ್ವ

ಅಭ್ಯಧಾವಂತ ಸಂಕ್ರುದ್ಧಾಸ್ತಿಷ್ಠ ತಿಷ್ಠೇತಿ ಚಾಬ್ರುವನ್ ।
ಅಸ್ಮಾಕಂ ತ್ವಂ ಹಿ ತುರಗಂ ಯಜ್ಞಿಯಂ ಹೃತವಾನಸಿ ॥ ೨೮

ದುರ್ಮೇಧಸ್ತ್ವಂ ಹಿ ಸಂಪ್ರಾಪ್ತಾನ್ ವಿದ್ಧಿ ನಃ ಸಗರಾತ್ಮಜಾನ್ ।
ಶ್ರುತ್ವಾ ತು ವಚನಂ ತೇಷಾಂ ಕಪಿಲೋ ರಘುನಂದನ ॥ ೨೯

ರೋಷೇಣ ಮಹತಾವಿಷ್ಟೋ ಹುಂಕಾರಮಕರೋತ್ತದಾ ।
ತತಸ್ತೇನಾಪ್ರಮೇಯೇಣ ಕಪಿಲೇನ ಮಹಾತ್ಮನಾ ॥ ೩೦

ಭಸ್ಮರಾಶೀಕೃತಾಃ ಸರ್ವೇ ಕಾಕುತ್ಸ್ಥ ಸಗರಾತ್ಮಜಾಃ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಚತ್ವಾರಿಂಶಃ ಸರ್ಗಃ



ವನ್ನು ಕದ್ದು ತಂದಿದ್ದೀಯೆ. ದುರ್ಬುದ್ಧಿಯವನೆ, ನಾವು ಸಗರಪುತ್ರರು ಬಂದಿದ್ದೇವೆ" ಎಂದು ಕೂಗುತ್ತಾ ಅವನಮೇಲೆ ನುಗ್ಗಿದರು (೨೭-೨೮). ರಘುನಂದನ, ಅವರ ಮಾತುಗಳನ್ನು ಕೇಳಿ ಕಪಿಲಋಷಿಗೆ ಮಹಾರೋಷ ವುಂಟಾಯಿತು. ಆ ಮಹಾತ್ಮನು ಒಂದುಸಲ ಹುಂಕಾರಮಾಡಿದನು. ಸಗರ ಪುತ್ರರೆಲ್ಲರೂ ಸುಟ್ಟು ಬೂದಿಯಾದರು" (೨೯-೩೦).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ನಲವತ್ತನೆಯ ಸರ್ಗ



## ಏಕಚತ್ವಾರಿಂಶಃ ಸರ್ಗಃ

### ಸಗರಯಜ್ಞಸಮಾಪ್ತಿಃ

ಪುತ್ರಾಂಶ್ಚಿರಗತಾನ್ ಜ್ಞಾತ್ವಾ ಸಗರೋ ರಘುನಂದನ ।
ನಪ್ತಾರಮಬ್ರವೀದ್ರಾಜಾ ದೀಪ್ಯಮಾನಂ ಸ್ವತೇಜಸಾ ॥ ೧

ಶೂರಶ್ಚ ಕೃತವಿದ್ಯಶ್ಚ ಪೂರ್ವೈಸ್ತುಲ್ಯೋಽಸಿ ತೇಜಸಾ ।
ಪಿತೄಣಾಂ ಗತಿಮನ್ವಿಚ್ಛ ಯೇನ ಚಾಶ್ವೋಽಪವಾಹಿತಃ ॥ ೨

ಅಂತರ್ಭೌಮಾನಿ ಸತ್ತ್ವಾನಿ ವೀರ್ಯವಂತಿ ಮಹಾಂತಿ ಚ ।
ತೇಷಾಂ ತ್ವಂ ಪ್ರತಿಘಾತಾರ್ಥಂ ಸಾಸಿಂ ಗೃಹ್ಣೀಷ್ವ ಕಾರ್ಮುಕಮ್

ಅಭಿವಾದ್ಯಾಭಿವಾದ್ಯಾಂಸ್ತ್ವಂ ಹತ್ವಾ ವಿಘ್ನಕರಾನಪಿ ।
ಸಿದ್ಧಾರ್ಥಃ ಸಂನಿವರ್ತಸ್ವ ಮಮ ಯಜ್ಞಸ್ಯ ಪಾರಗಃ ॥ ೪

## ಸರ್ಗ ೪೧

ಯಜ್ಞಾಶ್ವವನ್ನು ತರಲು ಅಂಶುಮಂತನ ಪ್ರಯಾಣ. ಸಗರಪುತ್ರರಿಗೆ ಗಂಗಾಜಲದಿಂದ ಉತ್ತರಕ್ರಿಯೆಯನ್ನು ಮಾಡಬೇಕೆಂದು ವೈನತೇಯನು ಹೇಳುವುದು. ಸಗರನ ಯಜ್ಞ ಪರಿಸಮಾಪ್ತಿ.

ವಿಶ್ವಾಮಿತ್ರರು ಹೇಳಿದರು: “ರಾಮ, ಇತ್ತ ನಗರನು ತನ್ನ ಪುತ್ರರು ಹೋಗಿ ಬಹಳ ಕಾಲವಾಯಿತೆಂದು ತೇಜಸ್ವಿಯಾದ ಮೊಮ್ಮಗನನ್ನು ಕರೆದು “ಅಂಶುಮಂತ, ನೀನು ಶೂರನೂ ವಿದ್ಯಾವಂತನೂ ಆಗಿದ್ದೀಯೆ. ನಮ್ಮ ಪೂರ್ವಿಕರಂತೆ ತೇಜೋವಂತನಾಗಿದ್ದೀಯೆ. ನಿನ್ನ ಚಿಕ್ಕಪ್ಪಂದಿರ ಗತಿ ಏನಾಯಿತು? ಯಜ್ಞಾಶ್ವವನ್ನು ಯಾರು ಅಪಹರಿಸಿದರು?—ಎಂಬುದನ್ನು ಅನ್ವೇಷಣೆಮಾಡು (೧-೨). ಭೂಮಂಡಲದ ಕೆಳಗಿರತಕ್ಕವರು ಮಹಾವೀರರು. ಅವರನ್ನು ಎದುರಿಸುವುದಕ್ಕೆ ಖಡ್ಗವನ್ನೂ ಧನುಸ್ಸನ್ನೂ ತೆಗೆದುಕೊಂಡು ಹೋಗು ಹಿರಿಯರಿಗೆ ಅಭಿವಾದನೆ ಮಾಡು. ವಿಘ್ನಕಾರಿಗಳನ್ನು ನಾಶಮಾಡಿ ಕಾರ್ಯವನ್ನು ಸಾಧಿಸಿಕೊಂಡು ಬಾ. ನನ್ನ ಯಜ್ಞವನ್ನು ನೀನೇ ಪಾರಗಾಣಿಸಬೇಕು” ಎಂದನು (೩-೪).

ಏವಮುಕ್ತೋಽಂಶುಮಾನ್ ಸಮ್ಯಕ್ಸಗರೇಣ ಮಹಾತ್ಮನಾ ।
ಧನುರಾದಾಯ ಖಡ್ಗಂ ಚ ಜಗಾಮ ಲಘುವಿಕ್ರಮಃ ॥ ೫
ಸ ಖಾತಂ ಪಿತೃಭಿರ್ಮಾರ್ಗಮಂತರ್ಭೌಮಂ ಮಹಾತ್ಮಭಿಃ ।
ಪ್ರಾಪದ್ಯತ ನರಶ್ರೇಷ್ಠಸ್ತೇನ ರಾಜ್ಞಾಭಿಚೋದಿತಃ ॥ ೬
ದೇವದಾನವರಕ್ಷೋಭಿಃ ಪಿಶಾಚಪತಗೋರಗೈಃ ।
ಪೂಜ್ಯಮಾನಂ ಮಹಾತೇಜಾ ದಿಶಾಗಜಮಪಶ್ಯತ ॥ ೭
ಸ ತಂ ಪ್ರದಕ್ಷಿಣಂ ಕೃತ್ವಾ ಪೃಷ್ಟ್ವಾ ಚೈವ ನಿರಾಮಯಮ್ ।
ಪಿತೄನ್ ಸ ಪರಿಪಪ್ರಚ್ಛ ವಾಜಿಹರ್ತಾರಮೇವ ಚ ॥ ೮
ದಿಶಾಗಜಸ್ತು ತಚ್ಛ್ರುತ್ವಾ ಪ್ರತ್ಯಾಹಾಂಶುಮತೋ ವಚಃ ।
ಆಸಮಂಜ ಕೃತಾರ್ಥಸ್ತ್ವಂ ಸಹಾಶ್ವಃ ಶೀಘ್ರಮೇಷ್ಯಸಿ ॥ ೯
ತಸ್ಯ ತದ್ವಚನಂ ಶ್ರುತ್ವಾ ಸರ್ವಾನೇವ ದಿಶಾಗಜಾನ್ ।
ಯಥಾಕ್ರಮಂ ಯಥಾನ್ಯಾಯಂ ಪ್ರಷ್ಟುಂ ಸಮುಪಚಕ್ರಮೇ ॥ ೧೦
ತೈಶ್ಚ ಸರ್ವೈರ್ದಿಶಾಪಾಲೈರ್ವಾಕ್ಯಜ್ಞೈರ್ವಾಕ್ಯಕೋವಿದೈಃ ।
ಪೂಜಿತಃ ಸಹಯಶ್ಚೈವಾಗಂತಾಸೀತ್ಯಭಿಚೋದಿತಃ ॥ ೧೧

---

ಅಂಶುಮಂತನು ಅದರಂತೆಯೇ ಖಡ್ಗಧನುಸ್ಸುಗಳನ್ನು ಹಿಡಿದು ತ್ವರೆಯಿಂದ ಹೊರಟನು. ತನ್ನ ಪಿತೃಗಳಾದ ಚಿಕ್ಕಪ್ಪಂದಿರು ಅಗೆದಿದ್ದ ಭೂಮಾರ್ಗದಲ್ಲಿ (ಬಹುದೂರ) ಪ್ರಯಾಣಮಾಡಿದಮೇಲೆ ದೇವದಾನವಾದಿಗಳಿಂದ ಪೂಜಿಸಲ್ಪಡುತ್ತಿದ್ದ ದಿಗ್ಗಜವು ಗೋಚರಿಸಿತು (೫-೭). ಆ ದಿಗ್ಗಜಕ್ಕೆ ಪ್ರದಕ್ಷಿಣನಮಸ್ಕಾರಗಳನ್ನು ಮಾಡಿ ಕುಶಲಪ್ರಶ್ನೆಯನ್ನು ಕೇಳಿ ತನ್ನ ಪಿತೃಗಳ ಗತಿ ಏನಾಯಿತೆಂದೂ ಅಶ್ವವನ್ನು ಅಪಹರಿಸಿದವನು ಯಾರೆಂದೂ ವಿಚಾರಿಸಿದನು. ಆ ದಿಗ್ಗಜವು "ಅಸಮಂಜಪುತ್ರ, ನಿನಗೆ ಅಶ್ವವು ದೊರೆಯುವುದು. ಬೇಗನೆ ಕಾರ್ಯವು ಸಿದ್ಧಿಸುವುದು" ಎಂದು ಹೇಳಿತು (೮-೯). ಅಂಶುಮಂತನು ಹೀಗೆಯೇ ಇತರ ದಿಗ್ಗಜಗಳನ್ನೂ ಕಂಡು ವಂದಿಸಿ ಅದೇ ವಿಷಯವನ್ನು ಕೇಳಲು ವಾಕ್ಯಕೋವಿದರಾದ ಆ ದಿಗ್ಗಜಗಳು 'ಅಂಶುಮಂತ, ನಿನಗೆ ಅಶ್ವವು ದೊರೆಯುವುದು' ಎಂದಿಷ್ಟೇ ಹೇಳಿದವು. ಅವುಗಳ ಮಾತನ್ನು ಕೇಳಿ (ಮನಸ್ಸಿನಲ್ಲಿಯೆ ತಳಮಳಗೊಳ್ಳುತ್ತ) ಅಂಶುಮಂತನು ಬೇಗಬೇಗನೆ ಮುಂದೆ ಹೋದನು (೧೦-೧೧).

ತೇಷಾಂ ತದ್ವಚನಂ ಶ್ರುತ್ವಾ ಜಗಾಮ ಲಘುವಿಕ್ರಮಃ ।
ಭಸ್ಮರಾಶೀಕೃತಾ ಯತ್ರ ಪಿತರಸ್ತಸ್ಯ ಸಾಗರಾಃ ॥ ೧೨

ಸ ದುಃಖವಶಮಾಪನ್ನಸ್ತ್ವಸಮಂಜಸುತಸ್ತದಾ ।
ಚುಕ್ರೋಶ ಪರಮಾರ್ತಸ್ತು ವಧಾತ್ತೇಷಾಂ ಸುದುಃಖಿತಃ ॥ ೧೩

ಯಜ್ಞಿಯಂ ಚ ಹಯಂ ತತ್ರ ಚರಂತಮವಿದೂರತಃ ।
ದದರ್ಶ ಪುರುಷವ್ಯಾಘ್ರೋ ದುಃಖಶೋಕಸಮನ್ವಿತಃ ॥ ೧೪

ಸ ತೇಷಾಂ ರಾಜಪುತ್ರಾಣಾಂ ಕರ್ತುಕಾಮೋ ಜಲಕ್ರಿಯಾಮ್ ।
ಸಲಿಲಾರ್ಥೀ ಮಹಾತೇಜಾ ನ ಚಾಪಶ್ಯಜ್ಜಲಾಶಯಮ್ ॥ ೧೫

ವಿಸಾರ್ಯ ನಿಪುಣಾಂ ದೃಷ್ಟಿಂ ತತೋಽಪಶ್ಯತ್ ಖಗಾಧಿಪಮ್ ।
ಪಿತೄಣಾಂ ಮಾತುಲಂ ರಾಮ ಸುಪರ್ಣಮನಿಲೋಪಮಮ್ ॥

ಸ ಚೈನಮಬ್ರವೀದ್ವಾಕ್ಯಂ ವೈನತೇಯೋ ಮಹಾಬಲಃ ।
ಮಾ ಶುಚಃ ಪುರುಷವ್ಯಾಘ್ರ ವಧೋಽಯಂ ಲೋಕಸಂಮತಃ ॥೧೭

ಕಪಿಲೇನಾಪ್ರಮೇಯೇಣ ದಗ್ಧಾ ಹೀಮೇ ಮಹಾಬಲಾಃ ।
ಸಲಿಲಂ ನಾರ್ಹಸಿ ಪ್ರಾಜ್ಞ ದಾತುಮೇಷಾಂ ಹಿ ಲೌಕಿಕಮ್ ॥ ೧೮

---

ಪಿತೃಗಳಾದ ನಗರಪುತ್ರರು ಭಸ್ಮರಾಶಿಯಾಗಿದ್ದ ಸ್ಥಳಕ್ಕೆ ಬಂದನು. ಅವರೆಲ್ಲರೂ ಮೃತರಾಗಿದ್ದಾರೆಂಬುದನ್ನು ಕಂಡು ಅಂಶುಮಂತನ ದುಃಖಕ್ಕೆ ಪಾರವೇ ಉಳಿಯಲಿಲ್ಲ. ಆರ್ತಸ್ವರದಿಂದ ಗಟ್ಟಿಯಾಗಿ ಅತ್ತನು. ಅಳುತ್ತಿರುವಾಗ ಸ್ವಲ್ಪ ದೂರದಲ್ಲಿ ಮೇಯುತ್ತ ತಿರುಗಾಡುತ್ತಿದ್ದ ಯಜ್ಞಾಶ್ವವು ಗೋಚರಿಸಿತು (೧೨-೧೪). ಅಂಶುಮಂತನು (ಮೃತರಾದ) ರಾಜಪುತ್ರರಿಗೆ ತರ್ಪಣವನ್ನು ಕೊಡಬೇಕೆಂದಾಲೋಚಿಸಿ ಜಲಕ್ಕಾಗಿ ಹುಡುಕಾಡಿದನು. ಯಾವ ಜಲಾಶಯವೂ ಕಾಣಲಿಲ್ಲ. ಅವನು ಸುತ್ತಲೂ ಗಮನಿಸಿ ನೋಡುತ್ತಿರಲು, ಚಿಕ್ಕಪ್ಪಂದಿರ ಸೋದರಮಾವನಾದ ಗರುತ್ಮಂತನು ವಾಯುವೇಗದಿಂದ ಹಾರಿಬರುತ್ತಿರುವುದು ಕಾಣಿಸಿತು (೧೫-೧೬). ಅವನು "ವೀರ-ಅಂಶುಮಂತ, ದುಃಖಿಸಬೇಡ. ಇವರ ವಧೆಯು ಲೋಕಹಿತಕ್ಕಾಗಿ ನಡೆದಿದೆ. ಯಾರ ಮಹಿಮೆಯು ತಿಳಿಯಲಶಕ್ಯವೋ ಅಂಥ ಕಪಿಲಮುನಿಯಿಂದ ಈ ವೀರರು ದಗ್ಧರಾಗಿದ್ದಾರೆ. ಇವರಿಗೆ ಲೌಕಿಕವಾದ ಸಾಮಾನ್ಯ ಜಲದಿಂದ

ಗಂಗಾ ಹಿಮವತೋ ಜ್ಯೇಷ್ಠಾ ದುಹಿತಾ ಪುರುಷರ್ಷಭ ।
ತಸ್ಯಾಂ ಕುರು ಮಹಾಬಾಹೋ ಪಿತೄಣಾಂ ತು ಜಲಕ್ರಿಯಾಮ್ ॥

ಭಸ್ಮರಾಶೀಕೃತಾನೇತಾನ್ ಪ್ಲಾವಯೇಲ್ಲೋಕಪಾವನೀ ।
ತಯಾ ಕ್ಲಿನ್ನಮಿದಂ ಭಸ್ಮ ಗಂಗಯಾ ಲೋಕಕಾಂತಯಾ ॥ ೨೦

ಷಷ್ಟಿಂ ಪುತ್ರಸಹಸ್ರಾಣಿ ಸ್ವರ್ಗಲೋಕಂ ನಯಿಷ್ಯತಿ ।
ಗಂಗಾಮಾನಯ ಭದ್ರಂ ತೇ ದೇವಲೋಕಾನ್ಮಹೀತಲಮ್ ॥ ೨೧

ಕ್ರಿಯತಾಂ ಯದಿ ಶಕ್ನೋಷಿ ಗಂಗಾಯಾಸ್ತ್ವವತಾರಣಮ್ ।
ಗಚ್ಛ ಚಾಶ್ವಂ ಮಹಾಭಾಗ ಸಂಗೃಹ್ಯ ಪುರುಷರ್ಷಭ ॥ ೨೨

ಯಜ್ಞಂ ಪೈತಾಮಹಂ ವೀರ ನಿರ್ವರ್ತಯಿತುಮರ್ಹಸಿ ।
ಸುಪರ್ಣವಚನಂ ಶ್ರುತ್ವಾ ಸೋಽಂಶುಮಾನತಿವೀರ್ಯವಾನ್ ॥ ೨೩

ತ್ವರಿತಂ ಹಯಮಾದಾಯ ಪುನರಾಯಾನ್ಮಹಾಯಶಾಃ ।
ತತೋ ರಾಜಾನಮಾಸಾದ್ಯ ದೀಕ್ಷಿತಂ ರಘುನಂದನ ॥ ೨೪

ನ್ಯವೇದಯದ್ಯಥಾವೃತ್ತಂ ಸುಪರ್ಣವಚನಂ ತಥಾ ।
ತಚ್ಛ್ರುತ್ವಾ ಘೋರಸಂಕಾಶಂ ವಾಕ್ಯಮಂಶುಮತೋ ನೃಪಃ ॥ ೨೫

---

ತರ್ಪಣವನ್ನು* ಕೊಡಬೇಡ (೧೭-೧೮). ಹಿಮವಂತನ ಜ್ಯೇಷ್ಠಪುತ್ರಿಯಾದ ಗಂಗಾನದಿಯಲ್ಲಿ ಪಿತೃಗಳಿಗೆ ತರ್ಪಣವನ್ನು ಕೊಡು. ಜನರ ಭಕ್ತಿಗೆ ಪಾತ್ರಳೂ ಲೋಕಪಾವನಿಯೂ ಆದ ಗಂಗೆಯು ಈ ಭಸ್ಮರಾಶಿಯ ಮೇಲೆ ಪ್ರವಹಿಸಿದರೆ, ವತ್ಸ, ಈ ಅರುವತ್ತು ಸಾವಿರ ಜನರಿಗೂ ಸ್ವರ್ಗಪ್ರಾಪ್ತಿಯಾಗುವುದು. ನಿನಗೆ ಸಾಧ್ಯವಾದರೆ ದೇವಲೋಕದಿಂದ ಭೂಲೋಕಕ್ಕೆ ಗಂಗಾವತರಣವನ್ನು ಮಾಡಿಸು (೧೯-೨೧). ಆ ಯಜ್ಞಾಶ್ವವನ್ನು ತೆಗೆದುಕೊಂಡು ಹಿಂದಕ್ಕೆ ಹೋಗು. ನಿನ್ನ ಪಿತಾಮಹನ ಯಜ್ಞವು ಪರಿಸಮಾಪ್ತಿಯಾಗುವಂತೆ ಮಾಡು" ಎಂದು ಹೇಳಿದನು. ಆಗ ಪರಾಕ್ರಮಿಯಾದ ಅಂಶುಮಂತನು ಅಶ್ವವನ್ನು ಹಿಡಿದುಕೊಂಡು ಶೀಘ್ರವಾಗಿ ಹಿಂತಿರುಗಿ ಬಂದನು (೨೨-೨೩). ದೀಕ್ಷಿತನಾಗಿದ್ದ ಸಗರನಿಗೆ ನಡೆದ ವೃತ್ತಾಂತವನ್ನೂ ಗರುಡನು ಹೇಳಿದ

---

* ದುರ್ಮರಣವಾದವರಿಗೆ ತರ್ಪಣವು ನಿಷಿದ್ಧ.

ಯಜ್ಞಂ ನಿರ್ವರ್ತಯಾಮಾಸ ಯಥಾಕಲ್ಪಂ ಯಥಾವಿಧಿ ।
ಸ್ವಪುರಂ ಚಾಗಮಚ್ಛ್ರೀಮಾನಿಷ್ಟಯಜ್ಞೋ ಮಹೀಪತಿಃ ॥ ೨೭

ಗಂಗಾಯಾಶ್ಚಾಗಮೇ ರಾಜಾ ನಿಶ್ಚಯಂ ನಾಧ್ಯಗಚ್ಛತ ।
ಅಗತ್ವಾ ನಿಶ್ಚಯಂ ರಾಜಾ ಕಾಲೇನ ಮಹತಾ ಮಹಾನ್ ॥ ೨೮

ತ್ರಿಂಶದ್ವರ್ಷಸಹಸ್ರಾಣಿ ರಾಜ್ಯಂ ಕೃತ್ವಾ ದಿವಂ ಗತಃ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕಚತ್ವಾರಿಂಶಃ ಸರ್ಗಃ



ಮಾತನ್ನೂ ತಿಳಿಸಿದನು. ಆ ಘೋರವಾರ್ತೆಯನ್ನು ಕೇಳಿ ಸಗರನು (ದುಃಖಿಸಿ) ಯಜ್ಞವನ್ನು ವಿಧಿವತ್ತಾಗಿ ಸಮಾಪ್ತಿಗೊಳಿಸಿ ರಾಜಧಾನಿಗೆ ಹಿಂತಿರುಗಿದನು. ಗಂಗೆಯನ್ನು ಭೂಮಿಗೆ ತರುವುದು ಹೇಗೆಂದು ಕಡೆಗೂ ನಿಶ್ಚಯಿಸಲಾರದೆ ಮೂವತ್ತುಸಾವಿರ ವರ್ಷ ರಾಜ್ಯಭಾರ ಮಾಡಿ ಸಗರನು ಸ್ವರ್ಗಸ್ಥನಾದನು" (೨೪-೨೮).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ನಲವತ್ತೊಂದನೆಯ ಸರ್ಗ



## ದ್ವಿಚತ್ವಾರಿಂಶಃ ಸರ್ಗಃ

### ಭಗೀರಥವರಪ್ರದಾನಮ್

ಕಾಲಧರ್ಮಂ ಗತೇ ರಾಮ ಸಗರೇ ಪ್ರಕೃತೀಜನಾಃ ।
ರಾಜಾನಂ ರೋಚಯಾಮಾಸುರಂಶುಮಂತಂ ಸುಧಾರ್ಮಿಕಮ್ ॥೧

ಸ ರಾಜಾ ಸುಮಹಾನಾಸೀದಂಶುಮಾನ್ ರಘುನಂದನ ।
ತಸ್ಯ ಪುತ್ರೋ ಮಹಾನಾಸೀದ್ದಿಲೀಪ ಇತಿ ವಿಶ್ರುತಃ ॥ ೨

ತಸ್ಮಿನ್ ರಾಜ್ಯಂ ಸಮಾವೇಶ್ಯ ದಿಲೀಪೇ ರಘುನಂದನ ।
ಹಿಮವಚ್ಛಿಖರೇ ಪುಣ್ಯೇ ತಪಸ್ತೇಪೇ ಸುದಾರುಣಮ್ ॥ ೩

ದ್ವಾತ್ರಿಂಶಚ್ಚ ಸಹಸ್ರಾಣಿ ವರ್ಷಾಣಿ ಸುಮಹಾಯಶಾಃ ।
ತಪೋವನಂ ಗತೋ ರಾಜಾ ಸ್ವರ್ಗಂ ಲೇಭೇ ಮಹಾಯಶಾಃ ॥ ೪

ದಿಲೀಪಸ್ತು ಮಹಾತೇಜಾಃ ಶ್ರುತ್ವಾ ಪೈತಾಮಹಂ ವಧಮ್ ।
ದುಃಖೋಪಹತಯಾ ಬುದ್ಧ್ಯಾ ನಿಶ್ಚಯಂ ನಾಧ್ಯಗಚ್ಛತ ॥ ೫

### ಸರ್ಗ ೪೨

ಅಂಶುಮಂತನು ತನ್ನ ಮಗನಾದ ದಿಲೀಪನಿಗೆ ರಾಜ್ಯವನ್ನು ವಹಿಸಿ ತಪಸ್ಸಿಗೆ ಹೋಗುವುದು. ದಿಲೀಪನು ತನ್ನ ಮಗನಾದ ಭಗೀರಥನಿಗೆ ರಾಜ್ಯವನ್ನು ವಹಿಸಿ ಸ್ವರ್ಗಸ್ಥನಾಗುವುದು. ಭಗೀರಥನ ತಪಸ್ಸು.

ವಿಶ್ವಾಮಿತ್ರರು ಹೇಳಿದರು: " ರಾಮ, ಸಗರನು ಕಾಲವಶನಾಗಲು ಪ್ರಜೆಗಳು ಧಾರ್ಮಿಕನಾದ ಅಂಶುಮಂತನನ್ನು ರಾಜನನ್ನಾಗಿ ಆರಿಸಿದರು. ಅಂಶುಮಂತನು ರಾಜನಾಗಿ ಮಹಾಯಶಸ್ಸನ್ನು ಪಡೆದನು. ಅವನಿಗೆ ದಿಲೀಪನೆಂಬ ಪುತ್ರನಿದ್ದನು. ಅಂಶುಮಂತನು ದಿಲೀಪನಿಗೆ ರಾಜ್ಯಭಾರವನ್ನು ವಹಿಸಿಕೊಟ್ಟು ಹಿಮಾಲಯದ ಶಿಖರದಲ್ಲಿ (ಗಂಗಾವತರಣಕ್ಕೋಸ್ಕರ) ಮೂವತ್ತೆರಡುಸಾವಿರ ವರ್ಷ ದಾರುಣ ತಪಸ್ಸನ್ನಾಚರಿಸಿ ಸ್ವರ್ಗಸ್ಥನಾದನು (೧-೪). ದಿಲೀಪನು ತನ್ನ ಪಿತಾಮಹರಿಗೊದಗಿದ ಅಪಮೃತ್ಯುವಿನ ವಿಷಯ

ಕಥಂ ಗಂಗಾವತರಣಂ ಕಥಂ ತೇಷಾಂ ಜಲಕ್ರಿಯಾ ।
ತಾರಯೇಯಂ ಕಥಂ ಚೈತಾನಿತಿ ಚಿಂತಾಪರೋಽಭವತ್ ॥ ೬

ತಸ್ಯ ಚಿಂತಯತೋ ನಿತ್ಯಂ ಧರ್ಮೇಣ ವಿದಿತಾತ್ಮನಃ ।
ಪುತ್ರೋ ಭಗೀರಥೋ ನಾಮ ಜಜ್ಞೇ ಪರಮಧಾರ್ಮಿಕಃ ॥ ೭

ದಿಲೀಪಸ್ತು ಮಹಾತೇಜಾ ಯಜ್ಞೈರ್ಬಹುಭಿರಿಷ್ಟವಾನ್ ।
ತ್ರಿಂಶದ್ವರ್ಷಸಹಸ್ರಾಣಿ ರಾಜಾ ರಾಜ್ಯಮಕಾರಯತ್ ॥ ೮

ಅಗತ್ವಾ ನಿಶ್ಚಯಂ ರಾಜಾ ತೇಷಾಮುದ್ಧರಣಂ ಪ್ರತಿ ।
ವ್ಯಾಧಿನಾ ನರಶಾರ್ದೂಲ ಕಾಲಧರ್ಮಮುಪೇಯಿವಾನ್ ॥ ೯

ಇಂದ್ರಲೋಕಂ ಗತೋ ರಾಜಾ ಸ್ವಾರ್ಜಿತೇನೈವ ಕರ್ಮಣಾ ।
ರಾಜ್ಯೇ ಭಗೀರಥಂ ಪುತ್ರಮಭಿಷಿಚ್ಯ ನರರ್ಷಭಃ ॥ ೧೦

ಭಗೀರಥಸ್ತು ರಾಜರ್ಷಿರ್ಧಾರ್ಮಿಕೋ ರಘುನಂದನ ।
ಅನಪತ್ಯೋ ಮಹಾತೇಜಾಃ ಪ್ರಜಾಕಾಮಃ ಸ ಚಾಪ್ರಜಾಃ ॥ ೧೧

ಮಂತ್ರಿಷ್ವಾಧಾಯ ತದ್ರಾಜ್ಯಂ ಗಂಗಾವತರಣೇ ರತಃ ।
ಸ ತಪೋ ದೀರ್ಘಮಾತಿಷ್ಠದ್ಗೋಕರ್ಣೇ ರಘುನಂದನ ॥ ೧೨

---

ವನ್ನು ತಿಳಿದು ಅತ್ಯಂತ ದುಃಖಿತನಾಗುತ್ತಿದ್ದನು. ಏನು ಮಾಡಬೇಕೆಂದು ಅವನಿಗೆ ನಿಶ್ಚಯವಾಗಲಿಲ್ಲ. 'ಗಂಗೆಯನ್ನು ಭೂಮಿಗೆ ತರುವುದು ಹೇಗೆ? ಸಗರಪುತ್ರರಿಗೆ ತರ್ಪಣವನ್ನು ಅರ್ಪಿಸುವುದು ಹೇಗೆ? ಅವರನ್ನು ಹೇಗೆ ಉದ್ಧರಿಸಲಿ?' ಎಂದು ಚಿಂತಿಸುತ್ತಲೇ ಇದ್ದನು (೫-೬). ಧರ್ಮಮಾರ್ಗದಲ್ಲಿ ಪ್ರಸಿದ್ಧನಾದ ಆತನಿಗೆ ಭಗೀರಥನೆಂಬ ಪುತ್ರನು ಜನಿಸಿದನು. ದಿಲೀಪನು ಅನೇಕ ಯಜ್ಞಗಳನ್ನು ಮಾಡುತ್ತ ಮೂವತ್ತುಸಾವಿರ ವರ್ಷ ರಾಜ್ಯಭಾರ ಮಾಡಿದನು. ಕಡೆಗೆ ಪುತ್ರನಾದ ಭಗೀರಥನಿಗೆ ರಾಜ್ಯಾಭಿಷೇಕ ಮಾಡಿ, ತನ್ನ ಪಿತೃಗಳ ಉದ್ಧಾರವು ಹೇಗೆಂದು ಚಿಂತಿಸುತ್ತಲೇ ವ್ಯಾಧಿಯಿಂದ ಕಾಲವಶನಾದನು. ಅವನ ಸುಕೃತಕ್ಕೆ ಸರಿಯಾಗಿ ಇಂದ್ರಲೋಕವು ದೊರೆಯಿತು (೭-೧೦). ಪುಣ್ಯಾತ್ಮನಾದ ಭಗೀರಥಮಹಾರಾಜನಿಗೆ ಸಂತತಿ ಇಲ್ಲದ್ದರಿಂದ ಅದರ ಚಿಂತೆಯಲ್ಲಿದ್ದನು. ಕೆಲವು ಕಾಲದಮೇಲೆ ಅವನು ರಾಜ್ಯಭಾರವನ್ನು ಮಂತ್ರಿಗಳಿಗೊಪ್ಪಿಸಿ ಗಂಗೆಯನ್ನು ಧರೆಗೆ ಇಳಿಸಬೇಕೆಂಬ ನಿಶ್ಚಯ

ಊರ್ಧ್ವಬಾಹುಃ ಪಂಚತಪಾ ಮಾಸಾಹಾರೋ ಜಿತೇಂದ್ರಿಯಃ ।
ತಸ್ಯ ವರ್ಷಸಹಸ್ರಾಣಿ ಘೋರೇ ತಪಸಿ ತಿಷ್ಠತಃ ॥ ೧೩

ಅತೀತಾನಿ ಮಹಾಬಾಹೋ ತಸ್ಯ ರಾಜ್ಞೋ ಮಹಾತ್ಮನಃ ।
ಸುಪ್ರೀತೋ ಭಗವಾನ್ ಬ್ರಹ್ಮಾ ಪ್ರಜಾನಾಂ ಪತಿರೀಶ್ವರಃ ॥ ೧೪

ತತಃ ಸುರಗಣೈಃ ಸಾರ್ಧಮುಪಾಗಮ್ಯ ಪಿತಾಮಹಃ ।
ಭಗೀರಥಂ ಮಹಾತ್ಮಾನಂ ತಪ್ಯಮಾನಮಥಾಬ್ರವೀತ್ ॥ ೧೫

ಭಗೀರಥ ಮಹಾಭಾಗ ಪ್ರೀತಸ್ತೇಽಹಂ ಜನೇಶ್ವರ ।
ತಪಸಾ ಚ ಸುತಪ್ತೇನ ವರಂ ವರಯ ಸುವ್ರತ ॥ ೧೬

ತಮುವಾಚ ಮಹಾತೇಜಾಃ ಸರ್ವಲೋಕಪಿತಾಮಹಮ್ ।
ಭಗೀರಥೋ ಮಹಾಭಾಗಃ ಕೃತಾಂಜಲಿರುಪಸ್ಥಿತಃ ॥ ೧೭

ಯದಿ ಮೇ ಭಗವಾನ್ ಪ್ರೀತೋ ಯದ್ಯಸ್ತಿ ತಪಸಃ ಫಲಮ್ ।
ಸಗರಸ್ಯಾತ್ಮಜಾಃ ಸರ್ವೇ ಮತ್ತಃ ಸಲಿಲಮಾಪ್ನುಯುಃ ॥ ೧೮

---

ದಿಂದ ಗೋಕರ್ಣಕ್ಷೇತ್ರದಲ್ಲಿ ದೀರ್ಘವಾದ ತಪಸ್ಸನ್ನು ಆರಂಭಿಸಿದನು (೧೧-೧೨). ರಾಮ, ಆ ಮಹಾತ್ಮನು ಪಂಚಾಗ್ನಿಗಳ* ಮಧ್ಯದಲ್ಲಿ ಊರ್ಧ್ವಬಾಹುವಾಗಿ ನಿಂತು ತಿಂಗಳಿಗೊಮ್ಮೆ ಆಹಾರವನ್ನು ಸೇವಿಸುತ್ತ ಜಿತೇಂದ್ರಿಯನಾಗಿ ಘೋರವಾದ ತಪಸ್ಸಿನಲ್ಲಿ ಮಗ್ನನಾದನು. ಹೀಗೆ ಒಂದು ಸಾವಿರ ವರ್ಷಗಳು ಕಳೆದವು. ಭಗವಾನ್ ಬ್ರಹ್ಮದೇವನು ಸುಪ್ರೀತನಾಗಿ ದೇವತೆಗಳೊಡನೆ ಪ್ರತ್ಯಕ್ಷನಾದನು. ಭಗೀರಥನನ್ನು ಕುರಿತು "ಮಹಾರಾಜ-ಭಗೀರಥ, ನಿನ್ನ ತಪಸ್ಸಿಗೆ ಪ್ರಸನ್ನನಾಗಿದ್ದೇನೆ. ವರವನ್ನು ಕೇಳಿಕೋ" ಎಂದನು (೧೩-೧೬). ಭಗೀರಥನು ಬದ್ಧಾಂಜಲಿಯಾಗಿ "ಭಗವನ್-ಪಿತಾಮಹ, ನೀನು ಪ್ರಸನ್ನನಾದರೆ—ನನ್ನ ತಪಸ್ಸಿಗೆ ಫಲವಿರುವುದಾದರೆ—ಸಗರಪುತ್ರರೆಲ್ಲರೂ ನನ್ನಿಂದ ತರ್ಪಣವನ್ನು ಪಡೆಯುವಂತಾಗಲಿ. ಆ

---

* ಪಂಚಾಗ್ನಿ = ನಾಲ್ಕು ದಿಕ್ಕುಗಳಲ್ಲಿಯೂ ಅಗ್ನಿ, ಆಕಾಶದಲ್ಲಿ ಸೂರ್ಯ; ಇವಲ್ಲದೆ ದಕ್ಷಿಣ, ಗಾರ್ಹಪತ್ಯ, ಆವಹನೀಯ, ಸಭ್ಯ ಮತ್ತು ಆವಸಥ್ಯ ಎಂಬ ಪಂಚಾಗ್ನಿಗಳುಂಟು.

ಗಂಗಾಯಾಃ ಸಲಿಲಕ್ಲಿನ್ನೇ ಭಸ್ಮನ್ಯೇಷಾಂ ಮಹಾತ್ಮನಾಮ್ ।
ಸ್ವರ್ಗಂ ಗಚ್ಛೇಯುರತ್ಯಂತಂ ಸರ್ವೇ ಮೇ ಪ್ರಪಿತಾಮಹಾಃ ॥ ೧೯

ದೇಯಾ ಚ ಸಂತತಿರ್ದೇವ ನಾವಸೀದೇತ್ ಕುಲಂ ಚ ನಃ ।
ಇಕ್ಷ್ವಾಕೂಣಾಂ ಕುಲೇ ದೇವ ಏಷ ಮೇಽಸ್ತು ವರಃ ಪರಃ ॥ ೨೦

ಉಕ್ತವಾಕ್ಯಂ ತು ರಾಜಾನಂ ಸರ್ವಲೋಕಪಿತಾಮಹಃ ।
ಪ್ರತ್ಯುವಾಚ ಶುಭಾಂ ವಾಣೀಂ ಮಧುರಾಂ ಮಧುರಾಕ್ಷರಾಮ್ ॥

ಮನೋರಥೋ ಮಹಾನೇಷ ಭಗೀರಥ ಮಹಾರಥ ।
ಏವಂ ಭವತು ಭದ್ರಂ ತೇ ಇಕ್ಷ್ವಾಕುಕುಲವರ್ಧನ ॥ ೨೨

ಇಯಂ ಹೈಮವತೀ ಗಂಗಾ ಜ್ಯೇಷ್ಠಾ ಹಿಮವತಃ ಸುತಾ ।
ತಾಂ ವೈ ಧಾರಯಿತುಂ ಶಕ್ತೋ ಹರಸ್ತತ್ರ ನಿಯುಜ್ಯತಾಮ್ ॥೨೩

ಗಂಗಾಯಾಃ ಪತನಂ ರಾಜನ್ ಪೃಥಿವೀ ನ ಸಹಿಷ್ಯತೇ ।
ತಾಂ ವೈ ಧಾರಯಿತುಂ ವೀರ ನಾನ್ಯಂ ಪಶ್ಯಾಮಿ ಶೂಲಿನಃ ॥ ೨೪

---

ಮಹಾತ್ಮರ ಭಸ್ಮದಮೇಲೆ ಗಂಗಾಪ್ರವಾಹವು ಹರಿದು ನನ್ನ ಮುತ್ತಾತಂದಿರೆಲ್ಲರಿಗೂ ಸ್ವರ್ಗಪ್ರಾಪ್ತಿಯಾಗಲಿ (೧೭-೧೯). ದೇವ, ಇನ್ನೊಂದು ವರವನ್ನು ಕೇಳಿಕೊಳ್ಳುತ್ತೇನೆ. ನನಗೆ ಪುತ್ರಲಾಭವಾಗುವಂತೆ ಕರುಣಿಸು. ನಮ್ಮ ಇಕ್ಷ್ವಾಕುವಂಶವು ವಿಲಯವಾಗಬಾರದು" ಎಂದು ಬೇಡಿಕೊಂಡನು. ಆಗ ಪಿತಾಮಹನ ಮುಖದಿಂದ ಮಧುರವಾದ ಶುಭವಾಣಿಯು ಹೊರಟಿತು (೨೦-೨೧): "ಭಗೀರಥ, ನಿನ್ನ ಮನೋರಥವು ದೊಡ್ಡದು. ಹಾಗೆಯೇ ಆಗಲಿ ಇಕ್ಷ್ವಾಕುಕುಲವರ್ಧನನಾಗು.* ಆದರೆ ಈ ಹೈಮವತಿಯಾದ ಗಂಗೆ ಇದ್ದಾಳಲ್ಲ, (ಅವಳು ಭೂಮಿಗೆ ಧುಮುಕುವಾಗ) ಅವಳನ್ನು ಧರಿಸಬೇಕೆಂದು ಹರನನ್ನು ಪ್ರಾರ್ಥಿಸಿಕೊಳ್ಳಬೇಕು (೨೨-೨೩). ಗಂಗೆಯ ಪತನವೇಗವನ್ನು ಪೃಥ್ವಿಯು ತಡೆದುಕೊಳ್ಳಲಾರದು. ಶೂಲಧಾರಿಯಾದ ಶಿವನ ಹೊರತು ಗಂಗಾವೇಗವನ್ನು ತಡೆದು ಧರಿಸತಕ್ಕ ಇನ್ನೊಬ್ಬನು ನನಗೆ

---

* ಮೂಲದಲ್ಲಿ ಇದು ಸಂಬೋಧನವಾಗಿದೆ. ಇದರಿಂದ 'ನಿನಗೆ ಪುತ್ರಲಾಭವಾಗುವುದು' ಎಂದೂ ವರವನ್ನು ಕೊಟ್ಟಂತಾಯಿತು.

ತಮೇವಮುಕ್ತ್ವಾ ರಾಜಾನಂ ಗಂಗಾಂ ಚಾಭಾಷ್ಯ ಲೋಕಕೃತ್ ।
ಜಗಾಮ ತ್ರಿದಿವಂ ದೇವಃ ಸಹ ಸರ್ವೈರ್ಮರುದ್ಗಣೈಃ ॥ ೨೫

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ದ್ವಿಚತ್ವಾರಿಂಶಃ ಸರ್ಗಃ



ತೋರುವುದಿಲ್ಲ"—ಹೀಗೆ ಹೇಳಿ ಆ ಸೃಷ್ಟಿಕರ್ತನು ಗಂಗಾದೇವಿಗೆ (ವತ್ಸೆ, ಸರಿಯಾದ ಸಮಯದಲ್ಲಿ ಈ ರಾಜನ ಪ್ರಾರ್ಥನೆಯನ್ನು ನಡೆಸು ಎಂದು) ತಿಳಿಸಿ ದೇವತೆಗಳೊಡನೆ ತನ್ನ ಲೋಕಕ್ಕೆ ಹೋದನು" (೨೪-೨೫).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ನಲವತ್ತೆರಡನೆಯ ಸರ್ಗ



## ತ್ರಿಚತ್ವಾರಿಂಶಃ ಸರ್ಗಃ

### ಗಂಗಾವತರಣಮ್

ದೇವದೇವೇ ಗತೇ ತಸ್ಮಿನ್ ಸೋಽಂಗುಷ್ಠಾಗ್ರನಿಪೀಡಿತಾಮ್ ।
ಕೃತ್ವಾ ವಸುಮತೀಂ ರಾಮ ಸಂವತ್ಸರಮುಪಾಸತ ॥ ೧

ಊರ್ಧ್ವಬಾಹುರ್ನಿರಾಲಂಬೋ ವಾಯುಭಕ್ಷೋ ನಿರಾಶ್ರಯಃ ।
ಅಚಲಃ ಸ್ಥಾಣುವತ್ ಸ್ಥಿತ್ವಾ ರಾತ್ರಿಂದಿವಮರಿಂದಮ ॥ ೨

ಅಥ ಸಂವತ್ಸರೇ ಪೂರ್ಣೇ ಸರ್ವಲೋಕನಮಸ್ಕೃತಃ ।
ಉಮಾಪತಿಃ ಪಶುಪತೀ ರಾಜಾನಮಿದಮಬ್ರವೀತ್ ॥ ೩

ಪ್ರೀತಸ್ತೇಽಹಂ ನರಶ್ರೇಷ್ಠ ಕರಿಷ್ಯಾಮಿ ತವ ಪ್ರಿಯಮ್ ।
ಶಿರಸಾ ಧಾರಯಿಷ್ಯಾಮಿ ಶೈಲರಾಜಸುತಾಮಹಮ್ ॥ ೪

## ಸರ್ಗ ೪೩

ಗಂಗಾವತರಣ; ಜಹ್ನುಮುನಿಯು ಕ್ರೋಧದಿಂದ ಗಂಗೆಯನ್ನು ಪ್ರಾಶನ ಮಾಡುವುದು. ಗಂಗಾನದಿಯು ಸಗರಪುತ್ರರ ಭಸ್ಮದಮೇಲೆ ಪ್ರವಹಿಸಿ ಅವರನ್ನು ಪವಿತ್ರಗೊಳಿಸುವುದು.

ವಿಶ್ವಾಮಿತ್ರರು ಹೇಳಿದರು: "ರಾಘವ, ಬ್ರಹ್ಮನು ಹೋದಮೇಲೆ ಭಗೀರಥನು ನೆಲದಮೇಲೆ ಅಂಗುಷ್ಠಾಗ್ರದಲ್ಲಿ ನಿಂತು* ಒಂದು ವರ್ಷ ತಪಸ್ಸುಮಾಡಿದನು. ಬಾಹುಗಳನ್ನು ಮೇಲಕ್ಕೆತ್ತಿ ಯಾವ ಆಲಂಬನವೂ ಇಲ್ಲದೆ ಕಂಭದಂತೆ ಅಚಲನಾಗಿ ನಿಂತು ಆಹಾರವನ್ನು ವರ್ಜಿಸಿ ಅಹೋರಾತ್ರವೂ ತಪಶ್ಚರಣೆಯಲ್ಲಿ ನಿರತನಾದನು (೧–೨). ಅನಂತರ ಸರ್ವಲೋಕವಂದಿತನಾದ ಉಮೇಶ್ವರನು ಪ್ರಸನ್ನನಾಗಿ "ಭಗೀರಥ, ನಾನು ಸಂಪ್ರೀತನಾದೆ. ನಿನ್ನ ಇಷ್ಟದಂತೆ ಶೈಲರಾಜಸುತೆಯಾದ ಗಂಗೆಯನ್ನು ಶಿರಸ್ಸಿನಲ್ಲಿ ಧರಿಸುತ್ತೇನೆ"

---

* ತುದಿಗಾಲಿನಲ್ಲಿ ನಿಂತು.

ತತೋ ಹೈಮವತೀ ಜ್ಯೇಷ್ಠಾ ಸರ್ವಲೋಕನಮಸ್ಕೃತಾ ।
ತದಾ ಸಾ ಸುಮಹದ್ರೂಪಂ ಕೃತ್ವಾ ವೇಗಂ ಚ ದುಃಸಹಮ್ ॥ ೫

ಆಕಾಶಾದಪತದ್ಗಂಗಾ ಶಿವೇ ಶಿವಶಿರಸ್ಯುತ ।
ಅಚಿಂತಯಚ್ಚ ಸಾ ದೇವೀ ಗಂಗಾ ಪರಮದುರ್ಧರಾ ॥ ೬

ವಿಶಾಮ್ಯಹಂ ಹಿ ಪಾತಾಲಂ ಸ್ರೋತಸಾ ಗೃಹ್ಯ ಶಂಕರಮ್ ।
ತಸ್ಯಾವಲೇಪನಂ ಜ್ಞಾತ್ವಾ ಕ್ರುದ್ಧಸ್ತು ಭಗವಾನ್ ಹರಃ ॥ ೭

ತಿರೋಭಾವಯಿತುಂ ಬುದ್ಧಿಂ ಚಕ್ರೇ ತ್ರಿಣಯನಸ್ತದಾ ।
ಸಾ ತಸ್ಮಿನ್ ಪತಿತಾ ಪುಣ್ಯಾ ಪುಣ್ಯೇ ರುದ್ರಸ್ಯ ಮೂರ್ಧನಿ ॥ ೮

ಹಿಮವತ್ಪ್ರತಿಮೇ ರಾಮ ಜಟಾಮಂಡಲಗಹ್ವರೇ ।
ಸಾ ಕಥಂಚಿನ್ಮಹೀಂ ಗಂತುಂ ನಾಶಕ್ನೋದ್ಯತ್ನಮಾಸ್ಥಿತಾ ॥ ೯

ನೈವ ನಿರ್ಗಮನಂ ಲೇಭೇ ಜಟಾಮಂಡಲಮೋಹಿತಾ ।
ತತ್ರೈವಾಬಂಭ್ರಮದ್ದೇವೀ ಸಂವತ್ಸರಗಣಾನ್ ಬಹೂನ್ ॥ ೧೦

---

ಎಂದನು (೩-೪). ಆಗ (ಭಗೀರಥನ ಪ್ರಾರ್ಥನೆಯಂತೆ) ಸರ್ವಲೋಕ ವಂದಿತಳಾದ ಹಿಮವಂತನ ಜ್ಯೇಷ್ಠಪುತ್ರಿಯು ಮಹತ್ತರವಾದ ರೂಪವನ್ನು ಧರಿಸಿ ಶುಭಕರವಾದ ಶಿವಶಿರಸ್ಸಿನಮೇಲೆ ಮಹಾರಭಸದೊಡನೆ ಆಕಾಶದಿಂದ ಧುಮುಕಿದಳು ರಾಮ, ಗಂಗೆಯು ಮನಸ್ಸಿನಲ್ಲಿ "ನಾನು ಶಿವನಿಗೂ ಧರಿಸಲಶಕ್ಯಳು. ಪ್ರವಾಹವೇಗದಿಂದ ಇವನನ್ನೂ ಪಾತಾಳಕ್ಕೆ ಸೆಳೆದುಕೊಂಡು ಹೋಗಿಬಿಡುತ್ತೇನೆ" ಎಂದು ಗುಣಿಸಿಕೊಂಡಿದ್ದಳು (೫-೭) ಭಗವಾನ್ ತ್ರಿಯಂಬಕನು ಅವಳ ಗರ್ವವನ್ನರಿತು ಕ್ರುದ್ಧನಾಗಿ ಅವಳನ್ನು (ಜಟಾ ಮಂಡಲದಲ್ಲಿ) ಅಡಗಿಸಿಬಿಡಬೇಕೆಂದು ನಿಶ್ಚಯಿಸಿದನು. ಗಂಗೆಯು ರುದ್ರನ ಪವಿತ್ರವಾದ ಶಿರಸ್ಸಿನಮೇಲೆ ಧುಮುಕಿದಳು. ಹಿಮಾಲಯಸದೃಶವಾದ ಆ ಜಟಾಮಂಡಲದ ಗುಹೆಯಲ್ಲಿ ಅವಳು ಸಿಕ್ಕಿಕೊಂಡಳು ಎಷ್ಟು ಪ್ರಯತ್ನಿಸಿ ದರೂ ಅಲ್ಲಿಂದ ತಪ್ಪಿಸಿಕೊಂಡು ಭೂಮಿಗೆ ಇಳಿಯಲು ಅವಳಿಗೆ ಸಾಧ್ಯವಾಗ ಲಿಲ್ಲ (೮-೯). ಅಲ್ಲಿಯೇ ಬಹಳ ವರ್ಷಗಳವರೆಗೆ ಸುತ್ತುತ್ತಿದ್ದಳು. ಮತ್ತೆ

**ತಾಮುಪಶ್ಯನ್ ಪುನಸ್ತತ್ರ ತಪಃ ಪರಮಮಾಸ್ಥಿತಃ ।**
**ಸ ತೇನ ತೋಷಿತಶ್ಚಾಭೂದತ್ಯರ್ಥಂ ರಘುನಂದನ ॥** ೧೧
**ವಿಸಸರ್ಜ ತತೋ ಗಂಗಾಂ ಹರೋ ಬಿಂದುಸರಃ ಪ್ರತಿ ।**
**ತಸ್ಯಾಂ ವಿಸೃಜ್ಯಮಾನಾಯಾಂ ಸಪ್ತ ಸ್ರೋತಾಂಸಿ ಜಜ್ಞಿರೇ ॥** ೧೨
**ಹ್ಲಾದಿನೀ ಪಾವನೀ ಚೈವ ನಲಿನೀ ಚ ತಥಾ ಪರಾ ।**
**ತಿಸ್ರಃ ಪ್ರಾಚೀಂ ದಿಶಂ ಜಗ್ಮುರ್ಗಂಗಾಃ ಶಿವಜಲಾಃ ಶುಭಾಃ ॥** ೧೩
**ಸುಚಕ್ಷುಶ್ಚೈವ ಸೀತಾ ಚ ಸಿಂಧುಶ್ಚೈವ ಮಹಾನದೀ ।**
**ತಿಸ್ರಸ್ತ್ವೇತಾ ದಿಶಂ ಜಗ್ಮುಃ ಪ್ರತೀಚೀಂ ತು ಶುಭೋದಕಾಃ ॥** ೧೪
**ತಥೈವಾಲಕನಂದಾ ಚ ವಿಶ್ರುತಾ ಲೋಕಪಾವನೀ ।**
**ಸಪ್ತಮೀ ಚಾನ್ವಗಾತ್ತಾಸಾಂ ಭಗೀರಥಮಥೋ ನೃಪಮ್ ॥** ೧೫
**ಭಗೀರಥೋಽಪಿ ರಾಜರ್ಷಿರ್ದಿವ್ಯಂ ಸ್ಯಂದನಮಾಸ್ಥಿತಃ ।**
**ಪ್ರಾಯಾದಗ್ರೇ ಮಹಾತೇಜಾ ಗಂಗಾ ತಂ ಚಾಪ್ಯನುವ್ರಜತ್ ॥**
**ಗಗನಾಚ್ಛಂಕರಶಿರಸ್ತತೋ ಧರಣಿಮಾಗತಾ ।**
**ವ್ಯಸರ್ಪತ ಜಲಂ ತತ್ರ ಪ್ರತಿಶಬ್ದಪುರಸ್ಕೃತಮ್ ॥** ೧೭

---

ಭಗೀರಥನು ತಪಸ್ಸನ್ನಾಚರಿಸಿ ಹರನನ್ನು ಮೆಚ್ಚಿಸಲು, ಅವನು ಪ್ರಸನ್ನನಾಗಿ ಬಿಂದುಸರೋವರದ ಕಡೆಗೆ ಗಂಗೆಯನ್ನು ಬಿಟ್ಟನು ಆಗ ಗಂಗೆಯು ಏಳು ಪ್ರವಾಹಗಳಾಗಿ ಹರಿದಳು (೧೧-೧೨). ಅವುಗಳಲ್ಲಿ ಹ್ಲಾದನೀ, ಪಾವನೀ, ನಲಿನೀ—ಎಂಬ ಮೂರು ಪವಿತ್ರ ಗಂಗಾಪ್ರವಾಹಗಳು ಪೂರ್ವದಿಕ್ಕಿಗೆ ಹರಿದವು ಸುಚಕ್ಷು, ಸೀತಾ, ಸಿಂಧು–ಎಂಬ ಮೂರು ನದಿಗಳು ಪಶ್ಚಿಮದಿಕ್ಕಿಗೆ ಹರಿದವು. ಅಲಕನಂದಾ ಎಂಬ ಏಳನೆಯ ಗಂಗಾಪ್ರವಾಹವು ಭಗೀರಥನನ್ನು ಅನುಸರಿಸಿ ಹರಿಯತೊಡಗಿತು* (೧೩-೧೫). ಆ ರಾಜರ್ಷಿಯು ದಿವ್ಯರಥವನ್ನೇರಿ ಮುಂದು ಮುಂದೆ ಹೋಗುತ್ತಿದ್ದನು. ಹೀಗೆ ಗಗನತಲದಿಂದ ಶಿವಶಿರಸ್ಸಿನಮೇಲೆ ಧುಮುಕಿ ಗಂಗೆಯು ಭೂಮಿಗೆ ಬಂದಳು. ಗಂಗಾಜಲವು ಭೋರೆಂದು ತೀವ್ರವಾದ ಶಬ್ದವನ್ನು ಮಾಡುತ್ತಿತ್ತು (೧೬-೧೭).

* ಗಂಗಾನದಿಯು ಸ್ವರ್ಗ, ಆಕಾಶ, ಭೂಮಿಗಳಿಗೆ ಪ್ರವಹಿಸಿದ್ದರಿಂದ ಅಥವಾ ಪೂರ್ವಪಶ್ಚಿಮ ದಿಕ್ಕುಗಳಿಗೆ ಪ್ರವಹಿಸಿ ಮತ್ತೆ ಭಗೀರಥನನ್ನು ಅನುಸರಿಸಿ ಹೋದದ್ದರಿಂದ "ತ್ರಿಪಥಗಾ" ಎಂಬ ಹೆಸರನ್ನು ಪಡೆಯಿತು.

*

ಮತ್ಸ್ಯಕಚ್ಛಪಸಂಘೈಶ್ಚ ಶಿಂಶುಮಾರಗಣೈಸ್ತಥಾ ।
ಪತದ್ಭಿಃ ಪತಿತೈಶ್ಚಾನ್ಯೈರ್ವ್ಯರೋಚತ ವಸುಂಧರಾ ॥ ೧೮

ತತೋ ದೇವರ್ಷಿಗಂಧರ್ವಾ ಯಕ್ಷಾಃ ಸಿದ್ಧಗಣಾಸ್ತಥಾ ।
ವ್ಯಲೋಕಯಂತ ತೇ ತತ್ರ ಗಗನಾದ್ಗಾಂ ಗತಾಂ ತದಾ ॥ ೧೯

ವಿಮಾನೈರ್ನಗರಾಕಾರೈರ್ಹಯೈರ್ಗಜವರೈಸ್ತಥಾ ।
ಪಾರಿಪ್ಲವಗತೈಶ್ಚಾಪಿ ದೇವತಾಸ್ತತ್ರ ವಿಷ್ಠಿತಾಃ ॥ ೨೦

ತದದ್ಭುತತಮಂ ಲೋಕೇ ಗಂಗಾಪತನಮುತ್ತಮಮ್ ।
ದಿದೃಕ್ಷವೋ ದೇವಗಣಾಃ ಸಮೀಯುರಮಿತೌಜಸಃ ॥ ೨೧

ಸಂಪತದ್ಭಿಃ ಸುರಗಣೈಸ್ತೇಷಾಂ ಚಾಭರಣೌಜಸಾ ।
ಶತಾದಿತ್ಯಮಿವಾಭಾತಿ ಗಗನಂ ಗತತೋಯದಮ್ ॥ ೨೨

ಶಿಂಶುಮಾರೋರಗಗಣೈರ್ಮೀನೈರಪಿ ಚ ಚಂಚಲೈಃ ।
ವಿದ್ಯುದ್ಭಿರಿವ ವಿಕ್ಷಿಪ್ತೈರಾಕಾಶಮಭವತ್ತದಾ ॥ ೨೩

ಪಾಂಡರೈಃ ಸಲಿಲೋತ್ಪೀಡೈಃ ಕೀರ್ಯಮಾಣೈಃ ಸಹಸ್ರಧಾ ।
ಶಾರದಾಭ್ರೈರಿವಾಕೀರ್ಣಂ ಗಗನಂ ಹಂಸಸಂಪ್ಲವೈಃ ॥ ೨೪

---

ಪ್ರವಾಹದ ಜೊತೆಗೆ ಮೀನು, ಆಮೆ, ಮೊಸಳೆ ಮುಂತಾದ ಜಲಜಂತುಗಳೂ ಭೂಮಿಯಮೇಲೆ ಬೀಳುತ್ತಿದ್ದವು ಆಗ ದೇವರ್ಷಿಗಂಧರ್ವಾದಿಗಳು ಬೃಹದ್ವಿಮಾನಗಳನ್ನೇರಿ ಅದ್ಭುತವಾದ ಗಂಗಾವತರಣವನ್ನು ನೋಡುವುದಕ್ಕೆ ಸಂಭ್ರಮದಿಂದ ಬಂದು ಮುತ್ತಿದರು (೧೮-೨೧). ಆ ದೇವತೆಗಳು, ಅವರ ಆಭರಣಕಾಂತಿ—ಇವು ಒಟ್ಟುಗೂಡಿ ಶುಭ್ರವಾದ ಆಕಾಶದಲ್ಲಿ ನೂರಾರುಮಂದಿ ಸೂರ್ಯರು ಬಂದು ಮುಸುಕಿದರೋ ಎಂಬಂತಾಯಿತು. ಮೊಸಳೆ, ಸರ್ಪ, ಮತ್ಸ್ಯಗಳು ಮಿಂಚುಗಳಂತೆ ಫಳಫಳನೆ ಹೊಳೆಯುತ್ತ ಆಕಾಶದಿಂದ ಬೀಳುತ್ತಿದ್ದವು (೨೨-೨೩). ಸಾವಿರಾರು ಬಗೆಯಲ್ಲಿ ಎರಚಲ್ಪಡುತ್ತಿದ್ದ ನೀರಿನ ಬೆಳ್ಳನೆಯ ನೊರೆಗಳು ಆಕಾಶದಲ್ಲಿ ಹರಡಿದವು. ಆಗ ಆಕಾಶವು ಶರತ್ಕಾಲದ ಮೋಡಗಳಿಂದಲೂ ಹಂಸಪಕ್ಷಿಗಳಿಂದಲೂ ತುಂಬಿದಂತೆ

ಕ್ವಚಿದ್ ದ್ರುತತರಂ ಯಾತಿ ಕುಟಿಲಂ ಕ್ವಚಿದಾಯತಮ್ ।
ವಿನತಂ ಕ್ವಚಿದುದ್ಧೂತಂ ಕ್ವಚಿದ್ಯಾತಿ ಶನೈಃ ಶನೈಃ ॥ ೨೫
ಸಲಿಲಂ ಸಲಿಲೇನೈವ ಕ್ವಚಿದಭ್ಯಾಹತಂ ಪುನಃ ।
ಮುಹುರೂರ್ಧ್ವಪಥಂ ಗತ್ವಾ ಪಪಾತ ವಸುಧಾತಲಮ್ ॥ ೨೬
ತಚ್ಛಂಕರಶಿರೋಭ್ರಷ್ಟಂ ಭ್ರಷ್ಟಂ ಭೂಮಿತಲೇ ಪುನಃ ।
ವ್ಯರೋಚತ ತದಾ ತೋಯಂ ನಿರ್ಮಲಂ ಗತಕಲ್ಮಷಮ್ ॥ ೨೭
ತತ್ರ ದೇವರ್ಷಿಗಂಧರ್ವಾ ವಸುಧಾತಲವಾಸಿನಃ ।
ಭವಾಂಗಪತಿತಂ ತೋಯಂ ಪವಿತ್ರಮಿತಿ ಪಸ್ಪೃಶುಃ ॥ ೨೮
ಶಾಪಾತ್ ಪ್ರಪತಿತಾ ಯೇ ಚ ಗಗನಾದ್ವಸುಧಾತಲಮ್ ।
ಕೃತ್ವಾ ತತ್ರಾಭಿಷೇಕಂ ತೇ ಬಭೂವುರ್ಗತಕಲ್ಮಷಾಃ ॥ ೨೯
ಧೂತಪಾಪಾಃ ಪುನಸ್ತೇನ ಗಂಗಾತೋಯೇನ ಭಾಸ್ವತಾ ।
ಪುನರಾಕಾಶಮಾವಿಶ್ಯ ಸ್ವಾನ್ ಲೋಕಾನ್ ಪ್ರತಿಪೇದಿರೇ ॥ ೩೦
ಮುಮುದೇ ಮುದಿತೋ ಲೋಕಸ್ತೇನ ತೋಯೇನ ಭಾಸ್ವತಾ ।
ಕೃತಾಭಿಷೇಕೋ ಗಂಗಾಯಾಂ ಬಭೂವ ವಿಗತಕ್ಲಮಃ ॥ ೩೧
ಭಗೀರಥೋಽಪಿ ರಾಜರ್ಷಿರ್ದಿವ್ಯಂ ಸ್ಯಂದನಮಾಸ್ಥಿತಃ ।
ಪ್ರಾಯಾದಗ್ರೇ ಮಹಾತೇಜಾಸ್ತಂ ಗಂಗಾ ಪೃಷ್ಠತೋಽನ್ವಗಾತ್ ॥

---

ಚೆಲುವಾಯಿತು. ಆ ಗಂಗಾನದಿಯು ಕೆಲವೆಡೆ ಅತಿವೇಗವಾಗಿ ಕೆಲವೆಡೆ ಡೊಂಕಾಗಿ ಅಗಲವಾಗಿ ಕುಗ್ಗಿ ಹಾರಿ ಮೆಲ್ಲಗಾಗಿ ಒಂದಕ್ಕೊಂದು ಪ್ರವಾಹವು ಡಿಕ್ಕಿಹೊಡೆದು ಮೇಲೆ ನೆಗೆದು ಮತ್ತೆ ಭೂಮಿಗೆ ಧುಮುಕುತ್ತಿತ್ತು (೨೪-೨೬). ಈಶ್ವರನ ಶಿರಸ್ಸಿನಮೇಲೆ ಧುಮುಕಿ ಭೂತಳವನ್ನು ಸೇರಿದ ಪಾಪಹಾರಿಯಾದ ಗಂಗಾವಾರಿಯು ನಿರ್ಮಲವಾಗಿ ಶೋಭಿಸಿತು. ಈಶ್ವರನ ಶಿರಸ್ಸಿನಿಂದ ಬಿದ್ದ ಗಂಗಾಜಲವು ಪವಿತ್ರವಾದದ್ದೆಂದು ಋಷಿಗಳೂ ಗಂಧರ್ವರೂ ಅದನ್ನು ಸ್ಪರ್ಶಿಸಿದರು (೨೭-೨೮). ಶಾಪವಶರಾಗಿ ಉಚ್ಚಸ್ಥಾನದಿಂದ ಭೂತಳಕ್ಕೆ ಬಿದ್ದವರು ಗಂಗಾಜಲದಲ್ಲಿ ಸ್ನಾನಮಾಡಿ ಶಾಪದಿಂದ ವಿಮುಕ್ತರಾದರು. ಅವರು ಪಾಪರಹಿತರಾಗಿ ತಮ್ಮ ಲೋಕಗಳನ್ನು ಸೇರಿದರು. ಗಂಗಾಜಲದಿಂದ ಜನರೆಲ್ಲರಿಗೂ ಹರ್ಷವಾಯಿತು (೨೯-೩೧). ಭಗೀರಥನು ದಿವ್ಯರಥವನ್ನೇರಿ

ದೇವಾಃ ಸರ್ಷಿಗಣಾಃ ಸರ್ವೇ ದೈತ್ಯದಾನವರಾಕ್ಷಸಾಃ ।
ಗಂಧರ್ವಯಕ್ಷಪ್ರವರಾಃ ಸಕಿಂನರಮಹೋರಗಾಃ ॥ ೩೩

ಸರ್ವಾಶ್ಚಾಪ್ಸರಸೋ ರಾಮ ಭಗೀರಥರಥಾನುಗಾಮ್ ।
ಗಂಗಾಮನ್ವಗಮನ್ ಪ್ರೀತಾಃ ಸರ್ವೇ ಜಲಚರಾಶ್ಚ ಯೇ ॥ ೩೪

ಯತೋ ಭಗೀರಥೋ ರಾಜಾ ತತೋ ಗಂಗಾ ಯಶಸ್ವಿನೀ ।
ಜಗಾಮ ಸರಿತಾಂ ಶ್ರೇಷ್ಠಾ ಸರ್ವಪಾಪಪ್ರಣಾಶಿನೀ ॥ ೩೫

ತತೋ ಹಿ ಯಜಮಾನಸ್ಯ ಜಹ್ನೋರದ್ಭುತಕರ್ಮಣಃ ।
ಗಂಗಾ ಸಂಪ್ಲಾವಯಾಮಾಸ ಯಜ್ಞವಾಟಂ ಮಹಾತ್ಮನಃ ॥ ೩೬

ತಸ್ಯಾವಲೇಪನಂ ಜ್ಞಾತ್ವಾ ಕ್ರುದ್ಧೋ ಯಜ್ವಾ ತು ರಾಘವ ।
ಅಪಿಬಚ್ಚ ಜಲಂ ಸರ್ವಂ ಗಂಗಾಯಾಃ ಪರಮಾದ್ಭುತಮ್ ॥ ೩೭

ತತೋ ದೇವಾಃ ಸಗಂಧರ್ವಾ ಋಷಯಶ್ಚ ಸುವಿಸ್ಮಿತಾಃ ।
ಪೂಜಯಂತಿ ಮಹಾತ್ಮಾನಂ ಜಹ್ನುಂ ಪುರುಷಸತ್ತಮಮ್ ॥ ೩೮

ಗಂಗಾಂ ಚಾನುನಯಂತಿ ಸ್ಮ ದುಹಿತೃತ್ವೇ ಮಹಾತ್ಮನಃ ।
ತತಸ್ತುಷ್ಟೋ ಮಹಾತೇಜಾಃ ಶ್ರೋತ್ರಾಭ್ಯಾಮಸೃಜತ್ ಪುನಃ ॥

---

ಮುಂದೆ ಹೋಗುತ್ತಿರಲು, ಗಂಗೆಯು ಅವನ ಹಿಂದೆ ಪ್ರವಹಿಸುತ್ತ ಹೋಯಿತು. ಆಗ ದೇವತೆಗಳು, ಋಷಿಗಳು, ದೈತ್ಯಗಂಧರ್ವಾದಿಗಳು ಮತ್ತು ಅಪ್ಸರೆಯರು ಗಂಗಾದೇವಿಯನ್ನು ಸಂತೋಷದಿಂದ ಹಿಂಬಾಲಿಸಿ ಹೋದರು (೩೨-೩೪). ಸರ್ವಪಾಪಪ್ರಣಾಶಿನಿಯಾದ ಗಂಗಾನದಿಯು ಹೀಗೆ ಹೋಗುತ್ತಿರಲು ಮಾರ್ಗದಲ್ಲಿ ಮಹಾತ್ಮನಾದ ಜಹ್ನುವು ಯಾಗಮಾಡುತ್ತಿದ್ದ ಸ್ಥಳವು ಕಾಣಿಸಿತು. ಈ ಗಂಗೆಯು ಆ ಯಜ್ಞಶಾಲೆಯನ್ನು ತೇಲಿಸಿಬಿಟ್ಟಳು (೩೫-೩೬). ರಾಘವ, ಅವಳ ಅಹಂಕಾರವನ್ನು ಕಂಡು ಜಹ್ನುವು ಕ್ರುದ್ಧನಾಗಿ ಗಂಗೆಯ ಸಕಲ ಜಲವನ್ನೂ ಕುಡಿದುಬಿಟ್ಟನು! ಜನರಿಗೆ ಅತ್ಯಾಶ್ಚರ್ಯವಾಯಿತು ವಿಸ್ಮಿತರಾದ ದೇವಗಂಧರ್ವಾದಿಗಳು ಜಹ್ನುವನ್ನು ಸ್ತೋತ್ರಮಾಡಿ ಗಂಗೆಯನ್ನು ಮಗಳಂತೆ ಕಾಣಬೇಕೆಂದು (ಅವಳನ್ನು ಕ್ಷಮಿಸುವಂತೆ) ಪ್ರಾರ್ಥಿಸಿದರು. ಆಗ ಆ ಮಹಾತ್ಮನು ಪ್ರಸನ್ನನಾಗಿ ತನ್ನ ಕಿವಿಗಳ

**ತಸ್ಮಾಜ್ಜಹ್ನುಸುತಾ ಗಂಗಾ ಪ್ರೋಚ್ಯತೇ ಜಾಹ್ನವೀತಿ ಚ ।**
**ಜಗಾಮ ಚ ಪುನರ್ಗಂಗಾ ಭಗೀರಥರಥಾನುಗಾ ॥** ೪೦

**ಸಾಗರಂ ಚಾಪಿ ಸಂಪ್ರಾಪ್ತಾ ಸಾ ಸರಿತ್ಪ್ರವರಾ ಯದಾ ।**
**ರಸಾತಲಮುಪಾಗಚ್ಛತ್ ಸಿದ್ಧ್ಯರ್ಥಂ ತಸ್ಯ ಕರ್ಮಣಃ ॥** ೪೧

**ಭಗೀರಥೋಽಪಿ ರಾಜರ್ಷಿರ್ಗಂಗಾಮಾದಾಯ ಯತ್ನತಃ ।**
**ಪಿತಾಮಹಾನ್ ಭಸ್ಮಕೃತಾನಪಶ್ಯದ್ದೀನಚೇತನಃ ॥** ೪೨

**ಅಥ ತದ್ಭಸ್ಮನಾಂ ರಾಶಿಂ ಗಂಗಾಸಲಿಲಮುತ್ತಮಮ್ ।**
**ಪ್ಲಾವಯದ್ ಧೂತಪಾಪ್ಮಾನಃ ಸ್ವರ್ಗಂ ಪ್ರಾಪ್ತಾ ರಘೂತ್ತಮ ॥**

**ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ತ್ರಿಚತ್ವಾರಿಂಶಃ ಸರ್ಗಃ**



ಮೂಲಕ ಅವಳನ್ನು ಹೊರಗೆಬಿಟ್ಟನು (೩೭-೩೯). ಆದ್ದರಿಂದಲೇ ಗಂಗೆಯನ್ನು ಜಹ್ನುಸುತೆಯೆಂದೂ ಜಾಹ್ನವಿಯೆಂದೂ ಕರೆಯುತ್ತಾರೆ. ಅನಂತರ ಗಂಗೆಯು ಭಗೀರಥನ ರಥದ ಹಿಂದೆಯೇ ಹೋಗುತ್ತ ಸಾಗರವನ್ನು ಸೇರಿದಳು ಅಲ್ಲಿಂದ ಭಗೀರಥನ ಕಾರ್ಯಸಿದ್ಧಿಗಾಗಿ ರಸಾತಲಕ್ಕೆ ಹೋದಳು (೪೦-೪೧). ಅಲ್ಲಿ ತನ್ನ ಮುತ್ತಾತಂದಿರು ಭಸ್ಮರಾಶಿಯಾಗಿ ಬಿದ್ದಿರುವುದನ್ನು ಕಂಡು ಭಗೀರಥನ ಮನಸ್ಸಿಗೆ ಬಹಳ ಯಾತನೆಯಾಯಿತು. ಆಮೇಲೆ ಭಸ್ಮರಾಶಿಯಮೇಲೆ ಗಂಗಾಜಲವು ಪ್ರವಹಿಸಲು ಸಗರಪುತ್ರರು ಪರಿಶುದ್ಧರಾಗಿ ಸದ್ಗತಿಯನ್ನು ಪಡೆದರು" (೪೨-೪೩).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ನಲವತ್ತುಮೂರನೆಯ ಸರ್ಗ



## ಚತುಶ್ಚತ್ವಾರಿಂಶಃ ಸರ್ಗಃ

### ಸಾಗರೋದ್ಧಾರಃ

ಸ ಗತ್ವಾ ಸಾಗರಂ ರಾಜಾ ಗಂಗಯಾನುಗತಸ್ತದಾ ।
ಪ್ರವಿವೇಶ ತಲಂ ಭೂಮೇರ್ಯತ್ರ ತೇ ಭಸ್ಮಸಾತ್ಕೃತಾಃ ॥ ೧

ಭಸ್ಮನ್ಯಥಾಪ್ಲುತೇ ರಾಮ ಗಂಗಾಯಾಃ ಸಲಿಲೇನ ವೈ ।
ಸರ್ವಲೋಕಪ್ರಭುರ್ಬ್ರಹ್ಮಾ ರಾಜಾನಮಿದಬ್ರವೀತ್ ॥ ೨

ತಾರಿತಾ ನರಶಾರ್ದೂಲ ದಿವಂ ಯಾತಾಶ್ಚ ದೇವವತ್ ।
ಷಷ್ಟಿಃ ಪುತ್ರಸಹಸ್ರಾಣಿ ಸಗರಸ್ಯ ಮಹಾತ್ಮನಃ ॥ ೩

ಸಾಗರಸ್ಯ ಜಲಂ ಲೋಕೇ ಯಾವತ್ ಸ್ಥಾಸ್ಯತಿ ಪಾರ್ಥಿವ ।
ಸಗರಸ್ಯಾತ್ಮಜಾಸ್ತಾವತ್ ಸ್ವರ್ಗೇ ಸ್ಥಾಸ್ಯಂತಿ ದೇವವತ್ ॥ ೪

ಇಯಂ ಚ ದುಹಿತಾ ಜ್ಯೇಷ್ಠಾ ತವ ಗಂಗಾ ಭವಿಷ್ಯತಿ ।
ತ್ವತ್ಕೃತೇನ ಚ ನಾಮ್ನಾಥ ಲೋಕೇ ಸ್ಥಾಸ್ಯತಿ ವಿಶ್ರುತಾ ॥ ೫

## ಸರ್ಗ ೪೪

ಬ್ರಹ್ಮನು ಪ್ರತ್ಯಕ್ಷನಾಗಿ ಭಗೀರಥನನ್ನು ಶ್ಲಾಘಿಸುವುದು.
ಗಂಗಾವತರಣದ ಫಲಶ್ರುತಿ.

ವಿಶ್ವಾಮಿತ್ರರು ಹೇಳಿದರು: "ರಾಮ, ಹೀಗೆ ಗಂಗೆಯು ಭಗೀರಥನನ್ನು ಅನುಸರಿಸಿ ಪಾತಾಳಕ್ಕೆ ಹೋಗಿ ಸಗರಪುತ್ರರ ಭಸ್ಮದಮೇಲೆ ಪ್ರವಹಿಸಲು ಬ್ರಹ್ಮನು ಪ್ರತ್ಯಕ್ಷನಾಗಿ ರಾಜನನ್ನುದ್ದೇಶಿಸಿ "ಪುರುಷಶ್ರೇಷ್ಠ, ಸಗರನ ಅರುವತ್ತುಸಾವಿರ ಪುತ್ರರು ನಿನ್ನಿಂದ ಉದ್ಧಾರವಾಗಿ ದೇವತೆಗಳಂತೆ ಸ್ವರ್ಗವನ್ನೇರಿದರು (೧-೩). ಈ ಸಾಗರದಲ್ಲಿ ಜಲವಿರುವವರೆಗೂ ಅವರು ಸ್ವರ್ಗದಲ್ಲಿ ಸುಖದಲ್ಲಿರುತ್ತಾರೆ. ಈ ಗಂಗೆಯು ನಿನ್ನ ಹಿರಿಯ ಮಗಳಂತಾದಳು. ಅವಳು ನಿನ್ನ ಹೆಸರಿನಿಂದ ಭಾಗೀರಥೀ ಎಂದು ಹೆಸರು ಪಡೆಯಲಿ.

ಗಂಗಾ ತ್ರಿಪಥಗಾ ನಾಮ ದಿವ್ಯಾ ಭಾಗೀರಥೀತಿ ಚ ।
ತ್ರೀನ್ ಪಥೋ ಭಾವಯಂತೀತಿ ತತಸ್ತ್ರಿಪಥಗಾ ಸ್ಮೃತಾ ॥ ೬

ಪಿತಾಮಹಾನಾಂ ಸರ್ವೇಷಾಂ ತ್ವಮತ್ರ ಮನುಜಾಧಿಪ ।
ಕುರುಷ್ವ ಸಲಿಲಂ ರಾಜನ್ ಪ್ರತಿಜ್ಞಾಮಪವರ್ಜಯ ॥ ೭

ಪೂರ್ವಕೇಣ ಹಿ ತೇ ರಾಜಂಸ್ತೇನಾತಿಯಶಸಾ ತದಾ ।
ಧರ್ಮಿಣಾಂ ಪ್ರವರೇಣಾಪಿ ನೈಷ ಪ್ರಾಪ್ತೋ ಮನೋರಥಃ ॥ ೮

ತಥೈವಾಂಶುಮತಾ ತಾತ ಲೋಕೇಽಪ್ರತಿಮತೇಜಸಾ ।
ಗಂಗಾಂ ಪ್ರಾರ್ಥಯತಾ ನೇತುಂ ಪ್ರತಿಜ್ಞಾ ನಾಪವರ್ಜಿತಾ ॥ ೯

ರಾಜರ್ಷಿಣಾ ಗುಣವತಾ ಮಹರ್ಷಿಸಮತೇಜಸಾ ।
ಮತ್ತುಲ್ಯತಪಸಾ ಚೈವ ಕ್ಷತ್ರಧರ್ಮೇ ಸ್ಥಿತೇನ ಚ ॥ ೧೦

ದಿಲೀಪೇನ ಮಹಾಭಾಗ ತವ ಪಿತ್ರಾತಿತೇಜಸಾ ।
ಪುನರ್ನ ಶಕಿತಾ ನೇತುಂ ಗಂಗಾಂ ಪ್ರಾರ್ಥಯತಾನಘ ॥ ೧೧

ಸಾ ತ್ವಯಾ ಸಮತಿಕ್ರಾಂತಾ ಪ್ರತಿಜ್ಞಾ ಪುರುಷರ್ಷಭ ।
ಪ್ರಾಪ್ತೋಽಸಿ ಪರಮಂ ಲೋಕೇ ಯಶಃ ಪರಮಸಂಮತಮ್ ॥ ೧೨

---

ಮೂರು ಮಾರ್ಗಗಳಲ್ಲಿ ಪ್ರವಹಿಸಿದ್ದರಿಂದ ತ್ರಿಪಥಗಾ ಎಂದು ಪ್ರಸಿದ್ಧಳಾಗುವಳು (೪-೬). ಈಗ ನಿನ್ನ ಪಿತಾಮಹರಿಗೆ ತರ್ಪಣವನ್ನು ಕೊಟ್ಟು ನಿನ್ನ ಪ್ರತಿಜ್ಞೆಯನ್ನು ಸಮಾಪ್ತಿಗೊಳಿಸು ಕೀರ್ತಿಶಾಲಿಯೂ ಧರ್ಮಿಷ್ಠನೂ ಆದ ನಿನ್ನ ಪೂರ್ವಜ ಸಗರನಿಗೆ ಈ ಮನೋರಥವನ್ನು ಸಾಧಿಸಲು ಆಗಲಿಲ್ಲ. ಮಹಾವೀರನಾದ ಅಂಶುಮಂತನಿಗೂ ಗಂಗೆಯನ್ನು ತರಲು ಸಾಧ್ಯವಾಗದೆ ಪ್ರತಿಜ್ಞೆಯು ನೆರವೇರಲಿಲ್ಲ (೭-೯). ಅನಂತರ ನಿನ್ನ ತಂದೆಯಾದ ದಿಲೀಪನಿಗೂ ಗಂಗಾವತರಣವು ಸಾಧ್ಯವಾಗಲಿಲ್ಲ. ಅವನಾದರೋ ರಾಜರ್ಷಿ; ಗುಣವಂತ; ತಪಸ್ಸಿನಲ್ಲಿ ನನಗೆ ಸದೃಶನಾದವನು; ಕ್ಷಾತ್ರಧರ್ಮನಿರತ; ಮಹಾತೇಜಸ್ವಿ (೧೦-೧೧). ಅಂತಹ ದುಃಸಾಧ್ಯವಾದ ಪ್ರತಿಜ್ಞೆಯನ್ನು ನೀನು ಸಾಧಿಸಿದ್ದೀಯೆ. ಪುರುಷಶ್ರೇಷ್ಠ, ಮಹಾಜನರು ಮೆಚ್ಚುವಂತೆ

ಯಚ್ಚ ಗಂಗಾವತರಣಂ ತ್ವಯಾ ಕೃತಮರಿಂದಮ ।
ಅನೇನ ಚ ಭವಾನ್ ಪ್ರಾಪ್ತೋ ಧರ್ಮಸ್ಯಾಯತನಂ ಮಹತ್ ॥

ಪ್ಲಾವಯಸ್ವ ತ್ವಮಾತ್ಮಾನಂ ನರೋತ್ತಮ ಸದೋಚಿತೇ ।
ಸಲಿಲೇ ಪುರುಷವ್ಯಾಘ್ರ ಶುಚಿಃ ಪುಣ್ಯಫಲೋ ಭವ ॥ ೧೪

ಪಿತಾಮಹಾನಾಂ ಸರ್ವೇಷಾಂ ಕುರುಷ್ವ ಸಲಿಲಕ್ರಿಯಾಮ್ ।
ಸ್ವಸ್ತಿ ತೇಽಸ್ತು ಗಮಿಷ್ಯಾಮಿ ಸ್ವಂ ಲೋಕಂ ಗಮ್ಯತಾಂ ನೃಪ ॥ ೧೫

ಇತ್ಯೇವಮುಕ್ತ್ವಾ ದೇವೇಶಃ ಸರ್ವಲೋಕಪಿತಾಮಹಃ ।
ಯಥಾಗತಂ ತಥಾಗಚ್ಛದ್ದೇವಲೋಕಂ ಮಹಾಯಶಾಃ ॥ ೧೬

ಭಗೀರಥೋಽಪಿ ರಾಜರ್ಷಿಃ ಕೃತ್ವಾ ಸಲಿಲಮುತ್ತಮಮ್ ।
ಯಥಾಕ್ರಮಂ ಯಥಾನ್ಯಾಯಂ ಸಾಗರಾಣಾಂ ಮಹಾಯಶಾಃ ॥

ಕೃತೋದಕಃ ಶುಚೀ ರಾಜಾ ಸ್ವಪುರಂ ಪ್ರವಿವೇಶ ಹ ।
ಸಮೃದ್ಧಾರ್ಥೋ ರಘುಶ್ರೇಷ್ಠ ಸ್ವರಾಜ್ಯಂ ಪ್ರಶಶಾಸ ಹ ॥ ೧೮

---

ದೊಡ್ಡ ಕೀರ್ತಿಯನ್ನು ಸಂಪಾದಿಸಿದೆ ಗಂಗಾವತರಣವನ್ನು ಮಾಡಿಸಿದೆ. ಧರ್ಮದ ಪರಮಾವಧಿಯನ್ನು ಮುಟ್ಟಿದ್ದೀಯೆ (೧೨-೧೩). ಸರ್ವಕಾಲದಲ್ಲಿಯೂ* ಸ್ನಾನಯೋಗ್ಯವಾದ ಈ ಗಂಗಾಜಲದಲ್ಲಿ ಸ್ನಾನಮಾಡು ಪುಣ್ಯಫಲವನ್ನನುಭವಿಸು. ಶುಚಿಯಾಗಿ ನಿನ್ನ ಎಲ್ಲ ಪ್ರಪಿತಾಮಹರಿಗೂ ತರ್ಪಣವನ್ನು ಕೊಟ್ಟು ನಿನ್ನ ರಾಜಧಾನಿಗೆ ಹೋಗು ನಾನು ಹೊರಡುತ್ತೇನೆ. ರಾಜ, ನಿನಗೆ ಮಂಗಳವಾಗಲಿ" ಎಂದು ಹೇಳಿ ತನ್ನ ಲೋಕಕ್ಕೆ ಹೊರಟುಹೋದನು (೧೪-೧೬). ಇತ್ತ ಭಗೀರಥನು ಶುಚಿಭೂತನಾಗಿ ಸಗರಪುತ್ರರಿಗೆ ಶಾಸ್ತ್ರೋಕ್ತವಾದ ರೀತಿಯಲ್ಲಿ ತರ್ಪಣವನ್ನರ್ಪಿಸಿ ತನ್ನ ರಾಜಧಾನಿಗೆ ಹಿಂತಿರುಗಿದನು. ತನ್ನ ಮಹೋದ್ದೇಶವನ್ನು ಸಾಧಿಸಿ ರಾಜ್ಯ

* ಗಂಗಾನದಿಗೆ ರಜೋದೋಷವಿಲ್ಲ. ಎಲ್ಲ ಕಾಲದಲ್ಲಿಯೂ ಸ್ನಾನಮಾಡಬಹುದು. ಇತರ ನದಿಗಳಿಗೆ ರಜೋದೋಷವಿರುವುದರಿಂದ ಕರ್ಕಾಟಕ ಸಿಂಹ ಮಾಸಗಳಲ್ಲಿ ಸ್ನಾನವು ನಿಷಿದ್ಧ

ಪ್ರಮುಮೋದ ಚ ಲೋಕಸ್ತಂ ನೃಪಮಾಸಾದ್ಯ ರಾಘವ ।
ನಷ್ಟಶೋಕಃ ಸಮೃದ್ಧಾರ್ಥೋ ಬಭೂವ ವಿಗತಜ್ವರಃ ॥ ೧೯
ಏಷ ತೇ ರಾಮ ಗಂಗಾಯಾ ವಿಸ್ತರೋಽಭಿಹಿತೋ ಮಯಾ ।
ಸ್ವಸ್ತಿ ಪ್ರಾಪ್ನುಹಿ ಭದ್ರಂ ತೇ ಸಂಧ್ಯಾಕಾಲೋಽತಿವರ್ತತೇ ॥ ೨೦
ಧನ್ಯಂ ಯಶಸ್ಯಮಾಯುಷ್ಯಂ ಪುತ್ರ್ಯಂ ಸ್ವರ್ಗ್ಯಮತೀವ ಚ ।
ಯಃ ಶ್ರಾವಯತಿ ವಿಪ್ರೇಷು ಕ್ಷತ್ರಿಯೇಷ್ವಿತರೇಷು ಚ ॥ ೨೧
ಪ್ರೀಯಂತೇ ಪಿತರಸ್ತಸ್ಯ ಪ್ರೀಯಂತೇ ದೈವತಾನಿ ಚ ।
ಇದಮಾಖ್ಯಾನಮವ್ಯಗ್ರೋ ಗಂಗಾವತರಣಂ ಶುಭಮ್ ॥ ೨೨
ಯಃ ಶೃಣೋತಿ ಚ ಕಾಕುತ್ಸ್ಥ ಸರ್ವಾನ್ ಕಾಮಾನವಾಪ್ನುಯಾತ್
ಸರ್ವೇ ಪಾಪಾಃ ಪ್ರಣಶ್ಯಂತಿ ಆಯುಃ ಕೀರ್ತಿಶ್ಚ ವರ್ಧತೇ ॥ ೨೩

**ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಚತುಶ್ಚತ್ವಾರಿಂಶಃ ಸರ್ಗಃ**



ಭಾರದಲ್ಲಿ ಉದ್ಯುಕ್ತನಾದನು (೧೭-೧೮) ರಾಮ, ಆ ರಾಜನು ಬಂದಮೇಲೆ ಪ್ರಜೆಗಳಿಗೆ ಅವನ ವಿರಹಶೋಕವು ಕಳೆಯಿತು. ಅವರೆಲ್ಲರೂ ಭಗೀರಥನ ರಾಜ್ಯದಲ್ಲಿ ಯಾವ ಕಷ್ಟನಷ್ಟಗಳೂ ಇಲ್ಲದೆ ಸಂತೋಷದಲ್ಲಿದ್ದರು (೧೯). ರಾಘವ, ಗಂಗಾನದಿಯ ವೃತ್ತಾಂತವನ್ನು ವಿಸ್ತಾರವಾಗಿ ಹೇಳಿದ್ದೇನೆ. ಒಳ್ಳೆಯದು. ಇನ್ನು ಸಂಜೆಯಾಯಿತು. ಈ ಆಖ್ಯಾನವು ಮಹಾಪುಣ್ಯಕರವಾದದ್ದು. ಇದನ್ನು ಜನರಿಗೆ ಹೇಳಿದರೆ ಪಿತೃಗಳೂ ದೇವತೆಗಳೂ ಸುಪ್ರೀತರಾಗುತ್ತಾರೆ. ಈ ಗಂಗಾವತರಣವು ಧನ, ಕೀರ್ತಿ ಮುಂತಾದ ಶುಭ ಫಲಗಳನ್ನು ನೀಡುವುದು. ಪಾಪವನ್ನು ಪರಿಹರಿಸುವುದು. ಇದರಿಂದ ಇಷ್ಟಾರ್ಥವು ಸಿದ್ಧಿಸುವುದು" (೨೦-೨೩).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ನಲವತ್ತುನಾಲ್ಕನೆಯ ಸರ್ಗ



## ಪಂಚಚತ್ವಾರಿಂಶಃ ಸರ್ಗಃ

### ಅಮೃತೋತ್ಪತ್ತಿಃ

ವಿಶ್ವಾಮಿತ್ರವಚಃ ಶ್ರುತ್ವಾ ರಾಘವಃ ಸಹಲಕ್ಷ್ಮಣಃ ।
ವಿಸ್ಮಯಂ ಪರಮಂ ಗತ್ವಾ ವಿಶ್ವಾಮಿತ್ರಮಥಾಬ್ರವೀತ್ ॥ ೧

ಅತ್ಯದ್ಭುತಮಿದಂ ಬ್ರಹ್ಮನ್ ಕಥಿತಂ ಪರಮಂ ತ್ವಯಾ ।
ಗಂಗಾವತರಣಂ ಪುಣ್ಯಂ ಸಾಗರಸ್ಯಾಪಿ ಪೂರಣಮ್ ॥ ೨

ಕ್ಷಣಭೂತೇವ ನೌ ರಾತ್ರಿಃ ಸಂವೃತ್ತೇಯಂ ಮಹಾತಪಃ ।
ಇಮಾಂ ಚಿಂತಯತೋಃ ಸರ್ವಾಂ ನಿಖಿಲೇನ ಕಥಾಂ ತವ ॥ ೩

ತಸ್ಯ ಸಾ ಶರ್ವರೀ ಸರ್ವಾ ಸಹ ಸೌಮಿತ್ರಿಣಾ ತದಾ ।
ಜಗಾಮ ಚಿಂತಯಾನಸ್ಯ ವಿಶ್ವಾಮಿತ್ರಕಥಾಂ ಶುಭಾಮ್ ॥ ೪

ತತಃ ಪ್ರಭಾತೇ ವಿಮಲೇ ವಿಶ್ವಾಮಿತ್ರಂ ಮಹಾಮುನಿಮ್ ।
ಉವಾಚ ರಾಘವೋ ವಾಕ್ಯಂ ಕೃತಾಹ್ನಿಕಮರಿಂದಮಃ ॥ ೫

## ಸರ್ಗ ೪೫

### ರಾಮಲಕ್ಷ್ಮಣರೊಡನೆ ವಿಶಾಲಾನಗರಕ್ಕೆ ವಿಶ್ವಾಮಿತ್ರರ ಪ್ರಯಾಣ
### ಕ್ಷೀರಸಮುದ್ರಮಥನದ ವರ್ಣನೆ

ವಿಶ್ವಾಮಿತ್ರರು ಹೇಳಿದ ಆಖ್ಯಾನವನ್ನು ಕೇಳಿ ರಾಮಲಕ್ಷ್ಮಣರು ವಿಸ್ಮಿತರಾದರು ರಾಮನು "ಮಹರ್ಷಿಗಳೆ, ಅತ್ಯದ್ಭುತವಾದ ಕಥೆಯನ್ನು ಹೇಳಿದಿರಿ. ಸಮುದ್ರವನ್ನೇ ತುಂಬಿದ ಗಂಗಾವತರಣದ ಪುಣ್ಯಕಥೆ ಇದು. ನಿಮ್ಮ ಕಥೆಯನ್ನಾಲಿಸುತ್ತಿದ್ದ ನಮಗೆ ಒಂದು ಕ್ಷಣದಂತೆ ಕಾಲವು ಕಳೆದು ಹೋಯಿತು ರಾತ್ರಿಯಾಗಿಬಿಟ್ಟದೆ!" ಎಂದನು (೧-೩). ವಿಶ್ವಾಮಿತ್ರರು ಹೇಳಿದ ಗಂಗಾವತರಣದ ಮನೋಜ್ಞಕಥೆಯ ವಿಷಯವಾಗಿ ಶ್ರೀರಾಮನು ಲಕ್ಷ್ಮಣನೊಡನೆ ಮಾತನಾಡುತ್ತಿರುವಾಗಲೇ ರಾತ್ರಿ ಕಳೆದುಹೋಯಿತು! ಮಾರನೆಯ ದಿನ ಪ್ರಾತಃಕಾಲ ಪ್ರಾತರಾಹ್ನಿಕವನ್ನು ಮಾಡಿ ಕುಳಿತಿದ್ದ ವಿಶ್ವಾಮಿತ್ರರ ಬಳಿಗೆ ಶ್ರೀರಾಮನು ಬಂದು "ತಪೋಧನರೆ, (ಆ ಪುಣ್ಯಕಥೆ

ಗತಾ ಭಗವತೀ ರಾತ್ರಿಃ ಶ್ರೋತವ್ಯಂ ಪರಮಂ ಶ್ರುತಮ್ ।
ತರಾಮ ಸರಿತಾಂ ಶ್ರೇಷ್ಠಾಂ ಪುಣ್ಯಾಂ ತ್ರಿಪಥಗಾಂ ನದೀಮ್ ॥ ೬

ನೌರೇಷಾ ಹಿ ಸುಖಾಸ್ತೀರ್ಣಾ ಋಷೀಣಾಂ ಪುಣ್ಯಕರ್ಮಣಾಮ್ ।
ಭಗವಂತಮಿಹ ಪ್ರಾಪ್ತಂ ಜ್ಞಾತ್ವಾ ತ್ವರಿತಮಾಗತಾ ॥ ೭

ತಸ್ಯ ತದ್ವಚನಂ ಶ್ರುತ್ವಾ ರಾಘವಸ್ಯ ಮಹಾತ್ಮನಃ ।
ಸಂತಾರಂ ಕಾರಯಾಮಾಸ ಸರ್ಷಿಸಂಘಃ ಸರಾಘವಃ ॥ ೮

ಉತ್ತರಂ ತೀರಮಾಸಾದ್ಯ ಸಂಪೂಜ್ಯರ್ಷಿಗಣಂ ತದಾ ।
ಗಂಗಾಕೂಲೇ ನಿವಿಷ್ಟಾಸ್ತೇ ವಿಶಾಲಾಂ ದದೃಶುಃ ಪುರೀಮ್ ॥ ೯

ತತೋ ಮುನಿವರಸ್ತೂರ್ಣಂ ಜಗಾಮ ಸಹರಾಘವಃ ।
ವಿಶಾಲಾಂ ನಗರೀಂ ರಮ್ಯಾಂ ದಿವ್ಯಾಂ ಸ್ವರ್ಗೋಪಮಾಂ ತದಾ ॥

ಅಥ ರಾಮೋ ಮಹಾಪ್ರಾಜ್ಞೋ ವಿಶ್ವಾಮಿತ್ರಂ ಮಹಾಮುನಿಮ್
ಪಪ್ರಚ್ಛ ಪ್ರಾಂಜಲಿರ್ಭೂತ್ವಾ ವಿಶಾಲಾಮುತ್ತಮಾಂ ಪುರೀಮ್ ॥

---

ಯನ್ನು ಚಿಂತಿಸುತ್ತಲೇ ನನಗೂ ಲಕ್ಷ್ಮಣನಿಗೂ) ರಾತ್ರಿಯು ಕಳೆದು ಹೋಯಿತು ಕೇಳಲೇಬೇಕಾದ ಆ ಕಥೆಯನ್ನು ಕೇಳಿದ್ದಾಯಿತು. ಈಗ ಪುಣ್ಯಕರವಾದ ಈ ತ್ರಿಪಥಗಾನದಿಯನ್ನು ದಾಟೋಣ (೪-೬). ತಾವು ಇಲ್ಲಿಗೆ ದಯಮಾಡಿಸಿರುವುದನ್ನು ತಿಳಿದು ಪುಣ್ಯಾತ್ಮರಾದ ಋಷಿಗಳು ಏರ್ಪಡಿಸಿದ ನೌಕೆಯು ಸುಖಾಸನಗಳಿಂದ ಸಜ್ಜಾಗಿ ಬಂದು ನಿಂತಿದೆ" ಎಂದು ಹೇಳಿದನು. ವಿಶ್ವಾಮಿತ್ರರು ಋಷಿಗಣಸಹಿತವಾಗಿ ನೌಕೆಯಲ್ಲಿ ಕುಳಿತು (ನಾವಿಕರ ಸಹಾಯದಿಂದ) ನದಿಯನ್ನು ದಾಟಿದರು (೭-೮). ನದಿಯ ಉತ್ತರ ತೀರವನ್ನು ನೇರಿ (ನೌಕೆಯನ್ನೇರ್ಪಡಿಸಿದ) ಋಷಿಗಳಿಗೆ ವಂದಿಸಿ ಮುಂದೆ ಹೋಗುತ್ತಿರುವಾಗ ವಿಶಾಲವೆಂಬ ನಗರವು ಅವರಿಗೆ ಗೋಚರಿಸಿತು. ವಿಶ್ವಾಮಿತ್ರರು ರಾಮಲಕ್ಷ್ಮಣರೊಡನೆ ಸ್ವರ್ಗಸದೃಶವಾಗಿ ರಮಣೀಯವಾಗಿದ್ದ ಆ ನಗರದ ಕಡೆಗೆ ಬೇಗಬೇಗನೆ ನಡೆಯಲಾರಂಭಿಸಿದರು (೯-೧೦). ಶ್ರೀರಾಮನು ಪ್ರಾಂಜಲಿಯಾಗಿ "ಮುನಿಗಳೆ, ಈ ವಿಶಾಲಾನಗರ ಯಾವುದು?

ಕತರೋ ರಾಜವಂಶೋಽಯಂ ವಿಶಾಲಾಯಾಂ ಮಹಾಮುನೇ ।
ಶ್ರೋತುಮಿಚ್ಛಾಮಿ ಭದ್ರಂ ತೇ ಪರಂ ಕೌತೂಹಲಂ ಹಿ ಮೇ ॥ ೧೨

ತಸ್ಯ ತದ್ವಚನಂ ಶ್ರುತ್ವಾ ರಾಮಸ್ಯ ಮುನಿಪುಂಗವಃ ।
ಆಖ್ಯಾತುಂ ತತ್ ಸಮಾರೇಭೇ ವಿಶಾಲಸ್ಯ ಪುರಾತನಮ್ ॥ ೧೩

ಶ್ರೂಯತಾಂ ರಾಮ ಶಕ್ರಸ್ಯ ಕಥಾಂ ಕಥಯತಃ ಶ್ರುತಾಮ್ ।
ಅಸ್ಮಿನ್ ದೇಶೇ ತು ಯದ್ವೃತ್ತಂ ಶೃಣು ತತ್ತ್ವೇನ ರಾಘವ ॥ ೧೪

ಪೂರ್ವಂ ಕೃತಯುಗೇ ರಾಮ ದಿತೇಃ ಪುತ್ರಾ ಮಹಾಬಲಾಃ ।
ಅದಿತೇಶ್ಚ ಮಹಾಭಾಗ ವೀರ್ಯವಂತಃ ಸುಧಾರ್ಮಿಕಾಃ ॥ ೧೫

ತತಸ್ತೇಷಾಂ ನರವ್ಯಾಘ್ರ ಬುದ್ಧಿರಾಸೀನ್ಮಹಾತ್ಮನಾಮ್ ।
ಅಮರಾ ಅಜರಾಶ್ಚೈವ ಕಥಂ ಸ್ಯಾಮ ನಿರಾಮಯಾಃ ॥ ೧೬

ತೇಷಾಂ ಚಿಂತಯತಾಂ ರಾಮ ಬುದ್ಧಿರಾಸೀನ್ಮಹಾತ್ಮನಾಮ್ ।
ಕ್ಷೀರೋದಮಥನಂ ಕೃತ್ವಾ ರಸಂ ಪ್ರಾಪ್ಸ್ಯಾಮ ತತ್ರ ವೈ ॥ ೧೭

ತತೋ ನಿಶ್ಚಿತ್ಯ ಮಥನಂ ಯೋಕ್ತ್ರಂ ಕೃತ್ವಾ ಚ ವಾಸುಕಿಮ್ ।
ಮಂಥಾನಂ ಮಂದರಂ ಕೃತ್ವಾ ಮಮಂಥುರಮಿತೌಜಸಃ ॥ ೧೮

---

ಇಲ್ಲಿರತಕ್ಕ ರಾಜವಂಶದ ವಿಷಯವೇನು? ಇದನ್ನು ತಿಳಿಯಲು ನನಗೆ ಬಹಳ ಕುತೂಹಲ" ಎಂದು ನುಡಿದನು. ಆಗ ವಿಶ್ವಾಮಿತ್ರರು ಆ ನಗರದ ಪ್ರಾಚೀನ ವೃತ್ತಾಂತವನ್ನು ಆರಂಭಿಸಿದರು (೧೧-೧೩). "ರಾಘವ, ಇದರ ವಿಷಯವನ್ನು ಹೇಳುತ್ತೇನೆ. ಇದಕ್ಕೆ ಸಂಬಂಧಿಸಿದ ಇಂದ್ರನ ಕಥೆಯನ್ನು ಮೊದಲು ಕೇಳು ಇದು ಕೃತಯುಗದ ವಿಷಯ. ದಿತಿ ಮತ್ತು ಅದಿತಿಗಳಿಗೆ ಬಲಶಾಲಿಗಳಾದ ಬಹುಮಂದಿ ಪುತ್ರರಿದ್ದರು. ಅವರಲ್ಲಿ ಅದಿತಿಯ ಮಕ್ಕಳು ಧಾರ್ಮಿಕರು (೧೪-೧೫). ಹೀಗಿರುವಾಗ ಅವರ ಮನಸ್ಸಿನಲ್ಲಿ "ನಾವು ಮರಣ, ಮುಪ್ಪು, ರೋಗ—ಈ ಮೂರನ್ನು ಜಯಿಸಬೇಕು. ಇದು ಹೇಗೆ ಸಾಧ್ಯ?" ಎಂದು ಆಲೋಚನೆ ಹುಟ್ಟಿತು ಆ ಧೀರರು "ಕ್ಷೀರಸಮುದ್ರವನ್ನು ಕಡೆದು ರಸಾಯನವನ್ನು ತೆಗೆಯಬೇಕು" ಎಂದು ನಿಶ್ಚಯಿಸಿದರು (೧೬-೧೭). ವಾಸುಕಿಯನ್ನು ಹಗ್ಗವಾಗಿ, ಮಂದರಪರ್ವತವನ್ನು ಕಡೆಗೋಲಾಗಿ ಮಾಡಿಕೊಂಡು ಆ ವೀರರು ಕ್ಷೀರಸಮುದ್ರವನ್ನು ಕಡೆಯಲಾರಂಭಿಸಿದರು. ಹೀಗೆ

ಅಥ ವರ್ಷಸಹಸ್ರೇಣ ಯೋಕ್ತ್ರಸರ್ಪಶಿರಾಂಸಿ ಚ ।
ವಮನ್ತ್ಯತಿವಿಷಂ ತತ್ರ ದದಂಶುರ್ದಶನೈಃ ಶಿಲಾಃ ॥ ೧೯

ಉತ್ಪಪಾತಾಗ್ನಿಸಂಕಾಶಂ ಹಾಲಾಹಲಮಹಾವಿಷಮ್ ।
ತೇನ ದಗ್ಧಂ ಜಗತ್ ಸರ್ವಂ ಸದೇವಾಸುರಮಾನುಷಮ್ ॥ ೨೦

ಅಥ ದೇವಾ ಮಹಾದೇವಂ ಶಂಕರಂ ಶರಣಾರ್ಥಿನಃ ।
ಜಗ್ಮುಃ ಪಶುಪತಿಂ ರುದ್ರ ತ್ರಾಹಿ ತ್ರಾಹೀತಿ ತುಷ್ಟುವುಃ ॥ ೨೧

ಏವಮುಕ್ತಸ್ತತೋ ದೇವೈರ್ದೇವದೇವೇಶ್ವರಃ ಪ್ರಭುಃ ।
ಪ್ರಾದುರಾಸೀತ್ ತತೋಽತ್ರೈವ ಶಂಖಚಕ್ರಧರೋ ಹರಿಃ ॥ ೨೨

ಉವಾಚೈನಂ ಸ್ಮಿತಂ ಕೃತ್ವಾ ರುದ್ರಂ ಶೂಲಭೃತಂ ಹರಿಃ ।
ದೈವತೈರ್ಮಥ್ಯಮಾನೇ ತು ಯತ್ಪೂರ್ವಂ ಸಮುಪಸ್ಥಿತಮ್ ॥ ೨೩

ತತ್ತ್ವದೀಯಂ ಸುರಶ್ರೇಷ್ಠ ಸುರಾಣಾಮಗ್ರತೋ ಹಿ ಯತ್ ।
ಅಗ್ರಪೂಜಾಮಿಮಾಂ ಮತ್ವಾ ಗೃಹಾಣೇದಂ ವಿಷಂ ಪ್ರಭೋ ॥ ೨೪

---

ಸಾವಿರ ವರ್ಷ ಕಳೆಯಿತು. ಹಗ್ಗವಾಗಿದ್ದ ವಾಸುಕಿಸರ್ಪವು (ಘರ್ಷಣೆಯನ್ನು ತಡೆಯಲಾರದೆ) ಹೆಡೆಗಳಿಂದ ವಿಷವನ್ನು ಕಕ್ಕುತ್ತ ಹಲ್ಲುಗಳಿಂದ ಬಂಡೆಗಳನ್ನು ಕಚ್ಚಿತು (೧೮–೧೯). ಆಗ ಬೆಂಕಿಯಂತೆ ಉಗ್ರವಾದ ಹಾಲಾಹಲವೆಂಬ ಘೋರ ವಿಷವು ಹೊರಹೊಮ್ಮಿತು. ಅದು ದೇವಾಸುರಮನುಷ್ಯರ ಮೂರು ಲೋಕಗಳನ್ನೂ ಸುಡಲಾರಂಭಿಸಿತು. ದೇವತೆಗಳು ಮಹಾದೇವನಾದ ಶಂಕರನನ್ನು ಮರೆಹೊಕ್ಕು 'ತ್ರಾಹಿ ತ್ರಾಹಿ' ಎನ್ನುತ್ತ ಸ್ತುತಿಸಿದರು (೨೦–೨೧). ಆಗ ದೇವದೇವೇಶ್ವರನಾದ ಸ್ವಾಮಿಯು ಪ್ರತ್ಯಕ್ಷನಾದನು. ಅಷ್ಟರಲ್ಲಿ ಶಂಖಚಕ್ರಧಾರಿಯಾದ ಹರಿಯು ಕಾಣಿಸಿಕೊಂಡು ನಗುತ್ತ ರುದ್ರನನ್ನು ಕುರಿತು "ದೇವೋತ್ತಮ, ಸಮುದ್ರಮಥನದಲ್ಲಿ ಮೊದಲು ಹುಟ್ಟಿದ್ದು ನಿನಗೆ ಸಲ್ಲಬೇಕು. ಏಕೆಂದರೆ, ನೀನು ದೇವತೆಗಳಲ್ಲಿ ಶ್ರೇಷ್ಠನಾದವನು. ಇದೇ ಅಗ್ರಪೂಜೆ! ವಿಷವನ್ನು ಸ್ವೀಕರಿಸು!" ಎಂದು ಹೇಳಿ ಅಂತರ್ಧಾನ ಹೊಂದಿದನು (೨೨–೨೪).

**ಇತ್ಯುಕ್ತ್ವಾ ಚ ಸುರಶ್ರೇಷ್ಠಸ್ತತ್ರೈವಾಂತರಧೀಯತ ।**
**ದೇವತಾನಾಂ ಭಯಂ ದೃಷ್ಟ್ವಾ ಶ್ರುತ್ವಾವಾಕ್ಯಂ ತು ಶಾರ್ಙ್ಗಿಣಃ॥**

**ಹಾಲಾಹಲಂ ವಿಷಂ ಘೋರಂ ಸ ಜಗ್ರಾಹಾಮೃತೋಪಮಮ್ ।**
**ದೇವಾನ್ ವಿಸೃಜ್ಯ ದೇವೇಶೋ ಜಗಾಮ ಭಗವಾನ್ ಹರಃ ॥ ೨೬**

**ತತೋ ದೇವಾಸುರಾಃ ಸರ್ವೇ ಮಮಂಥೂ ರಘುನಂದನ ।**
**ಪ್ರವಿವೇಶಾಥ ಪಾತಾಲಂ ಮಂಥಾನಃ ಪರ್ವತೋತ್ತಮಃ ॥ ೨೭**

**ತತೋ ದೇವಾಃ ಸಗಂಧರ್ವಾಸ್ತುಷ್ಟುವುರ್ಮಧುಸೂದನಮ್ ।**
**ತ್ವಂ ಗತಿಃ ಸರ್ವಭೂತಾನಾಂ ವಿಶೇಷೇಣ ದಿವೌಕಸಾಮ್ ॥ ೨೮**

**ಪಾಲಯಾಸ್ಮಾನ್ ಮಹಾಬಾಹೋ ಗಿರಿಮುದ್ಧರ್ತುಮರ್ಹಸಿ ।**
**ಇತಿ ಶ್ರುತ್ವಾ ಹೃಷೀಕೇಶಃ ಕಾಮಠಂ ರೂಪಮಾಸ್ಥಿತಃ ॥ ೨೯**

**ಪರ್ವತಂ ಪೃಷ್ಠತಃ ಕೃತ್ವಾ ಶಿಶ್ಯೇ ತತ್ರೋದಧೌ ಹರಿಃ ।**
**ಪರ್ವತಾಗ್ರಂ ತು ಲೋಕಾತ್ಮಾ ಹಸ್ತೇನಾಕ್ರಮ್ಯ ಕೇಶವಃ ॥ ೩೦**

---

ದೇವತೆಗಳು ಕಂಗಾಲಾಗಿರುವುದನ್ನು ಕಂಡು ಭಗವಾನ್ ಶಂಕರನು ಹರಿಯ ಮಾತಿನಂತೆ ಘೋರವಾದ ಹಾಲಾಹಲ ವಿಷವನ್ನು ಅಮೃತದಂತೆ ಕುಡಿದು ದೇವತೆಗಳನ್ನು ಕಳಿಸಿ ಅಂತರ್ಹಿತನಾದನು (೨೫–೨೬). ರಘುನಂದನ, ದೇವಾಸುರರು ಮತ್ತೆ ಕಡೆಯಲಾರಂಭಿಸಿದರು. ಮಂದರ ಪರ್ವತವು ಪಾತಾಳಕ್ಕೆ ಇಳಿದುಹೋಯಿತು. ದೇವಗಂಧರ್ವರು ವಿಷ್ಣುವನ್ನು "ದೇವ, ಸರ್ವಜಂತುಗಳಿಗೂ ನೀನೇ ಗತಿ. ನಮಗೆ ನೀನೇ ಪರಮಗತಿ. ನಮ್ಮನ್ನು ಕಾಪಾಡು. ಈ ಬೆಟ್ಟವನ್ನು ಮೇಲೆತ್ತು" ಎಂದು ಪ್ರಾರ್ಥಿಸಿದರು (೨೭–೨೮). ಆಗ ವಿಷ್ಣುವು ಕೂರ್ಮರೂಪವನ್ನು ಧರಿಸಿ ಮಂದರಗಿರಿಯನ್ನು ಬೆನ್ನಮೇಲೇರಿಸಿ ಸಮುದ್ರದಲ್ಲಿ ನಿಂತನು. (ತನ್ನ ಮಾಯಾಶಕ್ತಿಯಿಂದ) ದೇವತೆಗಳ ಮಧ್ಯದಲ್ಲಿ ನಿಂತು ಗಿರಿಶಿಖರವನ್ನು ಕೈಯಲ್ಲಿ ಹಿಡಿದು ತಾನೂ ಸಮುದ್ರವನ್ನು ಕಡೆಯುತ್ತಿದ್ದನು (೨೯–೩೦).

ದೇವಾನಾಂ ಮಧ್ಯತಃ ಸ್ಥಿತ್ವಾ ಮಮಂಥ ಪುರುಷೋತ್ತಮಃ ।
ಅಥ ವರ್ಷಸಹಸ್ರೇಣ ಆಯುರ್ವೇದಮಯಃ ಪುಮಾನ್ ॥ ೩೧

ಉದತಿಷ್ಠತ್ ಸುಧರ್ಮಾತ್ಮಾ ಸದಂಡಃ ಸಕಮಂಡಲುಃ ।
ಪೂರ್ವಂ ಧನ್ವಂತರಿೀ ರಾಮ ಅಪ್ಸರಾಶ್ಚ ಸುವರ್ಚಸಃ ॥ ೩೨

ಅಪ್ಸು ನಿರ್ಮಥನಾದೇವ ರಸಾತ್ತಸ್ಮಾದ್ವರಾಃ ಸ್ತ್ರಿಯಃ ।
ಉತ್ಪೇತುರ್ಮನುಜಶ್ರೇಷ್ಠ ತಸ್ಮಾದಪ್ಸರಸೋಽಭವನ್ ॥ ೩೩

ಷಷ್ಟಿಃ ಕೋಟ್ಯೋಽಭವಂಸ್ತಾಸಾಮಪ್ಸರಾಣಾಂ ಸುವರ್ಚಸಾಮ್
ಅಸಂಖ್ಯೇಯಾಸ್ತು ಕಾಕುತ್ಸ್ಥ ಯಾಸ್ತಾಸಾಂ ಪರಿಚಾರಿಕಾಃ ॥ ೩೪

ನ ತಾಃ ಸ್ಮ ಪ್ರತಿಗೃಹ್ಣಂತಿ ಸರ್ವೇ ತೇ ದೇವದಾನವಾಃ ।
ಅಪ್ರತಿಗ್ರಹಣಾತ್ತಾಶ್ಚ ಸರ್ವಾಃ ಸಾಧಾರಣಾಃ ಸ್ಮೃತಾಃ ॥ ೩೫

ವರುಣಸ್ಯ ತತಃ ಕನ್ಯಾ ವಾರುಣೀ ರಘುನಂದನ ।
ಉತ್ಪಪಾತ ಮಹಾಭಾಗ ಮಾರ್ಗಮಾಣಾ ಪರಿಗ್ರಮ್ ॥ ೩೬

ದಿತೇಃ ಪುತ್ರಾ ನ ತಾಂ ರಾಮ ಜಗೃಹುರ್ವರುಣಾತ್ಮಜಾಮ್ ।
ಅದಿತೇಸ್ತು ಸುತಾ ವೀರ ಜಗೃಹುಸ್ತಾಮನಿಂದಿತಾಮ್ ॥ ೩೭

---

ಹೀಗೆ ಒಂದು ಸಾವಿರವರ್ಷವಾದಮೇಲೆ ಆಯುರ್ವೇದಕ್ಕೆ ಅಧಿಪುರುಷನಾದ ಧನ್ವಂತರಿಯು ದಂಡಕಮಂಡಲುಧಾರಿಯಾಗಿ ಉದ್ಭವಿಸಿದನು. ಆಮೇಲೆ ಸುಂದರಿಯರಾದ ಅಪ್ಸರಃಸ್ತ್ರೀಯರು ಹುಟ್ಟಿದರು. ಅಪ್ಸು=ಹಾಲಿನ ರೂಪದ ನೀರಿನಲ್ಲಿ, ಕಡೆದು ಹುಟ್ಟಿದ ರಸ=ರಸದಿಂದ ಉದ್ಭವಿಸಿದ ಕಾರಣ ಅಪ್ಸರಸ್ ಎಂದು ಹೆಸರಾಯಿತು (೩೧-೩೩). ಅವರ ಸಂಖ್ಯೆ ಅರುವತ್ತು ಕೋಟಿ. ಅವರಿಗೆ ಪರಿಚಾರಿಕೆಯರು ಲೆಕ್ಕವಿಲ್ಲದಷ್ಟು ಹುಟ್ಟಿದರು. ಅಪ್ಸರೆಯರನ್ನು ದೇವದಾನವರಲ್ಲಿ ಯಾರೂ ಪ್ರತ್ಯೇಕವಾಗಿ ಸ್ವೀಕರಿಸಲಿಲ್ಲ. ಆದ್ದರಿಂದ ಅವರು ಎಲ್ಲರಿಗೂ ಸಾಧಾರಣಸ್ತ್ರೀಯರಾಗಿ ವೇಶ್ಯೆಯರೆನಿಸಿದರು (೩೪-೩೫). ಅನಂತರ ವರುಣನ ಕನ್ಯೆಯಾಗಿ ವಾರುಣಿ ಎಂದು ಪ್ರಸಿದ್ಧಳಾದ ಸುರಾಧಿದೇವತೆಯು ಜನಿಸಿದಳು. ಅವಳು ತನ್ನನ್ನು ವರಿಸುವವರು ಯಾರೆಂದು ನೋಡುತ್ತಿದ್ದಳು. ದಿತಿಪುತ್ರರಾದ ದೈತ್ಯರು ಅವಳನ್ನು ಪರಿಗ್ರಹಿಸಲಿಲ್ಲ. ಅದಿತಿಪುತ್ರರಾದ ದೇವತೆಗಳು ಆ ಸುರಾಧಿದೇವತೆಯನ್ನು ವರಿಸಿದರು (೩೬-೩೭).

ಅಸುರಾಸ್ತೇನ ದೈತೇಯಾಃ ಸುರಾಸ್ತೇನಾದಿತೇಃ ಸುತಾಃ ।
ಹೃಷ್ಟಾಃ ಪ್ರಮುದಿತಾಶ್ಚಾಸನ್ ವಾರುಣೀಗ್ರಹಣಾತ್ ಸುರಾಃ ॥

ಉಚ್ಚೈಃಶ್ರವಾ ಹಯಶ್ರೇಷ್ಠೋ ಮಣಿರತ್ನಂ ಚ ಕೌಸ್ತುಭಮ್ ।
ಉದತಿಷ್ಠನ್ನರಶ್ರೇಷ್ಠ ತಥೈವಾಮೃತಮುತ್ತಮಮ್ ॥ ೩೯

ಅಥ ತಸ್ಯ ಕೃತೇ ರಾಮ ಮಹಾನಾಸೀತ್ ಕುಲಕ್ಷಯಃ ।
ಅದಿತೇಸ್ತು ತತಃ ಪುತ್ರಾ ದಿತೇಃ ಪುತ್ರಾನಸೂದಯನ್ ॥ ೪೦

ಏಕತೋಽಭ್ಯಾಗಮನ್ ಸರ್ವೇ ಹ್ಯಸುರಾ ರಾಕ್ಷಸೈಃ ಸಹ ।
ಯುದ್ಧಮಾಸೀನ್ಮಹಾಘೋರಂ ವೀರ ತ್ರೈಲೋಕ್ಯಮೋಹನಮ್ ॥

ಯದಾ ಕ್ಷಯಂ ಗತಂ ಸರ್ವಂ ತದಾ ವಿಷ್ಣುರ್ಮಹಾಬಲಃ ।
ಅಮೃತಂ ಸೋಽಹರತ್ ತೂರ್ಣಂ ಮಾಯಾಮಾಸ್ಥಾಯ
ಮೋಹಿನೀಮ್ ॥ ೪೨

ಆದ್ದರಿಂದ ದಿತಿಪುತ್ರರು ಅಸುರರಾದರು. ಅದಿತಿಪುತ್ರರು ಸುರರಾದರು. ಸುರರಿಗೆ ವಾರುಣಿಯು ಲಭಿಸಿದ್ದರಿಂದ ಬಹಳ ಹರ್ಷವಾಯಿತು. ರಾಮ, ಅನಂತರ ಉಚ್ಚೈಃಶ್ರವಸ್ಸೆಂಬ ಶ್ರೇಷ್ಠವಾದ ಅಶ್ವವೂ, ಕೌಸ್ತುಭವೆಂಬ ಉತ್ತಮವಾದ ಮಣಿಯೂ ಹುಟ್ಟಿದವು. ಕಡೆಗೆ ದಿವ್ಯವಾದ ಅಮೃತವು ಹುಟ್ಟಿತು (೩೮-೩೯). ಅಮೃತಕ್ಕಾಗಿ ದೊಡ್ಡ ಕುಲಕ್ಷಯವೇ ಆಯಿತು. ದೇವತೆಗಳು ಅಮೃತಕ್ಕೋಸ್ಕರ ದೈತ್ಯರೊಡನೆ ಯುದ್ಧಕ್ಕೆ ನಿಂತರು. ರಾಕ್ಷಸರು ಯುದ್ಧದಲ್ಲಿ ದೈತ್ಯರೊಡನೆ* ಸೇರಿಕೊಂಡರು ಉಭಯರಿಗೂ ಮೂರು ಲೋಕವು ತಲ್ಲಣಿಸುವ ಯುದ್ಧವು ಪ್ರಾರಂಭಿಸಿತು. ಎರಡು ಪಕ್ಷಗಳೂ ನಾಶವಾಗತೊಡಗಿದವು (೪೦-೪೧). ಆಗ ಮಹಾವಿಷ್ಣುವು ಮಾಯೆಯಿಂದ

* ದಿತಿಯ ಮಕ್ಕಳು ದೈತ್ಯರು ಅವರಿಗೂ ರಾಕ್ಷಸರಿಗೂ ಗುಣರೂಪಾದಿಗಳಲ್ಲಿ ಭೇದವಿಲ್ಲ. ಆದ್ದರಿಂದ ರಾಕ್ಷಸರನ್ನು ದೈತ್ಯರೆಂದೂ ದೈತ್ಯರನ್ನು ರಾಕ್ಷಸರೆಂದೂ ವ್ಯವಹರಿಸುವುದುಂಟು. ವಾಸ್ತವವಾಗಿ ಅವರು ಭಿನ್ನಕುಲದವರು, ಹಾಗೆಯೇ ದಾನವರು.

ಯೇ ತದಾಭಿಮುಖಂ ವಿಷ್ಣುಮಕ್ಷಯ್ಯಂ ಪುರುಷೋತ್ತಮಮ್ ।
ಸಂಪಿಷ್ಟಾಸ್ತೇ ತದಾ ಯುದ್ಧೇ ವಿಷ್ಣುನಾ ಪ್ರಭವಿಷ್ಣುನಾ ॥ ೪೩

ಅದಿತೇರಾತ್ಮಜಾ ವೀರಾ ದಿತೇಃ ಪುತ್ರಾನ್ನಿಜಘ್ನಿರೇ ।
ತಸ್ಮಿನ್ ಯುದ್ಧೇ ಮಹಾಘೋರೇ ದೈತೇಯಾದಿತ್ಯಯೋರ್ಭೃಶಮ್

ನಿಹತ್ಯ ದಿತಿಪುತ್ರಾಂಶ್ಚ ರಾಜ್ಯಂ ಪ್ರಾಪ್ಯ ಪುರಂದರಃ ।
ಶಶಾಸ ಮುದಿತೋ ಲೋಕಾನ್ ಸರ್ಷಿಸಂಘಾನ್ ಸಚಾರಣಾನ್ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಪಂಚಚತ್ವಾರಿಂಶಃ ಸರ್ಗಃ



ಮೋಹಿನೀರೂಪವನ್ನು ಧರಿಸಿ ಅಮೃತವನ್ನು ಅಪಹರಿಸಿಬಿಟ್ಟನು. ಯುದ್ಧಕ್ಕೆ ಬಂದವರನ್ನು ಮಹಾವಿಷ್ಣುವು ತನ್ನ ಸಾಮರ್ಥ್ಯದಿಂದ ಧ್ವಂಸಮಾಡಿದನು. ಅದಿತಿಪುತ್ರರಾದ ದೇವತೆಗಳು ದೈತ್ಯರನ್ನು ವಧಿಸಿದರು. ಆ ಘೋರಯುದ್ಧ ದಲ್ಲಿ ದೇವೇಂದ್ರನು ದೈತ್ಯರನ್ನು ಸಂಹರಿಸಿ ಋಷಿಚಾರಣರಿಂದ ಸಮೇತವಾದ ಸ್ವರ್ಗವನ್ನು ಆಳುತ್ತಿದ್ದನು" (೪೨-೪೫).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ನಲವತ್ತೈದನೆಯ ಸರ್ಗ



*

## ಷಟ್‌ಚತ್ವಾರಿಂಶಃ ಸರ್ಗ

### ದಿತಿಗರ್ಭಭೇದಃ

ಹತೇಷು ತೇಷು ಪುತ್ರೇಷು ದಿತಿಃ ಪರಮದುಃಖಿತಾ ।
ಮಾರೀಚಂ ಕಶ್ಯಪಂ ರಾಮ ಭರ್ತಾರಮಿದಮಬ್ರವೀತ್ ॥ ೧

ಹತಪುತ್ರಾಸ್ಮಿ ಭಗವಂಸ್ತವ ಪುತ್ರೈರ್ಮಹಾಬಲೈಃ ।
ಶಕ್ರಹಂತಾರಮಿಚ್ಛಾಮಿ ಪುತ್ರಂ ದೀರ್ಘತಪೋಽರ್ಜಿತಮ್ ॥ ೨

ಸಾಹಂ ತಪಶ್ಚರಿಷ್ಯಾಮಿ ಗರ್ಭಮಾಧಾತುಮರ್ಹಸಿ ।
ಬಲವಂತಂ ಮಹೇಷ್ವಾಸಂ ಸ್ಥಿತಿಜ್ಞಂ ಸಮದರ್ಶಿನಮ್ ॥ ೩

ಈದೃಶಂ ಶಕ್ರಹಂತಾರಂ ತ್ವಮನುಜ್ಞಾತುಮರ್ಹಸಿ ।
ತಸ್ಯಾಸ್ತದ್ವಚನಂ ಶ್ರುತ್ವಾ ಮಾರೀಚಃ ಕಶ್ಯಪಸ್ತದಾ ॥ ೪

ಪ್ರತ್ಯುವಾಚ ಮಹಾತೇಜಾ ದಿತಿಂ ಪರಮದುಃಖಿತಾಮ್ ।
ಏವಂ ಭವತು ಭದ್ರಂ ತೇ ಶುಚಿರ್ಭವ ತಪೋಧನೇ ॥ ೫

### ಸರ್ಗ ೪೬

ಇಂದ್ರನನ್ನು ಸಂಹರಿಸತಕ್ಕ ಪುತ್ರನನ್ನು ಪಡೆಯುವುದಕ್ಕಾಗಿ ದಿತಿಯ ತಪಸ್ಸು.
ಇಂದ್ರನು ಅವಳ ಸೇವೆ ಮಾಡುತ್ತಿದ್ದು ಅವಳ ಗರ್ಭವನ್ನು ಭೇದಿಸುವುದು.

ವಿಶ್ವಾಮಿತ್ರರು ಹೇಳಿದರು: "ರಾಮ, ಸಂಗ್ರಾಮದಲ್ಲಿ ತನ್ನ ಮಕ್ಕಳು ಹತರಾದ್ದರಿಂದ ದಿತಿಯು ಪರಮದುಃಖಿತಳಾಗಿ ತನ್ನ ಪತಿಯಾದ ಕಶ್ಯಪನನ್ನು ಕುರಿತು "ಭಗವನ್, ನಿನ್ನ ಅದಿತಿಯ ಮಕ್ಕಳು ನನ್ನ ಪುತ್ರರನ್ನು ಕೊಂದುಹಾಕಿದರು ಇಂದ್ರನನ್ನು ಕೊಲ್ಲತಕ್ಕ ಒಬ್ಬ ಪುತ್ರನು ಬೇಕೆಂದು ನನಗೆ ಅಪೇಕ್ಷೆಯಾಗಿದೆ. ಅದಕ್ಕಾಗಿ ದೀರ್ಘಕಾಲ ನಾನು ತಪಶ್ಚರಣೆ ಮಾಡಲು ಸಿದ್ಧಳಿದ್ದೇನೆ. ಇಂದ್ರನನ್ನು ಕೊಲ್ಲತಕ್ಕ ಸಾಮರ್ಥ್ಯಶಾಲಿಯಾದ ಪುತ್ರನನ್ನು ಅನುಗ್ರಹಿಸಬೇಕು" ಎಂದು ಯಾಚಿಸಿದಳು (೧-೩). ಆಗ ಕಶ್ಯಪನು ತನ್ನ ಪತ್ನಿಯು ಶೋಕಸಂತಪ್ತಳಾಗಿದ್ದಾಳೆಂದು ತಿಳಿದು "ಒಳ್ಳೆಯದು, ತಪಸ್ಸನ್ನಾಚರಿಸುತ್ತ ಶುಚಿಯಾಗಿರು. ಸಂಗ್ರಾಮದಲ್ಲಿ

ಜನಯಿಷ್ಯಸಿ ಪುತ್ರಂ ತ್ವಂ ಶಕ್ರಹಂತಾರಮಾಹವೇ ।
ಪೂರ್ಣೇ ವರ್ಷಸಹಸ್ರೇ ತು ಶುಚಿರ್ಯದಿ ಭವಿಷ್ಯಸಿ ॥ ೬

ಪುತ್ರಂ ತ್ರೈಲೋಕ್ಯಭರ್ತಾರಂ ಮತ್ತಸ್ತ್ವಂ ಜನಯಿಷ್ಯಸಿ ।
ಏವಮುಕ್ತ್ವಾ ಮಹಾತೇಜಾಃ ಪಾಣಿನಾ ಸ ಮಮಾರ್ಜ ತಾಮ್ ॥

ಸಮಾಲಭ್ಯ ತತಃ ಸ್ವಸ್ತೀತ್ಯುಕ್ತ್ವಾ ಸ ತಪಸೇ ಯಯೌ ।
ಗತೇ ತಸ್ಮಿನ್ನರಶ್ರೇಷ್ಠ ದಿತಿಃ ಪರಮಹರ್ಷಿತಾ ॥ ೮

ಕುಶಪ್ಲವಂ ಸಮಾಸಾದ್ಯ ತಪಸ್ತೇಪೇ ಸುದಾರುಣಮ್ ।
ತಪಸ್ತಸ್ಯಾಂ ಹಿ ಕುರ್ವತ್ಯಾಂ ಪರಿಚರ್ಯಾಂ ಚಕಾರ ಹ ॥ ೯

ಸಹಸ್ರಾಕ್ಷೋ ನರಶ್ರೇಷ್ಠ ಪರಯಾ ಗುಣಸಂಪದಾ ।
ಅಗ್ನಿಂ ಕುಶಾನ್ ಕಾಷ್ಠಮಪಃ ಫಲಂ ಮೂಲಂ ತಥೈವ ಚ ॥ ೧೦

ನ್ಯವೇದಯತ್ ಸಹಸ್ರಾಕ್ಷೋ ಯಚ್ಚಾನ್ಯದಪಿ ಕಾಂಕ್ಷಿತಮ್ ।
ಗಾತ್ರಸಂವಾಹನೈಶ್ಚೈವ ಶ್ರಮಾಪನಯನೈಸ್ತಥಾ ॥ ೧೧

---

ಇಂದ್ರನನ್ನು ಸಂಹರಿಸಬಲ್ಲ ಪುತ್ರನನ್ನು ಪಡೆಯುವೆ (೪-೫) ಹೀಗೆ ಒಂದು ಸಾವಿರ ವರ್ಷ ಶುಚಿಯಾಗಿದ್ದರೆ ತ್ರಿಲೋಕಾಧಿಪತಿಯನ್ನು ಗೆಲ್ಲುವ ಪುತ್ರನು ಜನಿಸುವನು" ಎಂದು ನುಡಿದನು. ಅನಂತರ ಆ ಮಹಾತೇಜಸ್ವಿಯು ದಿತಿಯನ್ನು ಕೈಯಿಂದ ಮೈದಡವಿ 'ಸ್ವಸ್ತಿ' ಎಂದು ಹೇಳಿ ತಪಸ್ಸಿಗೆ ಹೊರಟುಹೋದನು (೬-೭). ದಿತಿಯು ಹರ್ಷದಿಂದ ಈ ಕುಶಪ್ಲವಕ್ಕೆ ಬಂದು ದಾರುಣವಾದ ತಪಶ್ಚರ್ಯೆಯನ್ನಾರಂಭಿಸಿದಳು. (ಈಗ ವಿಶಾಲಾನಗರ ವಿರುವ ಸ್ಥಳಕ್ಕೆ ಹಿಂದೆ ಕುಶಪ್ಲವವೆಂದು ಹೆಸರಿತ್ತು) ಇಂದ್ರನು ಬಂದು ವಿನಯಾದಿ ಸದ್ಗುಣಗಳನ್ನು ಪ್ರದರ್ಶಿಸುತ್ತ ದಿತಿಗೆ ಸೇವೆ ಮಾಡಲಾರಂಭಿಸಿ ದನು (೮-೯). ಅಗ್ನಿಯನ್ನು ಹೊತ್ತಿಸುವುದು, ದರ್ಭೆಸಮಿತ್ತುಗಳನ್ನು ತರುವುದು, ನೀರನ್ನು ಹೊರುವುದು, ಫಲಮೂಲಗಳನ್ನು ತಂದುಕೊಡುವುದು- ಇತ್ಯಾದಿಯಾಗಿ ಅವಳಿಗೆ ಬೇಕಾದ್ದನ್ನೆಲ್ಲ ಮಾಡಿಕೊಡುತ್ತಿದ್ದನು. ಅವಳ (ಕಾಲುಗಳನ್ನು) ನೀವುತ್ತ, (ಗಾಳಿ ಹಾಕಿ) ಆಯಾಸವನ್ನು ಪರಿಹರಿಸುತ್ತ ಯಾವಾಗಲೂ ಅವಳ ಪರಿಚರ್ಯೆಯಲ್ಲಿ ನಿರತನಾಗಿದ್ದನು (೧೦-೧೧).

ಶಕ್ರಃ ಸರ್ವೇಷು ಕಾಲೇಷು ದಿತಿಂ ಪರಿಚಚಾರ ಹ ।
ಪೂರ್ಣೇ ವರ್ಷಸಹಸ್ರೇ ತು ದಶೋನೇ ರಘುನಂದನ ॥ ೧೨

ದಿತಿಃ ಪರಮಸಂಪ್ರೀತಾ ಸಹಸ್ರಾಕ್ಷಮಥಾಬ್ರವೀತ್ ।
ತಪಶ್ಚರಂತ್ಯಾ ವರ್ಷಾಣಿ ದಶ ವೀರ್ಯವತಾಂ ವರ ॥ ೧೩

ಅವಶಿಷ್ಟಾನಿ ಭದ್ರಂ ತೇ ಭ್ರಾತರಂ ದ್ರಕ್ಷ್ಯಸೇ ತತಃ ।
ತಮಹಂ ತ್ವತ್ಕೃತೇ ಪುತ್ರಂ ಸಮಾಧಾಸ್ಯೇ ಜಯೋತ್ಸುಕಮ್ ॥ ೧೪

ತ್ರೈಲೋಕ್ಯವಿಜಯಂ ಪುತ್ರ ಸಹ ಭೋಕ್ಷ್ಯಸಿ ವಿಜ್ವರಃ ।
ಯಾಚಿತೇನ ಸುರಶ್ರೇಷ್ಠ ತವ ಪಿತ್ರಾ ಮಹಾತ್ಮನಾ ॥ ೧೫

ವರೋ ವರ್ಷಸಹಸ್ರಾಂತೇ ಮಮ ದತ್ತಃ ಸುತಂ ಪ್ರತಿ ।
ಏವಮುಕ್ತ್ವಾ ದಿತಿಃ ಶಕ್ರಂ ಪ್ರಾಪ್ತೇ ಮಧ್ಯಂ ದಿವಾಕರೇ ॥ ೧೬

ನಿದ್ರಯಾಪಹೃತಾ ದೇವೀ ಪಾದೌ ಕೃತ್ವಾಥ ಶೀರ್ಷತಃ ।
ದೃಷ್ಟ್ವಾ ತಾಮಶುಚಿಂ ಶಕ್ರಃ ಪಾದತಃ ಕೃತಮೂರ್ಧಜಾಮ್ ॥

---

ಅವಳ ತಪಸ್ಸಿಗೆ ಸಾವಿರ ವರ್ಷ ಪೂರ್ಣವಾಗಲು ಇನ್ನೂ ಹತ್ತು ವರ್ಷಗಳಿದ್ದವು ರಾಮ, ದಿತಿಯು ಇಂದ್ರನ ಸೇವೆಗೆ ಮೆಚ್ಚಿ ಒಂದು ದಿನ "ಇಂದ್ರ, ನನ್ನ ತಪಸ್ಸು ಪೂರ್ಣವಾಗಲು ಇನ್ನು ಹತ್ತು ವರ್ಷ ಉಳಿದಿದೆ. ಆಮೇಲೆ ನಿನಗೊಬ್ಬ ತಮ್ಮನು ಹುಟ್ಟುತ್ತಾನೆ ಮಗು, ನಿನ್ನನ್ನು ಗೆಲ್ಲತಕ್ಕ ಮಗನನ್ನು ಪಡೆಯಬೇಕೆಂದು ನನ್ನ ಆಸೆ ಇತ್ತು. ಒಳ್ಳೆಯದು, ಅವನು ನಿನಗೆ ಮಿತ್ರನಾಗುವಂತೆ ಸರಿಪಡಿಸುತ್ತೇನೆ ನೀನು ಅವನೊಡನೆ ತ್ರಿಲೋಕಾಧಿಪತಿಯಾಗಿ ಒಟ್ಟಿಗೆ ಬಾಳಬಹುದು (೧೨-೧೪). ನಿನ್ನ ತಂದೆಯನ್ನು ನಾನು ಬೇಡಿಕೊಂಡಿದ್ದೆ. ಆ ಮಹಾತ್ಮನು ಒಂದು ಸಾವಿರ ವರ್ಷ ತಪಸ್ಸುಮಾಡಿದಮೇಲೆ ಅಂಥ ಮಗನು ಜನಿಸುತ್ತಾನೆಂದು ವರವನ್ನು ದಯಪಾಲಿಸಿದನು" ಎಂದು ಹೇಳಿದಳು. ಮಧ್ಯಾಹ್ನವಾಗಿತ್ತು. ದಿತಿಗೆ (ಆಯಾಸದಿಂದ) ನಿದ್ರೆ ಬಂದಿತು. ಅವಳು ತಲೆಯನ್ನಿಡುವ ಕಡೆಗೆ ಕಾಲುಚಾಚಿ ಮಲಗಿಬಿಟ್ಟಳು (೧೫-೧೬). ಪಾದಗಳ ಕಡೆ ತಲೆಗೂದಲಿರುವಂತೆಯೂ ಶಿರಃಸ್ಥಾನದಲ್ಲಿ ಪಾದಗಳಿರು

ಶಿರಃಸ್ಥಾನೇ ಕೃತೌ ಪಾದೌ ಜಹಾಸ ಚ ಮುಮೋದ ಚ ।
ತಸ್ಯಾಃ ಶರೀರವಿವರಂ ವಿವೇಶ ಚ ಪುರಂದರಃ ॥ ೧೮

ಗರ್ಭಂ ಚ ಸಪ್ತಧಾ ರಾಮ ಬಿಭೇದ ಪರಮಾತ್ಮವಾನ್ ।
ಭಿದ್ಯಮಾನಸ್ತತೋ ಗರ್ಭೋ ವಜ್ರೇಣ ಶತಪರ್ವಣಾ ॥ ೧೯

ರುರೋದ ಸುಸ್ವರಂ ರಾಮ ತತೋ ದಿತಿರಬುಧ್ಯತ ।
ಮಾ ರುದೋ ಮಾ ರುದಶ್ಚೇತಿ ಗರ್ಭಂ ಶಕ್ರೋಽಭ್ಯಭಾಷತ ॥ ೨೦

ಬಿಭೇದ ಚ ಮಹಾತೇಜಾ ರುದಂತಮಪಿ ವಾಸವಃ ।
ನ ಹಂತವ್ಯೋ ನ ಹಂತವ್ಯ ಇತ್ಯೇವಂ ದಿತಿರಬ್ರವೀತ್ ॥ ೨೧

ನಿಷ್ಪಪಾತ ತತಃ ಶಕ್ರೋ ಮಾತುರ್ವಚನಗೌರವಾತ್ ।
ಪ್ರಾಂಜಲಿರ್ವಜ್ರಸಹಿತೋ ದಿತಿಂ ಶಕ್ರೋಽಭ್ಯಭಾಷತ ॥ ೨೨

---

ವಂತೆಯೂ ಮಲಗಿ ನಿದ್ರಿಸುತ್ತಿದ್ದ ದಿತಿಯು ಅಶುಚಿ*ಯಾದಳೆಂದು ಇಂದ್ರನಿಗೆ ಗೊತ್ತಾಯಿತು. ಅವನು ಆನಂದದಿಂದ ನಕ್ಕನು. ಧೈರ್ಯದಿಂದ ಅವಳ ದೇಹದೊಳಗೆ ಪ್ರವೇಶಿಸಿ ಗರ್ಭವನ್ನು ಏಳು ತುಂಡುಗಳಾಗಿ ಕತ್ತರಿಸಿದನು (೧೭-೧೮). ವಜ್ರಾಯುಧದಿಂದ ಕತ್ತರಿಸುವಾಗ ಶಿಶುವು ಅಳತೊಡಗಿತು. ಅಳುವ ಸ್ವರದಿಂದ ದಿತಿಗೆ ಎಚ್ಚರವಾಯಿತು. ಇಂದ್ರನು 'ಮಾ ರುದಃ' (ಅಳಬೇಡ ಅಳಬೇಡ) ಎನ್ನುತ್ತಲೇ ಕತ್ತರಿಸುತ್ತಿದ್ದನು. ಅಷ್ಟರಲ್ಲಿ ದಿತಿಯು 'ಕೊಲ್ಲಬೇಡ ಕೊಲ್ಲಬೇಡ' ಎಂದು ಅರಚಿದಳು. ಅವಳ ಮಾತಿಗೆ ಗೌರವವನ್ನು ಕೊಟ್ಟು ಇಂದ್ರನು ಹೊರಗೆ ಬಂದನು (೧೯-೨೧). ಅವನು ಕೈಮುಗಿದುಕೊಂಡು "ಅಮ್ಮ, ನೀನು ಕಾಲು ಕಡೆಗೆ ತಲೆ ಇಟ್ಟು ಮಲಗಿದ್ದರಿಂದ ಅಶುಚಿಯಾದೆ. ಇದೇ ಸಮಯವೆಂದರಿತು ನಾನು ಸಂಗ್ರಾಮದಲ್ಲಿ

---

* ಹಗಲು ನಿದ್ರೆಮಾಡಿದ್ದರಿಂದಲೂ, ಹಿಂದುಮುಂದಾಗಿ ಮಲಗಿದ್ದರಿಂದಲೂ ಅಶುಚಿಯಾದಳು. ತಪಸ್ವಿನಿಗೆ ಹಾಸಿಗೆ ಇಲ್ಲದಿದ್ದರೂ ಕೃಷ್ಣಾಜಿನವಿರಬಹುದು.

ಅಶುಚಿರ್ದೇವಿ ಸುಪ್ತಾಸಿ ಪಾದಯೋಃ ಕೃತಮೂರ್ಧಜಾ ।
ತದಂತರಮಹಂ ಲಬ್ಧ್ವಾ ಶಕ್ರಹಂತಾರಮಾಹವೇ ॥ ೨೩

ಅಭಿದಂ ಸಪ್ತಧಾ ದೇವಿ ತನ್ಮೇ ತ್ವಂ ಕ್ಷಂತುಮರ್ಹಸಿ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಷಟ್‌ಚತ್ವಾರಿಂಶಃ ಸರ್ಗಃ

---

## ಸಪ್ತಚತ್ವಾರಿಂಶಃ ಸರ್ಗಃ

ವಿಶಾಲಾಗಮನಮ್

ಸಪ್ತಧಾ ತು ಕೃತೇ ಗರ್ಭೇ ದಿತಿಃ ಪರಮದುಃಖಿತಾ ।
ಸಹಸ್ರಾಕ್ಷಂ ದುರಾಧರ್ಷಂ ವಾಕ್ಯಂ ಸಾನುನಯಾಬ್ರವೀತ್ ॥ ೧

ಮಮಾಪರಾಧಾದ್ಗರ್ಭೋಽಯಂ ಸಪ್ತಧಾ ಶಕಲೀಕೃತಃ ।
ನಾಪರಾಧೋಽಸ್ತಿ ದೇವೇಶ ತವಾತ್ರ ಬಲಸೂದನ ॥ ೨

---

ಇಂದ್ರಘಾತುಕನಾಗತಕ್ಕವನನ್ನು ಏಳು ತುಂಡು ಮಾಡಿದ್ದೇನೆ. ಅಮ್ಮ, ನನ್ನ ಅಪರಾಧವನ್ನು ದಯವಿಟ್ಟು ಮನ್ನಿಸು" ಎಂದು ಬೇಡಿದನು (೨೨-೨೩).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ನಲವತ್ತಾರನೆಯ ಸರ್ಗ

---

## ಸರ್ಗ ೪೭

ದಿತಿಯ ಅಪೇಕ್ಷೆಯಂತೆ ಸಪ್ತಮಾರುತಗಳ ಉತ್ಪತ್ತಿ ವಿಶಾಲಾನಗರದ ನಿರ್ಮಾಣ ಸುಮತಿಯು ವಿಶ್ವಾಮಿತ್ರರನ್ನು ಸ್ವಾಗತಿಸುವುದು.

ರಾಮ, ಹೀಗೆ ಗರ್ಭವು ಏಳು ತುಂಡುಗಳಾಗಲು ದಿತಿಯು ಶೋಕ ಸಂತಪ್ತಳಾದಳು. ಇಂದ್ರನು ಅಜೇಯನೆಂದರಿತು ಅವಳು ನಮ್ರತೆಯಿಂದ "ದೇವೇಂದ್ರ, ಗರ್ಭವು ಏಳು ತುಂಡಾಗಲು ನನ್ನ ತಪ್ಪೇ ಕಾರಣ. ಇದರಲ್ಲಿ

ಪ್ರಿಯಂ ತ್ವತ್ಕೃತಮಿಚ್ಛಾಮಿ ಮಮ ಗರ್ಭವಿಪರ್ಯಯೇ ।
ಮರುತಾಂ ಸಪ್ತ ಸಪ್ತಾನಾಂ ಸ್ಥಾನಪಾಲಾ ಭವಂತ್ವಿಮೇ ॥ ೩

ವಾತಸ್ಕಂಧಾ ಇಮೇ ಸಪ್ತ ಚರಂತು ದಿವಿ ಪುತ್ರಕ ।
ಮಾರುತಾ ಇತಿ ವಿಖ್ಯಾತಾ ದಿವ್ಯರೂಪಾ ಮಮಾತ್ಮಜಾಃ ॥ ೪

ಬ್ರಹ್ಮಲೋಕಂ ಚರತ್ವೇಕ ಇಂದ್ರಲೋಕಂ ತಥಾ ಪರಃ ।
ದಿವ್ಯವಾಯುರಿತಿ ಖ್ಯಾತಸ್ತೃತೀಯೋಽಪಿ ಮಹಾಯಶಾಃ ॥ ೫

ಚತ್ವಾರಸ್ತು ಸುರಶ್ರೇಷ್ಠ ದಿಶೋ ವೈ ತವ ಶಾಸನಾತ್ ।
ಸಂಚರಿಷ್ಯಂತಿ ಭದ್ರಂ ತೇ ದೇವಭೂತಾ ಮಮಾತ್ಮಜಾಃ ॥ ೬

ತ್ವತ್ಕೃತೇನೈವ ನಾಮ್ನಾ ಚ ಮಾರುತಾ ಇತಿ ವಿಶ್ರುತಾಃ ।
ತಸ್ಯಾಸ್ತದ್ವಚನಂ ಶ್ರುತ್ವಾ ಸಹಸ್ರಾಕ್ಷಃ ಪುರಂದರಃ ॥ ೭

ಉವಾಚ ಪ್ರಾಂಜಲಿರ್ವಾಕ್ಯಂ ದಿತಿಂ ಬಲನಿಷೂದನಃ ।
ಸರ್ವಮೇತದ್ಯಥೋಕ್ತಂ ತೇ ಭವಿಷ್ಯತಿ ನ ಸಂಶಯಃ ॥ ೮

---

ನಿನ್ನ ತಪ್ಪಿಲ್ಲ (೧-೨) ಈ ರೀತಿ ಗರ್ಭಕ್ಕೆ ವಿಪತ್ತು ಬಂದಿದ್ದರೂ ನೀನು ಒಂದು ಒಳ್ಳೆಯ ಕೆಲಸವನ್ನು ಮಾಡಬೇಕೆಂದು ನನ್ನ ಆಸೆ ಈ ಏಳು ಮಂದಿ ಮಕ್ಕಳು ಸಪ್ತವಾಯುಸ್ಕಂಧಗಳಿಗೆ ಅಧಿಪತಿಗಳಾಗಲಿ ಮಗು, ಇವರು ಸಪ್ತಮಾರುತರು* ಎಂಬ ಹೆಸರಿನಿಂದ ದಿವ್ಯರೂಪದಲ್ಲಿ ಸಂಚರಿಸಲಿ (೩-೪) ಒಬ್ಬನು ಬ್ರಹ್ಮಲೋಕದಲ್ಲಿ, ಇನ್ನೊಬ್ಬನು ಇಂದ್ರಲೋಕದಲ್ಲಿ, ಮತ್ತೊಬ್ಬನು ಅಂತರಿಕ್ಷದಲ್ಲಿ ಸಂಚರಿಸಲಿ. ಇನ್ನು ನಾಲ್ವರು ನಾಲ್ಕು ದಿಕ್ಕುಗಳಲ್ಲಿ ಸಂಚರಿಸಲಿ ಇವರೆಲ್ಲರೂ ನಿನ್ನ ಶಾಸನಕ್ಕೆ ಒಳಪಟ್ಟಿರಲಿ. ನೀನೇ ಇವರಿಗೆ ನಾಮಕರಣ ಮಾಡಿದ್ದೀಯೆ 'ಮಾ ರುದಃ ಮಾ ರುದಃ' ಎಂದು ಹೇಳಿದ್ದರಿಂದ ಇವರು ಮಾರುತರೆಂದು ಪ್ರಸಿದ್ಧರಾಗಲಿ. ಇಂದ್ರ, ನಿನಗೆ ಮಂಗಳವಾಗಲಿ" ಎಂದು ಹೇಳಿದಳು (೫-೭) ಆಗ ಇಂದ್ರನು ಪ್ರಾಂಜಲಿಯಾಗಿ "ಅಮ್ಮ, ಎಲ್ಲವೂ ನೀನು ಹೇಳಿದಂತೆ ನಡೆಯುವುದು.

---

* ಸಪ್ತ ಮಾರುತರು-ಆವಹ, ಪ್ರವಹ, ಸಂವಹ, ಉದ್ವಹ, ವಿವಹ, ಪರಿವಹ ಮತ್ತು ಪರಾವಹ ಎಂದು ವಿಷ್ಣು ಪುರಾಣದಲ್ಲಿದೆ.

ವಿಚರಿಷ್ಯಂತಿ ಭದ್ರಂ ತೇ ದೇವಭೂತಾಸ್ತವಾತ್ಮಜಾಃ ।
ಏವಂ ತೌ ನಿಶ್ಚಯಂ ಕೃತ್ವಾ ಮಾತಾಪುತ್ರೌ ತಪೋವನೇ ॥ ೯
ಜಗ್ಮತುಸ್ತ್ರಿದಿವಂ ರಾಮ ಕೃತಾರ್ಥಾವಿತಿ ನಃ ಶ್ರುತಮ್ ।
ಏಷ ದೇಶಃ ಸ ಕಾಕುತ್ಸ್ಥ ಮಹೇಂದ್ರಾಧ್ಯುಷಿತಃ ಪುರಾ ॥ ೧೦
ದಿತಿಂ ಯತ್ರ ತಪಃಸಿದ್ಧಾಮೇವಂ ಪರಿಚಚಾರ ಸಃ ।
ಇಕ್ಷ್ವಾಕೋಸ್ತು ನರವ್ಯಾಘ್ರ ಪುತ್ರಃ ಪರಮಧಾರ್ಮಿಕಃ ॥ ೧೧
ಅಲಂಬುಸಾಯಾಮುತ್ಪನ್ನೋ ವಿಶಾಲ ಇತಿ ವಿಶ್ರುತಃ ।
ತೇನ ಚಾಸೀದಿಹ ಸ್ಥಾನೇ ವಿಶಾಲೇತಿ ಪುರೀ ಕೃತಾ ॥ ೧೨
ವಿಶಾಲಸ್ಯ ಸುತೋ ರಾಮ ಹೇಮಚಂದ್ರೋ ಮಹಾಬಲಃ ।
ಸುಚಂದ್ರ ಇತಿ ವಿಖ್ಯಾತೋ ಹೇಮಚಂದ್ರಾದನಂತರಃ ॥ ೧೩
ಸುಚಂದ್ರತನಯೋ ರಾಮ ಧೂಮ್ರಾಶ್ವ ಇತಿ ವಿಶ್ರುತಃ ।
ಧೂಮ್ರಾಶ್ವತನಯಶ್ಚಾಪಿ ಸೃಂಜಯಃ ಸಮಪದ್ಯತ ॥ ೧೪
ಸೃಂಜಯಸ್ಯ ಸುತಃ ಶ್ರೀಮಾನ್ ಸಹದೇವಃ ಪ್ರತಾಪವಾನ್ ।
ಕುಶಾಶ್ವಃ ಸಹದೇವಸ್ಯ ಪುತ್ರಃ ಪರಮಧಾರ್ಮಿಕಃ ॥ ೧೫
ಕುಶಾಶ್ವಸ್ಯ ಮಹಾತೇಜಾಃ ಸೋಮದತ್ತಃ ಪ್ರತಾಪವಾನ್ ।
ಸೋಮದತ್ತಸ್ಯ ಪುತ್ರಸ್ತು ಕಾಕುತ್ಸ್ಥ ಇತಿ ವಿಶ್ರುತಃ ॥ ೧೬

---

ಸಂದೇಹಬೇಡ. ನಿನ್ನ ಪುತ್ರರು ದೇವತಾರೂಪದಿಂದ ಸಂಚರಿಸುವರು ಶುಭವಾಗಲಿ" ಎಂದನು. ರಾಮ, ಈ ಪ್ರಕಾರ ತಾಯಿ ಮಕ್ಕಳು ತಪೋವನದಲ್ಲಿ ಒಪ್ಪಂದ ಮಾಡಿಕೊಂಡು ಸ್ವರ್ಗಕ್ಕೆ ಹೊರಟುಹೋದರು. ಇದು ನಾವು ಕೇಳಿದ ವಿಷಯ (೮-೯). ದಿತಿಯು ತಪಸ್ಸುಮಾಡುತ್ತಿದ್ದಾಗ ಇಂದ್ರನು ಸೇವೆಮಾಡಿಕೊಂಡಿದ್ದ ಪ್ರದೇಶವಿದು. ಇಕ್ಷ್ವಾಕುವಿಗೆ ಅಲಂಬುಸೆಯಲ್ಲಿ ವಿಶಾಲನೆಂಬ ಮಗನು ಹುಟ್ಟಿದನು. ಅವನು ಈ ಪ್ರದೇಶದಲ್ಲಿ ವಿಶಾಲವೆಂಬ ಪ್ರಖ್ಯಾತವಾದ ನಗರಿಯನ್ನು ಕಟ್ಟಿದನು (೧೦-೧೨). ವಿಶಾಲನ ಮಗ ಹೇಮಚಂದ್ರ. ಆತನ ಮಗ ಸುಚಂದ್ರ. ಅವನ ಮಗ ಧೂಮ್ರಾಶ್ವ. ಧೂಮ್ರಾಶ್ವನ ಮಗ ಸೃಂಜಯ. ಸೃಂಜಯನ ಮಗ ಸಹದೇವ. ಸಹದೇವನ ಮಗ ಕುಶಾಶ್ವ (೧೩-೧೫). ಆತನಿಗೆ ಸೋಮದತ್ತನೆಂಬ ಮಗನು

ತಸ್ಯ ಪುತ್ರೋ ಮಹಾತೇಜಾಃ ಸಂಪ್ರತ್ಯೇಷ ಪುರೀಮಿಮಾಮ್ ।
ಆವಸತ್ಯಮರಪ್ರಖ್ಯಃ ಸುಮತಿರ್ನಾಮ ದುರ್ಜಯಃ ॥ ೧೭

ಇಕ್ಷ್ವಾಕೋಸ್ತು ಪ್ರಸಾದೇನ ಸರ್ವೇ ವೈಶಾಲಿಕಾ ನೃಪಾಃ ।
ದೀರ್ಘಾಯುಷೋ ಮಹಾತ್ಮಾನೋ ವೀರ್ಯವಂತಃ ಸುಧಾರ್ಮಿಕಾಃ

ಇಹಾದ್ಯ ರಜನೀಂ ರಾಮ ಸುಖಂ ವತ್ಸ್ಯಾಮಹೇ ವಯಮ್ ।
ಶ್ವಃ ಪ್ರಭಾತೇ ನರಶ್ರೇಷ್ಠ ಜನಕಂ ದ್ರಷ್ಟುಮರ್ಹಸಿ ॥ ೧೯

ಸುಮತಿಸ್ತು ಮಹಾತೇಜಾ ವಿಶ್ವಾಮಿತ್ರಮುಪಾಗತಮ್ ।
ಶ್ರುತ್ವಾ ನರವರಶ್ರೇಷ್ಠಃ ಪ್ರತ್ಯುದ್ಗಚ್ಛನ್ಮಹಾಯಶಾಃ ॥ ೨೦

ಪೂಜಾಂ ಚ ಪರಮಾಂ ಕೃತ್ವಾ ಸೋಪಾಧ್ಯಾಯಃ ಸಬಾಂಧವಃ ।
ಪ್ರಾಂಜಲಿಃ ಕುಶಲಂ ಪೃಷ್ಟ್ವಾ ವಿಶ್ವಾಮಿತ್ರಮಥಾಬ್ರವೀತ್ ॥ ೨೧

---

ಜನಿಸಿದನು. ಸೋಮದತ್ತನ ಮಗ ಕಾಕುತ್ಸ್ಥ. ಕಾಕುತ್ಸ್ಥನ ಪುತ್ರನೇ ಈಗ ಈ ಪಟ್ಟಣವನ್ನಾಳುತ್ತಿದ್ದಾನೆ. ಅವನ ಹೆಸರು ಸುಮತಿ. ಒಳ್ಳೆಯ ಕೀರ್ತಿವಂತ. ಪರಾಕ್ರಮಿ (೧೬-೧೭). ಇಕ್ಷ್ವಾಕು ಮಹಾರಾಜನ ಆಶೀರ್ವಾದ ಬಲದಿಂದ ಈ ವಿಶಾಲಾಧಿಪತಿಗಳು ದೀರ್ಘಾಯುಗಳೂ ಮಹಾತ್ಮರೂ ವೀರರೂ ಧಾರ್ಮಿಕರೂ ಆಗಿದ್ದಾರೆ. ಈ ದಿವಸ ರಾತ್ರಿ ಇಲ್ಲಿ ಸುಖವಾಗಿ ಉಳಿದುಕೊಳ್ಳೋಣ. ನಾಳೆ ಪ್ರಾತಃಕಾಲ (ಮುಂದೆ ಪ್ರಯಾಣಮಾಡಿ) ಜನಕ ಮಹಾರಾಜನನ್ನು ನೋಡಬಹುದು" (೧೮-೧೯). (ಹೀಗೆ ಹೇಳುತ್ತ ವಿಶ್ವಾಮಿತ್ರರು ವಿಶಾಲನಗರಕ್ಕೆ ಬಂದರು.) ಇವರು ಬಂದ ಸಂಗತಿ ಸುಮತಿರಾಜನಿಗೆ ತಿಳಿಯಿತು ಆತನು ತನ್ನ ಪುರೋಹಿತರನ್ನೂ ಬಾಂಧವರನ್ನೂ ಕರೆದುಕೊಂಡುಬಂದು ಇವರೆಲ್ಲರನ್ನೂ ಸ್ವಾಗತಿಸಿದನು. ಆದರದಿಂದ ಅತಿಥಿಸತ್ಕಾರಗಳನ್ನು ಮಾಡಿ ಕುಶಲವನ್ನು ವಿಚಾರಿಸಿದನು (೨೦-೨೧). ಆಮೇಲೆ ಸುಮತಿಯು ಕೈಮುಗಿದುಕೊಂಡು "ವಿಶ್ವಾಮಿತ್ರಮಹರ್ಷಿಗಳೆ,

**ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಯಸ್ಯ ಮೇ ವಿಷಯಂ ಮುನಿಃ ।**
**ಸಂಪ್ರಾಪ್ತೋ ದರ್ಶನಂ ಚೈವ ನಾಸ್ತಿ ಧನ್ಯತರೋ ಮಮ ॥ ೨೨**

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಸಪ್ತಚತ್ವಾರಿಂಶಃ ಸರ್ಗಃ

---

## ಅಷ್ಟಚತ್ವಾರಿಂಶಃ ಸರ್ಗಃ

ಶಕ್ರಾಹಲ್ಯಾಶಾಪಃ

**ಪೃಷ್ಟ್ವಾ ತು ಕುಶಲಂ ತತ್ರ ಪರಸ್ಪರಸಮಾಗಮೇ ।**
**ಕಥಾಂತೇ ಸುಮತಿರ್ವಾಕ್ಯಂ ವ್ಯಾಜಹಾರ ಮಹಾಮುನಿಮ್ ॥ ೧**

**ಇಮೌ ಕುಮಾರೌ ಭದ್ರಂ ತೇ ದೇವತುಲ್ಯಪರಾಕ್ರಮೌ ।**
**ಗಜಸಿಂಹಗತೀ ವೀರೌ ಶಾರ್ದೂಲವೃಷಭೋಪಮೌ ॥ ೨**

---

ಇಂದು ನಾನು ಧನ್ಯನಾದೆ ಅನುಗೃಹೀತನಾದೆ. ನನ್ನ ದೇಶಕ್ಕೆ ಬಂದಿದ್ದೀರಿ. ನನಗೆ ದರ್ಶನವನ್ನು ಕೊಟ್ಟಿದ್ದೀರಿ ನನಗಿಂತ ಪುಣ್ಯವಂತನಿಲ್ಲ" ಎಂದು ನುಡಿದನು (೨೨)

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ನಲವತ್ತೇಳನೆಯ ಸರ್ಗ

---

## ಸರ್ಗ ೪೮

ವಿಶ್ವಾಮಿತ್ರರು ಸುಮತಿರಾಜನಿಗೆ ರಾಮಲಕ್ಷ್ಮಣರ ಪರಿಚಯ ಮಾಡಿಸುವುದು.
ಗೌತಮಾಶ್ರಮಕ್ಕೆ ಪ್ರಯಾಣ ಅಹಲ್ಯಾವೃತ್ತಾಂತ.

ಹೀಗೆ ಪರಸ್ಪರ ಕುಶಲ ಸಂಭಾಷಣೆಯು ನಡೆದಮೇಲೆ ಸುಮತಿ ರಾಜನು "ಮಹರ್ಷಿಗಳೆ, ಬಹಳ ಒಳ್ಳೆಯದಾಯಿತು. ಈ ಕುಮಾರರು ಯಾರು ? ದೇವತೆಗಳಂತೆ ಕಾಣುತ್ತಾರಲ್ಲ. ಆನೆಯಂತೆ, ಸಿಂಹದಂತೆ ಗಂಭೀರವಾದ ನಡಿಗೆ ಶಾರ್ದೂಲದಂತೆ, ವೃಷಭದಂತೆ ವೀರರೂ (ಉನ್ನತ

ಪದ್ಮಪತ್ರವಿಶಾಲಾಕ್ಷೌ ಖಡ್ಗತೂಣೀಧನುರ್ಧರೌ ।
ಅಶ್ವಿನಾವಿವ ರೂಪೇಣ ಸಮುಪಸ್ಥಿತಯೌವನೌ ॥ ೩

ಯದೃಚ್ಛಯೈವ ಗಾಂ ಪ್ರಾಪ್ತೌ ದೇವಲೋಕಾದಿವಾಮರೌ ।
ಕಥಂ ಪದ್ಭ್ಯಾಮಿಹ ಪ್ರಾಪ್ತೌ ಕಿಮರ್ಥಂ ಕಸ್ಯ ವಾ ಮುನೇ ॥ ೪

ಭೂಷಯಂತಾವಿಮಂ ದೇಶಂ ಚಂದ್ರಸೂರ್ಯಾವಿವಾಂಬರಮ್ ।
ಪರಸ್ಪರಸ್ಯ ಸದೃಶೌ ಪ್ರಮಾಣೇಂಗಿತಚೇಷ್ಟಿತೈಃ ॥ ೫

ಕಿಮರ್ಥಂ ಚ ನರಶ್ರೇಷ್ಠೌ ಸಂಪ್ರಾಪ್ತೌ ದುರ್ಗಮೇ ಪಥಿ ।
ವರಾಯುಧಧರೌ ವೀರೌ ಶ್ರೋತುಮಿಚ್ಛಾಮಿ ತತ್ತ್ವತಃ ॥ ೬

ತಸ್ಯ ತದ್ವಚನಂ ಶ್ರುತ್ವಾ ಯಥಾವೃತ್ತಂ ನ್ಯವೇದಯತ್ ।
ವಿಶ್ವಾಮಿತ್ರವಚಃ ಶ್ರುತ್ವಾ ರಾಜಾ ಪರಮಹರ್ಷಿತಃ ॥ ೭

ಅತಿಥೀ ಪರಮೌ ಪ್ರಾಪ್ತೌ ಪುತ್ರೌ ದಶರಥಸ್ಯ ತೌ ।
ಪೂಜಯಾಮಾಸ ವಿಧಿವತ್ ಸತ್ಕಾರಾರ್ಹೌ ಮಹಾಬಲೌ ॥ ೮

---

ಸ್ಕಂಧರೂ) ಆಗಿದ್ದಾರೆ (೧-೨). ಕಣ್ಣುಗಳು ಪದ್ಮದಳದಂತೆ ವಿಶಾಲವಾಗಿವೆ. ಖಡ್ಗ ಬತ್ತಳಿಕೆ ಧನುಸ್ಸುಗಳನ್ನು ಧರಿಸಿದ್ದಾರೆ ರೂಪದಲ್ಲಿ ಅಶ್ವಿನೀ ದೇವತೆಗಳಂತೆ ಇದ್ದಾರಲ್ಲ. ಈ ತರುಣರು ಯಾರು ? ದೇವಲೋಕದಿಂದ ಸ್ವೇಚ್ಛೆಯಾಗಿ ಭೂಮಿಗೆ ಇಳಿದುಬಂದ ದೇವತೆಗಳಿರಬಹುದೆ ? ಬರಿಯ ಕಾಲಿನಿಂದಲೇ ಇಲ್ಲಿಗೆ ನಡೆದುಬಂದರೆ ? ಏನಿದು ? ಋಷಿಗಳೆ, ಇವರು ಯಾರ ಮಕ್ಕಳು ? (೩-೪) ಸೂರ್ಯಚಂದ್ರರು ಆಕಾಶವನ್ನು ಭೂಷಿಸುವಂತೆ, ಇವರು ನನ್ನ ದೇಶಕ್ಕೆ ಭೂಷಣಪ್ರಾಯರಾಗಿ ಬಂದಿದ್ದಾರೆ. ನಿಲುವು, ನಡೆ, ನುಡಿಗಳಲ್ಲಿ ಒಬ್ಬರಂತೆ ಒಬ್ಬರಿದ್ದಾರೆ. ಈ ಪುರುಷಶ್ರೇಷ್ಠರು ಕಾಡು ದಾರಿಯಲ್ಲಿ ಏಕೆ ಬಂದರು ? ಈ ವೀರರ ಕೈಯಲ್ಲಿ ಉತ್ತಮೋತ್ತಮವಾದ ಆಯುಧಗಳಿವೆ. ನಿಜವಾಗಿ ಇವರು ಯಾರಿರಬಹುದೆಂದು ನನಗೆ ಕುತೂಹಲ ವಾಗಿದೆ” ಎಂದು ಕೇಳಿದನು (೫-೬). ವಿಶ್ವಾಮಿತ್ರರು ರಾಮಲಕ್ಷ್ಮಣರ ವೃತ್ತಾಂತವೆಲ್ಲವನ್ನೂ ತಿಳಿಸಿದರು. ಸುಮತಿರಾಜನಿಗೆ ಪರಮಾನಂದ ವಾಯಿತು. ದಶರಥಮಹಾರಾಜನ ಪುತ್ರರು ತನ್ನ ಮನೆಗೆ ಅತಿಥಿಗಳಾಗಿ ಬಂದಿದ್ದಾರೆಂದು ತಿಳಿದು ಅವರಿಗೆ ಅತ್ಯಾದರದಿಂದ ಸತ್ಕಾರಮಾಡಿದನು.

ತತಃ ಪರಮಸತ್ಕಾರಂ ಸುಮತೇಃ ಪ್ರಾಪ್ಯ ರಾಘವೌ ।
ಉಷ್ಯ ತತ್ರ ನಿಶಾಮೇಕಾಂ ಜಗ್ಮತುರ್ಮಿಥಿಲಾಂ ತತಃ ॥ ೯
ತಾನ್ ದೃಷ್ಟ್ವಾ ಮುನಯಃ ಸರ್ವೇ ಜನಕಸ್ಯ ಪುರೀಂ ಶುಭಾಮ್ ।
ಸಾಧು ಸಾಧ್ವಿತಿ ಶಂಸಂತೋ ಮಿಥಿಲಾಂ ಸಮಪೂಜಯನ್ ॥ ೧೦
ಮಿಥಿಲೋಪವನೇ ತತ್ರ ಆಶ್ರಮಂ ದೃಶ್ಯ ರಾಘವಃ ।
ಪುರಾಣಂ ನಿರ್ಜನಂ ರಮ್ಯಂ ಪಪ್ರಚ್ಛ ಮುನಿಪುಂಗವಮ್ ॥ ೧೧
ಶ್ರೀಮದಾಶ್ರಮಸಂಕಾಶಂ ಕಿಂ ನ್ವಿದಂ ಮುನಿವರ್ಜಿತಮ್ ।
ಶ್ರೋತುಮಿಚ್ಛಾಮಿ ಭಗವನ್ ಕಸ್ಯಾಯಂ ಪೂರ್ವ ಆಶ್ರಮಃ ॥ ೧೨
ತಚ್ಛ್ರುತ್ವಾ ರಾಘವೇಣೋಕ್ತಂ ವಾಕ್ಯಂ ವಾಕ್ಯವಿಶಾರದಃ ।
ಪ್ರತ್ಯುವಾಚ ಮಹಾತೇಜಾ ವಿಶ್ವಾಮಿತ್ರೋ ಮಹಾಮುನಿಃ ॥ ೧೩
ಹಂತ ತೇ ಕಥಯಿಷ್ಯಾಮಿ ಶೃಣು ತತ್ತ್ವೇನ ರಾಘವ ।
ಯಸ್ಯೈತದಾಶ್ರಮಪದಂ ಶಪ್ತಂ ಕೋಪಾನ್ಮಹಾತ್ಮನಾ ॥ ೧೪
ಗೌತಮಸ್ಯ ನರಶ್ರೇಷ್ಠ ಪೂರ್ವಮಾಸೀನ್ಮಹಾತ್ಮನಃ ।
ಆಶ್ರಮೋ ದಿವ್ಯಸಂಕಾಶಃ ಸುರೈರಪಿ ಸುಪೂಜಿತಃ ॥ ೧೫

---

ರಾಮಲಕ್ಷ್ಮಣರು ಸುಮತಿರಾಜನ ಸತ್ಕಾರವನ್ನು ಸ್ವೀಕರಿಸಿ ಆ ರಾತ್ರಿ ಅಲ್ಲಿಯೇ ಉಳಿದು ಮಾರನೆಯ ದಿನ (ವಿಶ್ವಾಮಿತ್ರರೊಡನೆ) ಮಿಥಿಲೆಗೆ ಪ್ರಯಾಣಮಾಡಿದರು (೭-೯). ದೂರದಲ್ಲಿ ಮಿಥಿಲಾನಗರಿಯು ಕಾಣಿಸಿತು. ಋಷಿಗಳೆಲ್ಲರೂ 'ಸಾಧು ಸಾಧು' ಎಂದು ಆ ಪಟ್ಟಣವನ್ನು ಕೊಂಡಾಡಿದರು. ಮಿಥಿಲೆಗೆ ಸಮೀಪದಲ್ಲಿದ್ದ ಒಂದು ವನಕ್ಕೆ ಬಂದಾಗ ಒಂದು ಆಶ್ರಮ ಕಾಣಿಸಿತು. ಹಳೆಯದಾಗಿ ನಿರ್ಜನವಾಗಿದ್ದರೂ ರಮಣೀಯವಾಗಿದ್ದ ಆಶ್ರಮವನ್ನು ಕಂಡು ರಾಮನು "ಮುನಿಗಳೆ, ಇದು ಆಶ್ರಮದಂತೆ ತೋರುತ್ತದೆ. ಆದರೆ ಇಲ್ಲಿ ಮುನಿಗಳಾರೂ ಕಾಣಿಸುವುದಿಲ್ಲ. ಹಿಂದೆ ಯಾರದೋ ಆಶ್ರಮವಾಗಿದ್ದಿರಬಹುದು. ಇದು ಯಾರ ಆಶ್ರಮ?" ಎಂದು ಕೇಳಿದನು (೧೦-೧೨). ಆಗ ವಿಶ್ವಾಮಿತ್ರಮುನಿಗಳು ಹೇಳತೊಡಗಿದರು: "ಆಹಾ! ಅದರ ವಿಷಯವನ್ನು ಹೇಳುತ್ತೇನೆ. ಆ ಮಹಾತ್ಮನು ಕೋಪದಿಂದ ಈ ಆಶ್ರಮವನ್ನು ಶಪಿಸಿಬಿಟ್ಟಿದ್ದಾನೆ. ಇದು ಹಿಂದೆ ಗೌತಮ ಋಷಿಯ ಆಶ್ರಮವಾಗಿತ್ತು.

ಸ ಚೇಹ ತಪ ಆತಿಷ್ಠದಹಲ್ಯಾಸಹಿತಃ ಪುರಾ ।
ವರ್ಷಪೂಗಾನನೇಕಾಂಶ್ಚ ರಾಜಪುತ್ರ ಮಹಾಯಶಃ ॥ ೧೬

ತಸ್ಯಾಂತರಂ ವಿದಿತ್ವಾ ತು ಸಹಸ್ರಾಕ್ಷಃ ಶಚೀಪತಿಃ ।
ಮುನಿವೇಷಧರೋಽಹಲ್ಯಾಮಿದಂ ವಚನಮಬ್ರವೀತ್ ॥ ೧೭

ಋತುಕಾಲಂ ಪ್ರತೀಕ್ಷಂತೇ ನಾರ್ಥಿನಃ ಸುಸಮಾಹಿತೇ ।
ಸಂಗಮಂ ತ್ವಹಮಿಚ್ಛಾಮಿ ತ್ವಯಾ ಸಹ ಸುಮಧ್ಯಮೇ ॥ ೧೮

ಮುನಿವೇಷಂ ಸಹಸ್ರಾಕ್ಷಂ ವಿಜ್ಞಾಯ ರಘುನಂದನ ।
ಮತಿಂ ಚಕಾರ ದುರ್ಮೇಧಾ ದೇವರಾಜಕುತೂಹಲಾತ್ ॥ ೧೯

ಅಥಾಬ್ರವೀತ್ ಸುರಶ್ರೇಷ್ಠಂ ಕೃತಾರ್ಥೇನಾಂತರಾತ್ಮನಾ ।
ಕೃತಾರ್ಥಾಸ್ಮಿ ಸುರಶ್ರೇಷ್ಠ ಗಚ್ಛ ಶೀಘ್ರಮಿತಃ ಪ್ರಭೋ ॥ ೨೦

ಆತ್ಮಾನಂ ಮಾಂ ಚ ದೇವೇಶ ಸರ್ವದಾ ರಕ್ಷ ಮಾನದ ।
ಇಂದ್ರಸ್ತು ಪ್ರಹಸನ್ ವಾಕ್ಯಮಹಲ್ಯಾಮಿದಮಬ್ರವೀತ್ ॥ ೨೧

---

ದೇವತೆಗಳೂ ಇದನ್ನು ಗೌರವದಿಂದ ಕಾಣುತ್ತಿದ್ದರು (೧೩-೧೫). ರಾಜಕುಮಾರ, ಗೌತಮಋಷಿಯು ಪತ್ನಿಯಾದ ಅಹಲ್ಯೆಯೊಡನೆ ಈ ಆಶ್ರಮದಲ್ಲಿ ಬಹಳ ವರ್ಷಗಳವರೆಗೆ ತಪಸ್ಸನ್ನಾಚರಿಸುತ್ತಿದ್ದನು. ಒಂದು ಸಲ ಗೌತಮನು ಇಲ್ಲದ ಸಮಯದಲ್ಲಿ ಇಂದ್ರನು ಗೌತಮಮುನಿಯ ವೇಷದಲ್ಲಿ ಬಂದು ಅಹಲ್ಯೆಯನ್ನು ಕುರಿತು "ಸುಂದರಿ, ನಾನು ನಿನ್ನ ಸಂಗವನ್ನು ಬಯಸುತ್ತೇನೆ. ಕಾಮಾರ್ಥಿಗಳು ಋತುಕಾಲವನ್ನೇ ನಿರೀಕ್ಷಿಸಬೇಕಾಗಿಲ್ಲ" ಎಂದನು (೧೬-೧೮). ಇಂದ್ರನು ಮುನಿಯ ವೇಷದಲ್ಲಿ ಬಂದಿದ್ದಾನೆಂದು ಅಹಲ್ಯೆಗೆ ತಿಳಿಯಿತು. ದೇವೇಂದ್ರನೊಡನೆ ಸಮಾಗಮವಾಗುವುದೆಂಬ ಆಸೆಯಿಂದ ಅವಳು ಬುದ್ಧಿಗೆಟ್ಟು ಒಪ್ಪಿದಳು. ಕಡೆಯಲ್ಲಿ ಸಂತುಷ್ಟಳಾಗಿ "ದೇವರಾಜ, ನಾನು ಕೃತಾರ್ಥಳಾದೆ. ಬೇಗನೆ ಇಲ್ಲಿಂದ ಹೊರಡು. ನಿನ್ನನ್ನೂ ನನ್ನನ್ನೂ ಗೌತಮನಿಂದ ರಕ್ಷಿಸಿಕೊಳ್ಳುವ ಭಾರ ನಿನಗೆ ಸೇರಿದ್ದು" ಎಂದಳು (೧೯-೨೦). ಇಂದ್ರನು ನಗುತ್ತ "ಸುಂದರಿ,

ಸುಶ್ರೋಣಿ ಪರಿತುಷ್ಟೋಽಸ್ಮಿ ಗಮಿಷ್ಯಾಮಿ ಯಥಾಗತಮ್ ।
ಏವಂ ಸಂಗಮ್ಯ ತು ತಯಾ ನಿಶ್ಚಕ್ರಾಮೋಟಜಾತ್ತತಃ ॥ ೨೨

ಸ ಸಂಭ್ರಮಾತ್ತ್ವರನ್ ರಾಮ ಶಂಕಿತೋ ಗೌತಮಂ ಪ್ರತಿ ।
ಗೌತಮಂ ಸಂದದರ್ಶಾಥ ಪ್ರವಿಶಂತಂ ಮಹಾಮುನಿಮ್ ॥ ೨೩

ದೇವದಾನವದುರ್ಧರ್ಷಂ ತಪೋಬಲಸಮನ್ವಿತಮ್ ।
ತೀರ್ಥೋದಕಪರಿಕ್ಲಿನ್ನಂ ದೀಪ್ಯಮಾನಮಿವಾನಲಮ್ ॥ ೨೪

ಗೃಹೀತಸಮಿಧಂ ತತ್ರ ಸಕುಶಂ ಮುನಿಪುಂಗವಮ್ ।
ದೃಷ್ಟ್ವಾ ಸುರಪತಿಸ್ತ್ರಸ್ತೋ ವಿವರ್ಣವದನೋಽಭವತ್ ॥ ೨೫

ಅಥ ದೃಷ್ಟ್ವಾ ಸಹಸ್ರಾಕ್ಷಂ ಮುನಿವೇಷಧರಂ ಮುನಿಃ ।
ದುರ್ವೃತ್ತಂ ವೃತ್ತಸಂಪನ್ನೋ ರೋಷಾದ್ವಚನಮಬ್ರವೀತ್ ॥ ೨೬

ಮಮ ರೂಪಂ ಸಮಾಸ್ಥಾಯ ಕೃತವಾನಸಿ ದುರ್ಮತೇ ।
ಅಕರ್ತವ್ಯಮಿದಂ ತಸ್ಮಾದ್ವಿಫಲಸ್ತ್ವಂ ಭವಿಷ್ಯಸಿ ॥ ೨೭

ಗೌತಮೇನೈವಮುಕ್ತಸ್ಯ ಸರೋಷೇಣ ಮಹಾತ್ಮನಾ ।
ಪೇತತುರ್ವೃಷಣೌ ಭೂಮೌ ಸಹಸ್ರಾಕ್ಷಸ್ಯ ತತ್ಕ್ಷಣಾತ್ ॥ ೨೮

---

ನನಗೆ ತೃಪ್ತಿಯಾಯಿತು. ಹೊರಡುತ್ತೇನೆ” ಎನ್ನುತ್ತ ಪರ್ಣಶಾಲೆಯಿಂದ ಹೊರಗೆ ಬಂದನು. ಅವನು ಗೌತಮಮುನಿಗೆ ಹೆದರಿ ಗಾಬರಿಯಿಂದ ಹೊರಡುವಾಗ ಸಾಕ್ಷಾತ್ ಗೌತಮ ಮಹರ್ಷಿಯು ಎದುರಿಗೆ ಬಂದನು (೨೧-೨೩). ಗೌತಮಮುನಿಯನ್ನು ದೇವದಾನವರಿಗೂ ಕೆಣಕಲು ಶಕ್ಯವಿಲ್ಲ ಅಂಥ ತಪೋಬಲಸಮನ್ವಿತ ಆತನು ತೀರ್ಥೋದಕದಲ್ಲಿ ಸ್ನಾನಮಾಡಿ ದರ್ಭೆಸಮಿತ್ತುಗಳನ್ನು ಹಿಡಿದುಕೊಂಡು ಅಗ್ನಿಯಂತೆ ಪ್ರಜ್ವಲಿಸುತ್ತ ಬರುತ್ತಿದ್ದನು. ಆ ಮುನಿಯನ್ನು ಕಂಡಕೂಡಲೆ ಇಂದ್ರನಿಗೆ ನಡುಕಹುಟ್ಟಿ ಮುಖವು ಬಾಡಿಹೋಯಿತು (೨೪-೨೫) ಇಂದ್ರನು ಮುನಿವೇಷಧಾರಿಯಾಗಿರುವುದೂ ಅವನು ಮಾಡಿದ ದುರಾಚಾರವೂ ಗೌತಮನಿಗೆ ತಿಳಿಯಿತು ಆ ವ್ರತನಿಷ್ಠನು ರೋಷದಿಂದ “ಎಲೈ ದುಷ್ಟ, ನನ್ನ ರೂಪವನ್ನು ಧರಿಸಿ ಮಾಡಬಾರದ ಕೆಲಸವನ್ನು ಮಾಡಿದೆಯಾ? ನಿನ್ನ ವೃಷಣಗಳು ಬಿದ್ದುಹೋಗಲಿ” ಎಂದು ಶಪಿಸಿದನು (೨೬-೨೮). ಆ ಮಹಾತ್ಮನು ಹೀಗೆ

ತಥಾ ಶಪ್ತ್ವಾ ಸ ವೈ ಶಕ್ರಮಹಲ್ಯಾಮಪಿ ಶಪ್ತವಾನ್ ।
ಇಹ ವರ್ಷಸಹಸ್ರಾಣಿ ಬಹೂನಿ ತ್ವಂ ನಿವತ್ಸ್ಯಸಿ ॥ ೨೯

ವಾಯುಭಕ್ಷಾ ನಿರಾಹಾರಾ ತಪ್ಯಂತೀ ಭಸ್ಮಶಾಯಿನೀ ।
ಅದೃಶ್ಯಾ ಸರ್ವಭೂತಾನಾಮಾಶ್ರಮೇಽಸ್ಮಿನ್ನಿವತ್ಸ್ಯಸಿ ॥ ೩೦

ಯದಾ ಚೈತದ್ವನಂ ಘೋರಂ ರಾಮೋ ದಶರಥಾತ್ಮಜಃ ।
ಆಗಮಿಷ್ಯತಿ ದುರ್ಧರ್ಷಸ್ತದಾ ಪೂತಾ ಭವಿಷ್ಯಸಿ ॥ ೩೧

ತಸ್ಯಾತಿಥ್ಯೇನ ದುರ್ವೃತ್ತೇ ಲೋಭಮೋಹವಿವರ್ಜಿತಾ ।
ಮತ್ಸಕಾಶೇ ಮುದಾ ಯುಕ್ತಾ ಸ್ವಂ ವಪುರ್ಧಾರಯಿಷ್ಯಸಿ ॥ ೩೨

ಏವಮುಕ್ತ್ವಾ ಮಹಾತೇಜಾ ಗೌತಮೋ ದುಷ್ಟಚಾರಿಣೀಮ್ ।
ಇಮಮಾಶ್ರಮಮುತ್ಸೃಜ್ಯ ಸಿದ್ಧಚಾರಣಸೇವಿತೇ ॥ ೩೩

ಹಿಮವಚ್ಛಿಖರೇ ರಮ್ಯೇ ತಪಸ್ತೇಪೇ ಮಹಾತಪಾಃ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಅಷ್ಟಚತ್ವಾರಿಂಶಃ ಸರ್ಗಃ

---

ಶಪಿಸಿದ ಕ್ಷಣದಲ್ಲಿಯೇ ಇಂದ್ರನ ವೃಷಣಗಳು ಬಿದ್ದುಹೋದವು. ಇಂದ್ರನನ್ನು ಶಪಿಸಿ ತನ್ನ ಹೆಂಡತಿಯನ್ನುದ್ದೇಶಿಸಿ "ನೀನು ಸಾವಿರಾರು ವರ್ಷ ಆಹಾರವಿಲ್ಲದೆ ಉಸಿರಾಡುತ್ತ ಬೂದಿಯಲ್ಲಿ ಹೊರಳುತ್ತ ಬಿದ್ದಿರು. ಯಾರ ಕಣ್ಣಿಗೂ ಗೋಚರವಾಗದೆ ಈ ಆಶ್ರಮದಲ್ಲಿಯೇ ಇರು (೨೯-೩೦). ದಶರಥಪುತ್ರನಾದ ಶ್ರೀರಾಮನು ಈ ಘೋರಾರಣ್ಯಕ್ಕೆ ಬಂದಾಗ ನೀನು ಪರಿಶುದ್ಧಳಾಗುವೆ. ಕೆಟ್ಟನಡತೆಯವಳೆ, ಲೋಭಮೋಹರಹಿತಳಾಗಿ ನೀನು ಶ್ರೀರಾಮನಿಗೆ ಅತಿಥಿಸತ್ಕಾರವನ್ನು ಮಾಡಿದ್ದಾದರೆ, ಶುದ್ಧಳಾಗಿ ಮತ್ತೆ ನಿನ್ನ ನಿಜದೇಹ ವನ್ನು ಧರಿಸುವೆ. ಆಗ ನನ್ನ ಬಳಿಗೆ ಬರಬಹುದು" ಎಂದು ಶಪಿಸಿದನು (೩೧-೩೨). ಈ ರೀತಿಯಲ್ಲಿ ಹೇಳಿ ಗೌತಮಮಹರ್ಷಿಯು ಸಿದ್ಧಚಾರಣ ಸೇವಿತವಾದ ಹಿಮವತ್ಪರ್ವತದ ಒಂದು ರಮ್ಯವಾದ ಶಿಖರಕ್ಕೆ ತಪಸ್ಸು ಮಾಡಲು ಹೋದನು" (೩೩).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ನಲವತ್ತೆಂಟನೆಯ ಸರ್ಗ

## ಏಕೋನಪಂಚಾಶಃ ಸರ್ಗಃ

### ಅಹಲ್ಯಾಶಾಪಮೋಕ್ಷಃ

ಅಫಲಸ್ತು ತತಃ ಶಕ್ರೋ ದೇವಾನಗ್ನಿಪುರೋಗಮಾನ್ ।
ಅಬ್ರವೀತ್ ತ್ರಸ್ತನಯನಃ ಸರ್ಷಿಸಂಘಾನ್ ಸಚಾರಣಾನ್ ॥ ೧

ಕುರ್ವತಾ ತಪಸೋ ವಿಘ್ನಂ ಗೌತಮಸ್ಯ ಮಹಾತ್ಮನಃ ।
ಕ್ರೋಧಮುತ್ಪಾದ್ಯ ಹಿ ಮಯಾ ಸುರಕಾರ್ಯಮಿದಂ ಕೃತಮ್ ॥ ೨

ಅಫಲೋಽಸ್ಮಿ ಕೃತಸ್ತೇನ ಕ್ರೋಧಾತ್ ಸಾ ಚ ನಿರಾಕೃತಾ ।
ಶಾಪಮೋಕ್ಷೇಣ ಮಹತಾ ತಪೋಽಸ್ಯಾಪಹೃತಂ ಮಯಾ ॥ ೩

ತಸ್ಮಾತ್ ಸುರವರಾಃ ಸರ್ವೇ ಸರ್ಷಿಸಂಘಾಃ ಸಚಾರಣಾಃ ।
ಸುರಸಾಹ್ಯಕರಂ ಸರ್ವೇ ಸಫಲಂ ಕರ್ತುಮರ್ಹಥ ॥ ೪

## ಸರ್ಗ ೪೯

### ಇಂದ್ರನಿಗೆ ಕುರಿಯ ವೃಷಣವನ್ನು ಜೋಡಿಸುವುದು. ಅಹಲ್ಯೆಯ ಶಾಪವಿಮೋಚನೆ.

ವಿಶ್ವಾಮಿತ್ರರು ಹೇಳಿದರು: “ರಾಘವ, ಹೀಗೆ ವೃಷಣಹೀನನಾದ ಇಂದ್ರನು ಅಗ್ನಿಪ್ರಮುಖರಾದ ದೇವತೆಗಳ ಬಳಿಗೆ ಹೋಗಿ ಕಣ್ಣಿನಲ್ಲಿ ದೈನ್ಯವನ್ನು ವ್ಯಕ್ತಪಡಿಸುತ್ತ “ಗೌತಮಮುನಿಯ ತಪಸ್ಸಿಗೆ ವಿಘ್ನವನ್ನುಂಟು ಮಾಡುವುದಕ್ಕಾಗಿ ನಾನು ಈ ರೀತಿ ಮಾಡಿ ಆತನಿಗೆ ಕ್ರೋಧವನ್ನು ಹುಟ್ಟಿಸಿದೆ. ಇದು ದೇವಕಾರ್ಯ! (೧-೨). ಇದರ ಫಲವಾಗಿ ನಾನು ವೃಷಣಹೀನನಾದೆ. ಅಹಲ್ಯೆಯು ಪರಿತ್ಯಕ್ತಳಾದಳು. ಭಯಂಕರವಾದ ಶಾಪವನ್ನು ಕೊಡಿಸಿ ಗೌತಮನ ತಪಸ್ಸಿನಲ್ಲಿ ಬಹುಭಾಗವನ್ನು ಹಾಳು ಮಾಡಿದ್ದೇನೆ! ಆದ್ದರಿಂದ ದೇವತೆಗಳು ಸೇರಿ ನೀವೆಲ್ಲರೂ ನಿಮ್ಮ ಕಾರ್ಯವನ್ನು ಸಾಧಿಸಿಕೊಟ್ಟ ನನಗೆ ವೃಷಣವು ದೊರೆಯುವಂತೆ ಮಾಡಬೇಕು!”

ಶತಕ್ರತೋರ್ವಚಃ ಶ್ರುತ್ವಾ ದೇವಾಃ ಸಾಗ್ನಿಪುರೋಗಮಾಃ ।
ಪಿತೃದೇವಾನುಪೇತ್ಯಾಹುಃ ಸರ್ವೇ ಸಹ ಮರುದ್ಗಣೈಃ ॥ ೫
ಪುರಾಽವಿಚಾರ್ಯ ಮೋಹೇನ ಮುನಿಪತ್ನೀಂ ಶತಕ್ರತುಃ ।
ಧರ್ಷಯಿತ್ವಾ ಮುನೇಃ ಶಾಪಾತ್ತತ್ರೈವ ವಿಫಲೀಕೃತಃ ॥ ೬
ಇದಾನೀಂ ಕುಪ್ಯತೇ ದೇವಾನ್ ದೇವರಾಜಃ ಪುರಂದರಃ ।
ಅಯಂ ಮೇಷಃ ಸವೃಷಣಃ ಶಕ್ರೋ ಹ್ಯವೃಷಣಃ ಕೃತಃ ॥ ೭
ಮೇಷಸ್ಯ ವೃಷಣೌ ಗೃಹ್ಯ ಶಕ್ರಾಯಾಶು ಪ್ರಯುಚ್ಛತ ।
ಅಫಲಸ್ತು ಕೃತೋ ಮೇಷಃ ಪರಾಂ ತುಷ್ಟಿಂ ಪ್ರದಾಸ್ಯತಿ ॥ ೮
ಭವತಾಂ ಹರ್ಷಣಾರ್ಥೇ ಚ ಯೇ ಚ ದಾಸ್ಯಂತಿ ಮಾನವಾಃ ।
ಅಕ್ಷಯಂ ಹಿ ಫಲಂ ತೇಷಾಂ ಯೂಯಂ ದಾಸ್ಯಥ ಪುಷ್ಕಲಮ್ ॥ ೯
ಅಗ್ನೇಸ್ತು ವಚನಂ ಶ್ರುತ್ವಾ ಪಿತೃದೇವಾಃ ಸಮಾಗತಾಃ ।
ಉತ್ಪಾಟ್ಯ ಮೇಷವೃಷಣೌ ಸಹಸ್ರಾಕ್ಷೇ ನ್ಯವೇಶಯನ್ ॥ ೧೦
ತದಾಪ್ರಭೃತಿ ಕಾಕುತ್ಸ್ಥ ಪಿತೃದೇವಾಃ ಸಮಾಗತಾಃ ।
ಅಫಲಾನ್ ಭುಂಜತೇ ಮೇಷಾನ್ ಫಲೈಸ್ತೇಷಾಮಯೋಜಯನ್ ॥

ಎಂದು ನುಡಿದನು (೩-೪). ಆಗ ಅಗ್ನಿಪ್ರಮುಖರಾದ ದೇವತೆಗಳು ಮರುದ್ಗಣಗಳೊಡನೆ ಪಿತೃದೇವತೆಗಳನ್ನು ಸಮೀಪಿಸಿದರು. ಅಗ್ನಿಯು "ಪಿತೃದೇವತೆಗಳೆ, ಇಂದ್ರನು ವಿಚಾರವಿಲ್ಲದೆ ಗೌತಮಮುನಿಯ ಪತ್ನಿಯನ್ನು ಕಾಮಿಸಿ ಆ ಮುನಿಯ ಶಾಪದಿಂದ ವೃಷಣಹೀನನಾಗಿದ್ದಾನೆ. ಈಗ ದೇವತೆಗಳಮೇಲೆ ಕೋಪವನ್ನು ಕಾರುತ್ತಿದ್ದಾನೆ! ನಿಮಗೆ ಅರ್ಪಿಸುವ ಮೇಷವು ವೃಷಣಯುಕ್ತವಾಗಿದೆಯಷ್ಟೆ. ಇದರ ವೃಷಣವನ್ನು ಇಂದ್ರನಿಗೆ ಜೋಡಿಸಿರಿ (೫-೭). ವೃಷಣಹೀನವಾದ ಮೇಷದಿಂದಲೇ ನೀವು ಬೇಕಾದಷ್ಟು ತೃಪ್ತಿಯನ್ನು ಅನುಭವಿಸುವಿರಿ. ಮನುಷ್ಯರು ವೃಷಣಹೀನವಾದ ಮೇಷವನ್ನು ನಿಮಗೆ ಅರ್ಪಿಸಿದರೆ ಅವರಿಗೆ ಅಕ್ಷಯ ಫಲವನ್ನು ಅನುಗ್ರಹಿಸಿರಿ" ಎಂದನು (೮-೯). ಅಗ್ನಿಯ ಮಾತಿನಂತೆ ಪಿತೃದೇವತೆಗಳು ಮೇಷದ ವೃಷಣಗಳನ್ನು ಕಿತ್ತು ಇಂದ್ರನಿಗೆ ಜೋಡಿಸಿದರು. ಅಲ್ಲಿಂದ ಮೊದಲಾಗಿ ಪಿತೃದೇವತೆಗಳು ವೃಷಣಹೀನವಾದ ಮೇಷಗಳಿಂದ ತೃಪ್ತರಾಗಿ ದಾತೃಗಳಿಗೆ

*

ಇಂದ್ರಸ್ತು ಮೇಷವೃಷಣಸ್ತದಾಪ್ರಭೃತಿ ರಾಘವ ।
ಗೌತಮಸ್ಯ ಪ್ರಭಾವೇಣ ತಪಸಶ್ಚ ಮಹಾತ್ಮನಃ ॥ ೧೨

ತದಾಗಚ್ಛ ಮಹಾತೇಜ ಆಶ್ರಮಂ ಪುಣ್ಯಕರ್ಮಣಃ ।
ತಾರಯೈನಾಂ ಮಹಾಭಾಗಾಮಹಲ್ಯಾಂ ದೇವರೂಪಿಣೀಮ್ ॥ ೧೩

ವಿಶ್ವಾಮಿತ್ರವಚಃ ಶ್ರುತ್ವಾ ರಾಘವಃ ಸಹಲಕ್ಷ್ಮಣಃ ।
ವಿಶ್ವಾಮಿತ್ರಂ ಪುರಸ್ಕೃತ್ಯ ತಮಾಶ್ರಮಮಥಾವಿಶತ್ ॥ ೧೪

ದದರ್ಶ ಚ ಮಹಾಭಾಗಾಂ ತಪಸಾ ದ್ಯೋತಿತಪ್ರಭಾಮ್ ।
ಲೋಕೈರಪಿ ಸಮಾಗಮ್ಯ ದುರ್ನಿರೀಕ್ಷ್ಯಾಂ ಸುರಾಸುರೈಃ ॥ ೧೫

ಪ್ರಯತ್ನಾನ್ನಿರ್ಮಿತಾಂ ಧಾತ್ರಾ ದಿವ್ಯಾಂ ಮಾಯಾಮಯೀಮಿವ ।
ಸತುಷಾರಾವೃತಾಂ ಸಾಭ್ರಾಂ ಪೂರ್ಣಚಂದ್ರಪ್ರಭಾಮಿವ ॥ ೧೬

ಧೂಮೇನಾಪಿ ಪರೀತಾಂಗೀಂ ದೀಪ್ತಾಮಗ್ನಿಶಿಖಾಮಿವ ।
ಮಧ್ಯೇಽಂಭಸೋ ದುರಾಧರ್ಷಾಂ ದೀಪ್ತಾಂ ಸೂರ್ಯಪ್ರಭಾಮಿವ

---

ಫಲವನ್ನು ಅನುಗ್ರಹಿಸುತ್ತಿದ್ದಾರೆ. ರಾಮ, ಹೀಗೆ ಗೌತಮಮುನಿಯ ತಪಃ ಪ್ರಭಾವದಿಂದ ಇಂದ್ರನು ಮೇಷವೃಷಣನಾದನು (೧೦-೧೨). "ಹೇ ತೇಜೋ ನಿಧಿ—ರಾಮ, ಆ ಪುಣ್ಯಾತ್ಮನ ಆಶ್ರಮದೊಳಗೆ ಹೋಗೋಣ ಬಾ. ಅದೃಶ್ಯ ದೇವತೆಯಂತೆ ಇಲ್ಲಿರುವ ಮಹಾತ್ಮಳಾದ ಅಹಲ್ಯೆಯನ್ನು ಉದ್ಧಾರಮಾಡು." ಆಗ ವಿಶ್ವಾಮಿತ್ರರ ವಚನದಂತೆ ಶ್ರೀರಾಮನು ಅವರನ್ನು ಮುಂದೆಮಾಡಿ ಕೊಂಡು ಲಕ್ಷ್ಮಣನೊಡನೆ ಆಶ್ರಮವನ್ನು ಪ್ರವೇಶಿಸಿದನು (೧೩-೧೪). ಅಲ್ಲಿ ದೇವಾಸುರ ಮಾನವರಿಗೂ ಅಗೋಚರಳಾಗಿದ್ದ ಆ ಮಹಾತ್ಮಳನ್ನು ಕಂಡನು. (ದೀರ್ಘಕಾಲದ) ತಪಸ್ಸಿನಿಂದ ಅಹಲ್ಯೆಯ ಸುತ್ತಲೂ ದಿವ್ಯಪ್ರಭೆಯು ಹರಡಿತ್ತು. ಬ್ರಹ್ಮನು ಪ್ರಯತ್ನಪೂರ್ವಕವಾಗಿ ಸೃಷ್ಟಿಸಿದ ಮಾಯಾ ಮಯಳಾದ ದೇವತೆಯಂತೆ, (ಭಸ್ಮದಿಂದ ಆವೃತಳಾದ ಪ್ರಯುಕ್ತ) ಮಂಜು ಮೋಡಗಳಿಂದ ಮರೆಯಾದ ಪೂರ್ಣಚಂದ್ರ ಪ್ರಭೆಯಂತೆ, ಹೊಗೆಮುಚ್ಚಿದ ಅಗ್ನಿಜ್ವಾಲೆಯಂತೆ, ಜಲದಲ್ಲಿ ಪ್ರತಿಬಿಂಬಿಸಿರುವ ಉಜ್ಜ್ವಲವಾದ ಸೂರ್ಯ ದೀಪ್ತಿಯಂತೆ ಇದ್ದ ಅಹಲ್ಯೆಯನ್ನು ಶ್ರೀರಾಮನು ನೋಡಿದನು (೧೫-೧೭).

ಸಾ ಹಿ ಗೌತಮವಾಕ್ಯೇನ ದುರ್ನಿರೀಕ್ಷ್ಯಾ ಬಭೂವ ಹ ।
ತ್ರಯಾಣಾಮಪಿ ಲೋಕಾನಾಂ ಯಾವದ್ರಾಮಸ್ಯ ದರ್ಶನಮ್ ॥

ಶಾಪಸ್ಯಾಂತಮುಪಾಗಮ್ಯ ತೇಷಾಂ ದರ್ಶನಮಾಗತಾ ।
ರಾಘವೌ ತು ತತಸ್ತಸ್ಯಾಃ ಪಾದೌ ಜಗೃಹತುಸ್ತದಾ ॥ ೧೯

ಸ್ಮರಂತೀ ಗೌತಮವಚಃ ಪ್ರತಿಜಗ್ರಾಹ ಸಾ ಚ ತೌ ।
ಪಾದ್ಯಮರ್ಘ್ಯಂ ತಥಾತಿಥ್ಯಂ ಚಕಾರ ಸುಸಮಾಹಿತಾ ॥ ೨೦

ಪ್ರತಿಜಗ್ರಾಹ ಕಾಕುತ್ಸ್ಥೋ ವಿಧಿದೃಷ್ಟೇನ ಕರ್ಮಣಾ ।
ಪುಷ್ಪವೃಷ್ಟಿರ್ಮಹತ್ಯಾಸೀದ್ದೇವದುಂದುಭಿನಿಃಸ್ವನೈಃ ॥ ೨೧

ಗಂಧರ್ವಾಪ್ಸರಸಾಂ ಚಾಪಿ ಮಹಾನಾಸೀತ್ ಸಮುತ್ಸವಃ ।
ಸಾಧು ಸಾಧ್ವಿತಿ ದೇವಾಸ್ತಾಮಹಲ್ಯಾಂ ಸಮಪೂಜಯನ್ ॥ ೨೨

ತಪೋಬಲವಿಶುದ್ಧಾಂಗೀಂ ಗೌತಮಸ್ಯ ವಶಾನುಗಾಮ್ ।
ಗೌತಮೋಽಪಿ ಮಹಾತೇಜಾ ಅಹಲ್ಯಾಸಹಿತಃ ಸುಖೀ ॥ ೨೩

---

ಅವಳು ಗೌತಮರ ಶಾಪದಿಂದ ಮೂರುಲೋಕದ ಜನರಿಗೂ ಅದೃಶ್ಯಳಾಗಿದ್ದಳು. ಈಗ ಶ್ರೀರಾಮನ ದರ್ಶನದಿಂದ ಶಾಪವಿಮೋಚನೆಯಾಗಿ ಅವರೆಲ್ಲರಿಗೂ ಕಾಣಿಸಿದಳು (೧೮-೧೯) ರಾಮಲಕ್ಷ್ಮಣರು ನೇರವಾಗಿ ಹೋಗಿ ಅಹಲ್ಯೆಯ ಪಾದಗಳನ್ನು ಮುಟ್ಟಿ ವಂದಿಸಿದರು. ಅವಳಿಗೆ ಗೌತಮರ ವಚನವು ಸ್ಮರಣೆಗೆ ಬಂದಿತು ಅರ್ಘ್ಯಪಾದ್ಯಾದಿಗಳನ್ನಿತ್ತು ನಿಷ್ಠೆಯಿಂದ ಉಪಚರಿಸಿದಳು. ಶ್ರೀರಾಮನು ವಿಧಿವತ್ತಾಗಿ ಅವಳ ಸತ್ಕಾರವನ್ನು ಸ್ವೀಕರಿಸಿದನು (೨೦-೨೧). ಆಕಾಶದಿಂದ ಪುಷ್ಪವೃಷ್ಟಿಯಾಯಿತು. ದೇವದುಂದುಭಿಗಳು ಮೊಳಗಿದವು. ಗಂಧರ್ವರ ಹಾಡು, ಅಪ್ಸರೆಯರ ನೃತ್ಯ ಇವುಗಳೊಡನೆ ದೊಡ್ಡ ಉತ್ಸವ ನಡೆಯಿತು. ಇದನ್ನರಿತು ಗೌತಮಮುನಿಗಳು ಅಲ್ಲಿಗೆ ಬಂದು ತಪೋಬಲದಿಂದ ಪರಿಶುದ್ಧಳಾದ ಅಹಲ್ಯೆಯನ್ನು ಸ್ವೀಕರಿಸಲು, ದೇವತೆಗಳು 'ಸಾಧು ಸಾಧು' ಎನ್ನುತ್ತ ಅಹಲ್ಯೆಯನ್ನು ಪೂಜಿಸಿದರು (೨೨-೨೩).

ರಾಮಂ ಸಂಪೂಜ್ಯ ವಿಧಿವತ್ತಪಸ್ತೇಪೇ ಮಹಾತಪಾಃ ।
ರಾಮೋಽಪಿ ಪರಮಾಂ ಪೂಜಾಂ ಗೌತಮಸ್ಯ ಮಹಾಮುನೇಃ ॥
ಸಕಾಶಾದ್ವಿಧಿವತ್ ಪ್ರಾಪ್ಯ ಜಗಾಮ ಮಿಥಿಲಾಂ ತತಃ ॥ ೨೪

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕೋನಪಂಚಾಶಃ ಸರ್ಗಃ



ಪರಿಶುದ್ಧಳಾದ ಅಹಲ್ಯೆಯನ್ನು ಸ್ವೀಕರಿಸಿದಮೇಲೆ ಗೌತಮರ ಮನಸ್ಸಿಗೂ ನೆಮ್ಮದಿಯಾಯಿತು. ಅವರು ಶ್ರೀರಾಮನನ್ನು ವಿಧಿವತ್ತಾಗಿ ಪೂಜಿಸಿ ಪುನಃ ತಪಸ್ಸಿನಲ್ಲಿ ನಿರತರಾದರು. ಶ್ರೀರಾಮನು ಗೌತಮರ ಸತ್ಕಾರವನ್ನು ಸ್ವೀಕರಿಸಿ ಮಿಥಿಲೆಗೆ ಪ್ರಯಾಣಮಾಡಿದನು (೨೪).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ನಲವತ್ತೊಂಬತ್ತನೆಯ ಸರ್ಗ



## ಪಂಚಾಶಃ ಸರ್ಗಃ

### ಜನಕಸಮಾಗಮಃ

ತತಃ ಪ್ರಾಗುತ್ತರಾಂ ಗತ್ವಾ ರಾಮಃ ಸೌಮಿತ್ರಿಣಾ ಸಹ ।
ವಿಶ್ವಾಮಿತ್ರಂ ಪುರಸ್ಕೃತ್ಯ ಯಜ್ಞವಾಟಮುಪಾಗಮತ್ ॥ ೧
ರಾಮಸ್ತು ಮುನಿಶಾರ್ದೂಲಮುವಾಚ ಸಹಲಕ್ಷ್ಮಣಃ ।
ಸಾಧ್ವೀ ಯಜ್ಞಸಮೃದ್ಧಿರ್ಹಿ ಜನಕಸ್ಯ ಮಹಾತ್ಮನಃ ॥ ೨
ಬಹೂನೀಹ ಸಹಸ್ರಾಣಿ ನಾನಾದೇಶನಿವಾಸಿನಾಮ್ ।
ಬ್ರಾಹ್ಮಣಾನಾಂ ಮಹಾಭಾಗ ವೇದಾಧ್ಯಯನಶಾಲಿನಾಮ್ ॥ ೩
ಋಷಿವಾಟಾಶ್ಚ ದೃಶ್ಯಂತೇ ಶಕಟೀಶತಸಂಕುಲಾಃ ।
ದೇಶೋ ವಿಧೀಯತಾಂ ಬ್ರಹ್ಮನ್ ಯತ್ರ ವತ್ಸ್ಯಾಮಹೇ ವಯಮ್
ರಾಮಸ್ಯ ವಚನಂ ಶ್ರುತ್ವಾ ವಿಶ್ವಾಮಿತ್ರೋ ಮಹಾಮುನಿಃ ।
ನಿವೇಶಮಕರೋದ್ದೇಶೇ ವಿವಿಕ್ತೇ ಸಲಿಲಾನ್ವಿತೇ ॥ ೪

### ಸರ್ಗ ೫೦

ಜನಕನು ವಿಶ್ವಾಮಿತ್ರಮುನಿಗಳನ್ನು ಸತ್ಕರಿಸುವುದು. ವಿಶ್ವಾಮಿತ್ರರು ಶ್ರೀರಾಮನ ವೃತ್ತಾಂತವನ್ನು ಹೇಳಿ ಶಿವಧನುಸ್ಸಿನ ವಿಷಯವನ್ನು ಪ್ರಸ್ತಾವಿಸುವುದು.

ಅಲ್ಲಿಂದ ಈಶಾನ್ಯದಿಕ್ಕಿಗೆ ಪ್ರಯಾಣಮಾಡಿ ಶ್ರೀರಾಮಲಕ್ಷ್ಮಣರು ವಿಶ್ವಾಮಿತ್ರಮುನಿಗಳೊಡನೆ ಜನಕಮಹಾರಾಜನ ಯಜ್ಞಶಾಲೆಯ ಸಮೀಪಕ್ಕೆ ಬಂದರು. ರಾಮನು “ಮಹರ್ಷಿಗಳೆ, ಮಹಾತ್ಮನಾದ ಜನಕರಾಜನ ಯಜ್ಞಸಂಪತ್ತು ಬಹಳ ಚೆನ್ನಾಗಿದೆ (೧–೨). ವೇದಾಧ್ಯಯನ ಸಂಪನ್ನರಾದ ಸಾವಿರಾರು ಬ್ರಾಹ್ಮಣರು ನಾನಾದೇಶಗಳಿಂದ ಬಂದಿದ್ದಾರೆ. ಋಷಿಗಳ ನಿವಾಸಸ್ಥಾನದಲ್ಲಿ ನೂರಾರು ಗಾಡಿಗಳು ಬಂದಿಳಿದಿವೆ. ನಾವು ಇಳಿದುಕೊಳ್ಳಬೇಕಾದ ಸ್ಥಳವನ್ನು ಗೊತ್ತುಮಾಡೋಣವಾಗಲಿ” ಎಂದು ನಿವೇದಿಸಿದನು (೩–೪). ವಿಶ್ವಾಮಿತ್ರರು ಜಲಸಮೀಪದಲ್ಲಿ ಜನಸಂಕುಲ

ವಿಶ್ವಾಮಿತ್ರಮನುಪ್ರಾಪ್ತಂ ಶ್ರುತ್ವಾ ಸ ನೃಪತಿಸ್ತದಾ ।
ಶತಾನಂದಂ ಪುರಸ್ಕೃತ್ಯ ಪುರೋಹಿತಮನಿಂದಿತಮ್ ॥ ೬
ಪ್ರತ್ಯುಜ್ಜಗಾಮ ಸಹಸಾ ವಿನಯೇನ ಸಮನ್ವಿತಃ ।
ಋತ್ವಿಜೋಽಪಿ ಮಹಾತ್ಮಾನಸ್ತ್ವರ್ಘ್ಯಮಾದಾಯ ಸತ್ವರಮ್ ॥ ೭
ವಿಶ್ವಾಮಿತ್ರಾಯ ಧರ್ಮೇಣ ದದುರ್ಮಂತ್ರಪುರಸ್ಕೃತಮ್ ।
ಪ್ರತಿಗೃಹ್ಯ ತು ತಾಂ ಪೂಜಾಂ ಜನಕಸ್ಯ ಮಹಾತ್ಮನಃ ॥ ೮
ಪಪ್ರಚ್ಛ ಕುಶಲಂ ರಾಜ್ಞೋ ಯಜ್ಞಸ್ಯ ಚ ನಿರಾಮಯಮ್ ।
ಸ ತಾಂಶ್ಚಾಪಿ ಮುನೀನ್ ಪೃಷ್ಟ್ವಾ ಸೋಪಾಧ್ಯಾಯಪುರೋಧಸಃ
ಯಥಾನ್ಯಾಯಂ ತತಃ ಸರ್ವೈಃ ಸಮಾಗಚ್ಛತ್ ಪ್ರಹೃಷ್ಟವತ್ ।
ಅಥ ರಾಜಾ ಮುನಿಶ್ರೇಷ್ಠಂ ಕೃತಾಂಜಲಿರಭಾಷತ ॥ ೧೦
ಆಸನೇ ಭಗವಾನಾಸ್ತಾಂ ಸಹೈಭಿರ್ಮುನಿಪುಂಗವೈಃ ।
ಜನಕಸ್ಯ ವಚಃ ಶ್ರುತ್ವಾ ನಿಷಸಾದ ಮಹಾಮುನಿಃ ॥ ೧೧
ಪುರೋಧಾ ಋತ್ವಿಜಶ್ಚೈವ ರಾಜಾ ಚ ಸಹ ಮಂತ್ರಿಭಿಃ ।
ಆಸನೇಷು ಯಥಾನ್ಯಾಯಮುಪವಿಷ್ಟಾನ್ ಸಮಂತತಃ ॥ ೧೨

---

ವಿಲ್ಲದ ಒಂದು ಸ್ಥಳವನ್ನು ಗೊತ್ತುಮಾಡಿದರು. ಅಷ್ಟರಲ್ಲಿ ವಿಶ್ವಾಮಿತ್ರರು ಬಂದಿರುವ ಸುದ್ದಿ ಜನಕರಾಜನಿಗೆ ಮುಟ್ಟಿತು. ತತ್‌ಕ್ಷಣದಲ್ಲಿ ಅವನು ಪುರೋಹಿತರಾದ ಶತಾನಂದರನ್ನು ಮುಂದೆಮಾಡಿಕೊಂಡು ಪೂಜಾಸಾಮಗ್ರಿಯನ್ನು ಹಿಡಿದು ಋತ್ವಿಜರೊಡನೆ ಬಂದು ವಿನಯದಿಂದ ವಿಶ್ವಾಮಿತ್ರರನ್ನು ಸ್ವಾಗತಿಸಿದನು (೫-೭). ವಿಶ್ವಾಮಿತ್ರರು ಜನಕರಾಜನ ಸತ್ಕಾರವನ್ನು ಸ್ವೀಕರಿಸಿ ರಾಜನ ಕುಶಲವನ್ನು ಕೇಳಿ ಯಜ್ಞವು ನಿರ್ವಿಘ್ನವಾಗಿ ನಡೆಯುತ್ತಿದೆಯೆ ಎಂದು ವಿಚಾರಿಸಿದರು. ಅನಂತರ ಶತಾನಂದರು ಋತ್ವಿಜರೇ ಮೊದಲಾದವರೊಡನೆ ಕುಶಲಸಂಭಾಷಣೆಯನ್ನು ನಡೆಸುತ್ತ ಸಂತೋಷದಿಂದ ಋಷಿಗಳೊಡನೆ ಮಿಳಿತರಾದರು (೮-೯) ಜನಕನು ಕೈಮುಗಿದುಕೊಂಡು 'ತಾವೂ ಋಷಿಗಳೆಲ್ಲರೂ ಪೀಠದಲ್ಲಿ ಕುಳಿತುಕೊಳ್ಳಬೇಕು' ಎಂದು ಪ್ರಾರ್ಥಿಸಿದನು. ಅದರಂತೆ ವಿಶ್ವಾಮಿತ್ರರು ಪೀಠದಲ್ಲಿ ಕುಳಿತರು. ಆಮೇಲೆ ಋತ್ವಿಜರೂ ರಾಜನೂ ಮಂತ್ರಿಗಳೂ ತಮ್ಮ ತಮ್ಮ ಆಸನಗಳಲ್ಲಿ ಕುಳಿತರು (೧೦-೧೨).

ದೃಷ್ಟ್ವಾ ಸ ನೃಪತಿಸ್ತತ್ರ ವಿಶ್ವಾಮಿತ್ರಮಥಾಬ್ರವೀತ್ ।
ಅದ್ಯ ಯಜ್ಞಸಮೃದ್ಧಿರ್ಮೇ ಸಫಲಾ ದೈವತೈಃ ಕೃತಾ ॥ ೧೩

ಅದ್ಯ ಯಜ್ಞಫಲಂ ಪ್ರಾಪ್ತಂ ಭಗವದ್ದರ್ಶನಾನ್ಮಯಾ ।
ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಯಸ್ಯ ಮೇ ಮುನಿಪುಂಗವ ॥ ೧೪

ಯಜ್ಞೋಪಸದನಂ ಬ್ರಹ್ಮನ್ ಪ್ರಾಪ್ತೋಽಸಿ ಮುನಿಭಿಃ ಸಹ ।
ದ್ವಾದಶಾಹಂ ತು ಬ್ರಹ್ಮರ್ಷೇ ಶೇಷಮಾಹುರ್ಮನೀಷಿಣಃ ॥ ೧೫

ತತೋ ಭಾಗಾರ್ಥಿನೋ ದೇವಾನ್ ದ್ರಷ್ಟುಮರ್ಹಸಿ ಕೌಶಿಕ ।
ಇತ್ಯುಕ್ತ್ವಾ ಮುನಿಶಾರ್ದೂಲಂ ಪ್ರಹೃಷ್ಟವದನಸ್ತದಾ ॥ ೧೬

ಪುನಸ್ತಂ ಪರಿಪಪ್ರಚ್ಛ ಪ್ರಾಂಜಲಿಃ ಪ್ರಣತೋ ನೃಪಃ ।
ಇಮೌ ಕುಮಾರೌ ಭದ್ರಂ ತೇ ದೇವತುಲ್ಯಪರಾಕ್ರಮೌ ॥ ೧೭

ಗಜಸಿಂಹಗತೀ ವೀರೌ ಶಾರ್ದೂಲವೃಷಭೋಪಮೌ ।
ಪದ್ಮಪತ್ರವಿಶಾಲಾಕ್ಷೌ ಖಡ್ಗತೂಣೀಧನುರ್ಧರೌ ॥ ೧೮

---

ಜನಕರಾಜನು ವಿಶ್ವಾಮಿತ್ರರೊಡನೆ "ಬ್ರಹ್ಮರ್ಷಿಗಳೆ, ಇಂದು ನನ್ನ ಯಜ್ಞವು ಸಮೃದ್ಧವಾಯಿತು. ದೇವತೆಗಳು ಫಲವನ್ನು ಅನುಗ್ರಹಿಸಿದರು. ತಮ್ಮ ದರ್ಶನದಿಂದ ಈ ದಿನ ನನ್ನ ಯಜ್ಞಕ್ಕೆ ಫಲ ದೊರಕಿತು. ಈ ಮುನಿಗಳೊಡನೆ ತಾವು ಯಜ್ಞಶಾಲೆಗೆ ದಯಮಾಡಿಸಿದ್ದರಿಂದ ನಾನು ಧನ್ಯನಾದೆ. ಅನುಗೃಹೀತನಾದೆ. ಇನ್ನು ಹನ್ನೆರಡು ದಿನಗಳವರೆಗೆ ದೀಕ್ಷೆಯನ್ನು ನಡೆಸಬೇಕೆಂದು ಋತ್ವಿಜರು ಹೇಳಿದ್ದಾರೆ (೧೩-೧೫). ಅನಂತರ ಹವಿರ್ಭಾಗವನ್ನು ಸ್ವೀಕರಿಸುವುದಕ್ಕೆ ದೇವತೆಗಳು ಬರುವುದನ್ನು ತಾವು ನೋಡಬೇಕು" ಎಂದು ಹೇಳಿದನು. ಪುನಃ ವಿನಯದಿಂದ "ಕೌಶಿಕಮುನಿಗಳೆ, ಬಹಳ ಒಳ್ಳೆಯದಾಯಿತು. ಈ ಕುಮಾರರು ಯಾರು? ದೇವತೆಗಳಂತೆ ಕಾಣುತ್ತಾರಲ್ಲ (೧೬-೧೭). ಆನೆಯಂತೆ ಸಿಂಹದಂತೆ ಗಂಭೀರವಾದ ನಡಿಗೆ. ಶಾರ್ದೂಲದಂತೆ ವೃಷಭದಂತೆ ವೀರರೂ (ಉನ್ನತಸ್ಕಂಧರೂ) ಆಗಿದ್ದಾರೆ. ಕಣ್ಣುಗಳು ಪದ್ಮದಳದಂತೆ ವಿಶಾಲವಾಗಿವೆ. ಖಡ್ಗ ಬತ್ತಳಿಕೆ ಧನುಸ್ಸುಗಳನ್ನು ಧರಿಸಿ

ಅಶ್ವಿನಾವಿವ ರೂಪೇಣ ಸಮುಪಸ್ಥಿತಯೌವನೌ ।
ಯದೃಚ್ಛಯೇವ ಗಾಂ ಪ್ರಾಪ್ತೌ ದೇವಲೋಕಾದಿವಾಮರೌ ॥ ೧೯

ಕಥಂ ಪದ್ಭ್ಯಾಮಿಹ ಪ್ರಾಪ್ತೌ ಕಿಮರ್ಥಂ ಕಸ್ಯ ವಾ ಮುನೇ ।
ವರಾಯುಧಧರೌ ವೀರೌ ಕಸ್ಯ ಪುತ್ರೌ ಮಹಾಮುನೇ ॥ ೨೦

ಭೂಷಯಂತಾವಿಮಂ ದೇಶಂ ಚಂದ್ರಸೂರ್ಯಾವಿವಾಂಬರಮ್ ।
ಪರಸ್ಪರಸ್ಯ ಸದೃಶೌ ಪ್ರಮಾಣೇಂಗಿತಚೇಷ್ಟಿತೈಃ ॥ ೨೧

ಕಾಕಪಕ್ಷಧರೌ ವೀರೌ ಶ್ರೋತುಮಿಚ್ಛಾಮಿ ತತ್ತ್ವತಃ ।
ತಸ್ಯ ತದ್ವಚನಂ ಶ್ರುತ್ವಾ ಜನಕಸ್ಯ ಮಹಾತ್ಮನಃ ॥ ೨೨

ನ್ಯವೇದಯದಮೇಯಾತ್ಮಾ ಪುತ್ರೌ ದಶರಥಸ್ಯ ತೌ ।
ಸಿದ್ಧಾಶ್ರಮನಿವಾಸಂ ಚ ರಾಕ್ಷಸಾನಾಂ ವಧಂ ತಥಾ ॥ ೨೩

ತಚ್ಚಾಗಮನಮವ್ಯಗ್ರಂ ವಿಶಾಲಾಯಾಶ್ಚ ದರ್ಶನಮ್ ।
ಅಹಲ್ಯಾದರ್ಶನಂ ಚೈವ ಗೌತಮೇನ ಸಮಾಗಮಮ್ ॥ ೨೪

---

ದ್ದಾರೆ ರೂಪದಲ್ಲಿ ಅಶ್ವಿನೀದೇವತೆಗಳಂತೆ ಇದ್ದಾರಲ್ಲ. ಈ ತರುಣರು ಯಾರು? ದೇವಲೋಕದಿಂದ ಸ್ವೇಚ್ಛೆಯಾಗಿ ಭೂಮಿಗೆ ಇಳಿದುಬಂದ ದೇವತೆಗಳಿರಬಹುದೆ? (೧೮-೧೯). ಬರಿಯ ಕಾಲಿನಿಂದಲೇ ಇಲ್ಲಿಗೆ ನಡೆದು ಬಂದರೆ? ಏನಿದು? ಇವರ ಕೈಯಲ್ಲಿ ಉತ್ತಮೋತ್ತಮವಾದ ಆಯುಧಗಳಿವೆ. ಇವರು ಯಾರ ಮಕ್ಕಳು, ಋಷಿಗಳೆ? ಸೂರ್ಯಚಂದ್ರರು ಆಕಾಶವನ್ನು ಅಲಂಕರಿಸುವಂತೆ, ಇವರು ನನ್ನ ದೇಶವನ್ನು ಅಲಂಕರಿಸಿದ್ದಾರೆ. ನಿಲುವು, ನಡೆ, ನುಡಿಗಳಲ್ಲಿ ಒಬ್ಬರಂತೆ ಒಬ್ಬರಿದ್ದಾರೆ. ಈ ವೀರರು ಇನ್ನೂ ಮುಂಗುರುಳುಗಳನ್ನು ಧರಿಸಿದ ಚಿಕ್ಕಪ್ರಾಯದವರು. ಇವರು ಯಾರಿರಬಹುದೆಂದು ತಿಳಿಯಲು ನನಗೆ ಕುತೂಹಲವಾಗಿದೆ" ಎಂದನು (೨೦-೨೧). ವಿಶ್ವಾಮಿತ್ರರು ಜನಕನಿಗೆ ಅವರು ದಶರಥ ಮಹಾರಾಜನ ಕುಮಾರರೆಂದು ತಿಳಿಸಿದರು ಅಲ್ಲದೆ ರಾಮಲಕ್ಷ್ಮಣರು ಸಿದ್ಧಾಶ್ರಮಕ್ಕೆ ಬಂದಿದ್ದ ವಿಚಾರ, ರಾಕ್ಷಸವಧೆ, ವಿಶಾಲಾನಗರದ ದರ್ಶನ, ಅಹಲ್ಯಾದರ್ಶನ, ಗೌತಮರ

ಮಹಾಧನುಷಿ ಜಿಜ್ಞಾಸಾಂ ಕರ್ತುಮಾಗಮನಂ ತಥಾ ।
ಏತತ್ ಸರ್ವಂ ಮಹಾತೇಜಾ ಜನಕಾಯ ಮಹಾತ್ಮನೇ ॥ ೨೫

ನಿವೇದ್ಯ ವಿರರಾಮಾಥ ವಿಶ್ವಾಮಿತ್ರೋ ಮಹಾಮುನಿಃ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಪಂಚಾಶಃ ಸರ್ಗಃ

---

## ಏಕಪಂಚಾಶಃ ಸರ್ಗಃ

ವಿಶ್ವಾಮಿತ್ರವೃತ್ತಮ್

ತಸ್ಯ ತದ್ವಚನಂ ಶ್ರುತ್ವಾ ವಿಶ್ವಾಮಿತ್ರಸ್ಯ ಧೀಮತಃ ।
ಹೃಷ್ಟರೋಮಾ ಮಹಾತೇಜಾಃ ಶತಾನಂದೋ ಮಹಾತಪಾಃ ॥ ೧
ಗೌತಮಸ್ಯ ಸುತೋ ಜ್ಯೇಷ್ಠಸ್ತಪಸಾ ದ್ಯೋತಿತಪ್ರಭಃ ।
ರಾಮಸಂದರ್ಶನಾದೇವ ಪರಂ ವಿಸ್ಮಯಮಾಗತಃ ॥ ೨

---

ಸಮಾಗಮಗಳೆಲ್ಲವನ್ನೂ ಹೇಳಿ ಶಿವಧನುಸ್ಸನ್ನು ನೋಡುವುದಕ್ಕೋಸ್ಕರ ಮಿಥಿಲೆಗೆ ಬಂದಿದ್ದಾರೆಂದೂ ತಿಳಿಸಿದರು (೨೨-೨೫)

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಐವತ್ತನೆಯ ಸರ್ಗ

---

## ಸರ್ಗ ೫೧

ಅಹಲ್ಯೆಯು ಶಾಪವಿಮುಕ್ತಳಾಗಿ ಗೌತಮರೊಡನೆ ಇರುವಳೆಂದು ವಿಶ್ವಾಮಿತ್ರರು ಶತಾನಂದರಿಗೆ ತಿಳಿಸುವುದು. ಶತಾನಂದರು ಶ್ರೀರಾಮನಿಗೆ ವಿಶ್ವಾಮಿತ್ರರ ಚರಿತ್ರೆಯನ್ನು ಹೇಳಲಾರಂಭಿಸುವುದು.

ವಿಶ್ವಾಮಿತ್ರರು ಹೇಳಿದ ಅಹಲ್ಯೋದ್ಧಾರದ ವೃತ್ತಾಂತವನ್ನು ಕೇಳಿ ಮಹಾತಪಸ್ವಿಗಳಾದ ಶತಾನಂದರಿಗೆ ಸಂತೋಷದಿಂದ ರೋಮಾಂಚ ವಾಯಿತು. ಶತಾನಂದರು ಗೌತಮಮುನಿಗಳ ಜ್ಯೇಷ್ಠಪುತ್ರರು. ತಪಸ್ಸಿನಿಂದ ದಿವ್ಯ ತೇಜಸ್ಸನ್ನು ಸಂಪಾದಿಸಿದವರು. ಅವರಿಗೆ ಶ್ರೀರಾಮನ ದರ್ಶನ

ಸ ತೌ ನಿಷಣ್ಣೌ ಸಂಪ್ರೇಕ್ಷ್ಯ ಸುಖಾಸೀನೌ ನೃಪಾತ್ಮಜೌ ।
ಶತಾನಂದೋ ಮುನಿಶ್ರೇಷ್ಠಂ ವಿಶ್ವಾಮಿತ್ರಮಥಾಬ್ರವೀತ್ ॥ ೩

ಅಪಿ ತೇ ಮುನಿಶಾರ್ದೂಲ ಮಮ ಮಾತಾ ಯಶಸ್ವಿನೀ ।
ದರ್ಶಿತಾ ರಾಜಪುತ್ರಾಯ ತಪೋ ದೀರ್ಘಮುಪಾಗತಾ ॥ ೪

ಅಪಿ ರಾಮೇ ಮಹಾತೇಜಾ ಮಮ ಮಾತಾ ಯಶಸ್ವಿನೀ ।
ವನ್ಯೈರುಪಾಹರತ್ ಪೂಜಾಂ ಪೂಜಾರ್ಹೇ ಸರ್ವದೇಹಿನಾಮ್ ॥

ಅಪಿ ರಾಮಾಯ ಕಥಿತಂ ಯಥಾವೃತ್ತಂ ಪುರಾತನಮ್ ।
ಮಮ ಮಾತುರ್ಮಹಾತೇಜೋ ದೇವೇನ ದುರನುಷ್ಠಿತಮ್ ॥ ೬

ಅಪಿ ಕೌಶಿಕ ಭದ್ರಂ ತೇ ಗುರುಣಾ ಮಮ ಸಂಗತಾ ।
ಮಾತಾ ಮಮ ಮುನಿಶ್ರೇಷ್ಠ ರಾಮಸಂದರ್ಶನಾದಿತಃ ॥ ೭

ಅಪಿ ಮೇ ಗುರುಣಾ ರಾಮಃ ಪೂಜಿತಃ ಕುಶಿಕಾತ್ಮಜ ।
ಇಹಾಗತೋ ಮಹಾತೇಜಾಃ ಪೂಜಾಂ ಪ್ರಾಪ್ತೋ ಮಹಾತ್ಮನಃ ॥

ಅಪಿ ಶಾಂತೇನ ಮನಸಾ ಗುರುರ್ಮೇ ಕುಶಿಕಾತ್ಮಜ ।
ಇಹಾಗತೇನ ರಾಮೇಣ ಪ್ರಯತೇನಾಭಿವಾದಿತಃ ॥ ೯

---

ವಾದಾಗಲೇ ಬಹಳ ವಿಸ್ಮಯವಾಗಿತ್ತು (೧-೨). ರಾಮಲಕ್ಷ್ಮಣರು ಪೀಠಗಳಲ್ಲಿ ಸುಖಾಸೀನರಾದಮೇಲೆ ಶತಾನಂದರು ವಿಶ್ವಾಮಿತ್ರಮುನಿಗಳನ್ನು ಕುರಿತು "ಮಹರ್ಷಿಗಳೆ, ದೀರ್ಘಕಾಲದಿಂದ ತಪಸ್ಸಿನಲ್ಲಿ ನಿರತಳಾಗಿದ್ದ ನನ್ನ ತಾಯಿಯನ್ನು ಈ ರಾಜಪುತ್ರನಿಗೆ ತೋರಿಸಿದಿರಾ ? (೩-೪). ಸರ್ವರಿಗೂ ಪೂಜಾರ್ಹನಾದ ರಾಮನಿಗೆ ಯಶಸ್ವಿನಿಯಾದ ನನ್ನ ತಾಯಿ ಫಲಪುಷ್ಪಗಳಿಂದ ಸತ್ಕಾರಮಾಡಿದಳೆ ? ರಾಮನಿಗೆ ಹಿಂದಿನ ಸುದ್ದಿಯನ್ನು ತಿಳಿಸಿದಿರಾ ? ಇಂದ್ರನು ಮಾಡಿದ ದುರಾಚಾರವನ್ನು ಹೇಳಿದಿರಾ ? (೫-೬). ಕೌಶಿಕ ಮುನಿಗಳೆ, ನಿಮಗೆ ಸಕಲ ಶ್ರೇಯಸ್ಸಾಗಲಿ. ರಾಮಸಂದರ್ಶನವಾದ ಮೇಲೆ ನನ್ನ ತಾಯಿ ನನ್ನ ತಂದೆಯೊಡನೆ ಸೇರಿಕೊಂಡಳೆ ? ನನ್ನ ತಂದೆ ಶ್ರೀರಾಮನಿಗೆ ಸತ್ಕಾರಮಾಡಿದನೆ ? ಇಲ್ಲಿಗೆ ಶ್ರೀರಾಮನು ಬರುವಾಗ ಆ ಮಹಾತ್ಮನ ಸತ್ಕಾರವನ್ನು ಸ್ವೀಕರಿಸಿ ಬಂದನೆ ? (೭-೮). ನನ್ನ ತಂದೆಯ ಮನಸ್ಸು ಶಾಂತವಾಗಿತ್ತೆ ? ಆತನು ಸಂತೋಷದಿಂದ ಶ್ರೀರಾಮನಿಗೆ

ತಚ್ಛ್ರುತ್ವಾ ವಚನಂ ತಸ್ಯ ವಿಶ್ವಾಮಿತ್ರೋ ಮಹಾಮುನಿಃ ।
ಪ್ರತ್ಯುವಾಚ ಶತಾನಂದಂ ವಾಕ್ಯಜ್ಞೋ ವಾಕ್ಯಕೋವಿದಮ್ ॥ ೧೦

ನಾತಿಕ್ರಾಂತಂ ಮುನಿಶ್ರೇಷ್ಠ ಯತ್ ಕರ್ತವ್ಯಂ ಕೃತಂ ಮಯಾ ।
ಸಂಗತಾ ಮುನಿನಾ ಪತ್ನೀ ಭಾರ್ಗವೇಣೇವ ರೇಣುಕಾ ॥ ೧೧

ತಚ್ಛ್ರುತ್ವಾ ವಚನಂ ತಸ್ಯ ವಿಶ್ವಾಮಿತ್ರಸ್ಯ ಧೀಮತಃ ।
ಶತಾನಂದೋ ಮಹಾತೇಜಾ ರಾಮಂ ವಚನಮಬ್ರವೀತ್ ॥ ೧೨

ಸ್ವಾಗತಂ ತೇ ನರಶ್ರೇಷ್ಠ ದಿಷ್ಟ್ಯಾ ಪ್ರಾಪ್ತೋಽಸಿ ರಾಘವ ।
ವಿಶ್ವಾಮಿತ್ರಂ ಪುರಸ್ಕೃತ್ಯ ಮಹರ್ಷಿಮಪರಾಜಿತಮ್ ॥ ೧೩

ಅಚಿಂತ್ಯಕರ್ಮಾ ತಪಸಾ ಬ್ರಹ್ಮರ್ಷಿರತುಲಪ್ರಭಃ ।
ವಿಶ್ವಾಮಿತ್ರೋ ಮಹಾತೇಜಾ ವೇತ್ಸ್ಯೇನಂ ಪರಮಾಂ ಗತಿಮ್ ॥

ನಾಸ್ತಿ ಧನ್ಯತರೋ ರಾಮ ತ್ವತ್ತೋಽನ್ಯೋ ಭುವಿ ಕಶ್ಚನ ।
ಗೋಪ್ತಾ ಕುಶಿಕಪುತ್ರಸ್ತೇ ಯೇನ ತಪ್ತಂ ಮಹತ್ತಪಃ ॥ ೧೫

ಶ್ರೂಯತಾಂ ಚಾಭಿಧಾಸ್ಯಾಮಿ ಕೌಶಿಕಸ್ಯ ಮಹಾತ್ಮನಃ ।
ಯಥಾ ಬಲಂ ಯಥಾ ವೃತ್ತಂ ತನ್ಮೇ ನಿಗದತಃ ಶ್ರುಣು ॥ ೧೬

---

ಆಶೀರ್ವಾದಮಾಡಿದನೆ ?" ಎಂದು ಕೇಳಿದರು. ಆಗ ವಿಶ್ವಾಮಿತ್ರರು "ಶತಾನಂದರೆ, ಎಲ್ಲವೂ ಸರಿಯಾಗಿ ನಡೆಯಿತು. ನನ್ನ ಕರ್ತವ್ಯವನ್ನು ನಾನು ಮಾಡಿದ್ದೇನೆ. ಗೌತಮರು ತಮ್ಮ ಪತ್ನಿಯೊಡನೆ ಇದ್ದಾರೆ. ರೇಣುಕೆಯು ಜಮದಗ್ನಿ ಮುನಿಗಳೊಡನೆ ಪುನಃ ಸೇರಿದಂತಾಯಿತು" ಎಂದು ನುಡಿದರು (೯-೧೧). ಅನಂತರ ಶತಾನಂದರು ಶ್ರೀರಾಮನೊಡನೆ ಮಾತನಾಡಲಾರಂಭಿಸಿದರು: "ರಘುನಂದನ, ನಿನಗೆ ಸ್ವಾಗತ. ಮಹಾಮಹಿಮರಾದ ವಿಶ್ವಾಮಿತ್ರಮುನಿಗಳು ನನ್ನ ಭಾಗ್ಯದಿಂದ ನಿನ್ನನ್ನು ಕರೆತಂದಿದ್ದಾರೆ. ಈ ಬ್ರಹ್ಮರ್ಷಿಗಳು ಏನೇನು ಮಾಡಬಲ್ಲರೆಂಬುದು ಯಾರಿಗೆ ಗೊತ್ತು ? ಇವರು ನಿನಗೆ ಪರಮಶ್ರೇಯಸ್ಸನ್ನು ಸಂಪಾದಿಸಿಕೊಡುತ್ತಾರೆಂಬುದನ್ನು ಬಲ್ಲೆಯಾ ? (೧೨-೧೪). ರಾಮ, ಈ ಪೃಥ್ವಿಯಲ್ಲಿ ನಿನಗಿಂತಲೂ ಹೆಚ್ಚಿನ ಪುಣ್ಯಾತ್ಮರಿಲ್ಲ. ಏಕೆಂದರೆ, ಮಹಾತಪಸ್ವಿಗಳಾದ ಕೌಶಿಕಮುನಿಗಳು ನಿನಗೆ ರಕ್ಷಕರಾಗಿದ್ದಾರೆ. ಈ ಮಹಾತ್ಮರ ಸಾಮರ್ಥ್ಯವೇನೆಂಬುದನ್ನು ನಾನು

ರಾಜಾಸೀದೇಷ ಧರ್ಮಾತ್ಮಾ ದೀರ್ಘಕಾಲಮರಿಂದಮಃ ।
ಧರ್ಮಜ್ಞಃ ಕೃತವಿದ್ಯಶ್ಚ ಪ್ರಜಾನಾಂ ಚ ಹಿತೇ ರತಃ ॥ ೧೭

ಪ್ರಜಾಪತಿಸುತಶ್ಚಾಸೀತ್ ಕುಶೋ ನಾಮ ಮಹೀಪತಿಃ ।
ಕುಶಸ್ಯ ಪುತ್ರೋ ಬಲವಾನ್ ಕುಶನಾಭಃ ಸುಧಾರ್ಮಿಕಃ ॥ ೧೮

ಕುಶನಾಭಸುತಸ್ತ್ವಾಸೀದ್ಗಾಧಿರಿತ್ಯೇವ ವಿಶ್ರುತಃ ।
ಗಾಧೇಃ ಪುತ್ರೋ ಮಹಾತೇಜಾ ವಿಶ್ವಾಮಿತ್ರೋ ಮಹಾಮುನಿಃ ॥

ವಿಶ್ವಾಮಿತ್ರೋ ಮಹಾತೇಜಾಃ ಪಾಲಯಾಮಾಸ ಮೇದಿನೀಮ್ ।
ಬಹುವರ್ಷಸಹಸ್ರಾಣಿ ರಾಜಾ ರಾಜ್ಯಮಕಾರಯತ್ ॥ ೨೦

ಕದಾಚಿತ್ತು ಮಹಾತೇಜಾ ಯೋಜಯಿತ್ವಾ ವರೂಥಿನೀಮ್ ।
ಅಕ್ಷೌಹಿಣೀಪರಿವೃತಃ ಪರಿಚಕ್ರಾಮ ಮೇದಿನೀಮ್ ॥ ೨೧

ನಗರಾಣಿ ಚ ರಾಷ್ಟ್ರಾಣಿ ಸರಿತಶ್ಚ ತಥಾ ಗಿರೀನ್ ।
ಆಶ್ರಮಾನ್ ಕ್ರಮಶೋ ರಾಮ ವಿಚರನ್ನಾಜಗಾಮ ಹ ॥ ೨೨

ವಸಿಷ್ಠಸ್ಯಾಶ್ರಮಪದಂ ನಾನಾವೃಕ್ಷಸಮಾಕುಲಮ್ ।
ನಾನಾಮೃಗಗಣಾಕೀರ್ಣಂ ಸಿದ್ಧಚಾರಣಸೇವಿತಮ್ ॥ ೨೩

---

ಹೇಳುತ್ತೇನೆ, ಕೇಳು (೧೫-೧೬). ಇವರು ಮೊದಲು ಬಹುಕಾಲದವರೆಗೆ ಧರ್ಮಾತ್ಮರಾದ ಒಬ್ಬ ರಾಜರಾಗಿದ್ದರು. ವಿದ್ಯಾವಂತರೂ ಪ್ರಜಾಹಿತ ತತ್ಪರರೂ ಆಗಿದ್ದರು. ಕುಶನಾಭನ ಪುತ್ರ ಗಾಧಿಮಹಾರಾಜ. ಗಾಧಿಯ ಪುತ್ರರೇ ಈ ವಿಶ್ವಾಮಿತ್ರಮುನಿಗಳು (೧೭-೧೯) ಇವರು ಅನೇಕ ಸಹಸ್ರ ವರ್ಷಗಳವರೆಗೆ ಭೂಪತಿಯಾಗಿ ರಾಜ್ಯಭಾರಮಾಡುತ್ತಿದ್ದರು. ಒಮ್ಮೆ ಇವರು ಒಂದು ಅಕ್ಷೌಹಿಣಿ ಚತುರಂಗಬಲವನ್ನು ತೆಗೆದುಕೊಂಡು ಭೂಪರ್ಯಟನೆಗೆ ಹೊರಟರು. ಅನೇಕ ದೇಶಗಳು, ನಗರಗಳು, ನದಿಗಳು, ಪರ್ವತಗಳು ಮತ್ತು ಆಶ್ರಮಗಳನ್ನು ದಾಟುತ್ತ ವಸಿಷ್ಠರ ಆಶ್ರಮಕ್ಕೆ ಬಂದರು (೨೦-೨೨). ವಸಿಷ್ಠರ ಆಶ್ರಮವು ಮನೋಹರವಾಗಿತ್ತು. ಮರ ಬಳ್ಳಿಗಳಲ್ಲಿ ನಾನಾಬಗೆಯ ಹೂಗಳು ಅರಳಿದ್ದವು. ಆಶ್ರಮದಲ್ಲಿ ವಿವಿಧ ಜಾತಿಯ ಮೃಗಗಳು ತಿರುಗಾಡುತ್ತಿದ್ದವು ಸಿದ್ಧಚಾರಣರು ಸಂಚರಿಸುತ್ತಿದ್ದರು. ದೇವಗಂಧರ್ವಾದಿಗಳು

ದೇವದಾನವಗಂಧರ್ವೈಃ ಕಿಂನರೈರುಪಶೋಭಿತಮ್ ।
ಪ್ರಶಾಂತಹರಿಣಾಕೀರ್ಣಂ ದ್ವಿಜಸಂಘನಿಷೇವಿತಮ್ ॥ ೨೪
ಬ್ರಹ್ಮರ್ಷಿಗಣಸಂಕೀರ್ಣಂ ದೇವರ್ಷಿಗಣಸೇವಿತಮ್ ।
ತಪಶ್ಚರಣಸಂಸಿದ್ಧೈರಗ್ನಿಕಲ್ಪೈರ್ಮಹಾತ್ಮಭಿಃ ॥ ೨೫
ಅಬ್ಭಕ್ಷೈರ್ವಾಯುಭಕ್ಷೈಶ್ಚ ಶೀರ್ಣಪರ್ಣಾಶನೈಸ್ತಥಾ ।
ಫಲಮೂಲಾಶನೈರ್ದಾಂತೈರ್ಜಿತರೋಷೈರ್ಜಿತೇಂದ್ರಿಯೈಃ ॥ ೨೬
ಋಷಿಭಿರ್ವಾಲಖಿಲ್ಯೈಶ್ಚ ಜಪಹೋಮಪರಾಯಣೈಃ ।
ಅನ್ಯೈರ್ವೈಖಾನಸೈಶ್ಚೈವ ಸಮಂತಾದುಪಶೋಭಿತಮ್ ॥ ೨೭
ವಸಿಷ್ಠಸ್ಯಾಶ್ರಮಪದಂ ಬ್ರಹ್ಮಲೋಕಮಿವಾಪರಮ್ ।
ದದರ್ಶ ಜಯತಾಂ ಶ್ರೇಷ್ಠೋ ವಿಶ್ವಾಮಿತ್ರೋ ಮಹಾಬಲಃ ॥ ೨೮

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕಪಂಚಾಶಃ ಸರ್ಗಃ

---

ಸಹ ವಿಹರಿಸುವ ಸ್ಥಳವದು ಎಲ್ಲಿ ನೋಡಿದರೂ ಸಾಧು ಸ್ವಭಾವದ ಜಿಂಕೆಗಳ ತಿರುಗಾಟ, ಹಕ್ಕಿಗಳ ಚಿಲಿಪಿಲಿ ಧ್ವನಿ (೨೩-೨೪). ಬ್ರಹ್ಮರ್ಷಿಗಳೂ ದೇವರ್ಷಿಗಳೂ* ಬಂದು ಹೋಗುವ ಆಶ್ರಮ ತಪಃಸಿದ್ಧರಾದ ಮಹಾ ಪುರುಷರು ವಾಸಮಾಡುವ ಪ್ರದೇಶ. ಸಾಕ್ಷಾತ್ ಅಗ್ನಿದೇವನಂತೆ ಅಲ್ಲಿದ್ದ ಋಷಿಗಳು ಮಹಾತೇಜಸ್ವಿಗಳು (೨೫). ಕೆಲವರಿಗೆ ನೀರು ಮಾತ್ರವೇ ಆಹಾರ. ಕೆಲವರಿಗೆ ಗಾಳಿಯೇ ಆಹಾರ. ಒಣಗಿಬಿದ್ದ ಎಲೆಗಳೇ ಕೆಲವರಿಗೆ ಆಹಾರ. ಫಲಮೂಲಗಳು ಕೆಲವರಿಗೆ ಆಹಾರ ಎಲ್ಲರೂ ದಾಂತರು, ಜಿತೇಂದ್ರಿಯರು (೨೬). ಜಪಹೋಮಪರಾಯಣರಾದ ವಾಲಖಿಲ್ಯ, ವೈಖಾನಸ ಎಂಬ ಅನೇಕ ಋಷಿಗಳೂ ಅಲ್ಲಿದ್ದರು. ಬ್ರಹ್ಮಲೋಕದಂತೆ ಕಂಗೊಳಿಸುತ್ತಿದ್ದ ಆ ವಸಿಷ್ಠಾಶ್ರಮವನ್ನು ವೀರಾಗ್ರೇಸರರಾದ ವಿಶ್ವಾಮಿತ್ರರು ಕಂಡರು" (೨೭-೨೮)

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಐವತ್ತೊಂದನೆಯ ಸರ್ಗ

---

* ಬ್ರಹ್ಮರ್ಷಿಗಳು = ಜ್ಞಾನಮಾರ್ಗ ಕರ್ಮಮಾರ್ಗಗಳೆರಡರಲ್ಲಿಯೂ ಅಧಿಕಾರವನ್ನು ಪಡೆದು ಭೂಲೋಕದಲ್ಲಿ ವಾಸಮಾಡತಕ್ಕವರು—ವಸಿಷ್ಠಾದಿಗಳು.

ದೇವರ್ಷಿಗಳು = ಜ್ಞಾನಮಾತ್ರದಲ್ಲಿ ಅಧಿಕಾರವನ್ನು ಪಡೆದು ದೇವಲೋಕದಲ್ಲಿ ಸಂಚರಿಸತಕ್ಕವರು—ನಾರದಾದಿಗಳು.

## ದ್ವಿಪಂಚಾಶಃ ಸರ್ಗಃ

### ವಸಿಷ್ಠಾತಿಥ್ಯಮ್

ತಂ ದೃಷ್ಟ್ವಾ ಪರಮಪ್ರೀತೋ ವಿಶ್ವಾಮಿತ್ರೋ ಮಹಾಬಲಃ ।
ಪ್ರಣಮ್ಯ ವಿಧಿನಾ ವೀರೋ ವಸಿಷ್ಠಂ ಜಪತಾಂ ವರಮ್ ॥ ೧

ಸ್ವಾಗತಂ ತವ ಚೇತ್ಯುಕ್ತೋ ವಸಿಷ್ಠೇನ ಮಹಾತ್ಮನಾ ।
ಆಸನಂ ಚಾಸ್ಯ ಭಗವಾನ್ ವಸಿಷ್ಠೋ ವ್ಯಾದಿದೇಶ ಹ ॥ ೨

ಉಪವಿಷ್ಟಾಯ ಚ ತದಾ ವಿಶ್ವಾಮಿತ್ರಾಯ ಧೀಮತೇ ।
ಯಥಾನ್ಯಾಯಂ ಮುನಿವರಃ ಫಲಮೂಲಾನ್ಯುಪಾಹರತ್ ॥ ೩

ಪ್ರತಿಗೃಹ್ಯ ಚ ತಾಂ ಪೂಜಾಂ ವಸಿಷ್ಠಾದ್ರಾಜಸತ್ತಮಃ ।
ತಪೋಽಗ್ನಿಹೋತ್ರಶಿಷ್ಯೇಷು ಕುಶಲಂ ಪರ್ಯಪೃಚ್ಛತ ॥ ೪

ವಿಶ್ವಾಮಿತ್ರೋ ಮಹಾತೇಜಾ ವನಸ್ಪತಿಗಣೇ ತಥಾ ।
ಸರ್ವತ್ರ ಕುಶಲಂ ಪ್ರಾಹ ವಸಿಷ್ಠೋ ರಾಜಸತ್ತಮಮ್ ॥ ೫

ಸುಖೋಪವಿಷ್ಟಂ ರಾಜಾನಂ ವಿಶ್ವಾಮಿತ್ರಂ ಮಹಾತಪಾಃ ।
ಪಪ್ರಚ್ಛ ಜಪತಾಂ ಶ್ರೇಷ್ಠೋ ವಸಿಷ್ಠೋ ಬ್ರಹ್ಮಣಃ ಸುತಃ ॥ ೬

## ಸರ್ಗ ೫೨

ವಿಶ್ವಾಮಿತ್ರರನ್ನು ಉಪಚರಿಸುವುದಕ್ಕಾಗಿ ವಸಿಷ್ಠರು ಶಬಲೆ ಎಂಬ ಕಾಮಧೇನುವನ್ನು ನಿಯೋಜಿಸುವುದು.

"ರಾಘವ, ಅನಂತರ ವಿಶ್ವಾಮಿತ್ರರು ವಸಿಷ್ಠಮಹರ್ಷಿಗಳನ್ನು ಕಂಡು ವಿನಯದಿಂದ ನಮಸ್ಕರಿಸಿದರು, ಆ ಮಹಾತ್ಮರು ಇವರಿಗೆ ಸ್ವಾಗತವನ್ನು ಬಯಸಿ ಆಸನವನ್ನು ಸಮರ್ಪಿಸಿ ಫಲಮೂಲಗಳನ್ನು ತರಿಸಿಕೊಟ್ಟು ಉಪಚರಿಸಿದರು (೧-೩). ಅವನ್ನು ಸ್ವೀಕರಿಸಿ ವಿಶ್ವಾಮಿತ್ರರು ವಸಿಷ್ಠರನ್ನು ಕುರಿತು ಅವರ ತಪಸ್ಸು, ಅಗ್ನಿಹೋತ್ರ, ಶಿಷ್ಯವೃಂದ ಮತ್ತು ವನಸ್ಪತಿಗಳ ಯೋಗಕ್ಷೇಮಗಳನ್ನು ವಿಚಾರಿಸಿದರು. ಅನಂತರ ಬ್ರಹ್ಮನ ಮಾನಸಪುತ್ರರಾದ

ಕಚ್ಚಿತ್ತೇ ಕುಶಲಂ ರಾಜನ್ ಕಚ್ಚಿದ್ಧರ್ಮೇಣ ರಂಜಯನ್ ।
ಪ್ರಜಾಃ ಪಾಲಯಸೇ ವೀರ ರಾಜವೃತ್ತೇನ ಧಾರ್ಮಿಕ ॥ ೭

ಕಚ್ಚಿತ್ತೇ ಸಂಭೃತಾ ಭೃತ್ಯಾಃ ಕಚ್ಚಿತ್ತಿಷ್ಠಂತಿ ಶಾಸನೇ ।
ಕಚ್ಚಿತ್ತೇ ವಿಜಿತಾಃ ಸರ್ವೇ ರಿಪವೋ ರಿಪುಸೂದನ ॥ ೮

ಕಚ್ಚಿದ್ಬಲೇಷು ಕೋಶೇಷು ಮಿತ್ರೇಷು ಚ ಪರಂತಪ ।
ಕುಶಲಂ ತೇ ನರವ್ಯಾಘ್ರ ಪುತ್ರಪೌತ್ರೇ ತವಾನಘ ॥ ೯

ಸರ್ವತ್ರ ಕುಶಲಂ ರಾಜಾ ವಸಿಷ್ಠಂ ಪ್ರತ್ಯುದಾಹರತ್ ।
ವಿಶ್ವಾಮಿತ್ರೋ ಮಹಾತೇಜಾ ವಸಿಷ್ಠಂ ವಿನಯಾನ್ವಿತಃ ॥ ೧೦

ಕೃತ್ವೋಭೌ ಸುಚಿರಂ ಕಾಲಂ ಧರ್ಮಿಷ್ಠೌ ತಾಃ ಕಥಾಃ ಶುಭಾಃ ।
ಮುದಾ ಪರಮಯಾ ಯುಕ್ತೌ ಪ್ರೀಯೇತಾಂ ತೌ ಪರಸ್ಪರಮ್ ॥

ತತೋ ವಸಿಷ್ಠೋ ಭಗವಾನ್ ಕಥಾಂತೇ ರಘುನಂದನ ।
ವಿಶ್ವಾಮಿತ್ರಮಿದಂ ವಾಕ್ಯಮುವಾಚ ಪ್ರಹಸನ್ನಿವ ॥ ೧೨

---

ವಸಿಷ್ಠಮಹರ್ಷಿಗಳು "ಮಹಾರಾಜ, ನಿನಗೆ ಕ್ಷೇಮವೆ? ಪ್ರಜೆಗಳಿಗೆ ಹಿತವಾಗುವಂತೆ ಧರ್ಮದಿಂದ ರಾಜ್ಯಪಾಲನೆ ಮಾಡುತ್ತಿರುವೆಯಷ್ಟೆ? (೪-೭). ನಿನ್ನಿಂದ ಪೋಷಿತರಾದ ಅಧಿಕಾರಿಗಳೆಲ್ಲರೂ ನಿನ್ನ ಆಜ್ಞೆಯನ್ನು ನಡೆಸುವರೆ? ಶತ್ರುಗಳೆಲ್ಲರನ್ನೂ ಗೆದ್ದಿರುವೆಯಾ? ರಾಜಶ್ರೇಷ್ಠ, ನಿನ್ನ ಚತುರಂಗಬಲ, ಭಂಡಾರ, ಮಿತ್ರರು—ಎಲ್ಲರಿಗೂ ಕುಶಲವೆ? ನಿನ್ನ ಪುತ್ರಪೌತ್ರರು ಆರೋಗ್ಯದಿಂದಿರುವರೆ?" ಎಂದು ವಿಶ್ವಾಮಿತ್ರರ ಕುಶಲವನ್ನು ವಿಚಾರಿಸಿದರು (೮-೯) ಈ ವಿಶ್ವಾಮಿತ್ರ ಭೂಪಾಲರು ಎಲ್ಲರಿಗೂ ಕುಶಲವೆಂದೂ ಎಲ್ಲವೂ ಒಳ್ಳೆಯದೆಂದೂ ವಿನಯದಿಂದ ಅರಿಕೆ ಮಾಡಿದರು ಇಬ್ಬರು ಧರ್ಮಾತ್ಮರೂ ಆನಂದದಿಂದ ಬಹಳ ಹೊತ್ತು ಕುಶಲ ಸಂಭಾಷಣೆಯನ್ನು ನಡೆಸಿದರು. ಪರಸ್ಪರ ದರ್ಶನದಿಂದ ಇಬ್ಬರಿಗೂ ಸಂತೋಷವಾಯಿತು (೧೦-೧೧). ಶ್ರೀರಾಮ, ಕಡೆಗೆ ವಸಿಷ್ಠರು ಹರ್ಷದಿಂದ ಪ್ರಸನ್ನರಾಗಿ "ಮಹಾರಾಜ, ನಿನ್ನ ಚತುರಂಗ ಸೇನೆಗೂ ನಿನಗೂ ಯಥಾಯೋಗ್ಯವಾಗಿ ಆತಿಥ್ಯವನ್ನು ಮಾಡಬೇಕೆಂದು

ಆತಿಥ್ಯಂ ಕರ್ತುಮಿಚ್ಛಾಮಿ ಬಲಸ್ಯಾಸ್ಯ ಮಹಾಬಲ ।
ತವ ಚೈವಾಪ್ರಮೇಯಸ್ಯ ಯಥಾರ್ಹಂ ಸಂಪ್ರತೀಚ್ಛ ಮೇ ॥ ೧೩
ಸತ್ಕ್ರಿಯಾಂ ತು ಭವಾನೇತಾಂ ಪ್ರತೀಚ್ಛತು ಮಯೋದ್ಯತಾಮ್ ।
ರಾಜಂಸ್ತ್ವಮತಿಥಿಶ್ರೇಷ್ಠಃ ಪೂಜನೀಯಃ ಪ್ರಯತ್ನತಃ ॥ ೧೪
ಏವಮುಕ್ತೋ ವಸಿಷ್ಠೇನ ವಿಶ್ವಾಮಿತ್ರೋ ಮಹಾಮತಿಃ ।
ಕೃತಮಿತ್ಯಬ್ರವೀದ್ರಾಜಾ ಪೂಜಾವಾಕ್ಯೇನ ಮೇ ತ್ವಯಾ ॥ ೧೫
ಫಲಮೂಲೇನ ಭಗವನ್ ವಿದ್ಯತೇ ಯತ್ತವಾಶ್ರಮೇ ।
ಪಾದ್ಯೇನಾಚಮನೀಯೇನ ಭಗವದ್ದರ್ಶನೇನ ಚ ॥ ೧೬
ಸರ್ವಥಾ ಚ ಮಹಾಪ್ರಾಜ್ಞ ಪೂಜಾರ್ಹೇಣ ಸುಪೂಜಿತಃ ।
ಗಮಿಷ್ಯಾಮಿ ನಮಸ್ತೇಽಸ್ತು ಮೈತ್ರೇಣೇಕ್ಷಸ್ವ ಚಕ್ಷುಷಾ ॥ ೧೭
ಏವಂ ಬ್ರುವಂತಂ ರಾಜಾನಂ ವಸಿಷ್ಠಃ ಪುನರೇವ ಹಿ ।
ನ್ಯಮಂತ್ರಯತ ಧರ್ಮಾತ್ಮಾ ಪುನಃ ಪುನರುದಾರಧೀಃ ॥ ೧೮
ಬಾಢಮಿತ್ಯೇವ ಗಾಧೇಯೋ ವಸಿಷ್ಠಂ ಪ್ರತ್ಯುವಾಚ ಹ ।
ಯಥಾ ಪ್ರಿಯಂ ಭಗವತಸ್ತಥಾಸ್ತು ಮುನಿಸತ್ತಮ ॥ ೧೯

---

ನನಗೆ ಇಚ್ಛೆಯಾಗಿದೆ. ದಯವಿಟ್ಟು ಸ್ವೀಕರಿಸು. ರಾಜ, ನೀನು ಶ್ರೇಷ್ಠ ಅತಿಥಿಯಾಗಿ ಬಂದಿದ್ದೀಯೆ. ನಿನ್ನನ್ನು ಗೌರವಿಸಿ ಸತ್ಕರಿಸುವುದು ನನ್ನ ಕರ್ತವ್ಯ" ಎಂದು ನುಡಿದರು (೧೨-೧೪). ಆಗ ವಿಶ್ವಾಮಿತ್ರರು "ಭಗವನ್, ತಾವು ಆದರದಿಂದ ನುಡಿದ ಈ ಪ್ರಿಯವಚನದಿಂದಲೇ ನನಗೆ ಆತಿಥ್ಯವನ್ನು ಮಾಡಿದಂತಾಯಿತು. ತಮ್ಮ ಆಶ್ರಮದಲ್ಲಿ ಪಾದ್ಯ ಆಚಮನಗಳನ್ನು, ಫಲ ಮೂಲಗಳನ್ನು ಸ್ವೀಕರಿಸಿದ್ದೇನೆ. ಮುಖ್ಯವಾಗಿ ತಮ್ಮ ದರ್ಶನವಾಯಿತು. ಪೂಜ್ಯರಾದ ತಾವೇ ನನ್ನನ್ನು ಗೌರವಿಸಿದ್ದೀರಿ. ತಮಗೆ ಅನಂತಪ್ರಣಾಮಗಳು ಹೋಗಿಬರುತ್ತೇನೆ. ಹೀಗೆಯೇ ನನ್ನ ಮೇಲೆ ಸ್ನೇಹಪೂರ್ಣವಾದ ದೃಷ್ಟಿ ಇರಲಿ" ಎಂದರು (೧೫-೧೭). ಧರ್ಮಾತ್ಮರೂ ಉದಾರಸ್ವಭಾವದವರೂ ಆದ ವಸಿಷ್ಠಮುನಿಗಳು ಆತಿಥ್ಯವನ್ನು ಸ್ವೀಕರಿಸಬೇಕೆಂದು ವಿಶ್ವಾಮಿತ್ರರನ್ನು ಪುನಃಪುನಃ ಒತ್ತಾಯಪಡಿಸಿದರು. ಆಗ ಈ ಗಾಧಿಪುತ್ರರು "ಆಗಲಿ ಮಹರ್ಷಿಗಳೆ, ತಮ್ಮ ಇಚ್ಛೆಯಂತಾಗಲಿ" ಎಂದು ಹೇಳಿದರು

ಏವಮುಕ್ತೋ ಮಹಾತೇಜಾ ವಸಿಷ್ಠೋ ಜಪತಾಂ ವರಃ ।
ಆಜುಹಾವ ತತಃ ಪ್ರೀತಃ ಕಲ್ಮಾಷೀಂ ಧೂತಕಲ್ಮಷಃ ॥ ೨೦
ಏಹ್ಯೇಹಿ ಶಬಲೇ ಕ್ಷಿಪ್ರಂ ಶೃಣು ಚಾಪಿ ವಚೋ ಮಮ ।
ಸಬಲಸ್ಯಾಸ್ಯ ರಾಜರ್ಷೇಃ ಕರ್ತುಂ ವ್ಯವಸಿತೋಽಸ್ಮ್ಯಹಮ್ ॥ ೨೧
ಭೋಜನೇನ ಮಹಾರ್ಹೇಣ ಸತ್ಕಾರಂ ಸಂವಿಧತ್ಸ್ವ ಮೇ ।
ಯಸ್ಯ ಯಸ್ಯ ಯಥಾಕಾಮಂ ಷಡ್ರಸೇಷ್ವಭಿಪೂಜಿತಮ್ ॥ ೨೨
ತತ್ಸರ್ವಂ ಕಾಮಧುಕ್ ಕ್ಷಿಪ್ರಮಭಿವರ್ಷ ಕೃತೇ ಮಮ ।
ರಸೇನಾನ್ನೇನ ಪಾನೇನ ಲೇಹ್ಯಚೋಷ್ಯೇಣ ಸಂಯುತಮ್ ॥ ೨೩
ಅನ್ನಾನಾಂ ನಿಚಯಂ ಸರ್ವಂ ಸೃಜಸ್ವ ಶಬಲೇ ತ್ವರ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ದ್ವಿಪಂಚಾಶಃ ಸರ್ಗಃ



(೧೮-೧೯). ವಸಿಷ್ಠರು ಸಂತುಷ್ಟರಾಗಿ ಪರಮಪಾವನೆಯಾದ ಶಬಲೆ ಎಂಬ ಧೇನುವನ್ನು ಕುರಿತು "ಶಬಲೆ, ಇತ್ತ ಬಾ ನಾನೊಂದು ಮಾತನ್ನು ಹೇಳುತ್ತೇನೆ, ಕೇಳು. ಸೇನಾಸಮೇತನಾಗಿ ಬಂದಿರುವ ಈ ರಾಜರ್ಷಿಗೆ ಅತಿಥಿಸತ್ಕಾರವನ್ನು ಮಾಡಬೇಕೆಂದು ಸಂಕಲ್ಪಿಸಿದ್ದೇನೆ ರಾಜಭೋಜನವನ್ನು ಒದಗಿಸಿ ಸತ್ಕರಿಸಬೇಕು (೨೦-೨೧). ನೀನು ದಿವ್ಯಳಾದ ಕಾಮಧೇನು. ಷಡ್ರಸೋಪೇತವಾದ ಉತ್ತಮೋತ್ತಮ ಭೋಜನವನ್ನೇರ್ಪಡಿಸು. ನನಗೋಸ್ಕರ ಈ ಕೆಲಸವನ್ನು ಮಾಡು ಯಾರು ಯಾರಿಗೆ ಯಾವ ಯಾವುದು ಎಷ್ಟೆಷ್ಟು ಬೇಕೊ ಅದೆಲ್ಲವೂ ಸಿದ್ಧವಾಗಲಿ. ಅನ್ನ ಪಾನ ರಸಾಯನ ಲೇಹ್ಯ ಚೋಷ್ಯಗಳನ್ನೂ ಸಕಲವಿಧ ಭಕ್ಷ್ಯರಾಶಿಗಳನ್ನೂ ನಿರ್ಮಿಸು. ಶಬಲೆ, ಬೇಗನೆ ನಡೆಯಲಿ" ಎಂದು ತಿಳಿಸಿದರು (೨೨-೨೩).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಐವತ್ತೆರಡನೆಯ ಸರ್ಗ



# ತ್ರಿಪಂಚಾಶಃ ಸರ್ಗಃ

ಶಬಲಾನಿಷ್ಕ್ರಯಃ

**ಏವಮುಕ್ತಾ ವಸಿಷ್ಠೇನ ಶಬಲಾ ಶತ್ರುಸೂದನ ।**
**ವಿದಧೇ ಕಾಮಧುಕ್ಕಾಮಾನ್ ಯಸ್ಯ ಯಸ್ಯ ಯಥೇಪ್ಸಿತಮ್ ॥ ೧**

**ಇಕ್ಷೂನ್ಮಧೂಂಸ್ತಥಾ ಲಾಜಾನ್ ಮೈರೇಯಾಂಶ್ಚ ವರಾಸವಾನ್ ।**
**ಪಾನಾನಿ ಚ ಮಹಾರ್ಹಾಣಿ ಭಕ್ಷ್ಯಾಂಶ್ಚೋಚ್ಚಾವಚಾಂಸ್ತಥಾ ॥ ೨**

**ಉಷ್ಣಾಢ್ಯಸ್ಯೌದನಸ್ಯಾತ್ರ ರಾಶಯಃ ಪರ್ವತೋಪಮಾಃ ।**
**ಮೃಷ್ಟಾನ್ಯನ್ನಾನಿ ಸೂಪಾಶ್ಚ ದಧಿಕುಲ್ಯಾಸ್ತಥೈವ ಚ ॥ ೩**

**ನಾನಾಸ್ವಾದುರಸಾನಾಂ ಚ ಷಾಡವಾನಾಂ ತಥೈವ ಚ ।**
**ಭಾಜನಾನಿ ಸುಪೂರ್ಣಾನಿ ಗೌಡಾನಿ ಚ ಸಹಸ್ರಶಃ ॥ ೪**

## ಸರ್ಗ ೫೩

ಶಬಲೆಯು ಏರ್ಪಡಿಸಿದ ಔತಣದಿಂದ ವಿಶ್ವಾಮಿತ್ರರು ಸಂತುಷ್ಟರಾಗಿ
ಆ ಧೇನುವನ್ನು ತಮಗೆ ಕೊಡುವಂತೆ ವಸಿಷ್ಠರನ್ನು
ಕೇಳುವುದು. ವಸಿಷ್ಠರ ಅಸಮ್ಮತಿ.

ಶತಾನಂದರು ಹೇಳಿದರು: "ಶ್ರೀರಾಮ, ವಸಿಷ್ಠರು ಹೀಗೆ ಹೇಳಿದ ಕೂಡಲೆ ಆ ಕಾಮಧೇನುವು ವಿಶ್ವಾಮಿತ್ರರ ಪರಿವಾರಕ್ಕೆ ಬೇಕಾದ ಭೋಜನ ಸಾಮಗ್ರಿಗಳನ್ನು ಸಿದ್ಧಪಡಿಸಿತು ಕಬ್ಬಿನಹಾಲು, ಜೇನುತುಪ್ಪ, ಅರಳು, ಉತ್ತಮವಾದ ಮದ್ಯಗಳು, ಶ್ರೇಷ್ಠವಾದ ಪಾನಕಗಳು, ನಾನಾ ಬಗೆಯ ಭಕ್ಷ್ಯಗಳು ಸಿದ್ಧವಾದವು (೧-೨). ಬಿಸಿಬಿಸಿಯಾದ ಅನ್ನದ ರಾಶಿಗಳು ಬೆಟ್ಟಗಳಂತೆ ಕಂಗೊಳಿಸಿದವು (ಹಾಲಿನಿಂದ ಮಾಡಿದ) ಮೃಷ್ಟಾನ್ನಗಳೂ ವಿವಿಧ ತೊವ್ವೆಗಳೂ ನಿರ್ಮಿತವಾದವು. ಮೊಸರಿನ ಕಾಲುವೆಗಳೇ ಹರಿದವು. ನಾನಾ ಬಗೆಯ ರುಚಿಕಟ್ಟಾದ ಗೊಜ್ಜು ಮುಂತಾದ ವ್ಯಂಜನಗಳು ತುಂಬಿರುವ ಬೆಳ್ಳಿಯ ಪಾತ್ರೆಗಳು * ಸಾವಿರಗಟ್ಟಲೆ ಸಜ್ಜುಗೊಳಿಸಲ್ಪಟ್ಟವು (೩-೪).

* ಮೂಲದಲ್ಲಿ ಗೌಡ ಎಂದಿದೆ. ಗೌಡ=ಬೆಳ್ಳಿ ಎಂದು ಕತಕವ್ಯಾಖ್ಯಾನದಲ್ಲಿದೆ. ಗುಡ=ಬೆಲ್ಲ; ಬೆಲ್ಲದಿಂದ ಮಾಡಿದ ಭಕ್ಷ್ಯವೆಂದೂ ಹೇಳಬಹುದು.

ಸರ್ವಮಾಸೀತ್ ಸುಸಂತುಷ್ಟಂ ಹೃಷ್ಟಪುಷ್ಟಜನಾಯುತಮ್ ।
ವಿಶ್ವಾಮಿತ್ರಬಲಂ ರಾಮ ವಸಿಷ್ಠೇನಾಭಿತರ್ಪಿತಮ್ ॥ ೫

ವಿಶ್ವಾಮಿತ್ರೋಽಪಿ ರಾಜರ್ಷಿರ್ಹೃಷ್ಟಃ ಪುಷ್ಟಸ್ತದಾಭವತ್ ।
ಸಾಂತಃಪುರವರೋ ರಾಜಾ ಸಬ್ರಾಹ್ಮಣಪುರೋಹಿತಃ ॥ ೬

ಸಾಮಾತ್ಯೋ ಮಂತ್ರಿಸಹಿತಃ ಸಭೃತ್ಯಃ ಪೂಜಿತಸ್ತದಾ ।
ಯುಕ್ತಃ ಪರಮಹರ್ಷೇಣ ವಸಿಷ್ಠಮಿದಮಬ್ರವೀತ್ ॥ ೭

ಪೂಜಿತೋಽಹಂ ತ್ವಯಾ ಬ್ರಹ್ಮನ್ ಪೂಜಾರ್ಹೇಣ ಸುಸತ್ಕೃತಃ ।
ಶ್ರೂಯತಾಮಭಿಧಾಸ್ಯಾಮಿ ವಾಕ್ಯಂ ವಾಕ್ಯವಿಶಾರದ ॥ ೮

ಗವಾಂ ಶತಸಹಸ್ರೇಣ ದೀಯತಾಂ ಶಬಲಾ ಮಮ ।
ರತ್ನಂ ಹಿ ಭಗವನ್ನೇತದ್ರತ್ನಹಾರೀ ಚ ಪಾರ್ಥಿವಃ ॥ ೯

ತಸ್ಮಾನ್ಮೇ ಶಬಲಾಂ ದೇಹಿ ಮಮೈಷಾ ಧರ್ಮತೋ ದ್ವಿಜ ।
ಏವಮುಕ್ತಸ್ತು ಭಗವಾನ್ ವಸಿಷ್ಠೋ ಮುನಿಸತ್ತಮಃ ॥ ೧೦

---

ವಿಶ್ವಾಮಿತ್ರರ ಸೇನಾಪರಿವಾರದವರೆಲ್ಲರೂ (ಔತಣವನ್ನು ಸ್ವೀಕರಿಸಿ) ಸಂತುಷ್ಟರಾದರು ವಸಿಷ್ಠರು ಈ ರೀತಿಯಲ್ಲಿ ಎಲ್ಲರನ್ನೂ ತೃಪ್ತಿಪಡಿಸಿದರು. ರಾಜರ್ಷಿಗಳಾದ ವಿಶ್ವಾಮಿತ್ರರೂ ಅವರೊಡನೆ ಬಂದಿದ್ದ ಅಂತಃಪುರ ಸ್ತ್ರೀಯರೂ ಬ್ರಾಹ್ಮಣ ಪುರೋಹಿತರೂ ಈ ಆತಿಥ್ಯದಿಂದ ಸಂತೃಪ್ತರಾದರು (೫-೬). ಈ ಪ್ರಕಾರ ಮಂತ್ರಿಗಳೂ ಅಧಿಕಾರಿಗಳೂ ಭೃತ್ಯರೂ ಸಂಮಾನಿತರಾಗಲು ವಿಶ್ವಾಮಿತ್ರರು ಸಂಪ್ರೀತರಾಗಿ ವಸಿಷ್ಠರನ್ನು ಕುರಿತು "ಮಹರ್ಷಿಗಳೆ, ಪೂಜ್ಯರಾದ ನೀವು ನನ್ನನ್ನು ಗೌರವಿಸಿದಿರಿ. ನನಗೆ ಚೆನ್ನಾಗಿ ಸತ್ಕಾರವನ್ನು ಮಾಡಿದಿರಿ. ಈಗ ಒಂದು ಮಾತನ್ನು ಹೇಳುತ್ತೇನೆ, ಕೇಳಬೇಕು (೭-೮) ನಾನು ಒಂದು ಲಕ್ಷ ಗೋವುಗಳನ್ನು ನಿಮಗೆ ಕೊಡುತ್ತೇನೆ. ಶಬಲೆಯನ್ನು ನನಗೆ ಕೊಡಿರಿ ಪೂಜ್ಯರೆ, ಶಬಲೆಯು ಒಂದು ರತ್ನವೇ ಸರಿ. ರತ್ನವು ರಾಜನ ಹತ್ತಿರ ಇರಬೇಕಾದದ್ದು ಯುಕ್ತ. ಆದ್ದರಿಂದ ಶಬಲೆಯನ್ನು ನನಗೆ ಒಪ್ಪಿಸಿರಿ. ಇದು ನ್ಯಾಯವಾಗಿ (ರಾಜನಾದ) ನನಗೆ ಸೇರಬೇಕಾ

ವಿಶ್ವಾಮಿತ್ರೇಣ ಧರ್ಮಾತ್ಮಾ ಪ್ರತ್ಯುವಾಚ ಮಹೀಪತಿಮ್ ।
ನಾಹಂ ಶತಸಹಸ್ರೇಣ ನಾಪಿ ಕೋಟಿಶತೈರ್ಗವಾಮ್ ॥ ೧೦

ರಾಜನ್ ದಾಸ್ಯಾಮಿ ಶಬಲಾಂ ರಾಶಿಭೀ ರಜತಸ್ಯ ವಾ ।
ನ ಪರಿತ್ಯಾಗಮರ್ಹೇಯಂ ಮತ್ಸಕಾಶಾದರಿಂದಮ ॥ ೧೨

ಶಾಶ್ವತೀ ಶಬಲಾ ಮಹ್ಯಂ ಕೀರ್ತಿರಾತ್ಮವತೋ ಯಥಾ ।
ಅಸ್ಯಾಂ ಹವ್ಯಂ ಚ ಕವ್ಯಂ ಚ ಪ್ರಾಣಯಾತ್ರಾ ತಥೈವ ಚ ॥ ೧೩

ಆಯತ್ತಮಗ್ನಿಹೋತ್ರಂ ಚ ಬಲಿರ್ಹೋಮಸ್ತಥೈವ ಚ ।
ಸ್ವಾಹಾಕಾರವಷಟ್ಕಾರೌ ವಿದ್ಯಾಶ್ಚ ವಿವಿಧಾಸ್ತಥಾ ॥ ೧೪

ಆಯತ್ತಮತ್ರ ರಾಜರ್ಷೇ ಸರ್ವಮೇತನ್ನ ಸಂಶಯಃ ।
ಸರ್ವಸ್ವಮೇತತ್ ಸತ್ಯೇನ ಮಮ ತುಷ್ಟಿಕರೀ ಸದಾ ॥ ೧೫

ಕಾರಣೈರ್ಬಹುಭೀ ರಾಜನ್ನ ದಾಸ್ಯೇ ಶಬಲಾಂ ತವ ।
ವಸಿಷ್ಠೇನೈವಮುಕ್ತಸ್ತು ವಿಶ್ವಾಮಿತ್ರೋಽಬ್ರವೀತ್ತತಃ ॥ ೧೬

---

ದದ್ದು" ಎಂದು ನುಡಿದರು (೯–೧೦). ಆಗ ವಸಿಷ್ಠಮುನಿಗಳು "ರಾಜ, ಲಕ್ಷ ಹಸುಗಳು ಮಾತ್ರವಲ್ಲ. ನೂರುಕೋಟಿ ಹಸುಗಳನ್ನು ಕೊಟ್ಟರೂ ನಾನು ಶಬಲೆಯನ್ನು ಕೊಡುವುದಿಲ್ಲ. ಬೆಳ್ಳಿಯ ರಾಶಿಗಳನ್ನು ತಂದು ಸುರಿದರೂ ಅಷ್ಟೆ. ಈ ಧೇನುವು ಕ್ರಯಕ್ಕೆ ಕೊಡುವ ಪದಾರ್ಥವೇ ಅಲ್ಲ (೧೧–೧೨). ಮಾನವಂತನಿಗೆ ಕೀರ್ತಿ ಇದ್ದಂತೆ, ಶಬಲೆಯು ನನ್ನ ಬಳಿಯಲ್ಲಿ ಶಾಶ್ವತವಾಗಿ ಇರತಕ್ಕ ವಸ್ತು ನನ್ನ ಹವ್ಯಕವ್ಯಗಳು, ನನ್ನ ಪ್ರಾಣಧಾರಣೆ (ಆಹಾರ), ಪ್ರಾತಃಕಾಲ ಸಾಯಂಕಾಲಗಳಲ್ಲಿ ಮಾಡಬೇಕಾದ ಅಗ್ನಿಹೋತ್ರ, ಭೂತಬಲಿ, ವೈಶ್ವದೇವಾದಿ ಹೋಮಗಳು, ಸ್ವಾಹಾಕಾರ ವಷಟ್ಕಾರಗಳಿಂದ ನೆರವೇರಿಸಬೇಕಾದ ಯಜ್ಞಗಳು–ಇವುಗಳಿಗೆಲ್ಲ ಶಬಲೆಯೇ ಆಧಾರ. ವೇದಾದಿ ವಿದ್ಯೆಗಳ ಅಧ್ಯಯನ ಅಧ್ಯಾಪನಗಳಿಗೆ ಮೂಲದಲ್ಲಿ ಶಬಲೆಯೇ ನನಗೆ ಆಶ್ರಯ (೧೩–೧೪). ರಾಜರ್ಷಿ, ನಿಜವಾಗಿಯೂ ಈ ಧೇನುವೇ ನನ್ನ ಸರ್ವಸ್ವ. ಇದನ್ನು ನೋಡುತ್ತಿರುವುದೇ ನನಗೆ ಒಂದು ಆನಂದ. ಹೀಗೆ ನಾನಾ ಕಾರಣಗಳಿರುವುದರಿಂದ ಶಬಲೆಯನ್ನು ನಿನಗೆ ಕೊಡಲಾರೆ" ಎಂದು

**ಸಂರಬ್ಧತರಮತ್ಯರ್ಥಂ ವಾಕ್ಯಂ ವಾಕ್ಯವಿಶಾರದಃ ।**
**ಹೈರಣ್ಯಕಕ್ಷ್ಯಾಗ್ರೈವೇಯಾನ್ ಸುವರ್ಣಾಂಕುಶಭೂಷಿತಾನ್ ॥ ೧೭**
**ದದಾಮಿ ಕುಂಜರಾಂಸ್ತೇಽಹಂ ಸಹಸ್ರಾಣಿ ಚತುರ್ದಶ ।**
**ಹೈರಣ್ಯಾನಾಂ ರಥಾನಾಂ ತೇ ಶ್ವೇತಾಶ್ವಾನಾಂ ಚತುರ್ಯುಜಾಮ್**
**ದದಾಮಿ ತೇ ಶತಾನ್ಯಷ್ಟೌ ಕಿಂಕಿಣೀಕವಿಭೂಷಿತಾನ್ ।**
**ಹಯಾನಾಂ ದೇಶಜಾತಾನಾಂ ಕುಲಜಾನಾಂ ಮಹೌಜಸಾಮ್ ॥**
**ಸಹಸ್ರಮೇಕಂ ದಶ ಚ ದದಾಮಿ ತವ ಸುವ್ರತ ।**
**ನಾನಾವರ್ಣವಿಭಕ್ತಾನಾಂ ವಯಃಸ್ಥಾನಾಂ ತಥೈವ ಚ ॥ ೨೦**
**ದದಾಮ್ಯೇಕಾಂ ಗವಾಂ ಕೋಟಿಂ ಶಬಲಾ ದೀಯತಾಂ ಮಮ ।**
**ಯಾವದಿಚ್ಛಸಿ ರತ್ನಂ ವಾ ಹಿರಣ್ಯಂ ವಾ ದ್ವಿಜೋತ್ತಮ ॥ ೨೧**
**ತಾವದ್ದಾಸ್ಯಾಮಿ ತೇ ಸರ್ವಂ ಶಬಲಾ ದೀಯತಾಂ ಮಮ ।**
**ಏವಮುಕ್ತಸ್ತು ಭಗವಾನ್ ವಿಶ್ವಾಮಿತ್ರೇಣ ಧೀಮತಾ ॥ ೨೨**
**ನ ದಾಸ್ಯಾಮೀತಿ ಶಬಲಾಂ ಪ್ರಾಹ ರಾಜನ್ ಕಥಂಚನ ।**
**ಏತದೇವ ಹಿ ಮೇ ರತ್ನಮೇತದೇವ ಹಿ ಮೇ ಧನಮ್ ॥ ೨೩**

---

ಹೇಳಿದರು (೧೫-೧೬) ಅದನ್ನು ಕೇಳಿ ವಿಶ್ವಾಮಿತ್ರರು ಆಗ್ರಹಪೂರ್ವಕವಾಗಿ "(ಒಳ್ಳೆಯದು.) ಬಂಗಾರದ ಸರವಳಿಗಳಿಂದಲೂ ಬಂಗಾರದ (ಹಿಡಿ ಕೈಯಿರುವ) ಅಂಕುಶಗಳಿಂದಲೂ ಸಹಿತವಾದ ಹದಿನಾಲ್ಕುಸಾವಿರ ಆನೆ ಗಳನ್ನು ನಿಮಗೆ ಕೊಡುತ್ತೇನೆ. ನಾಲ್ಕುನಾಲ್ಕು ಬಿಳಿಯ ಕುದುರೆಗಳನ್ನು ಕಟ್ಟಿ ಕಿರುಗೆಜ್ಜೆಗಳಿಂದ ಅಲಂಕೃತವಾಗಿರುವ ಎಂಟುನೂರು ಸುವರ್ಣ ರಥಗಳನ್ನು ಕೊಡುತ್ತೇನೆ ಬಲಶಾಲಿಗಳಾದ ಹನ್ನೊಂದುಸಾವಿರ ಜಾತ್ಯಶ್ವ ಗಳನ್ನು ಕೊಡುತ್ತೇನೆ (೧೭-೧೯). ಅಲ್ಲದೆ ನಾನಾ ವರ್ಣದ ಒಂದುಕೋಟಿ ಪ್ರಾಯದ ಹಸುಗಳನ್ನು ಅರ್ಪಿಸುತ್ತೇನೆ. ನನಗೆ ಶಬಲೆಯನ್ನು ಕೊಡಿರಿ. ಅಷ್ಟೇ ಅಲ್ಲ—ನೀವು ಕೇಳುವಷ್ಟು ರತ್ನಗಳನ್ನೂ ಬಂಗಾರವನ್ನೂ ತಂದು ಸುರಿಯುತ್ತೇನೆ. ನೀವು ಏನು ಕೇಳಿದರೂ ಎಷ್ಟು ಕೇಳಿದರೂ ಅದೆಲ್ಲವನ್ನೂ ಒಪ್ಪಿಸಿಬಿಡುತ್ತೇನೆ. ನನಗೆ ಶಬಲೆಯನ್ನು ಕೊಡಿರಿ" ಎಂದು ಹೇಳಿದರು (೨೦-೨೨). ವಸಿಷ್ಠರು "ರಾಜ, ಎಷ್ಟು ಹೇಳಿದರೇನು? ಶಬಲೆಯನ್ನು

ಏತದೇವ ಹಿ ಸರ್ವಸ್ವಮೇತದೇವ ಹಿ ಜೀವಿತಮ್ ।
ದರ್ಶಶ್ಚ ಪೂರ್ಣಮಾಸಶ್ಚ ಯಜ್ಞಾಶ್ಚೈವಾಪ್ತದಕ್ಷಿಣಾಃ ॥ ೨೪

ಏತದೇವ ಹಿ ಮೇ ರಾಜನ್ ವಿವಿಧಾಶ್ಚ ಕ್ರಿಯಾಸ್ತಥಾ ।
ಅದೋಮೂಲಾಃ ಕ್ರಿಯಾಃ ಸರ್ವಾ ಮಮ ರಾಜನ್ನ ಸಂಶಯಃ ॥

ಬಹುನಾ ಕಿಂ ಪ್ರಲಾಪೇನ ನ ದಾಸ್ಯೇ ಕಾಮದೋಹಿನೀಮ್ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ತ್ರಿಪಂಚಾಶಃ ಸರ್ಗಃ



ನಾನು ಸರ್ವಥಾ ಕೊಡತಕ್ಕವನಲ್ಲ. ಇದೇ ನನ್ನ ರತ್ನ. ಇದೇ ನನ್ನ ಆಸ್ತಿ. ಇದೇ ನನ್ನ ಸರ್ವಸ್ವ. ಇದೇ ನನ್ನ ಪ್ರಾಣ. ದರ್ಶಪೌರ್ಣಮಾಸಾದಿ ಸಕಲ ಯಜ್ಞಗಳು, ಅದರಲ್ಲಿ ಕೊಡಬೇಕಾದ ದಕ್ಷಿಣೆಗಳು, ಸಮಸ್ತ ಕರ್ಮಗಳು— ಇವೆಲ್ಲವೂ ಶಬಲೆಯಿಂದಲೇ ನಡೆಯಬೇಕಾಗಿದೆ. ರಾಜ, ಎಷ್ಟು ಹಲುಬಿದರೇನು? ಈ ಕಾಮಧೇನುವನ್ನು ಎಂದಿಗೂ ಕೊಡುವುದಿಲ್ಲ. ಇದರಲ್ಲಿ ಸಂದೇಹವೇ ಬೇಡ" ಎಂದು ನುಡಿದರು (೨೩-೨೫).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಐವತ್ತುಮೂರನೆಯ ಸರ್ಗ



## ಚತುಃಪಂಚಾಶಃ ಸರ್ಗಃ

### ಪಹ್ಲವಾದಿಸೃಷ್ಟಿಃ

ಕಾಮಧೇನುಂ ವಸಿಷ್ಠೋಽಪಿ ಯದಾ ನ ತ್ಯಜತೇ ಮುನಿಃ ।
ತದಾಸ್ಯ ಶಬಲಾಂ ರಾಮ ವಿಶ್ವಾಮಿತ್ರೋಽನ್ವಕರ್ಷತ ॥ ೧

ನೀಯಮಾನಾ ತು ಶಬಲಾ ರಾಮ ರಾಜ್ಞಾ ಮಹಾತ್ಮನಾ ।
ದುಃಖಿತಾ ಚಿಂತಯಾಮಾಸ ರುದಂತೀ ಶೋಕಕರ್ಶಿತಾ ॥ ೨

ಪರಿತ್ಯಕ್ತಾ ವಸಿಷ್ಠೇನ ಕಿಮಹಂ ಸುಮಹಾತ್ಮನಾ ।
ಯಾಽಹಂ ರಾಜಭಟೈರ್ದೀನಾ ಹ್ರಿಯೇಯ ಭೃಶದುಃಖಿತಾ ॥ ೩

ಕಿಂ ಮಯಾಪಕೃತಂ ತಸ್ಯ ಮಹರ್ಷೇರ್ಭಾವಿತಾತ್ಮನಃ ।
ಯನ್ಮಾಮನಾಗಸಂ ಭಕ್ತಾಮಿಷ್ಟಾಂ ತ್ಯಜತಿ ಧಾರ್ಮಿಕಃ ॥ ೪

ಇತಿ ಸಾ ಚಿಂತಯಿತ್ವಾ ತು ವಿನಿಃಶ್ವಸ್ಯ ಪುನಃ ಪುನಃ ।
ನಿರ್ಧೂಯ ತಾಂಸ್ತದಾ ಭೃತ್ಯಾನ್ ಶತಶಃ ಶತ್ರುಸೂದನ ॥ ೫

## ಸರ್ಗ ೫೪

ವಿಶ್ವಾಮಿತ್ರರು ಧೇನುವನ್ನು ಬಲಾತ್ಕಾರದಿಂದ ಅಪಹರಿಸಲು ಪ್ರಯತ್ನಿಸುವುದು. ಧೇನುವು ಸೈನಿಕರನ್ನು ಸೃಜಿಸುವುದು ವಿಶ್ವಾಮಿತ್ರರ ಯುದ್ಧ.

"ರಾಘವ, ವಸಿಷ್ಠರು ಕಾಮಧೇನುವನ್ನು ಸರ್ವಥಾ ಕೊಡುವುದಿಲ್ಲವೆಂದು ನಿಶ್ಚಯವಾಗಲು ವಿಶ್ವಾಮಿತ್ರರು ಬಲಾತ್ಕಾರದಿಂದ ಅದನ್ನು ಎಳೆದುಕೊಂಡುಹೋಗಲು ಪ್ರಯತ್ನಿಸಿದರು. (ರಾಜಭಟರು) ಧೇನುವನ್ನು ಎಳೆಯತೊಡಗಲು ಅದು ಶೋಕದಿಂದ ಪರಿತಪಿಸುತ್ತ "ರಾಜಭಟರು ದೀನಳಾದ ನನ್ನನ್ನು ಎಳೆಯುತ್ತಿರುವರಲ್ಲ. ಮಹಾತ್ಮರಾದ ವಸಿಷ್ಠರು ನನ್ನನ್ನು ತ್ಯಜಿಸಿಬಿಟ್ಟರೋ ಹೇಗೆ? (೧-೩). ಪರಮಜ್ಞಾನಿಗಳಾದ ಆ ಮಹರ್ಷಿಗಳಿಗೆ ನಾನು ಏನು ಅಪರಾಧ ಮಾಡಿದೆ? ಯಾವ ತಪ್ಪು ಮಾಡದಿದ್ದರೂ ಭಕ್ತಳಾದ ನನ್ನನ್ನು ಆ ಧರ್ಮಿಷ್ಠರು ತ್ಯಜಿಸುತ್ತಿದ್ದಾರಲ್ಲ" ಎಂದು ನಿಟ್ಟುಸಿರುಬಿಡುತ್ತ

ಜಗಾಮಾನಿಲವೇಗೇನ ಪಾದಮೂಲಂ ಮಹಾತ್ಮನಃ ।
ಶಬಲಾ ಸಾ ರುದಂತೀ ಚ ಕ್ರೋಶಂತೀ ಚೇದಮಬ್ರವೀತ್ ॥ ೬

ವಸಿಷ್ಠಸ್ಯಾಗ್ರತಃ ಸ್ಥಿತ್ವಾ ಮೇಘದುಂದುಭಿರಾವಿಣೀ ।
ಭಗವನ್ ಕಿಂ ಪರಿತ್ಯಕ್ತಾ ತ್ವಯಾಹಂ ಬ್ರಹ್ಮಣಃ ಸುತ ॥ ೭

ಯಸ್ಮಾದ್ರಾಜಭಟಾ ಮಾಂ ಹಿ ನಯಂತೇ ತ್ವತ್ಸಕಾಶತಃ ।
ಏವಮುಕ್ತಸ್ತು ಬ್ರಹ್ಮರ್ಷಿರಿದಂ ವಚನಮಬ್ರವೀತ್ ॥ ೮

ಶೋಕಸಂತಪ್ತಹೃದಯಾಂ ಸ್ವಸಾರಮಿವ ದುಃಖಿತಾಮ್ ।
ನ ತ್ವಾಂ ತ್ಯಜಾಮಿ ಶಬಲೇ ನಾಪಿ ಮೇಽಪಕೃತಂ ತ್ವಯಾ ॥ ೯

ಏಷ ತ್ವಾಂ ನಯತೇ ರಾಜಾ ಬಲಾನ್ಮತ್ತೋ ಮಹಾಬಲಃ ।
ನ ಹಿ ತುಲ್ಯಂ ಬಲಂ ಮಹ್ಯಂ ರಾಜಾ ತ್ವದ್ಯ ವಿಶೇಷತಃ ॥ ೧೦

ಬಲೀ ರಾಜಾ ಕ್ಷತ್ರಿಯಶ್ಚ ಪೃಥಿವ್ಯಾಃ ಪತಿರೇವ ಚ ।
ಇಯಮಕ್ಷೌಹಿಣೀ ಸೇನಾ ಗಜವಾಜಿರಥಾಕುಲಾ ॥ ೧೧

---

ಚಿಂತಾಕ್ರಾಂತವಾಯಿತು. ಕಡೆಗೆ, ರಾಮ, ಆ ಧೇನುವು ತನ್ನನ್ನು ಎಳೆಯುತ್ತಿದ್ದ ನೂರಾರುಮಂದಿ ರಾಜಭೃತ್ಯರನ್ನು ತಳ್ಳಿಹಾಕಿ ವಾಯುವೇಗದಿಂದ ವಸಿಷ್ಠರ ಪಾದಸಮೀಪಕ್ಕೆ ಓಡಿಹೋಯಿತು (೪-೬). ವಸಿಷ್ಠರೆದುರಿಗೆ ಶಬಲೆಯು ಅಳುತ್ತ ಗೋಳಾಡುತ್ತ ಮೇಘಗಂಭೀರಸ್ವರದಿಂದ "ಭಗವನ್, ಬ್ರಹ್ಮಪುತ್ರರೆ, ಈ ರಾಜಭಟರು ನಿಮ್ಮ ಬಳಿಯಿಂದ ನನ್ನನ್ನು ಎಳೆದುಕೊಂಡು ಹೋಗುತ್ತಿದ್ದಾರೆ ನೀವು ನನ್ನನ್ನು ಪರಿತ್ಯಜಿಸಿಬಿಟ್ಟಿರೆ?" ಎಂದು ಕೇಳಿತು (೭-೮). ಆಗ ಆ ಬ್ರಹ್ಮರ್ಷಿಗಳು ಶೋಕಸಂತಪ್ತಳಾಗಿ ತಂಗಿಯಂತೆ ನಿಂತಿದ್ದ ಶಬಲೆಯನ್ನು ಕುರಿತು "ಶಬಲೆ, ನಿನ್ನನ್ನು ನಾನು ತ್ಯಜಿಸಿಲ್ಲ ನೀನು ಯಾವ ಅಪರಾಧವನ್ನೂ ಮಾಡಿಲ್ಲ. ನನಗಿಂತ ಪ್ರಬಲನಾದ ಈ ರಾಜನು ಬಲಾತ್ಕಾರದಿಂದ ನಿನ್ನನ್ನು ಒಯ್ಯುತ್ತಿದ್ದಾನೆ (೯-೧೦). ಅವನಿಗಿರುವಂತೆ ನನಗೆ (ಸೇನಾ) ಬಲವಿಲ್ಲ ಅದರಲ್ಲಿಯೂ ಈ ದಿನ ರಾಜನು ನನಗೆ (ಅತಿಥಿಯಾಗಿರುವನೆಂಬುದು) ವಿಶೇಷ. ಇವನು ಬಲಶಾಲಿಯಾದ ಕ್ಷತ್ರಿಯ. ಭೂಮಿಗೆ ಒಡೆಯ. ಇವನ ಬಳಿ ಗಜತುರಗರಥಪದಾತಿಗಳಿಂದ ತುಂಬಿದ

ಪತ್ತಿಧ್ವಜಸಮಾಕೀರ್ಣಾ ತೇನಾಸೌ ಬಲವತ್ತರಃ ।
ಏವಮುಕ್ತೋ ವಸಿಷ್ಠೇನ ಪ್ರತ್ಯುವಾಚ ವಿನೀತವತ್ ॥ ೧೨
ವಚನಂ ವಚನಜ್ಞಾ ಸಾ ಬ್ರಹ್ಮರ್ಷಿಮಮಿತಪ್ರಭಮ್ ।
ನ ಬಲಂ ಕ್ಷತ್ರಿಯಸ್ಯಾಹುರ್ಬ್ರಾಹ್ಮಣೋ ಬಲವತ್ತರಃ ॥ ೧೩
ಬ್ರಹ್ಮನ್ ಬ್ರಹ್ಮಬಲಂ ದಿವ್ಯಂ ಕ್ಷತ್ರಾತ್ತು ಬಲವತ್ತರಮ್ ।
ಅಪ್ರಮೇಯಬಲಂ ತುಭ್ಯಂ ನ ತ್ವಯಾ ಬಲವತ್ತರಃ ॥ ೧೪
ವಿಶ್ವಾಮಿತ್ರೋ ಮಹಾವೀರ್ಯಸ್ತೇಜಸ್ತವ ದುರಾಸದಮ್ ।
ನಿಯುಂಕ್ಷ್ವ ಮಾಂ ಮಹಾತೇಜಸ್ತ್ವದ್ಬ್ರಹ್ಮಬಲಸಂಭೃತಾಮ್ ॥
ತಸ್ಯ ದರ್ಪಬಲಂ ಯತ್ತನ್ನಾಶಯಾಮಿ ದುರಾತ್ಮನಃ ।
ಇತ್ಯುಕ್ತಸ್ತು ತಯಾ ರಾಮ ವಸಿಷ್ಠಸ್ತು ಮಹಾಯಶಾಃ ॥ ೧೬
ಸೃಜಸ್ವೇತಿ ತದೋವಾಚ ಬಲಂ ಪರಬಲಾರ್ದನಮ್ ।
ತಸ್ಯ ತದ್ವಚನಂ ಶ್ರುತ್ವಾ ಸುರಭಿಃ ಸಾಸೃಜತ್ತದಾ ॥ ೧೭
ತಸ್ಯಾ ಹುಂಭಾರವೋತ್ಸೃಷ್ಟಾಃ ಪಹ್ಲವಾಃ ಶತಶೋ ನೃಪ ।
ನಾಶಯಂತಿ ಬಲಂ ಸರ್ವಂ ವಿಶ್ವಾಮಿತ್ರಸ್ಯ ಪಶ್ಯತಃ ॥ ೧೮

---

ಒಂದು ಅಕ್ಷೌಹಿಣಿ ಸೇನೆ ಇದೆ. ಆದ್ದರಿಂದ ಈತನು ಪ್ರಬಲನಾಗಿದ್ದಾನೆ” ಎಂದು ಹೇಳಿದರು (೧೧-೧೨). ಆಗ ಶಬಲೆಯು ವಿನಯದಿಂದ “ಬ್ರಹ್ಮರ್ಷಿಗಳೆ, ಬ್ರಾಹ್ಮಣನಿಗಿಂತ ಕ್ಷತ್ರಿಯನು ಬಲಶಾಲಿಯೆಂದು ಯಾರೂ ಹೇಳಲಾರರು. ಬ್ರಾಹ್ಮಣನೇ ಕ್ಷತ್ರಿಯನಿಗಿಂತ ಪ್ರಬಲ. ನಿಮಗಿರುವ ಸಾಮರ್ಥ್ಯ ಊಹಾತೀತವಾದದ್ದು. ಈತನು ನಿಮಗಿಂತ ಎಂದಿಗೂ ಬಲಶಾಲಿಯಾಗಲಾರ (೧೩-೧೪). ಬ್ರಾಹ್ಮಣನ ಬಲ ಅಲೌಕಿಕವಾದದ್ದು. ಅದು ಕ್ಷತ್ರಿಯನ ಬಲಕ್ಕಿಂತ ಅಧಿಕ. ವಿಶ್ವಾಮಿತ್ರನು ಮಹಾವೀರನಿರಬಹುದು. ಆದರೆ ನಿಮ್ಮ ಬ್ರಹ್ಮತೇಜಸ್ಸು ಅಸಾಧಾರಣವಾದುದು. ಮಹಾತ್ಮರೆ, ನಿಮ್ಮ ತಪೋಬಲದಿಂದ ಪೋಷಿತಳಾದ ನನಗೆ ಅನುಜ್ಞೆಯನ್ನು ಕೊಟ್ಟು ನೋಡಿ. ಈ ದುರಾತ್ಮನ ದರ್ಪವನ್ನು ಅಡಗಿಸುತ್ತೇನೆ” ಎಂದು ಹೇಳಿತು (೧೫-೧೬). ರಾಮ, ವಸಿಷ್ಠರು ಶಬಲೆಯ ಮಾತನ್ನು ಕೇಳಿ “ಶತ್ರುಗಳನ್ನು ಧ್ವಂಸಮಾಡತಕ್ಕ ಸೈನ್ಯವನ್ನು ಸೃಷ್ಟಿಸು” ಎಂದರು. ಕೂಡಲೆ ಶಬಲೆಯು ‘ಹುಂಭಾ’

ಬಲಂ ಭಗ್ನಂ ತತೋ ದೃಷ್ಟ್ವಾ ರಥೇನಾಕ್ರಮ್ಯ ಕೌಶಿಕಃ ।
ಸ ರಾಜಾ ಪರಮಕ್ರುದ್ಧೋ ರೋಷವಿಸ್ಫಾರಿತೇಕ್ಷಣಃ ॥ ೧೯

ಪಹ್ಲವಾನ್ನಾಶಯಾಮಾಸ ಶಸ್ತ್ರೈರುಚ್ಚಾವಚೈರಪಿ ।
ವಿಶ್ವಾಮಿತ್ರಾರ್ದಿತಾನ್ ದೃಷ್ಟ್ವಾ ಪಹ್ಲವಾನ್ ಶತಶಸ್ತದಾ ॥ ೨೦

ಭೂಯ ಏವಾಸೃಜದ್ಘೋರಾನ್ ಶಕಾನ್ ಯವನಮಿಶ್ರಿತಾನ್ ।
ತೈರಾಸೀತ್ ಸಂವೃತಾ ಭೂಮಿಃ ಶಕೈರ್ಯವನಮಿಶ್ರಿತೈಃ ॥ ೨೧

ಪ್ರಭಾವದ್ಭಿರ್ಮಹಾವೀರ್ಯೈಃ ಹೇಮಕಿಂಜಲ್ಕಸನ್ನಿಭೈಃ ।
ತೀಕ್ಷ್ಣಾಸಿಪಟ್ಟಿಸಧರೈರ್ಹೇಮವರ್ಣಾಂಬರಾವೃತೈಃ ॥ ೨೨

ನಿರ್ದಗ್ಧಂ ತದ್ಬಲಂ ಸರ್ವಂ ಪ್ರದೀಪ್ತೈರಿವ ಪಾವಕೈಃ ।
ತತೋಽಸ್ತ್ರಾಣಿ ಮಹಾತೇಜಾ ವಿಶ್ವಾಮಿತ್ರೋ ಮುಮೋಚ ಹ ॥

ತೈಸ್ತೈರ್ಯವನಕಾಂಭೋಜಾಃ ಪಹ್ಲವಾಶ್ಚಾಕುಲೀಕೃತಾಃ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಚತುಃಪಂಚಾಶಃ ಸರ್ಗಃ

---

ಎಂದು ಕೂಗಿತು. ನೂರಾರು ಮಂದಿ ಪಹ್ಲವರು ಹುಟ್ಟಿ ವಿಶ್ವಾಮಿತ್ರರ ಕಣ್ಣೆದುರಿಗೇ ಅವರ ಸೈನ್ಯವನ್ನು ಧ್ವಂಸಮಾಡತೊಡಗಿದರು (೧೭-೧೮). ಆಗ ವಿಶ್ವಾಮಿತ್ರರು ಕ್ರೋಧದಿಂದ ಕಣ್ಣುಗಳನ್ನು ತಿರುಗಿಸುತ್ತ ತ್ವರೆಯಿಂದ ಬಂದು ನಾನಾ ವಿಧವಾದ ಶಸ್ತ್ರಗಳಿಂದ ಪಹ್ಲವರನ್ನು ಗಾಸಿಗೊಳಿಸಿದರು. ಕಾಮಧೇನುವು ಮತ್ತೆ ಘೋರಾಕೃತಿಯ ಶಕರನ್ನೂ ಯವನರನ್ನೂ ಸೃಷ್ಟಿಸಿತು ಅವರು ಎಲ್ಲೆಲ್ಲಿಯೂ ತುಂಬಿಹೋದರು (೧೯-೨೧) ಅವರು ತೇಜಸ್ವಿಗಳೂ ಮಹಾವೀರರೂ ಸಂಪಿಗೆಹೂವಿನ ಕೇಸರದಂತೆ ಮೈಬಣ್ಣವಿರತಕ್ಕವರೂ ಆಗಿದ್ದರು. ಸುವರ್ಣವರ್ಣದ ವಸ್ತ್ರಗಳನ್ನು ಖಡ್ಗಪಟ್ಟಸಗಳನ್ನು ಹಿಡಿದಿದ್ದ ಆ ವೀರರು ಜ್ವಲಿಸುವ ಅಗ್ನಿಯಂತೆ ಎಲ್ಲೆಡೆಯೂ ನುಗ್ಗಿ ವಿಶ್ವಾಮಿತ್ರರ ಸೈನ್ಯವನ್ನು ನಾಶಮಾಡಿದರು. ಆಗ ಮಹಾತೇಜಸ್ವಿಗಳಾದ ವಿಶ್ವಾಮಿತ್ರರು ದಿವ್ಯಾಸ್ತ್ರಗಳನ್ನು ಪ್ರಯೋಗಿಸಿ ಯವನ, ಕಾಂಭೋಜ, ಪಹ್ಲವಾದಿ ಸೈನಿಕರನ್ನು ಚಲ್ಲಾಪಿಲ್ಲಿಯಾಗಿ ಓಡಿಸಿದರು (೨೨-೨೩).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಐವತ್ತುನಾಲ್ಕನೆಯ ಸರ್ಗ

## ಪಂಚಪಂಚಾಶಃ ಸರ್ಗಃ

### ವಿಶ್ವಾಮಿತ್ರಧನುರ್ವೇದಾಧಿಗಮಃ

**ತತಸ್ತಾನಾಕುಲಾನ್ ದೃಷ್ಟ್ವಾ ವಿಶ್ವಾಮಿತ್ರಾಸ್ತ್ರಮೋಹಿತಾನ್ ।**
**ವಸಿಷ್ಠಶ್ಚೋದಯಾಮಾಸ ಕಾಮಧುಕ್ ಸೃಜ ಯೋಗತಃ ॥ ೧**

**ತಸ್ಯಾ ಹುಂಭಾರವೋತ್ಸೃಷ್ಟಾಃ ಕಾಂಭೋಜಾ ರವಿಸಂನಿಭಾಃ ।**
**ಊಧಸಸ್ತ್ವಥ ಸಂಭೂತಾಃ ಬರ್ಬರಾಃ ಶಸ್ತ್ರಪಾಣಯಃ ॥ ೨**

**ಯೋನಿದೇಶಾಚ್ಚ ಯವನಾಃ ಶಕೃದ್ದೇಶಾಚ್ಛಕಾಸ್ತಥಾ ।**
**ರೋಮಕೂಪೇಷು ಚ ಮ್ಲೇಚ್ಛಾ ಹಾರೀತಾಃ ಸಕಿರಾತಕಾಃ ॥ ೩**

**ಯೈಸ್ತನ್ನಿಷೂದಿತಂ ಸೈನ್ಯಂ ವಿಶ್ವಾಮಿತ್ರಸ್ಯ ತತ್ಕ್ಷಣಾತ್ ।**
**ಸಪದಾತಿಗಜಂ ಸಾಶ್ವಂ ಸರಥಂ ರಘುನಂದನ ॥ ೪**

**ದೃಷ್ಟ್ವಾ ನಿಷೂದಿತಂ ಸೈನ್ಯಂ ವಸಿಷ್ಠೇನ ಮಹಾತ್ಮನಾ ।**
**ವಿಶ್ವಾಮಿತ್ರಸುತಾನಾಂ ತು ಶತಂ ನಾನಾವಿಧಾಯುಧಮ್ ॥ ೫**

### ಸರ್ಗ ೫೫

ವಸಿಷ್ಠರ ಹುಂಕಾರದಿಂದ ವಿಶ್ವಾಮಿತ್ರರ ಮಕ್ಕಳು ಭಸ್ಮವಾಗುವುದು.
ವಿಶ್ವಾಮಿತ್ರರು ತಪಸ್ಸುಮಾಡಿ ದಿವ್ಯಾಸ್ತ್ರಗಳನ್ನು ಸಂಪಾದಿಸಿ
ಪುನಃ ವಸಿಷ್ಠರೊಡನೆ ಹೋರಾಟಕ್ಕೆ ಬರುವುದು.

ಶತಾನಂದರು ಹೇಳಿದರು: "ಸೈನಿಕರು ಕಂಗೆಟ್ಟಿರುವುದನ್ನು ಕಂಡು ವಸಿಷ್ಠಮುನಿಗಳು 'ಕಾಮಧೇನು, ಯೋಗಬಲದಿಂದ ಮತ್ತಷ್ಟು ಸೈನಿಕರನ್ನು ಸೃಜಿಸು!' ಎಂದರು. ಆಗ ಶಬಲೆಯು ಹುಂಕಾರಮಾಡಿತು. ಸೂರ್ಯನಂತೆ ಜ್ವಲಿಸುವ ಕಾಂಭೋಜರು ಹುಟ್ಟಿದರು. ಆ ಧೇನುವಿನ ಕೆಚ್ಚಲಿನಿಂದ ಬರ್ಬರರೂ ಯೋನಿದೇಶದಿಂದ ಯವನರೂ ಮಲದ್ವಾರದಿಂದ ಶಶಕರೂ ರೋಮಕೂಪಗಳಿಂದ ಮ್ಲೇಚ್ಛ ಹಾರೀತ ಕಿರಾತರೂ ಶಸ್ತ್ರಪಾಣಿಗಳಾಗಿ ಉದಿಸಿದರು (೧-೩). ರಘುನಂದನ, ಅವರು ವಿಶ್ವಾಮಿತ್ರರ ಚತುರಂಗಸೇನೆಯನ್ನು ನಾಶಮಾಡಿದರು ಆಗ ವಿಶ್ವಾಮಿತ್ರರ ನೂರುಮಂದಿ ಮಕ್ಕಳು ವಿವಿಧಾಯುಧಗಳನ್ನು ಧರಿಸಿ ಕ್ರೋಧದಿಂದ ವಸಿಷ್ಠಮಹರ್ಷಿಗಳ

ಅಭ್ಯಧಾವತ್ ಸುಸಂಕ್ರುದ್ಧಂ ವಸಿಷ್ಠಂ ಜಪತಾಂ ವರಮ್ ।
ಹುಂಕಾರೇಣೈವ ತಾನ್ ಸರ್ವಾನ್ ದದಾಹ ಭಗವಾನೃಷಿಃ ॥ ೬

ತೇ ಸಾಶ್ವರಥಪಾದಾತಾ ವಸಿಷ್ಠೇನ ಮಹಾತ್ಮನಾ ।
ಭಸ್ಮೀಕೃತಾ ಮುಹೂರ್ತೇನ ವಿಶ್ವಾಮಿತ್ರಸುತಾಸ್ತದಾ ॥ ೭

ದೃಷ್ಟ್ವಾ ವಿನಾಶಿತಾನ್ ಪುತ್ರಾನ್ ಬಲಂ ಚ ಸುಮಹಾಯಶಾಃ ।
ಸವ್ರೀಡಶ್ಚಿಂತಯಾವಿಷ್ಟೋ ವಿಶ್ವಾಮಿತ್ರೋಽಭವತ್ತದಾ ॥ ೮

ಸಮುದ್ರ ಇವ ನಿರ್ವೇಗೋ ಭಗ್ನದಂಷ್ಟ್ರ ಇವೋರಗಃ ।
ಉಪರಕ್ತ ಇವಾದಿತ್ಯಃ ಸದ್ಯೋ ನಿಷ್ಪ್ರಭತಾಂ ಗತಃ ॥ ೯

ಹತಪುತ್ರಬಲೋ ದೀನೋ ಲೂನಪಕ್ಷ ಇವ ದ್ವಿಜಃ ।
ಹತದರ್ಪೋ ಹತೋತ್ಸಾಹೋ ನಿರ್ವೇದಂ ಸಮಪದ್ಯತ ॥ ೧೦

ಸ ಪುತ್ರಮೇಕಂ ರಾಜ್ಯಾಯ ಪಾಲಯೇತಿ ನಿಯುಜ್ಯ ಚ ।
ಪೃಥಿವೀಂ ಕ್ಷತ್ರಧರ್ಮೇಣ ವನಮೇವಾಭ್ಯಪದ್ಯತ ॥ ೧೧

ಸ ಗತ್ವಾ ಹಿಮವತ್ಪಾರ್ಶ್ವಂ ಕಿಂನರೋರಗಸೇವಿತಮ್ ।
ಮಹಾದೇವಪ್ರಸಾದಾರ್ಥಂ ತಪಸ್ತೇಪೇ ಮಹಾತಪಾಃ ॥ ೧೨

---

ಮೇಲೆ ನುಗ್ಗಿದರು. ವಸಿಷ್ಠರು ಒಂದುಸಲ ಹುಂಕಾರಮಾಡಿದರು. ಮರು ಕ್ಷಣದಲ್ಲಿ ನೂರುಮಂದಿ ರಾಜಪುತ್ರರೂ ಚತುರಂಗಬಲಸಹಿತ ಸುಟ್ಟು ಬೂದಿಯಾದರು! (೬-೭). ಹೀಗೆ ಮಕ್ಕಳೂ ಸೈನ್ಯವೂ ನಾಶವಾದ್ದನ್ನು ನೋಡಿ ವಿಶ್ವಾಮಿತ್ರರಿಗೆ ಬಹಳ ಚಿಂತೆಯಾಯಿತು. ನಾಚಿಕೆಯು ಆವರಿಸಿತು. ಅವರು ಮುಂದೆ ಆಕ್ರಮಣ ಮಾಡಲಾರದೆ ವೇಗರಹಿತ ಸಮುದ್ರದಂತಾದರು. ಹಲ್ಲುಮುರಿದ ಹಾವಿನಂತಾದರು. ಗ್ರಹಣಹಿಡಿದ ಸೂರ್ಯನಂತೆ ನಿಷ್ಪ್ರಭರಾದರು (೮-೯). ಇತ್ತ ಮಕ್ಕಳು ಹತರಾದರು. ಅತ್ತ ಸೇನೆಯು ಹತವಾಯಿತು. ಹೀಗಾಗಿ ವಿಶ್ವಾಮಿತ್ರರು ಎರಡು ರೆಕ್ಕೆಗಳನ್ನೂ ಕತ್ತರಿಸಿದ ಹಕ್ಕಿಯಂತಾದರು. ದರ್ಪೋತ್ಸಾಹಗಳು ಭಗ್ನವಾಗಿ ಯಾವುದೂ ಬೇಡವೆನಿಸಿತು. ಉಳಿದಿದ್ದ ಒಬ್ಬ ಮಗನನ್ನು ಕ್ಷತ್ರಧರ್ಮದಿಂದ ರಾಜ್ಯಭಾರ ಮಾಡುವಂತೆ ನೇಮಿಸಿ ಕಾಡಿಗೆ ಹೊರಟುಹೋದರು (೧೦-೧೧). ಅವರು ಹಿಮಾಲಯಪರ್ವತದಲ್ಲಿ ಕಿಂನರೋರಗರು ಸಂಚರಿಸುವ ಒಂದು ಪಾರ್ಶ್ವ

**ಕೇನಚಿತ್ತ್ವಥ ಕಾಲೇನ ದೇವೇಶೋ ವೃಷಭಧ್ವಜಃ ।**
**ದರ್ಶಯಾಮಾಸ ವರದೋ ವಿಶ್ವಾಮಿತ್ರಂ ಮಹಾಮುನಿಮ್ ॥ ೧೩**

**ಕಿಮರ್ಥಂ ತಪ್ಯಸೇ ರಾಜನ್ ಬ್ರೂಹಿ ಯತ್ತೇ ವಿವಕ್ಷಿತಮ್ ।**
**ವರದೋಽಸ್ಮಿ ವರೋ ಯಸ್ತೇ ಕಾಂಕ್ಷಿತಃ ಸೋಽಭಿಧೀಯತಾಮ್ ॥**

**ಏವಮುಕ್ತಸ್ತು ದೇವೇನ ವಿಶ್ವಾಮಿತ್ರೋ ಮಹಾತಪಾಃ ।**
**ಪ್ರಣಿಪತ್ಯ ಮಹಾದೇವಮಿದಂ ವಚನಮಬ್ರವೀತ್ ॥ ೧೫**

**ಯದಿ ತುಷ್ಟೋ ಮಹಾದೇವ ಧನುರ್ವೇದೋ ಮಮಾನಘ ।**
**ಸಾಂಗೋಪಾಂಗೋಪನಿಷದಃ ಸರಹಸ್ಯಃ ಪ್ರದೀಯತಾಮ್ ॥ ೧೬**

**ಯಾನಿ ದೇವೇಷು ಚಾಸ್ತ್ರಾಣಿ ದಾನವೇಷು ಮಹರ್ಷಿಷು ।**
**ಗಂಧರ್ವಯಕ್ಷರಕ್ಷಃಸು ಪ್ರತಿಭಾಂತು ಮಮಾನಘ ॥ ೧೭**

**ತವ ಪ್ರಸಾದಾದ್ಭವತು ದೇವದೇವ ಮಮೇಪ್ಸಿತಮ್ ।**
**ಏವಮಸ್ತ್ವಿತಿ ದೇವೇಶೋ ವಾಕ್ಯಮುಕ್ತ್ವಾ ಗತಸ್ತದಾ ॥ ೧೮**

---

ವನ್ನು ಸೇರಿ ಈಶ್ವರನ ಅನುಗ್ರಹವನ್ನು ಸಂಪಾದಿಸುವುದಕ್ಕಾಗಿ ಕಠೋರ ತಪಸ್ಸನ್ನಾರಂಭಿಸಿದರು. ಕೆಲವು ಕಾಲದಮೇಲೆ ಮಹಾದೇವನು ಪ್ರಸನ್ನನಾಗಿ "ರಾಜರ್ಷಿ, ಏಕೆ ತಪಸ್ಸನ್ನು ಆಚರಿಸುತ್ತಿದ್ದೀಯೆ? ನಿನ್ನ ಕೋರಿಕೆ ಏನು? ನಿನಗೆ ಬೇಕಾದ ವರವನ್ನು ಕೇಳಿಕೊ" ಎಂದನು (೧೨-೧೪). ಆಗ ವಿಶ್ವಾಮಿತ್ರರು ಈಶ್ವರನಿಗೆ ನಮಸ್ಕರಿಸಿ "ಮಹಾದೇವ, ನೀನು ಸಂತುಷ್ಟನಾದರೆ ಸಂಪೂರ್ಣ ಧನುರ್ವೇದವನ್ನು ನನಗೆ ಅನುಗ್ರಹಿಸು. ಧನುರ್ವೇದದ ಅಂಗೋಪಾಂಗಗಳನ್ನೂ ಮಂತ್ರಗಳನ್ನೂ ರಹಸ್ಯಾರ್ಥಗಳನ್ನೂ ನನಗೆ ದಯಪಾಲಿಸು. ಮತ್ತು ದೇವದಾನವರಲ್ಲಿಯೂ ಮಹರ್ಷಿಗಳಲ್ಲಿಯೂ ಗಂಧರ್ವಯಕ್ಷರಕ್ಷೋಗಣಗಳಲ್ಲಿಯೂ ಯಾವಯಾವ ಮಂತ್ರಾಸ್ತ್ರಗಳಿವೆಯೊ ಅವೆಲ್ಲವೂ, ದೇವದೇವ, ನಿನ್ನ ಪ್ರಸಾದದಿಂದ ನನಗೆ ಗೋಚರಿಸಲಿ. ಇದೇ ನನ್ನ ಪ್ರಾರ್ಥನೆ" ಎಂದರು (೧೫-೧೭). ಆಗ ಈಶ್ವರನು 'ತಥಾಸ್ತು' ಎಂದು ಹೇಳಿ ಅಂತರ್ಹಿತನಾದನು. ವಿಶ್ವಾಮಿತ್ರರು ಸಕಲ ದಿವ್ಯಾಸ್ತ್ರಗಳನ್ನೂ

ಪ್ರಾಪ್ಯ ಚಾಸ್ತ್ರಾಣಿ ರಾಜರ್ಷಿರ್ವಿಶ್ವಾಮಿತ್ರೋ ಮಹಾಬಲಃ ।
ದರ್ಪೇಣ ಮಹತಾ ಯುಕ್ತೋ ದರ್ಪಪೂರ್ಣೋಽಭವತ್ತದಾ ॥ ೧೯

ವಿವರ್ಧಮಾನೋ ವೀರ್ಯೇಣ ಸಮುದ್ರ ಇವ ಪರ್ವಸು ।
ಹತಮೇವ ತದಾ ಮೇನೇ ವಸಿಷ್ಠಮೃಷಿಸತ್ತಮಮ್ ॥ ೨೦

ತತೋ ಗತ್ವಾಶ್ರಮಪದಂ ಮುನೇಶ್ಚಾಸ್ತ್ರಾಣಿ ಪಾರ್ಥಿವಃ ।
ಯೈಸ್ತತ್ತಪೋವನಂ ಸರ್ವಂ ನಿರ್ದಗ್ಧಂ ಚಾಸ್ತ್ರತೇಜಸಾ ॥ ೨೧

ಉದೀರ್ಯಮಾಣಮಸ್ತ್ರಂ ತದ್ವಿಶ್ವಾಮಿತ್ರಸ್ಯ ಧೀಮತಃ ।
ದೃಷ್ಟ್ವಾ ವಿಪ್ರದ್ರುತಾ ಭೀತಾ ಮುನಯಃ ಶತಶೋ ದಿಶಃ ॥ ೨೨

ವಸಿಷ್ಠಸ್ಯ ಚ ಯೇ ಶಿಷ್ಯಾಸ್ತಥೈವ ಮೃಗಪಕ್ಷಿಣಃ ।
ವಿದ್ರವಂತಿ ಭಯಾದ್ಭೀತಾ ನಾನಾದಿಗ್ಭ್ಯಃ ಸಹಸ್ರಶಃ ॥ ೨೩

ವಸಿಷ್ಠಸ್ಯಾಶ್ರಮಪದಂ ಶೂನ್ಯಮಾಸೀನ್ಮಹಾತ್ಮನಃ ।
ಮುಹೂರ್ತಮಿವ ನಿಃಶಬ್ದಮಾಸೀದಿರಿಣಸಂನಿಭಮ್ ॥ ೨೪

ವದತೋ ವೈ ವಸಿಷ್ಠಸ್ಯ ಮಾ ಭೈಷ್ಟೇತಿ ಮುಹುರ್ಮುಹುಃ ।
ನಾಶಯಾಮ್ಯದ್ಯ ಗಾಧೇಯಂ ನೀಹಾರಮಿವ ಭಾಸ್ಕರಃ ॥ ೨೫

---

ಪಡೆದು ಮಹಾಬಲಶಾಲಿಗಳಾದರು. ಅವರಲ್ಲಿ ಮೊದಲೇ ಕ್ಷತ್ರಿಯದರ್ಪವಿತ್ತು. ಈಗ ದಿವ್ಯಾಸ್ತ್ರಲಾಭದಿಂದ ಹಿಡಿಸಲಾರದಷ್ಟು ದರ್ಪ ತುಂಬಿತು. ಪರ್ವಕಾಲದಲ್ಲಿ ಸಮುದ್ರವು ಉಬ್ಬುವಂತೆ ವಿಶ್ವಾಮಿತ್ರರು ಪರಾಕ್ರಮದಿಂದ ಉಬ್ಬಿದರು. ಅವರು ಮನಸ್ಸಿನಲ್ಲಿ ವಸಿಷ್ಠಮಹರ್ಷಿಗಳು ಸತ್ತರೆಂದೇ ಭಾವಿಸಿದರು (೧೯-೨೦). ನೇರವಾಗಿ ವಸಿಷ್ಠರ ಆಶ್ರಮಕ್ಕೆ ಹೋಗಿ ಅಸ್ತ್ರಗಳನ್ನು ಮಳೆಗರೆಯುತ್ತ ತಪೋವನವನ್ನು ಸುಟ್ಟುಹಾಕತೊಡಗಿದರು. ವಿಶ್ವಾಮಿತ್ರರ ಅಸ್ತ್ರವೇಗವನ್ನು ಕಂಡು ಅಲ್ಲಿದ್ದ ಮುನಿಗಳು ಹೆದರಿ ದಿಕ್ಕುದಿಕ್ಕಿಗೆ ಓಡಿಹೋದರು ವಸಿಷ್ಠರ ಶಿಷ್ಯರೂ ಮೃಗಪಕ್ಷಿಗಳೂ ಕಂಗೆಟ್ಟು ನಾನಾ ದಿಕ್ಕುಗಳಿಗೆ ಓಡಲಾರಂಭಿಸಿದರು (೨೧-೨೩) ವಸಿಷ್ಠಮುನಿಗಳ ಆಶ್ರಮವು ಸ್ವಲ್ಪಹೊತ್ತು ಮರುಳುಗಾಡಿನಂತೆ ಶೂನ್ಯವಾಗಿ ನಿಃಶಬ್ದವಾಯಿತು ಅಷ್ಟರಲ್ಲಿ ವಸಿಷ್ಠರು "ಎಲ್ಲೈ ಹೆದರಬೇಡಿ ಹೆದರಬೇಡಿ. ಸೂರ್ಯನು

ಏವಮುಕ್ತ್ವಾ ಮಹಾತೇಜಾ ವಸಿಷ್ಠೋ ಜಪತಾಂ ವರಃ ।
ವಿಶ್ವಾಮಿತ್ರಂ ತದಾ ವಾಕ್ಯಂ ಸರೋಷಮಿದಮಬ್ರವೀತ್ ॥ ೨೬

ಆಶ್ರಮಂ ಚಿರಸಂವೃದ್ಧಂ ಯದ್ವಿನಾಶಿತವಾನಸಿ ।
ದುರಾಚಾರೋಽಸಿ ಯನ್ಮೂಢ ತಸ್ಮಾತ್ತ್ವಂ ನ ಭವಿಷ್ಯಸಿ ॥ ೨೭

ಇತ್ಯುಕ್ತ್ವಾ ಪರಮಕ್ರುದ್ಧೋ ದಂಡಮುದ್ಯಮ್ಯ ಸತ್ವರಃ ।
ವಿಧೂಮ ಇವ ಕಾಲಾಗ್ನಿರ್ಯಮದಂಡಮಿವಾಪರಮ್ ॥ ೨೮

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಪಂಚಪಂಚಾಶಃ ಸರ್ಗಃ



ಮಂಜನ್ನು ಕರಗಿಸುವಂತೆ ಈ ಗಾಧಿಪುತ್ರನನ್ನು ನಾಶಮಾಡಿಬಿಡುತ್ತೇನೆ" ಎಂದು ಹೇಳುತ್ತ ವಿಶ್ವಾಮಿತ್ರರ ಎದುರಿಗೆ ಬಂದರು (೨೪-೨೬). ಆ ಮಹಾತ್ಮರು ವಿಶ್ವಾಮಿತ್ರರನ್ನು ಕುರಿತು "ಎಲೈ ಮೂಢ, ಚಿರಕಾಲದಿಂದ ಬೆಳೆದುಬಂದಿರುವ ಆಶ್ರಮವನ್ನು ನಾಶಮಾಡಿದೆಯಾ? ದುರಾಚಾರ, ನೀನಿನ್ನು ಉಳಿಯಲಾರೆ" ಎಂದು ಹೇಳಿ ಮಹಾಕ್ರೋಧದಿಂದ ತಮ್ಮ ಬ್ರಹ್ಮದಂಡವನ್ನು ಎತ್ತಿಹಿಡಿದರು. ಆಗ ವಸಿಷ್ಠಮಹರ್ಷಿಗಳು ಹೊಗೆಯಿಲ್ಲದೆ ಪ್ರಜ್ವಲಿಸುವ ಪ್ರಳಯಕಾಲಾಗ್ನಿಯಂತೆ ಗೋಚರಿಸಿದರು. ಅವರು ಹಿಡಿದಿದ್ದ ಬ್ರಹ್ಮದಂಡವು ಯಮದಂಡದಂತೆ ಕಂಗೊಳಿಸಿತು" (೨೭-೨೮).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಐವತ್ತೈದನೆಯ ಸರ್ಗ



## ಷಟ್ಪಂಚಾಶಃ ಸರ್ಗಃ

### ಬ್ರಹ್ಮತೇಜೋಬಲಮ್

ಏವಮುಕ್ತೋ ವಸಿಷ್ಠೇನ ವಿಶ್ವಾಮಿತ್ರೋ ಮಹಾಬಲಃ ।
ಆಗ್ನೇಯಮಸ್ತ್ರಮುತ್ಕ್ಷಿಪ್ಯ ತಿಷ್ಠ ತಿಷ್ಠೇತಿ ಚಾಬ್ರವೀತ್ ॥ ೧
ಬ್ರಹ್ಮದಂಡಂ ಸಮುತ್ಕ್ಷಿಪ್ಯ ಕಾಲದಂಡಮಿವಾಪರಮ್ ।
ವಸಿಷ್ಠೋ ಭಗವಾನ್ ಕ್ರೋಧಾದಿದಂ ವಚನಮಬ್ರವೀತ್ ॥ ೨
ಕ್ಷತ್ರಬಂಧೋ ಸ್ಥಿತೋಽಸ್ಮ್ಯೇಷ ಯದ್ಬಲಂ ತದ್ವಿದರ್ಶಯ ।
ನಾಶಯಾಮ್ಯೇಷ ತೇ ದರ್ಪಂ ಶಸ್ತ್ರಸ್ಯ ತವ ಗಾಧಿಜ ॥ ೩
ಕ್ವ ಚ ತೇ ಕ್ಷತ್ರಿಯಬಲಂ ಕ್ವ ಚ ಬ್ರಹ್ಮಬಲಂ ಮಹತ್ ।
ಪಶ್ಯ ಬ್ರಹ್ಮಬಲಂ ದಿವ್ಯಂ ಮಮ ಕ್ಷತ್ರಿಯಪಾಂಸನ ॥ ೪
ತಸ್ಯಾಸ್ತ್ರಂ ಗಾಧಿಪುತ್ರಸ್ಯ ಘೋರಮಾಗ್ನೇಯಮುದ್ಯತಮ್ ।
ಬ್ರಹ್ಮದಂಡೇನ ತಚ್ಛಾಂತಮಗ್ನೇರ್ವೇಗ ಇವಾಂಭಸಾ ॥ ೫

### ಸರ್ಗ ೫೬

ವಸಿಷ್ಠರ ಬ್ರಹ್ಮದಂಡವು ವಿಶ್ವಾಮಿತ್ರರ ಅಸ್ತ್ರಗಳನ್ನು ನುಂಗುವುದು.
ವಿಶ್ವಾಮಿತ್ರರು ಬ್ರಹ್ಮಬಲವೇ ಹೆಚ್ಚೆಂದು ನಿರ್ಧರಿಸಿ
ತಪಶ್ಚರಣೆಮಾಡಲು ನಿಶ್ಚಯಿಸುವುದು.

"ರಾಮ, ಆಗ ವಿಶ್ವಾಮಿತ್ರರು ಆಗ್ನೇಯಾಸ್ತ್ರವನ್ನು ಹೂಡಿ 'ನಿಲ್ಲು ನಿಲ್ಲು' ಎಂದು ಗರ್ಜಿಸಿದರು ವಸಿಷ್ಠಮುನಿಗಳು ಕಾಲದಂಡದಂತಿದ್ದ ಬ್ರಹ್ಮದಂಡವನ್ನು ಹಿಡಿದು "ಕ್ಷತ್ರಿಯಾಧಮ, ನಿಂತೇ ಇದ್ದೇನೆ ನೋಡು! ನಿನ್ನ ಬಲವೇನೆಂಬುದನ್ನು ತೋರಿಸು. ನಿನ್ನ ಶಸ್ತ್ರದರ್ಪವನ್ನು ಧ್ವಂಸ ಮಾಡಿಬಿಡುತ್ತೇನೆ (೧-೩). ನಿನ್ನ ಕ್ಷತ್ರಿಯಬಲವೆಲ್ಲಿ? ಮಹತ್ತರವಾದ ಬ್ರಹ್ಮಬಲವೆಲ್ಲಿ? ದಿವ್ಯವಾದ ನನ್ನ ಬ್ರಹ್ಮಬಲವನ್ನು ಪರೀಕ್ಷಿಸಿ ನೋಡು, ನೀಚ ಕ್ಷತ್ರಿಯ" ಎಂದರು. ವಿಶ್ವಾಮಿತ್ರರು ಘೋರವಾದ ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದರು. ನೀರು ಬೆಂಕಿಯನ್ನಾರಿಸುವಂತೆ ಬ್ರಹ್ಮದಂಡವು

ವಾರುಣಂ ಚೈವ ರೌದ್ರಂ ಚ ಐಂದ್ರಂ ಪಾಶುಪತಂ ತಥಾ ।
ಐಷೀಕಂ ಚಾಪಿ ಚಿಕ್ಷೇಪ ಕುಪಿತೋ ಗಾಧಿನಂದನಃ ॥ ೬

ಮಾನವಂ ಮೋಹನಂ ಚೈವ ಗಾಂಧರ್ವಂ ಸ್ವಾಪನಂ ತಥಾ ।
ಜೃಂಭಣಂ ಮಾದನಂ ಚೈವ ಸಂತಾಪನವಿಲಾಪನೇ ॥ ೭

ಶೋಷಣಂ ದಾರಣಂ ಚೈವ ವಜ್ರಮಸ್ತ್ರಂ ಸುದುರ್ಜಯಮ್ ।
ಬ್ರಹ್ಮಪಾಶಂ ಕಾಲಪಾಶಂ ವಾರುಣಂ ಪಾಶಮೇವ ಚ ॥ ೮

ಪೈನಾಕಾಸ್ತ್ರಂ ಚ ದಯಿತಂ ಶುಷ್ಕಾರ್ದ್ರೇ ಅಶನೀ ಉಭೇ ।
ದಾಂಡಾಸ್ತ್ರಮಥ ಪೈಶಾಚಂ ಕ್ರೌಂಚಮಸ್ತ್ರಂ ತಥೈವ ಚ ॥ ೯

ಧರ್ಮಚಕ್ರಂ ಕಾಲಚಕ್ರಂ ವಿಷ್ಣುಚಕ್ರಂ ತಥೈವ ಚ ।
ವಾಯವ್ಯಂ ಮಥನಂ ಚೈವ ಅಸ್ತ್ರಂ ಹಯಶಿರಸ್ತಥಾ ॥ ೧೦

ಶಕ್ತಿದ್ವಯಂ ಚ ಚಿಕ್ಷೇಪ ಕಂಕಾಲಂ ಮುಸಲಂ ತಥಾ ।
ವೈದ್ಯಾಧರಂ ಮಹಾಸ್ತ್ರಂ ಚ ಕಾಲಾಸ್ತ್ರಮಥ ದಾರುಣಮ್ ॥ ೧೧

ತ್ರಿಶೂಲಮಸ್ತ್ರಂ ಘೋರಂ ಚ ಕಾಪಾಲಮಥ ಕಂಕಣಮ್ ।
ಏತಾನ್ಯಸ್ತ್ರಾಣಿ ಚಿಕ್ಷೇಪ ಸರ್ವಾಣಿ ರಘುನಂದನ ॥ ೧೨

ವಸಿಷ್ಠೇ ಜಪತಾಂ ಶ್ರೇಷ್ಠೇ ತದದ್ಭುತಮಿವಾಭವತ್ ।
ತಾನಿ ಸರ್ವಾಣಿ ದಂಡೇನ ಗ್ರಸತೇ ಬ್ರಹ್ಮಣಃ ಸುತಃ ॥ ೧೩

ತೇಷು ಶಾಂತೇಷು ಬ್ರಹ್ಮಾಸ್ತ್ರಂ ಕ್ಷಿಪ್ತವಾನ್ ಗಾಧಿನಂದನಃ ।
ತದಸ್ತ್ರಮುದ್ಯತಂ ದೃಷ್ಟ್ವಾ ದೇವಾಃ ಸಾಗ್ನಿಪುರೋಗಮಾಃ ॥ ೧೪

---

ಆಗ್ನೇಯಾಸ್ತ್ರವನ್ನು ಆರಿಸಿ ತಣ್ಣಗೆ ಮಾಡಿತು (೪-೫) ರಘುನಂದನ, ವಿಶ್ವಾಮಿತ್ರರು ಕುಪಿತರಾಗಿ ಒಂದಾದಮೇಲೆ ಒಂದರಂತೆ ವಾರುಣ, ರೌದ್ರ, ಐಂದ್ರ, ಪಾಶುಪತ, ಐಷೀಕ, ಮಾನವ, ಮೋಹನ, ಗಾಂಧರ್ವ, ಸ್ವಾಪನ, ಜೃಂಭಣ ಮುಂತಾದ ನಾನಾ ಘೋರ ಮಂತ್ರಾಸ್ತ್ರಗಳನ್ನು ವಸಿಷ್ಠರಮೇಲೆ ಪ್ರಯೋಗಿಸಿದರು. ಏನಾಶ್ಚರ್ಯ! ವಸಿಷ್ಠರು ಅವೆಲ್ಲವನ್ನೂ ಬ್ರಹ್ಮದಂಡದಿಂದ ನುಂಗಿದರು! (೬-೧೩). ಕಡೆಯಲ್ಲಿ ವಿಶ್ವಾಮಿತ್ರರು ಬ್ರಹ್ಮಾಸ್ತ್ರವನ್ನು ತೆಗೆದು ಹೂಡಿದರು. ಅದನ್ನು ಕಂಡು ಅಗ್ನಿಪ್ರಮುಖರಾದ ದೇವತೆಗಳೂ

*

ದೇವರ್ಷಯಶ್ಚ ಸಂಭ್ರಾಂತಾ ಗಂಧರ್ವಾಃ ಸಮಹೋರಗಾಃ ।
ತ್ರೈಲೋಕ್ಯಮಾಸೀತ್ ಸಂತ್ರಸ್ತಂ ಬ್ರಹ್ಮಾಸ್ತ್ರೇ ಸಮುದೀರಿತೇ ॥ ೧೫

ತದಪ್ಯಸ್ತ್ರಂ ಮಹಾಘೋರಂ ಬ್ರಾಹ್ಮಂ ಬ್ರಾಹ್ಮೇಣ ತೇಜಸಾ ।
ವಸಿಷ್ಠೋ ಗ್ರಸತೇ ಸರ್ವಂ ಬ್ರಹ್ಮದಂಡೇನ ರಾಘವ ॥ ೧೬

ಬ್ರಹ್ಮಾಸ್ತ್ರಂ ಗ್ರಸಮಾನಸ್ಯ ವಸಿಷ್ಠಸ್ಯ ಮಹಾತ್ಮನಃ ।
ತ್ರೈಲೋಕ್ಯಮೋಹನಂ ರೌದ್ರಂ ರೂಪಮಾಸೀತ್ ಸುದಾರುಣಮ್ ॥

ರೋಮಕೂಪೇಷು ಸರ್ವೇಷು ವಸಿಷ್ಠಸ್ಯ ಮಹಾತ್ಮನಃ ।
ಮರೀಚ್ಯ ಇವ ನಿಷ್ಪೇತುರಗ್ನೇರ್ಧೂಮಾಕುಲಾರ್ಚಿಷಃ ॥ ೧೮

ಪ್ರಾಜ್ವಲತ್ ಬ್ರಹ್ಮದಂಡಶ್ಚ ವಸಿಷ್ಠಸ್ಯ ಕರೋದ್ಯತಃ ।
ವಿಧೂಮ ಇವ ಕಾಲಾಗ್ನಿರ್ಯಮದಂಡ ಇವಾಪರಃ ॥ ೧೯

ತತೋಽಸ್ತುವನ್ ಮುನಿಗಣಾ ವಸಿಷ್ಠಂ ಜಪತಾಂ ವರಮ್ ।
ಅಮೋಘಂ ತೇ ಬಲಂ ಬ್ರಹ್ಮಂಸ್ತೇಜೋ ಧಾರಯ ತೇಜಸಾ ॥ ೨೦

---

ದೇವರ್ಷಿಗಳೂ ಗಂಧರ್ವೋರಗರೂ ಕಂಗಾಲಾದರು. ಬ್ರಹ್ಮಾಸ್ತ್ರವು ವಿಜೃಂಭಿಸುವುದನ್ನು ನೋಡಿ ಮೂರು ಲೋಕವೂ ನಡುಗಿಹೋಯಿತು. ರಾಘವ, ಮಹಾಭಯಂಕರವಾದ ಬ್ರಹ್ಮಾಸ್ತ್ರವನ್ನೂ ಕೂಡ ವಸಿಷ್ಠರು ಬ್ರಹ್ಮದಂಡದ ಮೂಲಕ ತಮ್ಮ ಬ್ರಹ್ಮತೇಜೋಬಲದಿಂದ ನುಂಗಿಬಿಟ್ಟರು! (೧೪-೧೬). ಆ ಮಹಾತ್ಮರು ಬ್ರಹ್ಮಾಸ್ತ್ರವನ್ನು ನುಂಗುತ್ತಿರುವಾಗ ಅವರ ರೂಪವು ರುದ್ರಭಯಂಕರವಾಯಿತು ಅದನ್ನು ನೋಡಿ ಮೂರುಲೋಕವೂ ತಲ್ಲಣಿಸಿಹೋಯಿತು. ಧೂಮಸಂಮಿಶ್ರವಾದ ಅಗ್ನಿಜ್ವಾಲೆಯ ಮಧ್ಯದಿಂದ ಹೊರಡುವ ಬೆಂಕಿಯ ಕಿಡಿಗಳಂತೆ ವಸಿಷ್ಠರ ರೋಮಕೂಪಗಳಿಂದ ಕಿಡಿಗಳು ಸಿಡಿದವು (೧೭-೧೮) ಅವರ ಕರದಲ್ಲಿದ್ದ ಬ್ರಹ್ಮದಂಡವು ಹೊಗೆಯಿಲ್ಲದ ಪ್ರಳಯಕಾಲಾಗ್ನಿಯೋ ಇನ್ನೊಂದು ಯಮದಂಡವೋ ಎಂಬಂತೆ ಜ್ವಲಿಸಿತು. ಅನಂತರ ಅಲ್ಲಿದ್ದ ಮುನಿಗಳು ವಸಿಷ್ಠಮಹರ್ಷಿಗಳನ್ನು ಸ್ತುತಿಸುತ್ತ "ಬ್ರಹ್ಮರ್ಷಿಗಳೇ, ನಿಮ್ಮ ಬಲವು ಊಹಾತೀತವಾದದ್ದು. ಈ ಬ್ರಹ್ಮಾಸ್ತ್ರದ ತೇಜಸ್ಸನ್ನು ನಿಮ್ಮ ಬ್ರಹ್ಮತೇಜಸ್ಸಿನಲ್ಲಿ ಅಡಗಿಸಿ ಮುಕ್ತಾಯಮಾಡಿರಿ. ವಿಶ್ವಾಮಿತ್ರನು

ನಿಗೃಹೀತಸ್ತ್ವಯಾ ಬ್ರಹ್ಮನ್ ವಿಶ್ವಾಮಿತ್ರೋ ಮಹಾಬಲಃ ।
ಪ್ರಸೀದ ಜಪತಾಂ ಶ್ರೇಷ್ಠ ಲೋಕಾಃ ಸಂತು ಗತವ್ಯಥಾಃ ॥ ೨೧

ಏವಮುಕ್ತೋ ಮಹಾತೇಜಾಃ ಶಮಂ ಚಕ್ರೇ ಮಹಾತಪಾಃ ।
ವಿಶ್ವಾಮಿತ್ರೋಽಪಿ ನಿಕೃತೋ ವಿನಿಃಶ್ವಸ್ಯೇದಮಬ್ರವೀತ್ ॥ ೨೨

ಧಿಗ್ಬಲಂ ಕ್ಷತ್ರಿಯಬಲಂ ಬ್ರಹ್ಮತೇಜೋಬಲಂ ಬಲಮ್ ।
ಏಕೇನ ಬ್ರಹ್ಮದಂಡೇನ ಸರ್ವಾಸ್ತ್ರಾಣಿ ಹತಾನಿ ಮೇ ॥ ೨೩

ತದೇತತ್ ಸಮವೇಕ್ಷ್ಯಾಹಂ ಪ್ರಸನ್ನೇಂದ್ರಿಯಮಾನಸಃ ।
ತಪೋ ಮಹತ್ ಸಮಾಸ್ಥಾಸ್ಯೇ ಯದ್ವೈ ಬ್ರಹ್ಮತ್ವಕಾರಕಮ್ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಷಟ್‌ಪಂಚಾಶಃ ಸರ್ಗಃ



ಸೋತನು. ಮಹರ್ಷಿಗಳೆ, ಪ್ರಸನ್ನರಾಗಿರಿ. ಲೋಕಕ್ಕೆ ಒದಗಿದ ಭಯವು ದೂರವಾಗಲಿ" ಎಂದರು (೧೯-೨೧) ಆ ಮುನಿಗಳ ಪ್ರಾರ್ಥನೆಯಂತೆ ಮಹಾತಪಸ್ವಿಗಳಾದ ವಸಿಷ್ಠರು ಶಾಂತರಾದರು. ವಿಶ್ವಾಮಿತ್ರರು ಪರಾಜಿತರಾದರು ಅವರು ನಿಟ್ಟುಸಿರುಬಿಡುತ್ತ "ಈ ಕ್ಷತ್ರಿಯ ಬಲಕ್ಕೆ ಧಿಕ್ಕಾರ! ಬ್ರಹ್ಮತೇಜೋಬಲವೇ ಬಲ! ಒಂದೇ ಬ್ರಹ್ಮದಂಡವು ನನ್ನ ಸಮಸ್ತ ದಿವ್ಯಾಸ್ತ್ರಗಳನ್ನೂ ನುಂಗಿ ನೊಣೆಯಿತು! ಆದ್ದರಿಂದ ನಾನು ಇಂದ್ರಿಯ ಮನಸ್ಸುಗಳನ್ನು ಸಮಾಧಾನಕ್ಕೆ ತಂದು ಮಹತ್ತರವಾದ ತಪಸ್ಸನ್ನಾಚರಿಸುತ್ತೇನೆ. ಅದರಿಂದ ಬ್ರಾಹ್ಮಣ್ಯವನ್ನು ಸಂಪಾದಿಸುತ್ತೇನೆ" ಎಂದುಕೊಂಡರು (೨೨-೨೪).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಐವತ್ತಾರನೆಯಸರ್ಗ



## ಸಪ್ತಪಂಚಾಶಃ ಸರ್ಗಃ

### ತ್ರಿಶಂಕುಯಾಜನಪ್ರಾರ್ಥನಾ

**ತತಃ ಸಂತಪ್ತಹೃದಯಃ ಸ್ಮರನ್ನಿಗ್ರಹಮಾತ್ಮನಃ ।**
**ವಿನಿಃಶ್ವಸ್ಯ ವಿನಿಃಶ್ವಸ್ಯ ಕೃತವೈರೋ ಮಹಾತ್ಮನಾ ॥ ೧**

**ಸ ದಕ್ಷಿಣಾಂ ದಿಶಂ ಗತ್ವಾ ಮಹಿಷ್ಯಾ ಸಹ ರಾಘವ ।**
**ತತಾಪ ಪರಮಂ ಘೋರಂ ವಿಶ್ವಾಮಿತ್ರೋ ಮಹಾತಪಾಃ ॥ ೨**

**ಫಲಮೂಲಾಶನೋ ದಾಂತಶ್ಚಚಾರ ಸುಮಹತ್ತಪಃ ।**
**ಅಥಾಸ್ಯ ಜಜ್ಞಿರೇ ಪುತ್ರಾಃ ಸತ್ಯಧರ್ಮಪರಾಯಣಾಃ ॥ ೩**

**ಹವಿಃಷ್ಯಂದೋ ಮಧುಷ್ಯಂದೋ ದೃಢನೇತ್ರೋ ಮಹಾರಥಃ ।**
**ಪೂರ್ಣೇ ವರ್ಷಸಹಸ್ರೇ ತು ಬ್ರಹ್ಮಾ ಲೋಕಪಿತಾಮಹಃ ॥ ೪**

### ಸರ್ಗ ೫೭

ಬ್ರಹ್ಮನು ವಿಶ್ವಾಮಿತ್ರರಿಗೆ ರಾಜರ್ಷಿಯಾಗೆಂದು ಅನುಗ್ರಹಿಸುವುದು. ಅವರು ಅಸಂತೃಪ್ತರಾಗಿ ಮತ್ತೆ ತಪೋಮಗ್ನರಾಗುವುದು. ತ್ರಿಶಂಕುವು ವಸಿಷ್ಠಪುತ್ರರ ಬಳಿಗೆ ಹೋಗಿ ಯಜ್ಞವನ್ನು ಮಾಡಿಸ ಬೇಕೆಂದು ಪ್ರಾರ್ಥಿಸುವುದು

ಶತಾನಂದರು ಹೇಳಿದರು: "ರಾಘವ, ವಿಶ್ವಾಮಿತ್ರರ ಮನಸ್ಸಿಗೆ ಬಹಳ ವ್ಯಥೆಯಾಯಿತು ತಮಗಾದ ಸೋಲನ್ನು ನೆನೆಸಿಕೊಂಡು ಮತ್ತೆಮತ್ತೆ ನಿಟ್ಟುಸಿರು ಬಿಡುತ್ತಿದ್ದರು. ವಸಿಷ್ಠರೊಡನೆ ಹಗೆತನವನ್ನು ಸಾಧಿಸುವುದಕ್ಕಾಗಿ ಅವರು ತಮ್ಮ ರಾಣಿಯೊಡನೆ ದಕ್ಷಿಣ ದಿಕ್ಕಿಗೆ ಹೋಗಿ ಘೋರವಾದ ತಪಸ್ಸನ್ನಾರಂಭಿಸಿದರು (೧-೨). ಮನಸ್ಸನ್ನು ನಿಗ್ರಹಿಸಿ ಫಲಮೂಲ ಗಳನ್ನು ಮಾತ್ರ ತಿನ್ನುತ್ತ ತಪಸ್ಸು ಮಾಡುತ್ತಿದ್ದರು. ಹೀಗಿರಲು ಅವರಿಗೆ ಸತ್ಯಸಂಧರಾದ ಹವಿಃಷ್ಯಂದ, ಮಧುಷ್ಯಂದ, ದೃಢನೇತ್ರರೆಂಬ ಮೂವರು ಪುತ್ರರು ಜನಿಸಿದರು. ಒಂದು ಸಾವಿರವರ್ಷ ಪೂರ್ಣವಾಗಲು ಬ್ರಹ್ಮನು

ಅಬ್ರವೀನ್ಮಧುರಂ ವಾಕ್ಯಂ ವಿಶ್ವಾಮಿತ್ರಂ ತಪೋಧನಮ್ ।
ಜಿತಾ ರಾಜರ್ಷಿಲೋಕಾಸ್ತೇ ತಪಸಾ ಕುಶಿಕಾತ್ಮಜ ॥ ೫

ಅನೇನ ತಪಸಾ ತ್ವಾಂ ತು ರಾಜರ್ಷಿರಿತಿ ವಿದ್ಮಹೇ ।
ಏವಮುಕ್ತ್ವಾ ಮಹಾತೇಜಾ ಜಗಾಮ ಸಹ ದೈವತೈಃ ॥ ೬

ತ್ರಿವಿಷ್ಟಪಂ ಬ್ರಹ್ಮಲೋಕಂ ಲೋಕಾನಾಂ ಪರಮೇಶ್ವರಃ ।
ವಿಶ್ವಾಮಿತ್ರೋಽಪಿ ತಚ್ಛ್ರುತ್ವಾ ಹ್ರಿಯಾ ಕಿಂಚಿದವಾಙ್ಮುಖಃ ॥ ೭

ದುಃಖೇನ ಮಹತಾವಿಷ್ಟಃ ಸಮನ್ಯುರಿದಮಬ್ರವೀತ್ ।
ತಪಶ್ಚ ಸುಮಹತ್ತಪ್ತಂ ರಾಜರ್ಷಿರಿತಿ ಮಾಂ ವಿದುಃ ॥ ೮

ದೇವಾಃ ಸರ್ಷಿಗಣಾಃ ಸರ್ವೇ ನಾಸ್ತಿ ಮನ್ಯೇ ತಪಃಫಲಮ್ ।
ಇತಿ ನಿಶ್ಚಿತ್ಯ ಮನಸಾ ಭೂಯ ಏವ ಮಹಾತಪಾಃ ॥ ೯

ತಪಶ್ಚಚಾರ ಕಾಕುತ್ಸ್ಥ ಪರಮಂ ಪರಮಾತ್ಮವಾನ್ ।
ಏತಸ್ಮಿನ್ನೇವ ಕಾಲೇ ತು ಸತ್ಯವಾದೀ ಜಿತೇಂದ್ರಿಯಃ ॥ ೧೦

ತ್ರಿಶಂಕುರಿತಿ ವಿಖ್ಯಾತ ಇಕ್ಷ್ವಾಕುಕುಲವರ್ಧನಃ ।
ತಸ್ಯ ಬುದ್ಧಿಃ ಸಮುತ್ಪನ್ನಾ ಯಜೇಯಮಿತಿ ರಾಘವ ॥ ೧೧

---

ದೇವತೆಗಳೊಡನೆ ಪ್ರತ್ಯಕ್ಷನಾಗಿ "ವಿಶ್ವಾಮಿತ್ರ, ನೀನು ತಪಸ್ಸನ್ನಾಚರಿಸಿ ರಾಜರ್ಷಿಗಳನ್ನೆಲ್ಲ ಮೀರಿಸಿದ್ದೀಯೆ. ನೀನು ರಾಜಋಷಿಯೆಂದು ಪರಿಗಣಿಸುತ್ತೇವೆ" ಎಂದು ಹೇಳಿ ಅಂತರ್ಹಿತನಾದನು (೩-೬). ಅದನ್ನು ಕೇಳಿ ವಿಶ್ವಾಮಿತ್ರರಿಗೆ ನಾಚಿಕೆಯಿಂದ ತಲೆತಗ್ಗಿಸುವಂತಾಯಿತು ಅವರು ಬಹಳ ಖಿನ್ನರಾಗಿ ಸಿಟ್ಟಿನಿಂದ "ಎಲಾ! ಇಷ್ಟು ಘೋರವಾದ ತಪಸ್ಸನ್ನಾಚರಿಸಿದ್ದೇನೆ. ಇವರೆಲ್ಲರೂ ನನ್ನನ್ನು ಕೇವಲ ರಾಜರ್ಷಿ ಎಂದು ಭಾವಿಸುತ್ತಾರೆ! ನನ್ನ ತಪಸ್ಸಿಗೆ ಇದು ಫಲವಲ್ಲ" ಎಂದು ನಿಶ್ಚಯಿಸಿ ಪುನಃ ಇನ್ನೂ ಮಹತ್ತರವಾದ ತಪಸ್ಸಿನಲ್ಲಿ ಮಗ್ನರಾದರು (೭-೯). ರಾಮ, ಇದೇ ವೇಳೆಗೆ ಇಕ್ಷ್ವಾಕು ವಂಶದಲ್ಲಿ ತ್ರಿಶಂಕುವೆಂಬ ಸತ್ಯವಾದಿಯಾದ ಒಬ್ಬ ರಾಜನಿದ್ದನು. ಅವನಿಗೆ ಯಾಗಮಾಡಬೇಕೆಂದು ಅಪೇಕ್ಷೆ ಹುಟ್ಟಿತು. ತಾನು ಸಶರೀರನಾಗಿ ದೇವತೆಗಳ ವಾಸಸ್ಥಾನವಾದ ಸ್ವರ್ಗಕ್ಕೆ ಹೋಗಬೇಕೆಂದು ಅವನ ಅಭಿಲಾಷೆ. ಅವನು

ಗಚ್ಛೇಯಂ ಸ್ವಶರೀರೇಣ ದೇವಾನಾಂ ಪರಮಾಂ ಗತಿಮ್ ।
ಸ ವಸಿಷ್ಠಂ ಸಮಾಹೂಯ ಕಥಯಾಮಾಸ ಚಿಂತಿತಮ್ ॥ ೧೨

ಅಶಕ್ಯಮಿತಿ ಚಾಪ್ಯುಕ್ತೋ ವಸಿಷ್ಠೇನ ಮಹಾತ್ಮನಾ ।
ಪ್ರತ್ಯಾಖ್ಯಾತೋ ವಸಿಷ್ಠೇನ ಸ ಯಯೌ ದಕ್ಷಿಣಾಂ ದಿಶಮ್ ॥ ೧೩

ತತಸ್ತತ್ಕರ್ಮಸಿದ್ಧ್ಯರ್ಥಂ ಪುತ್ರಾಂಸ್ತಸ್ಯ ಗತೋ ನೃಪಃ ।
ವಾಸಿಷ್ಠಾ ದೀರ್ಘತಪಸಸ್ತಪೋ ಯತ್ರ ಹಿ ತೇಪಿರೇ ॥ ೧೪

ತ್ರಿಶಂಕುಃ ಸುಮಹಾತೇಜಾಃ ಶತಂ ಪರಮಭಾಸ್ವರಮ್ ।
ವಸಿಷ್ಠಪುತ್ರಾನ್ ದದೃಶೇ ತಪ್ಯಮಾನಾನ್ ಯಶಸ್ವಿನಃ ॥ ೧೫

ಸೋಽಭಿಗಮ್ಯ ಮಹಾತ್ಮಾನಃ ಸರ್ವಾನೇವ ಗುರೋಃ ಸುತಾನ್ ।
ಅಭಿವಾದ್ಯಾನುಪೂರ್ವ್ಯೇಣ ಹ್ರಿಯಾ ಕಿಂಚಿದವಾಙ್ಮುಖಃ ॥ ೧೬

ಅಬ್ರವೀತ್ ಸುಮಹಾಭಾಗಾನ್ ಸರ್ವಾನೇವ ಕೃತಾಂಜಲಿಃ ।
ಶರಣಂ ವಃ ಪ್ರಪದ್ಯೇಽಹಂ ಶರಣ್ಯಾನ್ ಶರಣಾಗತಃ ॥ ೧೭

ಪ್ರತ್ಯಾಖ್ಯಾತೋಽಸ್ಮಿ ಭದ್ರಂ ವೋ ವಸಿಷ್ಠೇನ ಮಹಾತ್ಮನಾ ।
ಯಷ್ಟುಕಾಮೋ ಮಹಾಯಜ್ಞಂ ತದನುಜ್ಞಾತುಮರ್ಹಥ ॥ ೧೮

---

ಪುರೋಹಿತರಾದ ವಸಿಷ್ಠರನ್ನು ಕರೆಯಿಸಿ ತನ್ನ ಅಭಿಲಾಷೆಯನ್ನು ತಿಳಿಸಿದನು (೧೦-೧೨) ವಸಿಷ್ಠರು 'ಇದು ನಿನ್ನಿಂದ ಸಾಧ್ಯವಲ್ಲ' ಎಂದು ಹೇಳಿ ತಿರಸ್ಕರಿಸಿದರು. ಆಗ ತ್ರಿಶಂಕುವು ತನ್ನ ಕಾರ್ಯಸಾಧನೆಗಾಗಿ ದಕ್ಷಿಣ ದೇಶಕ್ಕೆ ಹೋದನು. ಅಲ್ಲಿ ವಸಿಷ್ಠರ ನೂರುಮಂದಿ ಪುತ್ರರು ದೀರ್ಘಕಾಲದಿಂದ ತಪಸ್ಸನ್ನು ಆಚರಿಸುತ್ತಿದ್ದರು (೧೩-೧೫) ತ್ರಿಶಂಕುಮಹಾರಾಜನು ಮಹಾತ್ಮರಾದ ಆ ಗುರುಪುತ್ರರಿಗೆ ಕ್ರಮವಾಗಿ ಅಭಿವಾದನೆಮಾಡಿದನು. ಅವನು ಸಂಕೋಚದಿಂದ ಸ್ವಲ್ಪ ತಲೆತಗ್ಗಿಸಿ ಕೈಮುಗಿದುಕೊಂಡ "ಮಹಾತ್ಮರೆ, ನಿಮಗೆ ನಾನು ಶರಣಾಗತನಾಗಿದ್ದೇನೆ. ನೀವು ಶರಣಾಗತ ರಕ್ಷಕರು (೧೬-೧೭). ನಿಮಗೆ ಶುಭವಾಗಲಿ. ನಾನು ಒಂದು ಯಾಗವನ್ನು ಮಾಡಬೇಕೆಂದು ಸಂಕಲ್ಪಿಸಿದ್ದೇನೆ. ಅದನ್ನು ಮಾಡಿಸಲು ವಸಿಷ್ಠರು

ಗುರುಪುತ್ರಾನಹಂ ಸರ್ವಾನ್ನಮಸ್ಕೃತ್ಯ ಪ್ರಸಾದಯೇ ।
ಶಿರಸಾ ಪ್ರಣತೋ ಯಾಚೇ ಬ್ರಾಹ್ಮಣಾಂಸ್ತಪಸಿ ಸ್ಥಿತಾನ್ ॥ ೧೯

ತೇ ಮಾಂ ಭವಂತಃ ಸಿದ್ಧ್ಯರ್ಥಂ ಯಾಜಯಂತು ಸಮಾಹಿತಾಃ ।
ಸಶರೀರೋ ಯಥಾಹಂ ಹಿ ದೇವಲೋಕಮವಾಪ್ನುಯಾಮ್ ॥

ಪ್ರತ್ಯಾಖ್ಯಾತೋ ವಸಿಷ್ಠೇನ ಗತಿಮನ್ಯಾಂ ತಪೋಧನಾಃ ।
ಗುರುಪುತ್ರಾನೃತೇ ಸರ್ವಾನ್ನಾಹಂ ಪಶ್ಯಾಮಿ ಕಾಂಚನ ॥ ೨೦

ಇಕ್ಷ್ವಾಕೂಣಾಂ ಹಿ ಸರ್ವೇಷಾಂ ಪುರೋಧಾಃ ಪರಮಾ ಗತಿಃ ।
ಪುರೋಧಸಸ್ತು ವಿದ್ವಾಂಸಸ್ತಾರಯಂತಿ ಸದಾ ನೃಪಾನ್ ॥ ೨೨
ತಸ್ಮಾದನಂತರಂ ಸರ್ವೇ ಭವಂತೋ ದೈವತಂ ಮಮ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಸಪ್ತಪಂಚಾಶಃ ಸರ್ಗಃ



ನಿರಾಕರಿಸಿದರು. ಗುರುಪುತ್ರರಾದ ನಿಮ್ಮೆಲ್ಲರಿಗೂ ತಲೆಬಾಗಿ ವಂದಿಸಿ ಬೇಡಿಕೊಳ್ಳುತ್ತಿದ್ದೇನೆ ನೀವು ತಪೋನಿಷ್ಠರಾದ ಬ್ರಾಹ್ಮಣರು (೧೮-೧೯). ನೀವು ಸಮಾಹಿತರಾಗಿ ದಯವಿಟ್ಟು ನನ್ನಿಂದ ಯಾಗವನ್ನು ಮಾಡಿಸಬೇಕು. ಅದರಿಂದ ನಾನು ಸಶರೀರನಾಗಿ ದೇವಲೋಕಕ್ಕೆ ಹೋಗಬೇಕು. ವಸಿಷ್ಠರು ನಿರಾಕರಿಸಿದ್ದರಿಂದ ನಿಮ್ಮನ್ನು ಬಿಟ್ಟರೆ ನನಗೆ ಬೇರೆ ಗತಿ ಇಲ್ಲ. ನೀವೆಲ್ಲರೂ ತಪಸ್ವಿಗಳು; ಗುರುಪುತ್ರರು (೨೦-೨೧) ಇಕ್ಷ್ವಾಕುವಂಶೋತ್ಪನ್ನರಾದ ರಾಜರಿಗೆ ಪುರೋಹಿತರೇ ಪರಮಗತಿ. ವಿದ್ವಾಂಸರಾದ ಪುರೋಹಿತರೇ ರಾಜರನ್ನು ಉದ್ಧಾರಮಾಡತಕ್ಕವರು. ಆದ್ದರಿಂದ ವಸಿಷ್ಠರಾದಮೇಲೆ ನೀವೇ ನನಗೆ ದೇವತಾಸ್ವರೂಪರು" ಎಂದು ಹೇಳಿದನು" (೨೨).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಐವತ್ತೇಳನೆಯ ಸರ್ಗ



## ಅಷ್ಟಪಂಚಾಶಃ ಸರ್ಗಃ

### ತ್ರಿಶಂಕುಶಾಪಃ

ತತಸ್ತ್ರಿಶಂಕೋರ್ವಚನಂ ಶ್ರುತ್ವಾ ಕ್ರೋಧಸಮನ್ವಿತಮ್ ।
ಋಷಿಪುತ್ರಶತಂ ರಾಮ ರಾಜಾನಮಿದಮಬ್ರವೀತ್ ॥ ೧

ಪ್ರತ್ಯಾಖ್ಯಾತೋ ಹಿ ದುರ್ಬುದ್ಧೇ ಗುರುಣಾ ಸತ್ಯವಾದಿನಾ ।
ತಂ ಕಥಂ ಸಮತಿಕ್ರಮ್ಯ ಶಾಖಾಂತರಮುಪೇಯಿವಾನ್ ॥ ೨

ಇಕ್ಷ್ವಾಕೂಣಾಂ ಹಿ ಸರ್ವೇಷಾಂ ಪುರೋಧಾಃ ಪರಮಾ ಗತಿಃ ।
ನ ಚಾತಿಕ್ರಮಿತುಂ ಶಕ್ಯಂ ವಚನಂ ಸತ್ಯವಾದಿನಃ ॥ ೩

ಅಶಕ್ಯಮಿತಿ ಚೋವಾಚ ವಸಿಷ್ಠೋ ಭಗವಾನೃಷಿಃ ।
ತಂ ವಯಂ ವೈ ಸಮಾಹರ್ತುಂ ಕ್ರತುಂ ಶಕ್ತಾಃ ಕಥಂ ತವ ॥ ೪

ಬಾಲಿಶಸ್ತ್ವಂ ನರಶ್ರೇಷ್ಠ ಗಮ್ಯತಾಂ ಸ್ವಪುರಂ ಪುನಃ ।
ಯಾಜನೇ ಭಗವಾನ್ ಶಕ್ತಸ್ತ್ರೈಲೋಕ್ಯಸ್ಯಾಪಿ ಪಾರ್ಥಿವ ॥ ೫

### ಸರ್ಗ ೫೮

ವಸಿಷ್ಠಪುತ್ರರು ತ್ರಿಶಂಕುಮಹಾರಾಜನನ್ನು ಚಂಡಾಲನಾಗೆಂದು ಶಪಿಸುವುದು.
ತ್ರಿಶಂಕುವು ವಿಶ್ವಾಮಿತ್ರರ ಸಮೀಪಕ್ಕೆ ಹೋಗಿ ಯಾಗವನ್ನು
ಮಾಡಿಸುವಂತೆ ಪ್ರಾರ್ಥಿಸುವುದು.

"ಶ್ರೀರಾಮ, ತ್ರಿಶಂಕುಮಹಾರಾಜನ ಈ ಮಾತನ್ನು ಕೇಳಿ ವಸಿಷ್ಠರ ನೂರುಮಂದಿ ಪುತ್ರರಿಗೂ ಕೋಪಬಂದಿತು. ಅವರು "ಎಲೈ ಬುದ್ಧಿಹೀನ, ನಿನ್ನ ಗುರುಗಳು ಸತ್ಯವಾದಿಗಳು. ಅವರು ನಿನಗೆ ಸಾಧ್ಯವಿಲ್ಲವೆಂದು ಹೇಳಿದ ಮೇಲೆ ಅವರ ಮಾತನ್ನು ಅತಿಕ್ರಮಿಸಿ ನೀನು ಇನ್ನೊಬ್ಬರ ಬಳಿಗೆ ಹೇಗೆ ಬಂದೆ? (೧-೨). ಇಕ್ಷ್ವಾಕುವಂಶೋತ್ಪನ್ನರಿಗೆ ಪುರೋಹಿತರೇ ಪರಮಗತಿ. ಆ ಸತ್ಯವಾದಿಗಳ ಮಾತನ್ನು ಅತಿಕ್ರಮಿಸಲು ಎಂದಿಗಾದರೂ ಶಕ್ಯವೆ? ಭಗವಾನ್ ವಸಿಷ್ಠಮುನಿಗಳು 'ಸಾಧ್ಯವಿಲ್ಲ' ಎಂದು ಹೇಳಿಬಿಟ್ಟಿದ್ದಾರೆ. ಅಂತಹ ಯಾಗವನ್ನು ನಾವು ಮಾಡಿಸಲು ಸಾಧ್ಯವೆ? (೩-೪).

ಅವಮಾನಂ ಚ ತತ್ಕರ್ತುಂ ತಸ್ಯ ಶಕ್ಷ್ಯಾಮಹೇ ಕಥಮ್ ।
ತೇಷಾಂ ತದ್ವಚನಂ ಶ್ರುತ್ವಾ ಕ್ರೋಧಪರ್ಯಾಕುಲಾಕ್ಷರಮ್ ॥ ೬

ಸ ರಾಜಾ ಪುನರೇವೈತಾನಿದಂ ವಚನಮಬ್ರವೀತ್ ।
ಪ್ರತ್ಯಾಖ್ಯಾತೋಽಸ್ಮಿ ಗುರುಣಾ ಗುರುಪುತ್ರೈಸ್ತಥೈವ ಚ ॥ ೭

ಅನ್ಯಾಂ ಗತಿಂ ಗಮಿಷ್ಯಾಮಿ ಸ್ವಸ್ತಿ ವೋಽಸ್ತು ತಪೋಧನಾಃ ।
ಋಷಿಪುತ್ರಾಸ್ತು ತಚ್ಛ್ರುತ್ವಾ ವಾಕ್ಯಂ ಘೋರಾಭಿಸಂಹಿತಮ್ ॥ ೮

ಶೇಪುಃ ಪರಮಸಂಕ್ರುದ್ಧಾಶ್ಚಂಡಾಲತ್ವಂ ಗಮಿಷ್ಯಸಿ ।
ಏವಮುಕ್ತ್ವಾ ಮಹಾತ್ಮಾನೋ ವಿವಿಶುಸ್ತೇ ಸ್ವಮಾಶ್ರಮಮ್ ॥ ೯

ಅಥ ರಾತ್ರ್ಯಾಂ ವ್ಯತೀತಾಯಾಂ ರಾಜಾ ಚಂಡಾಲತಾಂ ಗತಃ ।
ನೀಲವಸ್ತ್ರಧರೋ ನೀಲಃ ಪರುಷೋ ಧ್ವಸ್ತಮೂರ್ಧಜಃ ॥ ೧೦

ಚಿತ್ಯಮಾಲ್ಯಾನುಲೇಪಶ್ಚ ಆಯಸಾಭರಣೋಽಭವತ್ ।
ತಂ ದೃಷ್ಟ್ವಾ ಮಂತ್ರಿಣಃ ಸರ್ವೇ ತ್ಯಕ್ತ್ವಾ ಚಂಡಾಲರೂಪಿಣಮ್॥

---

ರಾಜ, ನೀನು ಅವಿವೇಕಿ. ನಿನ್ನ ನಗರಕ್ಕೆ ಹಿಂದಿರುಗು. ವಸಿಷ್ಠಮಹರ್ಷಿಗಳು ಮೂರುಲೋಕಗಳಿಗೂ ಯಾಗ ಮಾಡಿಸಲು ಸಮರ್ಥರು. ಅಂಥವರನ್ನು ನಾವು ಅವಮಾನಪಡಿಸಲು ಶಕ್ಯವೆ?" ಎಂದು ಹೇಳಿದರು (೫-೬). ಆಗ ತ್ರಿಶಂಕುಮಹಾರಾಜನು ಮತ್ತೆ "ತಪೋಧನರೆ, ಗುರುಗಳು ತಿರಸ್ಕರಿಸಿದರು. ಗುರುಪುತ್ರರಾದ ನೀವೂ ತಿರಸ್ಕರಿಸಿದಿರಿ. ಇನ್ನು ಯಾರು ಗತಿಯೆಂದು ಹುಡುಕಿಕೊಂಡು ಹೋಗುತ್ತೇನೆ. ನಿಮಗೆ ಮಂಗಳವಾಗಲಿ!" ಎಂದನು. ವಸಿಷ್ಠಪುತ್ರರಿಗೆ ತ್ರಿಶಂಕುವಿನ ವಚನವು ಕಟುವಾಗಿ ತೋರಿತು (೭-೮). ಅವರು ಪರಮಕ್ರುದ್ಧರಾಗಿ "ನೀನು ಚಂಡಾಲನಾಗು!" ಎಂದು ಶಪಿಸಿ ಆಶ್ರಮದೊಳಕ್ಕೆ ಹೊರಟುಹೋದರು. ರಾತ್ರಿ ಕಳೆಯಿತು. ಬೆಳಗಾದಾಗ ರಾಜನು ಚಂಡಾಲನಾಗಿದ್ದನು. ಉಟ್ಟಿದ್ದ ವಸ್ತ್ರ ಕಪ್ಪು, ಮೈ ಬಣ್ಣ ಕಪ್ಪು, ಚರ್ಮ ಒರಟು, ತಲೆಗೂದಲು ಹರಕು ಹರಕು; ಶ್ಮಶಾನ ಯೋಗ್ಯವಾದ ಹೂವು, ಅನುಲೇಪನ; ತೊಟ್ಟಿದ್ದ ಆಭರಣಗಳೆಲ್ಲವೂ ಕಬ್ಬಿಣವಾದವು (೯-೧೦). ಹೀಗೆ ಚಂಡಾಲರೂಪಿಯಾದ ತ್ರಿಶಂಕುವನ್ನು ಕಂಡು ಜೊತೆಗೆ

ಪ್ರಾದ್ರವನ್ ಸಹಿತಾ ರಾಮ ಪೌರಾ ಯೇಽಸ್ಯಾನುಗಾಮಿನಃ ।
ಏಕೋ ಹಿ ರಾಜಾ ಕಾಕುತ್ಸ್ಥ ಜಗಾಮ ಪರಮಾತ್ಮವಾನ್ ॥ ೧೨

ದಹ್ಯಮಾನೋ ದಿವಾರಾತ್ರಂ ವಿಶ್ವಾಮಿತ್ರಂ ತಪೋಧನಮ್ ।
ವಿಶ್ವಾಮಿತ್ರಸ್ತು ತಂ ದೃಷ್ಟ್ವಾ ರಾಜಾನಂ ವಿಫಲೀಕೃತಮ್ ॥ ೧೩

ಚಂಡಾಲರೂಪಿಣಂ ರಾಮ ಮುನಿಃ ಕಾರುಣ್ಯಮಾಗತಃ ।
ಕಾರುಣ್ಯಾತ್ ಸ ಮಹಾತೇಜಾ ವಾಕ್ಯಂ ಪರಮಧಾರ್ಮಿಕಃ ॥ ೧೪

ಇದಂ ಜಗಾದ ಭದ್ರಂ ತೇ ರಾಜಾನಂ ಘೋರರೂಪಿಣಮ್ ।
ಕಿಮಾಗಮನಕಾರ್ಯಂ ತೇ ರಾಜಪುತ್ರ ಮಹಾಬಲ ॥ ೧೫

ಅಯೋಧ್ಯಾಧಿಪತೇ ವೀರ ಶಾಪಾಚ್ಚಂಡಾಲತಾಂ ಗತಃ ।
ಅಥ ತದ್ವಾಕ್ಯಮಾಕರ್ಣ್ಯ ರಾಜಾ ಚಂಡಾಲತಾಂ ಗತಃ ॥ ೧೬

ಅಬ್ರವೀತ್ ಪ್ರಾಂಜಲಿರ್ವಾಕ್ಯಂ ವಾಕ್ಯಜ್ಞೋ ವಾಕ್ಯಕೋವಿದಮ್
ಪ್ರತ್ಯಾಖ್ಯಾತೋಽಸ್ಮಿ ಗುರುಣಾ ಗುರುಪುತ್ರೈಸ್ತಥೈವ ಚ ॥ ೧೭

ಅನವಾಪ್ಯೈವ ತಂ ಕಾಮಂ ಮಯಾ ಪ್ರಾಪ್ತೋ ವಿಪರ್ಯಯಃ ।
ಸಶರೀರೋ ದಿವಂ ಯಾಯಾಮಿತಿ ಮೇ ಸೌಮ್ಯದರ್ಶನ ॥ ೧೮

---

ಬಂದಿದ್ದ ಮಂತ್ರಿಗಳೂ ಪೌರರೂ ಹೆದರಿ ಓಡಿಹೋದರು ರಾಜನು ಒಂಟಿಯಾದರೂ ಧೈರ್ಯವನ್ನು ತಳೆದು ಅಹೋರಾತ್ರವೂ ಒಳಗೊಳಗೆ ಬೇಯುತ್ತ, ತಪೋನಿಷ್ಠರಾದ ವಿಶ್ವಾಮಿತ್ರರ ಸಮೀಪಕ್ಕೆ ಬಂದನು (೧೧-೧೩). ಪರಮ ಧಾರ್ಮಿಕರಾದ ವಿಶ್ವಾಮಿತ್ರಮುನಿಗಳಿಗೆ ಚಂಡಾಲರೂಪಿಯಾದ ತ್ರಿಶಂಕುವನ್ನು ಕಂಡು ಮನಸ್ಸು ಕರಗಿತು. ಅವರು ಮರುಕದಿಂದ “ರಾಜ, ನಿನಗೆ ಶುಭವಾಗಲಿ. ನೀನು ಬಂದ ಉದ್ದೇಶವೇನು? ಅಯೋಧ್ಯಾಪತಿಯೂ ಕ್ಷತ್ರಿಯ ವೀರನೂ ಆದ ನೀನು ಶಾಪದಿಂದ ಚಂಡಾಲನಾಗಿಬಿಟ್ಟೆಯಾ?” ಎಂದು ಕೇಳಿದರು (೧೪-೧೬). ತ್ರಿಶಂಕುವು ಪ್ರಾಂಜಲಿಯಾಗಿ “ಸೌಮ್ಯರೆ, ಸಶರೀರನಾಗಿ ಸ್ವರ್ಗವನ್ನು ಪಡೆಯಬೇಕೆಂಬುದು ನನ್ನ ಇಷ್ಟ. ಅದಕ್ಕಾಗಿ ಕುಲಗುರುಗಳಾದ ವಸಿಷ್ಠರ ಬಳಿಗೆ ಹೋದೆನು. ಅವರು ನಿರಾಕರಿಸಿದರು. ಅವರ ಪುತ್ರರೂ ನಿರಾಕರಿಸಿದರು. ಇಷ್ಟವು ಹೋಗಿ ಅನಿಷ್ಟವೇ ದೊರಕಿತು

ಮಯಾ ಚೇಷ್ಟಂ ಕ್ರತುಶತಂ ತಚ್ಚ ನಾವಾಪ್ಯತೇ ಫಲಮ್ ।
ಅನೃತಂ ನೋಕ್ತಪೂರ್ವಂ ಮೇ ನ ಚ ವಕ್ಷ್ಯೇ ಕದಾಚನ ॥ ೧೯

ಕೃಚ್ಛ್ರೇಷ್ವಪಿ ಗತಃ ಸೌಮ್ಯ ಕ್ಷತ್ರಧರ್ಮೇಣ ತೇ ಶಪೇ ।
ಯಜ್ಞೈರ್ಬಹುವಿಧೈರಿಷ್ಟಂ ಪ್ರಜಾ ಧರ್ಮೇಣ ಪಾಲಿತಾಃ ॥ ೨೦

ಗುರುವಶ್ಚ ಮಹಾತ್ಮಾನಃ ಶೀಲವೃತ್ತೇನ ತೋಷಿತಾಃ ।
ಧರ್ಮೇ ಪ್ರಯತಮಾನಸ್ಯ ಯಜ್ಞಂ ಚಾಹರ್ತುಮಿಚ್ಛತಃ ॥ ೨೧

ಪರಿತೋಷಂ ನ ಗಚ್ಛಂತಿ ಗುರವೋ ಮುನಿಪುಂಗವ ।
ದೈವಮೇವ ಪರಂ ಮನ್ಯೇ ಪೌರುಷಂ ತು ನಿರರ್ಥಕಮ್ ॥ ೨೨

ದೈವೇನಾಕ್ರಮ್ಯತೇ ಸರ್ವಂ ದೈವಂ ಹಿ ಪರಮಾ ಗತಿಃ ।
ತಸ್ಯ ಮೇ ಪರಮಾರ್ತಸ್ಯ ಪ್ರಸಾದಮಭಿಕಾಂಕ್ಷತಃ ॥ ೨೩

---

(೧೭-೧೮) ಇದುವರೆಗೆ ನೂರು ಯಾಗಗಳನ್ನು ಮಾಡಿದ್ದೇನೆ. ನನಗೆ ಬೇಕಾದ ಫಲವು ದೊರೆಯಲಿಲ್ಲ. ನಿಮ್ಮೆದುರಿಗೆ ಕ್ಷತ್ರಿಯಧರ್ಮದ ಆಣೆಯಿಟ್ಟು ಹೇಳುತ್ತೇನೆ: ಎಂತಹ ಕಷ್ಟಬಂದರೂ ನಾನು ಸುಳ್ಳು ಹೇಳಿದವನಲ್ಲ. ಮುಂದೆ ಹೇಳತಕ್ಕವನಲ್ಲ. ನಾನಾವಿಧವಾದ ಯಜ್ಞಗಳನ್ನು ಮಾಡಿದ್ದೇನೆ. ಪ್ರಜೆಗಳನ್ನು ಧರ್ಮದಿಂದ ಪಾಲಿಸಿದ್ದೇನೆ (೧೯-೨೦). ಗುರುಹಿರಿಯರನ್ನು ಸದ್ಗುಣಸದಾಚಾರಗಳಿಂದ ಸಂತೋಷಪಡಿಸಿದ್ದೇನೆ. ಧರ್ಮಮಾರ್ಗದಲ್ಲಿ ನಡೆಯುತ್ತ ಬಂದಿದ್ದೇನೆ. ಈಗ ಒಂದು ಯಾಗವನ್ನು ಮಾಡಬೇಕೆಂದು ಬಯಸಿದರೆ ನನ್ನ ಗುರುಗಳಿಗೆ ಸಂತೋಷವಾಗಲಿಲ್ಲ. ಮುನಿಶ್ರೇಷ್ಠರೆ, ದೈವವೇ ಅಧಿಕವೆಂದು ನನಗೆ ತೋರುತ್ತದೆ. ಪುರುಷ ಪ್ರಯತ್ನ ವ್ಯರ್ಥ (೨೧-೨೨). ಸಕಲವನ್ನೂ ದೈವವು ತುಳಿಯಬಲ್ಲುದು. ದೈವವೇ ಜನರಿಗೆ ಗತಿಯಾಗಿದೆ. ಸ್ವಾಮಿ, ನಾನು ಅತ್ಯಂತ ದುಃಖಿತನಾಗಿದ್ದೇನೆ. ತಮ್ಮ ಅನುಗ್ರಹವನ್ನು ಬಯಸಿ ಬಂದಿದ್ದೇನೆ. ತಾವು ಪ್ರಸನ್ನ

ಕರ್ತುಮರ್ಹಸಿ ಭದ್ರಂ ತೇ ದೈವೋಪಹತಕರ್ಮಣಃ ।
ನಾನ್ಯಾಂ ಗತಿಂ ಗಮಿಷ್ಯಾಮಿ ನಾನ್ಯಃ ಶರಣಮಸ್ತಿ ಮೇ ॥ ೨೪
ದೈವಂ ಪುರುಷಕಾರೇಣ ನಿವರ್ತಯಿತುಮರ್ಹಸಿ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಅಷ್ಟಪಂಚಾಶಃ ಸರ್ಗಃ



ರಾಗಬೇಕು. ದುರ್ದೈವದಿಂದ ನನ್ನ ಪ್ರಯತ್ನವೆಲ್ಲವೂ ನಿಷ್ಫಲವಾಯಿತು. ತಮ್ಮನ್ನು ಬಿಟ್ಟು ನನಗೆ ಬೇರೆ ಗತಿ ಇಲ್ಲ ಬೇರೆ ರಕ್ಷಕರಿಲ್ಲ. ಈಗ 'ತಮ್ಮ ಪೌರುಷದಿಂದ ನನ್ನ ದೈವವನ್ನು ಅತ್ತ ತಳ್ಳಬೇಕು' ಎಂದು ಪ್ರಾರ್ಥಿಸಿದನು." (೨೩–೨೪)

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಐವತ್ತೆಂಟನೆಯ ಸರ್ಗ



# ಏಕೋನಷಷ್ಟಿತಮಃ ಸರ್ಗಃ

## ವಾಸಿಷ್ಠಶಾಪಃ

ಉಕ್ತವಾಕ್ಯಂ ತು ರಾಜಾನಂ ಕೃಪಯಾ ಕುಶಿಕಾತ್ಮಜಃ ।
ಅಬ್ರವೀನ್ಮಧುರಂ ವಾಕ್ಯಂ ಸಾಕ್ಷಾಚ್ಚಂಡಾಲರೂಪಿಣಮ್ ॥ ೧
ಐಕ್ಷ್ವಾಕ ಸ್ವಾಗತಂ ತೇಽಸ್ತು ಜಾನಾಮಿ ತ್ವಾಂ ಸುಧಾರ್ಮಿಕಮ್ ।
ಶರಣಂ ತೇ ಭವಿಷ್ಯಾಮಿ ಮಾ ಭೈಷೀರ್ನೃಪಪುಂಗವ ॥ ೨
ಅಹಮಾಮಂತ್ರಯೇ ಸರ್ವಾನ್ ಮಹರ್ಷೀನ್ ಪುಣ್ಯಕರ್ಮಣಃ ।
ಯಜ್ಞಸಾಹ್ಯಕರಾನ್ ರಾಜಂಸ್ತತೋ ಯಕ್ಷ್ಯಸಿ ನಿರ್ವೃತಃ ॥ ೩
ಗುರುಶಾಪಕೃತಂ ರೂಪಂ ಯದಿದಂ ತ್ವಯಿ ವರ್ತತೇ ।
ಅನೇನ ಸಹ ರೂಪೇಣ ಸಶರೀರೋ ಗಮಿಷ್ಯಸಿ ॥ ೪
ಹಸ್ತಪ್ರಾಪ್ತಮಹಂ ಮನ್ಯೇ ಸ್ವರ್ಗಂ ತವ ನರಾಧಿಪ ।
ಯಸ್ತ್ವಂ ಕೌಶಿಕಮಾಗಮ್ಯ ಶರಣ್ಯಂ ಶರಣಾಗತಃ ॥ ೫

## ಸರ್ಗ ೫೯

ತ್ರಿಶಂಕುವಿನ ಯಾಗವನ್ನು ಮಾಡಿಸಲು ವಿಶ್ವಾಮಿತ್ರರ ಸಂಮತಿ. ವಸಿಷ್ಠ ಪುತ್ರರು ನಿಂದಿಸುವುದು. ವಿಶ್ವಾಮಿತ್ರರು ಅವರನ್ನು ಶಪಿಸುವುದು.

ಶತಾನಂದರು ಹೇಳಿದರು : " ಈ ರೀತಿಯಲ್ಲಿ ಚಂಡಾಲರೂಪಿಯಾದ ತ್ರಿಶಂಕುವು ಪ್ರಾರ್ಥಿಸಲಾಗಿ ವಿಶ್ವಾಮಿತ್ರಮುನಿಗಳು " ಮಹಾರಾಜ, ನಿನಗೆ ಸ್ವಾಗತ. ಇಕ್ಷ್ವಾಕುವಂಶೋದ್ಭವನಾದ ನೀನು ಒಳ್ಳೆಯ ಧಾರ್ಮಿಕನೆಂಬುದನ್ನು ನಾನು ಬಲ್ಲೆನು. ನಾನು ನಿನಗೆ ಆಶ್ರಯವನ್ನು ಕೊಡುತ್ತೇನೆ. ಹೆದರಬೇಡ (೧-೨). ರಾಜ, ಪುಣ್ಯಾತ್ಮರಾದ ಸಕಲಮಹರ್ಷಿಗಳನ್ನೂ ನಾನು ಯಜ್ಞಕ್ಕೆ ಆಮಂತ್ರಿಸುತ್ತೇನೆ. ಅವರು ಯಜ್ಞಕ್ಕೆ ಸಹಾಯಮಾಡುವರು. ನೆಮ್ಮದಿಯಿಂದ ನೀನು ಯಜ್ಞವನ್ನು ಮಾಡಬಹುದು. ಗುರುಗಳು ಶಾಪವನ್ನು ಕೊಟ್ಟು ನಿನಗೆ ಈ ರೂಪವನ್ನು ಅನುಗ್ರಹಿಸಿರುವರಷ್ಟೆ! ಈ ರೂಪದೊಡನೆಯೇ ನೀನು ಸಶರೀರನಾಗಿ ಸ್ವರ್ಗಕ್ಕೆ ಹೋಗಬಹುದು (೩-೪). ಶರಣಾಗತರಕ್ಷಕನಾದ ಈ ಕುಶಿಕಪುತ್ರನನ್ನು ನೀನು ಮರೆಹೊಕ್ಕಮೇಲೆ,

ಏವಮುಕ್ತ್ವಾ ಮಹಾತೇಜಾಃ ಪುತ್ರಾನ್ ಪರಮಧಾರ್ಮಿಕಾನ್ ।
ವ್ಯಾದಿದೇಶ ಮಹಾಪ್ರಾಜ್ಞಾನ್ ಯಜ್ಞಸಂಭಾರಕಾರಣಾತ್ ॥ ೬

ಸರ್ವಾನ್ ಶಿಷ್ಯಾನ್ ಸಮಾಹೂಯ ವಾಕ್ಯಮೇತದುವಾಚ ಹ ।
ಸರ್ವಾನೃಷಿಗಣಾನ್ ವತ್ಸಾ ಆನಯಧ್ವಂ ಮಮಾಜ್ಞಯಾ ॥ ೭

ಸಶಿಷ್ಯಸುಹೃದಶ್ಚೈವ ಸರ್ತ್ವಿಜಃ ಸುಬಹುಶ್ರುತಾನ್ ।
ಯದನ್ಯೋ ವಚನಂ ಬ್ರೂಯಾನ್ಮದ್ವಾಕ್ಯಬಲಚೋದಿತಃ ॥ ೮

ತತ್ ಸರ್ವಮಖಿಲೇನೋಕ್ತಂ ಮಮಾಖ್ಯೇಯಮನಾದೃತಮ್ ।
ತಸ್ಯ ತದ್ವಚನಂ ಶ್ರುತ್ವಾ ದಿಶೋ ಜಗ್ಮುಸ್ತದಾಜ್ಞಯಾ ॥ ೯

ಆಜಗ್ಮುರಥ ದೇಶೇಭ್ಯಃ ಸರ್ವೇಭ್ಯೋ ಬ್ರಹ್ಮವಾದಿನಃ ।
ತೇ ಚ ಶಿಷ್ಯಾಃ ಸಮಾಗಮ್ಯ ಮುನಿಂ ಜ್ವಲಿತತೇಜಸಮ್ ॥ ೧೦

ಊಚುಶ್ಚ ವಚನಂ ಸರ್ವೇ ಸರ್ವೇಷಾಂ ಬ್ರಹ್ಮವಾದಿನಾಮ್ ।
ಶ್ರುತ್ವಾ ತೇ ವಚನಂ ಸರ್ವೇ ಸಮಾಯಾಂತಿ ದ್ವಿಜಾತಯಃ ॥ ೧೧

---

ತ್ರಿಶಂಕು, ಸ್ವರ್ಗವು ನಿನ್ನ ಕೈಗೆ ಸಿಕ್ಕಿತೆಂದೇ ನಾನು ಭಾವಿಸುತ್ತೇನೆ" ಎಂದು ಹೇಳಿ ಮಹಾಪ್ರಾಜ್ಞರೂ ಧಾರ್ಮಿಕರೂ ಆದ ತಮ್ಮ ಪುತ್ರರನ್ನು ಕರೆದು ಯಜ್ಞಸಂಭಾರವನ್ನು ಸಿದ್ಧಪಡಿಸುವಂತೆ ಸೂಚಿಸಿದರು (೫-೬) ಮತ್ತು ಶಿಷ್ಯರನ್ನು ಕುರಿತು "ಪ್ರಿಯಶಿಷ್ಯರೆ, ನೀವೆಲ್ಲರೂ ಹೋಗಿ ಸಕಲ ಋಷಿಗಳಿಗೂ ಶಿಷ್ಯಮಿತ್ರಸಮೇತರಾಗಿ ಯಜ್ಞಕ್ಕೆ ಬರುವಂತೆ ಆಹ್ವಾನವನ್ನು ಕೊಡಿರಿ. ಎಲ್ಲ ಋತ್ವಿಜರನ್ನೂ ವಿದ್ವಾಂಸರನ್ನೂ ಆಹ್ವಾನಿಸಿರಿ. ನನ್ನ ಆಹ್ವಾನವನ್ನು ಕೇಳಿ ಯಾವನಾದರೂ ಪ್ರತಿಯಾಗಿ ಅನಾದರದಿಂದ ಮಾತನಾಡಿದರೆ ಅದೆಲ್ಲವನ್ನೂ ನನಗೆ ತಿಳಿಸಬೇಕು. ಇದು ನನ್ನ ಆಜ್ಞೆ" ಎಂದು ನುಡಿದರು ಅವರ ಆಜ್ಞೆಯಂತೆ ಶಿಷ್ಯರು ನಾನಾ ದಿಕ್ಕುಗಳಿಗೆ ಹೊರಟರು (೭-೯). ಅವರ ಆಹ್ವಾನವನ್ನು ಮನ್ನಿಸಿ ನಾನಾ ದೇಶಗಳಿಂದ ಬ್ರಹ್ಮವಾದಿಗಳಾದ ಋಷಿಗಳು ಯಜ್ಞಕ್ಕೆ ಆಗಮಿಸಿದರು. ಶಿಷ್ಯರು ಹಿಂತಿರುಗಿ ಬಂದು ಆಹೂತರಾದ ವೈದಿಕರು ಆಡಿದ ಮಾತುಗಳನ್ನು ಮಹಾತೇಜಸ್ವಿಗಳಾದ ವಿಶ್ವಾಮಿತ್ರರಿಗೆ ವಿವರಿಸಿದರು: "ಮುನಿಶ್ರೇಷ್ಠರೆ, ತಮ್ಮ ಆಹ್ವಾನವನ್ನು ಮನ್ನಿಸಿ ಎಲ್ಲ ದೇಶ

ಸರ್ವದೇಶೇಷು ಚಾಗಚ್ಛನ್ ವರ್ಜಯಿತ್ವಾ ಮಹೋದಯಮ್ ।
ವಾಸಿಷ್ಠಂ ತಚ್ಛತಂ ಸರ್ವಂ ಕ್ರೋಧಪರ್ಯಾಕುಲಾಕ್ಷರಮ್ ॥ ೧೨

ಯದಾಹ ವಚನಂ ಸರ್ವಂ ಶೃಣು ತ್ವಂ ಮುನಿಪುಂಗವ ।
ಕ್ಷತ್ರಿಯೋ ಯಾಜಕೋ ಯಸ್ಯ ಚಂಡಾಲಸ್ಯ ವಿಶೇಷತಃ ॥ ೧೩

ಕಥಂ ಸದಸಿ ಭೋಕ್ತಾರೋ ಹವಿಸ್ತಸ್ಯ ಸುರರ್ಷಯಃ ।
ಬ್ರಾಹ್ಮಣಾ ವಾ ಮಹಾತ್ಮಾನೋ ಭುಕ್ತ್ವಾ ಚಂಡಾಲಭೋಜನಮ್

ಕಥಂ ಸ್ವರ್ಗಂ ಗಮಿಷ್ಯಂತಿ ವಿಶ್ವಾಮಿತ್ರೇಣ ಪಾಲಿತಾಃ ।
ಏತದ್ವಚನನೈಷ್ಠುರ್ಯಮೂಚುಃ ಸಂರಕ್ತಲೋಚನಾಃ ॥ ೧೫

ವಾಸಿಷ್ಠಾ ಮುನಿಶಾರ್ದೂಲ ಸರ್ವೇ ತೇ ಸಮಹೋದಯಾಃ ।
ತೇಷಾಂ ತದ್ವಚನಂ ಶ್ರುತ್ವಾ ಸರ್ವೇಷಾಂ ಮುನಿಪುಂಗವಃ ॥ ೧೬

ಕ್ರೋಧಸಂರಕ್ತನಯನಃ ಸರೋಷಮಿದಮಬ್ರವೀತ್ ।
ಯೇ ದೂಷಯಂತ್ಯದುಷ್ಟಂ ಮಾಂ ತಪ ಉಗ್ರಂ ಸಮಾಸ್ಥಿತಮ್ ॥

---

ಗಳಿಂದಲೂ ಬ್ರಾಹ್ಮಣರು ಬರುತ್ತಿದ್ದಾರೆ (೧೦-೧೧). ಆದರೆ ಮಹೋದಯನೆಂಬ ಋಷಿಯೂ ವಸಿಷ್ಠರ ನೂರುಮಂದಿ ಮಕ್ಕಳೂ ಆಹ್ವಾನವನ್ನು ನಿರಾಕರಿಸಿದರು. ಅವರೆಲ್ಲರೂ ಕ್ರೋಧದಿಂದ 'ಕ್ಷತ್ರಿಯನ ಪೌರೋಹಿತ್ಯ, ಚಂಡಾಲನ ಯಜ್ಞ! (೧೨-೧೩) ಅಂಥ ಸದಸ್ಸಿಗೆ ಬಂದು ದೇವತೆಗಳು ಹವಿಸ್ಸನ್ನು ಸ್ವೀಕರಿಸುತ್ತಾರೆಯೆ? ಋಷಿಗಳಾಗಲಿ ಮಹಾತ್ಮರಾದ ಬ್ರಾಹ್ಮಣರಾಗಲಿ ಹೇಗೆತಾನೆ ಆ ಚಂಡಾಲಭೋಜನವನ್ನು ಮಾಡುತ್ತಾರೆ? ವಿಶ್ವಾಮಿತ್ರನು ರಕ್ಷಿಸುತ್ತಾನೆಂದು ಅವರೆಲ್ಲರೂ ಸ್ವರ್ಗಕ್ಕೆ ಹೋಗುತ್ತಾರೋ?' ಎಂಬುದಾಗಿ ಕಣ್ಣನ್ನು ಕೆಂಪಗೆ ಮಾಡಿಕೊಂಡು ನಿಷ್ಠುರವಾದ ಮಾತನ್ನಾಡಿದರು ಮಹರ್ಷಿಗಳೆ, ವಸಿಷ್ಠರ ಮಕ್ಕಳು ಮತ್ತು ಮಹೋದಯ—ಇವರು ಹೀಗೆ ನುಡಿದವರು" ಎಂದು ಅರಿಕೆ ಮಾಡಿದರು (೧೪-೧೫) ಅವರ ಮಾತನ್ನು ಕೇಳಿ ವಿಶ್ವಾಮಿತ್ರಮುನಿಗಳ ಕಣ್ಣು ಕೆಂಪಡರಿತು ಅವರು ರೋಷದಿಂದ "ನಾನು ಉಗ್ರವಾದ ತಪಸನ್ನಾಚರಿಸಿದ್ದೇನೆ ನನಗೆ ದೋಷಲೇಶದ ಸ್ಪರ್ಶವೂ ಇಲ್ಲ ಇಂಥ ನನ್ನನ್ನು ಯಾರು ದೂಷಿಸುವರೋ ಆ ದುರಾತ್ಮರು ಸುಟ್ಟು ಬೂದಿ

ಭಸ್ಮೀಭೂತಾ ದುರಾತ್ಮಾನೋ ಭವಿಷ್ಯಂತಿ ನ ಸಂಶಯಃ ।
ಅದ್ಯ ತೇ ಕಾಲಪಾಶೇನ ನೀತಾ ವೈವಸ್ವತಕ್ಷಯಮ್ ॥ ೧೮
ಸಪ್ತ ಜಾತಿಶತಾನ್ಯೇವ ಮೃತಪಾಃ ಸಂತು ಸರ್ವಶಃ ।
ಶ್ವಮಾಂಸನಿಯತಾಹಾರಾ ಮುಷ್ಟಿಕಾ ನಾಮ ನಿರ್ಘೃಣಾಃ ॥ ೧೯
ವಿಕೃತಾಶ್ಚ ವಿರೂಪಾಶ್ಚ ಲೋಕಾನನುಚರಂತ್ವಿಮಾನ್ ।
ಮಹೋದಯಶ್ಚ ದುರ್ಬುದ್ಧಿರ್ಮಾಮದೂಷ್ಯಂ ಹ್ಯದೂಷಯತ್ ॥
ದೂಷಿತಃ ಸರ್ವಲೋಕೇಷು ನಿಷಾದತ್ವಂ ಗಮಿಷ್ಯತಿ ।
ಪ್ರಾಣಾತಿಪಾತನಿರತೋ ನಿರನುಕ್ರೋಶತಾಂ ಗತಃ ॥ ೨೦
ದೀರ್ಘಕಾಲಂ ಮಮ ಕ್ರೋಧಾದ್ದುರ್ಗತಿಂ ವರ್ತಯಿಷ್ಯತಿ ।
ಏತಾವದುಕ್ತ್ವಾ ವಚನಂ ವಿಶ್ವಾಮಿತ್ರೋ ಮಹಾತಪಾಃ ॥ ೨೨
ವಿರರಾಮ ಮಹಾತೇಜಾ ಋಷಿಮಧ್ಯೇ ಮಹಾಮುನಿಃ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕೋನಷಷ್ಟಿತಮಃ ಸರ್ಗಃ



ಯಾಗುತ್ತಾರೆ! ಸಂದೇಹವಿಲ್ಲ. ಅವರು ಯಮಪಾಶಕ್ಕೆ ಸಿಕ್ಕಿ ಯಮಲೋಕಕ್ಕೆ ಹೋಗಲಿ! (೧೬-೧೮). ಇನ್ನು ಏಳುನೂರು ಜನ್ಮಗಳವರೆಗೆ ಮುಷ್ಟಿಕರೆಂಬ ಚಾಂಡಾಲ ಜಾತಿಯಲ್ಲಿ ಹುಟ್ಟಲಿ! ಅವರು ಕ್ರೂರಿಗಳೂ ವಿಕಾರರೂಪಿಗಳೂ ಆಗಲಿ! ಹೆಣಗಳನ್ನೂ ನಾಯಿಯ ಮಾಂಸಗಳನ್ನೂ ತಿನ್ನುತ್ತ ದೇಶದೇಶಗಳಲ್ಲಿ ಅಲೆಯುತ್ತಿರಲಿ! ಆ ದುರ್ಬುದ್ಧಿಯ ಮಹೋದಯನು ನನ್ನನ್ನು ದೂಷಿಸಿದನಲ್ಲವೆ? (೧೯-೨೦). ಅವನು ಬೇಡನಾಗಿ ಹುಟ್ಟಿ ಸಕಲರ ದೂಷಣೆಗೂ ಗುರಿಯಾಗಲಿ! ನಿರ್ದಯನಾಗಿ ಕೊಲೆಗಡುಕನಾಗಲಿ! ಬಹುಕಾಲದವರೆಗೆ ದುರ್ಗತಿಯನ್ನನುಭವಿಸಲಿ" ಎಂಬುದಾಗಿ ಋಷಿಗಳಿದುರಿಗೆ ಶಪಿಸಿ ಸುಮ್ಮನಾದರು" (೨೧-೨೨).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಐವತ್ತೊಂಬತ್ತನೆಯ ಸರ್ಗ



## ಷಷ್ಟಿತಮಃ ಸರ್ಗಃ

### ತ್ರಿಶಂಕುಸ್ವರ್ಗಃ

ತಪೋಬಲಹತಾನ್ ಕೃತ್ವಾ ವಾಸಿಷ್ಠಾನ್ ಸಮಹೋದಯಾನ್ ।
ಋಷಿಮಧ್ಯೇ ಮಹಾತೇಜಾ ವಿಶ್ವಾಮಿತ್ರೋಽಭ್ಯಭಾಷತ ॥ ೧

ಅಯಮಿಕ್ಷ್ವಾಕುದಾಯಾದಸ್ತ್ರಿಶಂಕುರಿತಿ ವಿಶ್ರುತಃ ।
ಧರ್ಮಿಷ್ಠಶ್ಚ ವದಾನ್ಯಶ್ಚ ಮಾಂ ಚೈವ ಶರಣಂ ಗತಃ ॥ ೨

ಸ್ವೇನಾನೇನ ಶರೀರೇಣ ದೇವಲೋಕಜಿಗೀಷಯಾ ।
ಯಥಾಯಂ ಸ್ವಶರೀರೇಣ ಸ್ವರ್ಗಲೋಕಂ ಗಮಿಷ್ಯತಿ ॥ ೩

ತಥಾ ಪ್ರವರ್ತ್ಯತಾಂ ಯಜ್ಞೋ ಭವದ್ಭಿಶ್ಚ ಮಯಾ ಸಹ ।
ವಿಶ್ವಾಮಿತ್ರವಚಃ ಶ್ರುತ್ವಾ ಸರ್ವ ಏವ ಮಹರ್ಷಯಃ ॥ ೪

## ಸರ್ಗ ೬೦

ತ್ರಿಶಂಕು ಯಾಗದಲ್ಲಿ ಹವಿಸ್ಸನ್ನು ಸ್ವೀಕರಿಸಲು ದೇವತೆಗಳು ಬರಲಿಲ್ಲವಾದ್ದರಿಂದ ವಿಶ್ವಾಮಿತ್ರರು ತಪೋಬಲದಿಂದ ತ್ರಿಶಂಕುವನ್ನು ಸ್ವರ್ಗಕ್ಕೆ ಕಳಿಸುವುದು. ದೇವತೆಗಳು ಅವನನ್ನು ತಡೆಯುವುದು. ವಿಶ್ವಾಮಿತ್ರರು ಇನ್ನೊಂದು ಸ್ವರ್ಗವನ್ನು ಸೃಷ್ಟಿಸಲಾರಂಭಿಸುವುದು

"ರಾಘವ, ಮಹಾತೇಜೋನಿಧಿಗಳಾದ ವಿಶ್ವಾಮಿತ್ರರು ತಪೋಬಲದಿಂದ ವಸಿಷ್ಠಪುತ್ರರನ್ನೂ ಮಹೋದಯನನ್ನೂ ನಾಶಮಾಡಿ ಆ ಋಷಿಗಳ ಮಧ್ಯದಲ್ಲಿ ಹೀಗೆಂದರು: 'ಋಷಿಗಳೆ, ಈತನು ಇಕ್ಷ್ವಾಕುವಂಶದಲ್ಲಿ ಜನಿಸಿ ತ್ರಿಶಂಕು ಎಂದು ಪ್ರಖ್ಯಾತನಾದ ರಾಜ. ಬಹಳ ಧರ್ಮಿಷ್ಠ, ಉದಾರಶೀಲ. ಇವನು ಸಶರೀರನಾಗಿ ಸ್ವರ್ಗಕ್ಕೆ ಹೋಗಬೇಕೆಂಬ ಅಭಿಲಾಷೆಯಿಂದ ನನ್ನನ್ನು ಮರೆಹೊಕ್ಕಿದ್ದಾನೆ (೧-೨). ಇವನು ಸಶರೀರನಾಗಿ ಸ್ವರ್ಗಕ್ಕೆ ಹೋಗುವಂತೆ ನಾವೆಲ್ಲರೂ ಸೇರಿ ಯಾಗವನ್ನು ಆಚರಿಸಬೇಕು.' ಅದನ್ನು ಕೇಳಿ ಅಲ್ಲಿ ನೆರೆದಿದ್ದ ಧರ್ಮಜ್ಞರಾದ ಮಹರ್ಷಿಗಳೆಲ್ಲರೂ ಸೇರಿ 'ಈ ಕೌಶಿಕಮುನಿಯು

*

ಊಚುಃ ಸಮೇತ್ಯ ಸಹಿತಾ ಧರ್ಮಜ್ಞಾ ಧರ್ಮಸಂಹಿತಮ್ ।
ಅಯಂ ಕುಶಿಕದಾಯಾದೋ ಮುನಿಃ ಪರಮಕೋಪನಃ ॥ ೫

ಯದಾಹ ವಚನಂ ಸಮ್ಯಗೇತತ್ ಕಾರ್ಯಂ ನ ಸಂಶಯಃ ।
ಅಗ್ನಿಕಲ್ಪೋ ಹಿ ಭಗವಾನ್ ಶಾಪಂ ದಾಸ್ಯತಿ ರೋಷಿತಃ ॥ ೬

ತಸ್ಮಾತ್ ಪ್ರವರ್ತ್ಯತಾಂ ಯಜ್ಞಃ ಸಶರೀರೋ ಯಥಾ ದಿವಮ್ ।
ಗಚ್ಛೇದಿಕ್ಷ್ವಾಕುದಾಯಾದೋ ವಿಶ್ವಾಮಿತ್ರಸ್ಯ ತೇಜಸಾ ॥ ೭

ತಥಾ ಪ್ರವರ್ತ್ಯತಾಂ ಯಜ್ಞಃ ಸರ್ವೇ ಸಮಧಿತಿಷ್ಠತ ।
ಏವಮುಕ್ತ್ವಾ ಮಹರ್ಷಯಶ್ಚಕ್ರುಸ್ತಾಸ್ತಾಃ ಕ್ರಿಯಾಸ್ತದಾ ॥ ೮

ಯಾಜಕಶ್ಚ ಮಹಾತೇಜಾ ವಿಶ್ವಾಮಿತ್ರೋಽಭವತ್ ಕ್ರತೌ ।
ಋತ್ವಿಜಶ್ಚಾನುಪೂರ್ವ್ಯೇಣ ಮಂತ್ರವನ್ಮಂತ್ರಕೋವಿದಾಃ ॥ ೯

ಚಕ್ರುಃ ಸರ್ವಾಣಿ ಕಾರ್ಯಾಣಿ ಯಥಾಕಲ್ಪಂ ಯಥಾವಿಧಿ ।
ತತಃ ಕಾಲೇನ ಮಹತಾ ವಿಶ್ವಾಮಿತ್ರೋ ಮಹಾತಪಾಃ ॥ ೧೦

ಚಕಾರಾವಾಹನಂ ತತ್ರ ಭಾಗಾರ್ಥಂ ಸರ್ವದೇವತಾಃ ।
ನಾಭ್ಯಾಗಮಂಸ್ತದಾಹೂತಾ ಭಾಗಾರ್ಥಂ ಸರ್ವದೇವತಾಃ ॥ ೧೧

---

ಮಹಾಕೋಪಿಷ್ಠ! ಈತನ ವಚನವನ್ನು ನಾವು ಸರಿಯಾಗಿ ನಡೆಸಬೇಕು. ಈ ಮಹಾತ್ಮನು ಬೆಂಕಿಯಂಥವನು. ಕೋಪ ಬಂದರೆ ನಮಗೆ ಶಾಪವನ್ನೇ ಕೊಡುತ್ತಾನೆ! (೫-೬). ಆದ್ದರಿಂದ ತ್ರಿಶಂಕುವಿಗೆ ಸಶರೀರಸ್ವರ್ಗವಾಗುವಂತೆ ನಾವು ಯಾಗವನ್ನು ನಡೆಸೋಣ. ವಿಶ್ವಾಮಿತ್ರನ ತೇಜಸ್ಸಿನಿಂದ ಸ್ವರ್ಗ ದೊರೆಯಬಹುದು. ಎಲ್ಲರೂ ಸಿದ್ಧರಾಗಿರಿ' ಎಂದು ಮಾತನ್ನಾಡಿಕೊಂಡು ಆಯಾ ಯಜ್ಞಕರ್ಮಗಳನ್ನಾರಂಭಿಸಿದರು (೭-೮). ಆ ಯಾಗದಲ್ಲಿ ವಿಶ್ವಾಮಿತ್ರಮುನಿಗಳು ಅಧ್ವರ್ಯುಗಳಾದರು. ಮಂತ್ರನಿಷ್ಣಾತರಾದ ಋತ್ವಿಜರು ಶಾಸ್ತ್ರೋಕ್ತವಾದ ರೀತಿಯಲ್ಲಿ ಸಂಪ್ರದಾಯವನ್ನನುಸರಿಸಿ ಸಮಸ್ತ ಕಾರ್ಯಗಳನ್ನು ಅನುಷ್ಠಾನಮಾಡಿದರು. ಹೀಗೆ ದೀರ್ಘಕಾಲದವರೆಗೆ ವಿಧಿಗಳನ್ನಾಚರಿಸಿ ವಿಶ್ವಾಮಿತ್ರಮಹರ್ಷಿಗಳು ಹವಿರ್ಭಾಗವನ್ನು ಸ್ವೀಕರಿಸುವುದಕ್ಕೋಸ್ಕರ ಸಮಸ್ತ ದೇವತೆಗಳನ್ನು ಆಹ್ವಾನಿಸಿದರು. ಯಾವ ದೇವತೆ

ತತಃ ಕ್ರೋಧಸಮಾವಿಷ್ಟೋ ವಿಶ್ವಾಮಿತ್ರೋ ಮಹಾಮುನಿಃ ।
ಸ್ರುವಮುದ್ಯಮ್ಯ ಸಕ್ರೋಧಸ್ತ್ರಿಶಂಕುಮಿದಮಬ್ರವೀತ್ ॥ ೧೨

ಪಶ್ಯ ಮೇ ತಪಸೋ ವೀರ್ಯಂ ಸ್ವಾರ್ಜಿತಸ್ಯ ನರೇಶ್ವರ ।
ಏಷ ತ್ವಾಂ ಸಶರೀರೇಣ ನಯಾಮಿ ಸ್ವರ್ಗಮೋಜಸಾ ॥ ೧೩

ದುಷ್ಪ್ರಾಪಂ ಸ್ವಶರೀರೇಣ ದಿವಂ ಗಚ್ಛ ನರಾಧಿಪ ।
ಸ್ವಾರ್ಜಿತಂ ಕಿಂಚಿದಪ್ಯಸ್ತಿ ಮಯಾ ಹಿ ತಪಸಃ ಫಲಮ್ ॥ ೧೪

ರಾಜನ್ ಸ್ವತೇಜಸಾ ತಸ್ಯ ಸಶರೀರೋ ದಿವಂ ವ್ರಜ ।
ಉಕ್ತವಾಕ್ಯೇ ಮುನೌ ತಸ್ಮಿನ್ ಸಶರೀರೋ ನರೇಶ್ವರಃ ॥ ೧೫

ದಿವಂ ಜಗಾಮ ಕಾಕುತ್ಸ್ಥ ಮುನೀನಾಂ ಪಶ್ಯತಾಂ ತದಾ ।
ದೇವಲೋಕಗತಂ ದೃಷ್ಟ್ವಾ ತ್ರಿಶಂಕುಂ ಪಾಕಶಾಸನಃ ॥ ೧೬

ಸಹ ಸರ್ವೈಃ ಸುರಗಣೈರಿದಂ ವಚನಮಬ್ರವೀತ್ ।
ತ್ರಿಶಂಕೋ ಗಚ್ಛ ಭೂಯಸ್ತ್ವಂ ನಾಸಿ ಸ್ವರ್ಗಕೃತಾಲಯಃ ॥ ೧೭

---

ಗಳೂ ಬರಲಿಲ್ಲ (೯-೧೧). ವಿಶ್ವಾಮಿತ್ರಮುನಿಗಳು ಕಿಡಿಕಿಡಿಯಾದರು. ಅವರು ಸ್ರುವ*ವನ್ನು ಎತ್ತಿಕೊಂಡು ರೋಷದಿಂದ 'ತ್ರಿಶಂಕುಮಹಾರಾಜ, ನನ್ನ ತಪೋಬಲವನ್ನಾದರೂ ನೋಡು! ನನ್ನ ಸಾಮರ್ಥ್ಯದಿಂದ ನಿನ್ನನ್ನು ಸಶರೀರನನ್ನಾಗಿಯೇ ಸ್ವರ್ಗಕ್ಕೆ ಕಳಿಸುತ್ತೇನೆ! (೧೨-೧೩). ರಾಜ, ಇತರ ದುರ್ಲಭವಾದ ಸ್ವರ್ಗಕ್ಕೆ ನೀನು ಸಶರೀರನಾಗಿ ಹೋಗು. ನಾನು ಆರ್ಜಿಸಿರ ತಕ್ಕ ತಪಃಫಲವು ತಕ್ಕಮಟ್ಟಿಗೆ ಇದೆ. ಅದರ ಅಸಾಧಾರಣವಾದ ಪ್ರಭಾವ ದಿಂದಲೇ ನೀನು ಸ್ವರ್ಗಕ್ಕೆ ಸಶರೀರನಾಗಿ ಹೋಗು' ಎಂದು ನುಡಿದರು. ಶ್ರೀರಾಮ, ಮುನಿಗಳೆಲ್ಲರೂ ಕಣ್ಣುಬಿಟ್ಟುಕೊಂಡು ನೋಡುತ್ತಿರಲು, ತತ್ಕ್ಷಣದಲ್ಲಿ ತ್ರಿಶಂಕುವು ಸಶರೀರನಾಗಿ ಸ್ವರ್ಗಕ್ಕೆ ಏರಿದನು (೧೪-೧೬). ತ್ರಿಶಂಕುವು ದೇವಲೋಕಕ್ಕೆ ಬರಲು ದೇವೇಂದ್ರನು ದೇವತೆಗಳೊಡನೆ ಬಂದು ಅಡ್ಡನಿಂತು ತ್ರಿಶಂಕುವನ್ನು ಕುರಿತು 'ಎಲೈ, ನೀನು ಬಂದ ದಾರಿ ಹಿಡಿದು ಹಿಂದಕ್ಕೆ ಹೋಗು! ನಿನಗೆ ಸ್ವರ್ಗದಲ್ಲಿ ಸ್ಥಳ ಸಿಗಲಾರದು. ಮೂಢ!

---

* ಸ್ರುವ=ಹವಿಸ್ಸನ್ನು ಹಾಕುವ ಸೌಟು.

ಗುರುಶಾಪಹತೋ ಮೂಢ ಪತ ಭೂಮಿಮವಾಕ್ಶಿರಾಃ ।
ಏವಮುಕ್ತೋ ಮಹೇಂದ್ರೇಣ ತ್ರಿಶಂಕುರಪತತ್ ಪುನಃ ॥ ೧೮

ವಿಕ್ರೋಶಮಾನಸ್ತ್ರಾಹೀತಿ ವಿಶ್ವಾಮಿತ್ರಂ ತಪೋಧನಮ್ ।
ತಚ್ಛ್ರುತ್ವಾ ವಚನಂ ತಸ್ಯ ಕ್ರೋಶಮಾನಸ್ಯ ಕೌಶಿಕಃ ॥ ೧೯

ಕ್ರೋಧಮಾಹಾರಯತ್ತೀವ್ರಂ ತಿಷ್ಠ ತಿಷ್ಠೇತಿ ಚಾಬ್ರವೀತ್ ।
ಋಷಿಮಧ್ಯೇ ಸ ತೇಜಸ್ವೀ ಪ್ರಜಾಪತಿರಿವಾಪರಃ ॥ ೨೦

ಸೃಜನ್ ದಕ್ಷಿಣಮಾರ್ಗಸ್ಥಾನ್ ಸಪ್ತರ್ಷೀನಪರಾನ್ ಪುನಃ ।
ನಕ್ಷತ್ರಮಾಲಾಮಪರಾಮಸೃಜತ್ ಕ್ರೋಧಮೂರ್ಛಿತಃ ॥ ೨೧

ದಕ್ಷಿಣಾಂ ದಿಶಮಾಸ್ಥಾಯ ಮುನಿಮಧ್ಯೇ ಮಹಾತಪಾಃ ।
ಸೃಷ್ಟ್ವಾ ನಕ್ಷತ್ರವಂಶಂ ಚ ಕ್ರೋಧೇನ ಕಲುಷೀಕೃತಃ ॥ ೨೨

ಅನ್ಯಮಿಂದ್ರಂ ಕರಿಷ್ಯಾಮಿ ಲೋಕೋ ವಾ ಸ್ಯಾದನಿಂದ್ರಕಃ ।
ದೈವತಾನ್ಯಪಿ ಸ ಕ್ರೋಧಾತ್ ಸ್ರಷ್ಟುಂ ಸಮುಪಚಕ್ರಮೇ ॥ ೨೩

---

ಗುರುಶಾಪದಿಂದ ಭ್ರಷ್ಟನಾಗಿದ್ದೀಯೆ. ತಲೆಕೆಳಗಾಗಿ ಬೀಳು!' ಎಂದು ಹೇಳಿದನು ಕೂಡಲೆ ತ್ರಿಶಂಕುವು (ಇಂದ್ರನ ಆಜ್ಞಾಬಲದಿಂದ) ಕೆಳಕ್ಕೆ ಬೀಳುತ್ತ 'ವಿಶ್ವಾಮಿತ್ರಮುನಿಗಳೆ, ತ್ರಾಹಿ ತ್ರಾಹಿ!' ಎಂದು ಅರಚಿಕೊಂಡನು (೧೭-೧೮). ತ್ರಿಶಂಕುವಿನ ಅರಚಾಟವನ್ನು ಕೇಳಿದ ಕೂಡಲೆ ವಿಶ್ವಾಮಿತ್ರರು ಸಿಟ್ಟಿನಿಂದ ಸಿಡಿದೆದ್ದರು 'ಅಲ್ಲಿಯೇ ನಿಲ್ಲು, ನಿಲ್ಲು!' ಎಂದು ಕೂಗಿ ಹೇಳಿ (ತ್ರಿಶಂಕುವನ್ನು ಆಕಾಶದಲ್ಲಿ ನಿಲ್ಲಿಸಿ ಇನ್ನೊಂದು ಸ್ವರ್ಗವನ್ನೇ ಸೃಜಿಸಬೇಕೆಂದು ಸಂಕಲ್ಪಿಸಿದರು.) ಋಷಿಮಧ್ಯದಲ್ಲಿ ಇನ್ನೊಬ್ಬ ಸೃಷ್ಟಿಕರ್ತನೋ ಎಂಬಂತೆ ತೇಜಸ್ಸಿನಿಂದ ಜ್ವಲಿಸುತ್ತ, ಅವರು ದಕ್ಷಿಣ ದಿಕ್ಕಿನಲ್ಲಿ ಇನ್ನೊಂದು ಸಪ್ತರ್ಷಿಮಂಡಲವನ್ನು ಸೃಷ್ಟಿಸಿ ಅದಕ್ಕನುಗುಣವಾಗಿ ನಕ್ಷತ್ರಪಂಕ್ತಿಯೊಂದನ್ನು ನಿರ್ಮಿಸಿದರು (೧೯-೨೧). ಅನಂತರ 'ಇನ್ನೊಬ್ಬ ಇಂದ್ರನನ್ನೇ ಸೃಷ್ಟಿಸುತ್ತೇನೆ ಅಥವಾ ಲೋಕದಲ್ಲಿ ಇಂದ್ರನೇ ಇಲ್ಲದಂತೆ ಮಾಡುತ್ತೇನೆ!' ಎಂದು ಹೇಳುತ್ತ ಕ್ರೋಧಮೂರ್ಛಿತರಾಗಿ ದೇವತೆಗಳನ್ನು ಸೃಜಿಸ

ತತಃ ಪರಮಸಂಭ್ರಾಂತಾಃ ಸರ್ಷಿಸಂಘಾಃ ಸುರಾಸುರಾಃ ।
ವಿಶ್ವಾಮಿತ್ರಂ ಮಹಾತ್ಮಾನಮೂಚುಃ ಸಾನುನಯಂ ವಚಃ ॥ ೨೪
ಅಯಂ ರಾಜಾ ಮಹಾಭಾಗ ಗುರುಶಾಪಪರಿಕ್ಷತಃ ।
ಸಶರೀರೋ ದಿವಂ ಯಾತುಂ ನಾರ್ಹತ್ಯೇವ ತಪೋಧನ ॥ ೨೫
ತೇಷಾಂ ತದ್ವಚನಂ ಶ್ರುತ್ವಾ ದೇವಾನಾಂ ಮುನಿಪುಂಗವಃ ।
ಅಬ್ರವೀತ್ ಸುಮಹದ್ವಾಕ್ಯಂ ಕೌಶಿಕಃ ಸರ್ವದೇವತಾಃ ॥ ೨೬
ಸಶರೀರಸ್ಯ ಭದ್ರಂ ವಸ್ತ್ರಿಶಂಕೋರಸ್ಯ ಭೂಪತೇಃ ।
ಆರೋಹಣಂ ಪ್ರತಿಜ್ಞಾಯ ನಾನೃತಂ ಕರ್ತುಮುತ್ಸಹೇ ॥ ೨೭
ಸ್ವರ್ಗೋಽಸ್ತು ಸಶರೀರಸ್ಯ ತ್ರಿಶಂಕೋರಸ್ಯ ಶಾಶ್ವತಃ ।
ನಕ್ಷತ್ರಾಣಿ ಚ ಸರ್ವಾಣಿ ಮಾಮಕಾನಿ ಧ್ರುವಾಣ್ಯಥ ॥ ೨೮
ಯಾವಲ್ಲೋಕಾ ಧರಿಷ್ಯಂತಿ ತಿಷ್ಠಂತ್ವೇತಾನಿ ಸರ್ವಶಃ ।
ಮತ್ಕೃತಾನಿ ಸುರಾಃ ಸರ್ವೇ ತದನುಜ್ಞಾತುಮರ್ಹಥ ॥ ೨೯
ಏವಮುಕ್ತಾಃ ಸುರಾಃ ಸರ್ವೇ ಪ್ರತ್ಯೂಚುರ್ಮುನಿಪುಂಗವಮ್ ।
ಏವಂ ಭವತು ಭದ್ರಂ ತೇ ತಿಷ್ಠಂತ್ವೇತಾನಿ ಸರ್ವಶಃ ॥ ೩೦

---

ಲಾರಂಭಿಸಿದರು (೨೨-೨೩) ಆಗ ಋಷಿಗಳೂ ದೇವಾಸುರರೂ ಅತ್ಯಂತ ಭೀತರಾಗಿ ವಿಶ್ವಾಮಿತ್ರರನ್ನು ಸಮೀಪಿಸಿ ಸಮಾಧಾನೋಕ್ತಿಗಳಿಂದ 'ಮಹಾತ್ಮ, ಈ ರಾಜನು ಗುರುಶಾಪಕ್ಕೆ ಒಳಗಾಗಿದ್ದಾನೆ. ಇವನು ಸಶರೀರನಾಗಿ ಸ್ವರ್ಗಕ್ಕೆ ಹೋಗಲು ಅನರ್ಹನೇ ಸರಿ' ಎಂದರು (೨೪-೨೫). ಆಗ ತಪೋಧನರಾದ ವಿಶ್ವಾಮಿತ್ರರು ಅವರನ್ನು ಕುರಿತು 'ಒಳ್ಳೆಯದು. ಈ ತ್ರಿಶಂಕು ಮಹಾರಾಜನನ್ನು ಶರೀರಸಹಿತವಾಗಿ ಸ್ವರ್ಗಕ್ಕೆ ಏರಿಸುತ್ತೇನೆಂದು ಮಾತು ಕೊಟ್ಟಿದ್ದೇನೆ. ನನ್ನ ಮಾತನ್ನು ಸುಳ್ಳುಮಾಡಿಕೊಳ್ಳಲು ನಾನು ಸಿದ್ಧನಿಲ್ಲ (೨೬-೨೭). ಈ ತ್ರಿಶಂಕುವಿಗೆ ಶಾಶ್ವತವಾಗಿ ಸಶರೀರ ಸ್ವರ್ಗ ದೊರೆಯಬೇಕು. ಅಲ್ಲದೆ ನಾನು ನಿರ್ಮಿಸಿರುವ ನಕ್ಷತ್ರಗಳೆಲ್ಲವೂ ಈ ಜಗತ್ತು ಇರುವವರೆಗೆ ಸ್ಥಿರವಾಗಿರಬೇಕು. ಇದಕ್ಕೆ ನೀವು ಸಮ್ಮತಿಸಿರಿ' ಎಂದು ಅರ್ಥಪೂರ್ಣವಾಗಿ ನುಡಿದರು (೨೮-೨೯). ಆಗ ದೇವತೆಗಳು 'ಒಳ್ಳೆಯದು. ಹಾಗೆಯೇ ಆಗಲಿ. ಮುನಿಶ್ರೇಷ್ಠ, ನೀನು ಸೃಜಿಸಿದ

ಗಗನೇ ತಾನ್ಯನೇಕಾನಿ ವೈಶ್ವಾನರಪಥಾದ್ಬಹಿಃ ।
ನಕ್ಷತ್ರಾಣಿ ಮುನಿಶ್ರೇಷ್ಠ ತೇಷು ಜ್ಯೋತಿಃಷು ಜಾಜ್ವಲನ್ ॥ ೩೦

ಅವಾಕ್ಶಿರಾಸ್ತ್ರಿಶಂಕುಶ್ಚ ತಿಷ್ಠತ್ವಮರಸಂನಿಭಃ ।
ಅನುಯಾಸ್ಯಂತಿ ಚೈತಾನಿ ಜ್ಯೋತೀಂಷಿ ನೃಪಸತ್ತಮಮ್ ॥ ೩೧

ಕೃತಾರ್ಥಂ ಕೀರ್ತಿಮಂತಂ ಚ ಸ್ವರ್ಗಲೋಕಗತಂ ತಥಾ ।
ವಿಶ್ವಾಮಿತ್ರಸ್ತು ಧರ್ಮಾತ್ಮಾ ಸರ್ವದೇವೈರಭಿಷ್ಟುತಃ ॥ ೩೩

ಋಷಿಮಧ್ಯೇ ಮಹಾತೇಜಾ ಬಾಢಮಿತ್ಯೇವ ದೇವತಾಃ ।
ತತೋ ದೇವಾ ಮಹಾತ್ಮಾನೋ ಮುನಯಶ್ಚ ತಪೋಧನಾಃ ॥ ೩೪

ಜಗ್ಮುರ್ಯಥಾಗತಂ ಸರ್ವೇ ಯಜ್ಞಸ್ಯಾಂತೇ ನರೋತ್ತಮ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಷಷ್ಟಿತಮಃ ಸರ್ಗಃ



ನಕ್ಷತ್ರಗಳು ಅನಾದಿಯಾದ ವೈಶ್ವಾನರಜ್ಯೋತಿಶ್ಚಕ್ರದ ಬಾಹ್ಯಾವರಣದಲ್ಲಿ ಶಾಶ್ವತವಾಗಿರುತ್ತವೆ. ಅವುಗಳ ಮಧ್ಯದಲ್ಲಿ ತ್ರಿಶಂಕುವು ತಲೆಕೆಳಗಾಗಿ ಪ್ರಕಾಶಿಸುತ್ತಿರುವನು (೩೦-೩೧). ಈ ನೃಪೋತ್ತಮನು ಕೃತಾರ್ಥನೂ ಕೀರ್ತಿವಂತನೂ ಆಗಿ ದೇವತೆಗಳಂತೆ ಸುಖಿಸುತ್ತ ಪ್ರಕಾಶಿಸಲಿ. ಈ ನಕ್ಷತ್ರಗಳು ಈತನನ್ನು ಅನುಸರಿಸಿ ಸಂಚರಿಸಲಿ' ಎಂದು ಹೇಳಿದರು (೩೨). ಧರ್ಮಾತ್ಮರಾದ ವಿಶ್ವಾಮಿತ್ರರು ಋಷಿಗಳೆದುರಿಗೆ ಹಾಗೆಯೇ ಆಗಲೆಂದು ಸಮ್ಮತಿಸಲು ಸಕಲದೇವತೆಗಳೂ ಸ್ತೋತ್ರಮಾಡಿದರು ಶ್ರೀರಾಮ, ಕಡೆಯಲ್ಲಿ ವಿಶ್ವಾಮಿತ್ರರು ಯಜ್ಞವನ್ನು ಸಮಾಪ್ತಿಗೊಳಿಸಲಾಗಿ ದೇವತೆಗಳೂ ತಪೋಧನರಾದ ಋಷಿಗಳೂ ತಮ್ಮ ತಮ್ಮ ಸ್ಥಳಕ್ಕೆ ಪ್ರಯಾಣಮಾಡಿದರು" (೩೩-೩೪).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಅರುವತ್ತನೆಯ ಸರ್ಗ



## ಏಕಷಷ್ಟಿತಮಃ ಸರ್ಗಃ

### ಶುನಃಶೇಫವಿಕ್ರಯಃ

ವಿಶ್ವಾಮಿತ್ರೋ ಮಹಾತ್ಮಾಥ ಪ್ರಸ್ಥಿತಾನ್ ಪ್ರೇಕ್ಷ್ಯ ತಾನೃಷೀನ್ ।
ಅಬ್ರವೀನ್ನರಶಾರ್ದೂಲ ಸರ್ವಾಂಸ್ತಾನ್ ವನವಾಸಿನಃ ॥ ೧

ಮಹಾನ್ ವಿಘ್ನಃ ಪ್ರವೃತ್ತೋಽಯಂ ದಕ್ಷಿಣಾಮಾಸ್ಥಿತೋ ದಿಶಮ್
ದಿಶಮನ್ಯಾಂ ಪ್ರಪತ್ಸ್ಯಾಮಸ್ತತ್ರ ತಪ್ಸ್ಯಾಮಹೇ ತಪಃ ॥ ೨

ಪಶ್ಚಿಮಾಯಾಂ ವಿಶಾಲಾಯಾಂ ಪುಷ್ಕರೇಷು ಮಹಾತ್ಮನಃ ।
ಸುಖಂ ತಪಶ್ಚರಿಷ್ಯಾಮೋ ವರಂ ತದ್ಧಿ ತಪೋವನಮ್ ॥ ೩

ಏವಮುಕ್ತ್ವಾ ಮಹಾತೇಜಾಃ ಪುಷ್ಕರೇಷು ಮಹಾಮುನಿಃ ।
ತಪ ಉಗ್ರಂ ದುರಾಧರ್ಷಂ ತೇಪೇ ಮೂಲಫಲಾಶನಃ ॥ ೪

## ಸರ್ಗ ೬೧

### ಅಂಬರೀಷನ ಯಾಗ ; ಇಂದ್ರನು ಯಾಗಪಶುವನ್ನು ಅಪಹರಿಸುವುದು ; ಶುನಃಶೇಫನ ವಿಕ್ರಯ

"ರಾಮ, ಯಜ್ಞಕ್ಕೆ ಬಂದಿದ್ದ ಅರಣ್ಯವಾಸಿಗಳಾದ ಋಷಿಗಳು ತಮ್ಮ ಸ್ಥಳಗಳಿಗೆ ಪ್ರಯಾಣಸನ್ನದ್ಧರಾದಾಗ ವಿಶ್ವಾಮಿತ್ರಮುನಿಗಳು ಅವರನ್ನು ನೋಡಿ ' ಈ ದಕ್ಷಿಣ ದಿಕ್ಕಿನಲ್ಲಿ ನನ್ನ ತಪಸ್ಸಿಗೆ ಮಹಾವಿಘ್ನ ಸಂಭವಿಸಿತು. ಇನ್ನು ತಪಶ್ಚರಣಕ್ಕಾಗಿ ಬೇರೊಂದು ದಿಕ್ಕಿಗೆ ಹೋಗಬೇಕು (೧–೨). ಮಹಾತ್ಮರೆ, ಪಶ್ಚಿಮ ದಿಕ್ಕಿನಲ್ಲಿ ವಿಶಾಲವಾದ ತಪೋಭೂಮಿಗಳಿವೆ. ಪುಷ್ಕರ ತೀರ್ಥಕ್ಕೆ ಹೋಗಿ ಅಲ್ಲಿ ನಿರ್ವಿಘ್ನವಾಗಿ ತಪಸ್ಸನ್ನಾಚರಿಸಿಕೊಂಡಿರುತ್ತೇನೆ. ಆ ತಪೋವನವೇ ಉತ್ತಮ' ಎಂದು ಹೇಳಿದರು. ಅನಂತರ ಪುಷ್ಕರತೀರ್ಥಕ್ಕೆ ಹೋಗಿ ಸಮೀಪದಲ್ಲಿದ್ದ ತಪೋವನದಲ್ಲಿ ಫಲಮೂಲಗಳನ್ನು ಮಾತ್ರವೇ ಭಕ್ಷಿಸುತ್ತ ಕಠೋರವಾದ ತಪಶ್ಚರ್ಯೆಯಲ್ಲಿ ನಿರತರಾದರು (೩–೪).

ಏತಸ್ಮಿನ್ನೇವ ಕಾಲೇ ತು ಅಯೋಧ್ಯಾಧಿಪತಿರ್ನೃಪಃ ।
ಅಂಬರೀಷ ಇತಿ ಖ್ಯಾತೋ ಯಷ್ಟುಂ ಸಮುಪಚಕ್ರಮೇ ॥ ೫

ತಸ್ಯ ವೈ ಯಜಮಾನಸ್ಯ ಪಶುಮಿಂದ್ರೋ ಜಹಾರ ಹ ।
ಪ್ರಣಷ್ಟೇ ತು ಪಶೌ ವಿಪ್ರೋ ರಾಜಾನಮಿದಮಬ್ರವೀತ್ ॥ ೬

ಪಶುರದ್ಯ ಹೃತೋ ರಾಜನ್ ಪ್ರಣಷ್ಟಸ್ತವ ದುರ್ನಯಾತ್ ।
ಅರಕ್ಷಿತಾರಂ ರಾಜಾನಂ ಘ್ನಂತಿ ದೋಷಾ ನರೇಶ್ವರ ॥ ೭

ಪ್ರಾಯಶ್ಚಿತ್ತಂ ಮಹದ್ಧ್ಯೇತನ್ನರಂ ವಾ ಪುರುಷರ್ಷಭ ।
ಆನಯಸ್ವ ಪಶುಂ ಶೀಘ್ರಂ ಯಾವತ್ ಕರ್ಮ ಪ್ರವರ್ತತೇ ॥ ೮

ಉಪಾಧ್ಯಾಯವಚಃ ಶ್ರುತ್ವಾ ಸ ರಾಜಾ ಪುರುಷರ್ಷಭ ।
ಅನ್ವಿಯೇಷ ಮಹಾಬುದ್ಧಿಃ ಪಶುಂ ಗೋಭಿಃ ಸಹಸ್ರಶಃ ॥ ೯

ದೇಶಾನ್ ಜನಪದಾಂಸ್ತಾಂಸ್ತಾನ್ನಗರಾಣಿ ವನಾನಿ ಚ ।
ಆಶ್ರಮಾಣಿ ಚ ಪುಣ್ಯಾನಿ ಮಾರ್ಗಮಾಣೋ ಮಹೀಪತಿಃ ॥ ೧೦

---

ಇದೇ ಸಮಯದಲ್ಲಿ ಅಯೋಧ್ಯಾಧಿಪತಿಯಾದ ಅಂಬರೀಷನೆಂಬವನು ಒಂದು ಯಾಗವನ್ನಾರಂಭಿಸಿದನು. ಅವನ ಯಜ್ಞಪಶುವನ್ನು ಇಂದ್ರನು ಅಪಹರಿಸಿದನು ಆಗ ಪುರೋಹಿತನು 'ರಾಜ, ಯಜ್ಞಪಶುವನ್ನು ಯಾರೋ ಅಪಹರಿಸಿದರು. ಇದಕ್ಕೆ ನಿನ್ನ ಅಜಾಗರೂಕತೆಯೇ ಕಾರಣ. ಸರಿಯಾದ ರಕ್ಷಣೆಯನ್ನು ಏರ್ಪಡಿಸದಿದ್ದರೆ ಇಂಥ ದೋಷಗಳು ಸಂಭವಿಸುತ್ತವೆ (೫-೭). ಈಗ ಬಹಳ ದೊಡ್ಡ ಪ್ರಾಯಶ್ಚಿತ್ತವಾಗಬೇಕಾಗುತ್ತದೆ. ಆದ್ದರಿಂದ ಕರ್ಮ ಕಾಲಕ್ಕೆ ಸರಿಯಾಗಿ ಆ ಯಜ್ಞಪಶುವನ್ನಾಗಲಿ ಅದು ದೊರೆಯದಿದ್ದರೆ ನರಪಶುವನ್ನಾಗಲಿ ನೀನು ತರಬೇಕು' ಎಂದು ಹೇಳಿದನು. ಆಗ ಅಂಬರೀಷನು ಸಾವಿರಾರು ಗೋವುಗಳನ್ನು ಕೊಟ್ಟು ಪ್ರತಿಯಾಗಿ ಯಜ್ಞಪಶುವಾಗಲು ಒಬ್ಬ ಮನುಷ್ಯನನ್ನು ಪಡೆಯಲು ಸಾಧ್ಯವೆ ಎಂದು ಹುಡುಕುತ್ತ ಹೊರಟನು (೮-೯) ಆ ರಾಜನು ನಾನಾ ದೇಶಗಳನ್ನೂ ನಗರಗಳನ್ನೂ ಅರಣ್ಯಗಳನ್ನೂ ಪುಣ್ಯಾಶ್ರಮಗಳನ್ನೂ ಸುತ್ತುತ್ತ ಭೃಗುತುಂಗವೆಂಬ ಒಂದು

ಸ ಪುತ್ರಸಹಿತಂ ತಾತ ಸಭಾರ್ಯಂ ರಘುನಂದನ ।
ಭೃಗುತುಂಗೇ ಸಮಾಸೀನಮೃಚೀಕಂ ಸಂದದರ್ಶ ಹ ॥ ೧೧
ತಮುವಾಚ ಮಹಾತೇಜಾಃ ಪ್ರಣಮ್ಯಾಭಿಪ್ರಸಾದ್ಯ ಚ ।
ಬ್ರಹ್ಮರ್ಷಿಂ ತಪಸಾ ದೀಪ್ತಂ ರಾಜರ್ಷಿರಮಿತಪ್ರಭಃ ॥ ೧೨
ಪೃಷ್ಟ್ವಾ ಸರ್ವತ್ರ ಕುಶಲಮೃಚೀಕಂ ತಮಿದಂ ವಚಃ ।
ಗವಾಂ ಶತಸಹಸ್ರೇಣ ವಿಕ್ರೀಣೀಷೇ ಸುತಂ ಯದಿ ॥ ೧೩
ಪಶೋರರ್ಥೇ ಮಹಾಭಾಗ ಕೃತಕೃತ್ಯೋಽಸ್ಮಿ ಭಾರ್ಗವ ।
ಸರ್ವೇ ಪರಿಗತಾ ದೇಶಾ ಯಜ್ಞಿಯಂ ನ ಲಭೇ ಪಶುಮ್ ॥ ೧೪
ದಾತುಮರ್ಹಸಿ ಮೂಲ್ಯೇನ ಸುತಮೇಕಮಿತೋ ಮಮ ।
ಏವಮುಕ್ತೋ ಮಹಾತೇಜಾ ಋಚೀಕಸ್ತ್ವಬ್ರವೀದ್ವಚಃ ॥ ೧೫
ನಾಹಂ ಜ್ಯೇಷ್ಠಂ ನರಶ್ರೇಷ್ಠ ವಿಕ್ರೀಣೀಯಾಂ ಕಥಂಚನ ।
ಋಚೀಕಸ್ಯ ವಚಃ ಶ್ರುತ್ವಾ ತೇಷಾಂ ಮಾತಾ ಮಹಾತ್ಮನಾಮ್ ॥
ಉವಾಚ ನರಶಾರ್ದೂಲಮಂಬರೀಷಂ ತಪಸ್ವಿನೀ ।
ಅವಿಕ್ರೇಯಂ ಸುತಂ ಜ್ಯೇಷ್ಠಂ ಭಗವಾನಾಹ ಭಾರ್ಗವಃ ॥ ೧೭

ಪರ್ವತಶಿಖರಕ್ಕೆ ಬಂದನು ರಘುನಂದನ, ಅಲ್ಲಿ ಋಚೀಕನೆಂಬ ಬ್ರಹ್ಮರ್ಷಿಯು ತಪಸ್ಸನ್ನಾಚರಿಸುತ್ತಿದ್ದನು ರಾಜನು ಅವನಿಗೆ ಅಭಿವಾದನೆಮಾಡಿ ಕುಶಲವನ್ನು ವಿಚಾರಿಸಿದನು (೧೧-೧೨). ಆಮೇಲೆ 'ಭಾರ್ಗವರೆ, ನಾನು ಆರಂಭಿಸಿರುವ ಒಂದು ಯಜ್ಞದಲ್ಲಿ ಪಶುವಾಗತಕ್ಕ ಮನುಷ್ಯನೊಬ್ಬನು ಬೇಕಾಗಿದೆ. ನೀವು ನಿಮ್ಮ ಪುತ್ರನನ್ನು ಮಾರುವುದಾದರೆ ಒಂದು ಲಕ್ಷ ಗೋವುಗಳನ್ನು ಕೊಡುತ್ತೇನೆ ನಾನು ಕೃತಕೃತ್ಯನಾಗುತ್ತೇನೆ. ಎಲ್ಲ ದೇಶಗಳನ್ನು ಇದಕ್ಕಾಗಿ ಹುಡುಕಿದೆ. ಯಜ್ಞಪಶುವು ಸಿಗಲಿಲ್ಲ (೧೩-೧೪). ನೀವು ಒಬ್ಬ ಪುತ್ರನನ್ನು ನನಗೋಸ್ಕರ ದಯವಿಟ್ಟು ವಿಕ್ರಯಿಸಬೇಕು ಎಂದು ನುಡಿದನು. ಆಗ ಋಚೀಕಮುನಿಯು 'ಮಹಾರಾಜ, ನಾನು ಹಿರಿಯ ಮಗನನ್ನು ಎಂದಿಗೂ ವಿಕ್ರಯಿಸಲಾರೆ' ಎಂದನು. ಆಗ (ಮೂವರು) ಪುತ್ರರ ತಾಯಿಯಾದ ಋಚೀಕಮುನಿಪತ್ನಿಯು "ಮಹಾರಾಜ, ಭಗವಾನ್ ಭಾರ್ಗವರು ಹಿರಿಯ ಮಗನನ್ನು ವಿಕ್ರಯಿಸಲಾರೆನೆಂದು ಹೇಳುತ್ತಾರೆ (೧೫-೧೭).

ಮಮಾಪಿ ದಯಿತಂ ವಿದ್ಧಿ ಕನಿಷ್ಠಂ ಶುನಕಂ ನೃಪ ।
ತಸ್ಮಾತ್ ಕನೀಯಸಂ ಪುತ್ರಂ ನ ದಾಸ್ಯೇ ತವ ಪಾರ್ಥಿವ ॥ ೧೮

ಪ್ರಾಯೇಣ ಹಿ ನರಶ್ರೇಷ್ಠ ಜ್ಯೇಷ್ಠಾಃ ಪಿತೃಷು ವಲ್ಲಭಾಃ ।
ಮಾತೄಣಾಂ ಚ ಕನೀಯಾಂಸಸ್ತಸ್ಮಾದ್ರಕ್ಷೇ ಕನೀಯಸಮ್ ॥ ೧೯

ಉಕ್ತವಾಕ್ಯೇ ಮುನೌ ತಸ್ಮಿನ್ ಮುನಿಪತ್ನ್ಯಾಂ ತಥೈವ ಚ ।
ಶುನಃಶೇಪಃ ಸ್ವಯಂ ರಾಮ ಮಧ್ಯಮೋ ವಾಕ್ಯಮಬ್ರವೀತ್॥ ೨೦

ಪಿತಾ ಜ್ಯೇಷ್ಠಮವಿಕ್ರೇಯಂ ಮಾತಾ ಚಾಹ ಕನೀಯಸಮ್ ।
ವಿಕ್ರೀತಂ ಮಧ್ಯಮಂ ಮನ್ಯೇ ರಾಜನ್ ಪುತ್ರಂ ನಯಸ್ವ ಮಾಮ್॥

ಅಥ ರಾಜಾ ಮಹಾನ್ ರಾಮ ವಾಕ್ಯಾಂತೇ ಬ್ರಹ್ಮವಾದಿನಃ ।
ಹಿರಣ್ಯಸ್ಯ ಸುವರ್ಣಸ್ಯ ಕೋಟಿಭೀ ರತ್ನರಾಶಿಭಿಃ ॥ ೨೨

ಗವಾಂ ಶತಸಹಸ್ರೇಣ ಶುನಃಶೇಪಂ ನರೇಶ್ವರಃ ।
ಗೃಹೀತ್ವಾ ಪರಮಪ್ರೀತೋ ಜಗಾಮ ರಘುನಂದನ ॥ ೨೩

---

ನನಗೆ ಕಿರಿಯ ಮಗನಾದ ಶುನಕನಮೇಲೆ ಬಹಳ ಪ್ರೀತಿ. ಆದ್ದರಿಂದ ನಾನು ಕಿರಿಯ ಮಗನನ್ನು ನಿನಗೆ ಕೊಡಲಾರೆ ನೋಡು ಮಹಾರಾಜ, ತಂದೆಯರಿಗೆ ಜ್ಯೇಷ್ಠ ಪುತ್ರರಲ್ಲಿಯೂ ತಾಯಂದಿರಿಗೆ ಕನಿಷ್ಠ ಪುತ್ರರಲ್ಲಿಯೂ ವಿಶೇಷವಾದ ಪ್ರೇಮವಿರುತ್ತದೆ. ಆದ್ದರಿಂದ ನಾನು ಕಿರಿಯ ಮಗನನ್ನು ಉಳಿಸಿಕೊಳ್ಳುತ್ತೇನೆ!" ಎಂದಳು (೧೮-೧೯). ರಾಮ, ಹೀಗೆ ಋಚೀಕನೂ ಅವನ ಪತ್ನಿಯೂ ಹೇಳಲಾಗಿ ಮಧ್ಯಮ ಪುತ್ರನಾದ ಶುನಃಶೇಫನು* ತಾನಾಗಿ ಮುಂದೆ ಬಂದು "ಮಹಾರಾಜ, ನನ್ನ ತಂದೆಯು ಹಿರಿಯಮಗ ನನ್ನು ಮಾರುವುದಿಲ್ಲವೆನ್ನುತ್ತಾನೆ. ನನ್ನ ತಾಯಿಯು ಕಿರಿಯಮಗನನ್ನು ಮಾರುವುದಿಲ್ಲವೆನ್ನುತ್ತಾಳೆ. ನಡುವಿನ ಮಗನಾದ ನನ್ನನ್ನು ಇವರು ಒಟ್ಟಿನಲ್ಲಿ ಮಾರಿದರೆಂದೇ ನಾನು ತಿಳಿಯುತ್ತೇನೆ! ರಾಜ, ನನ್ನನ್ನು ಕರೆದುಕೊಂಡು ಹೋಗು" ಎಂದನು (೨೦-೨೧). ಅನಂತರ ಅಂಬರೀಷನು ಋಚೀಕನಿಗೆ ಒಂದು ಲಕ್ಷ ಗೋವುಗಳನ್ನು ಕೊಟ್ಟನಲ್ಲದೆ ಒಂದು ಕೋಟಿ ಸುವರ್ಣ ನಾಣ್ಯ

---

* ಶುನಃಶೇಪ, ಶುನಃಶೇಫ ಎಂಬ ಎರಡು ಪಾಠಗಳೂ ಉಂಟು.

ಅಂಬರೀಷಸ್ತು ರಾಜರ್ಷೀ ರಥಮಾರೋಪ್ಯ ಸತ್ವರಃ ।
ಶುನಃಶೇಪಂ ಮಹಾತೇಜಾ ಜಗಾಮಾಶು ಮಹಾಯಶಾಃ ॥ ೨೪

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕಷಷ್ಟಿತಮಃ ಸರ್ಗಃ

---

## ದ್ವಿಷಷ್ಟಿತಮಃ ಸರ್ಗಃ

### ಅಂಬರೀಷಯಜ್ಞಃ

ಶುನಃಶೇಪಂ ನರಶ್ರೇಷ್ಠ ಗೃಹೀತ್ವಾ ತು ಮಹಾಯಶಾಃ ।
ವ್ಯಶ್ರಾಮ್ಯತ್ ಪುಷ್ಕರೇ ರಾಜಾ ಮಧ್ಯಾಹ್ನೇ ರಘುನಂದನ ॥ ೧

ತಸ್ಯ ವಿಶ್ರಮಮಾಣಸ್ಯ ಶುನಃಶೇಪೋ ಮಹಾಯಶಾಃ ।
ಪುಷ್ಕರಕ್ಷೇತ್ರಮಾಗಮ್ಯ ವಿಶ್ವಾಮಿತ್ರಂ ದದರ್ಶ ಹ ॥ ೨

---

ಗಳನ್ನೂ ರತ್ನರಾಶಿಗಳನ್ನೂ ಸಮರ್ಪಿಸಿದನು. ರಾಜನಿಗೆ ಬಹಳ ಆನಂದವಾಯಿತು. ಅವನು ಶುನಃಶೇಫನನ್ನು ರಥದಮೇಲೆ ಕುಳ್ಳಿರಿಸಿಕೊಂಡು ಬೇಗನೆ ಅಲ್ಲಿಂದ ಹಿಂದಿರುಗಿದನು" (೨೨-೨೪)

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಅರುವತ್ತೊಂದನೆಯ ಸರ್ಗ

---

## ಸರ್ಗ ೬೨

ಶುನಃಶೇಫನು ತನ್ನನ್ನು ರಕ್ಷಿಸಬೇಕೆಂದು ವಿಶ್ವಾಮಿತ್ರರಲ್ಲಿ ಪ್ರಾರ್ಥಿಸಿಕೊಳ್ಳುವುದು. ವಿಶ್ವಾಮಿತ್ರರು ಎರಡು ಮಂತ್ರಗಳನ್ನು ಅವನಿಗೆ ಉಪದೇಶಿಸುವುದು. ಇಂದ್ರನು ಪ್ರಸನ್ನನಾಗಿ ಶುನಃಶೇಫನನ್ನು ರಕ್ಷಿಸುವುದು.

"ರಘುನಂದನ, ಅಂಬರೀಷನು ಶುನಃಶೇಫನನ್ನು ಕರೆದುಕೊಂಡು ಹೋಗುತ್ತಿರುವಾಗ ಮಾರ್ಗದಲ್ಲಿ ಪುಷ್ಕರ ಕ್ಷೇತ್ರದಲ್ಲಿ ಬಂದು ಮಧ್ಯಾಹ್ನದಲ್ಲಿ ವಿಶ್ರಮಿಸಿಕೊಂಡನು. ಅಲ್ಲಿ ಶುನಃಶೇಫನಿಗೆ ವಿಶ್ವಾಮಿತ್ರಮುನಿಗಳ ದರ್ಶನ

ತಪ್ಯಂತಮೃಷಿಭಿಃ ಸಾರ್ಧಂ ಮಾತುಲಂ ಪರಮಾತುರಃ ।
ವಿವರ್ಣವದನೋ ದೀನಸ್ತೃಷ್ಣಯಾ ಚ ಶ್ರಮೇಣ ಚ ॥ ೩

ಪಪಾತಾಂಕೇ ಮುನೇರಾಶು ವಾಕ್ಯಂ ಚೇದಮುವಾಚ ಹ ।
ನ ಮೇಽಸ್ತಿ ಮಾತಾ ನ ಪಿತಾ ಜ್ಞಾತಯೋ ಬಾಂಧವಾಃ ಕುತಃ ॥ ೪

ತ್ರಾತುಮರ್ಹಸಿ ಮಾಂ ಸೌಮ್ಯ ಧರ್ಮೇಣ ಮುನಿಪುಂಗವ ।
ತ್ರಾತಾ ತ್ವಂ ಹಿ ಮುನಿಶ್ರೇಷ್ಠ ಸರ್ವೇಷಾಂ ತ್ವಂ ಹಿ ಭಾವನಃ ॥ ೫

ರಾಜಾ ಚ ಕೃತಕಾರ್ಯಃ ಸ್ಯಾದಹಂ ದೀರ್ಘಾಯುರವ್ಯಯಃ ।
ಸ್ವರ್ಗಲೋಕಮುಪಾಶ್ನೀಯಾಂ ತಪಸ್ತಪ್ತ್ವಾ ಹ್ಯನುತ್ತಮಮ್ ॥ ೬

ತ್ವಂ ಮೇ ನಾಥೋ ಹ್ಯನಾಥಸ್ಯ ಭವ ಭವ್ಯೇನ ಚೇತಸಾ ।
ಪಿತೇವ ಪುತ್ರಂ ಧರ್ಮಾತ್ಮಂಸ್ತ್ರಾತುಮರ್ಹಸಿ ಕಿಲ್ಬಿಷಾತ್ ॥ ೭

---

ವಾಯಿತು (೧-೨). ವಿಶ್ವಾಮಿತ್ರರು ಆತನ ಸೋದರಮಾವ * ಶುನಃಶೇಫನು ಚಿಂತೆ, ಮಾರ್ಗಾಯಾಸ, ಬಾಯಾರಿಕೆಗಳಿಂದ ಕಂಗೆಟ್ಟು ದೀನನಾಗಿದ್ದನು. ಮುಖವು ಬಾಡಿಹೋಗಿತ್ತು ಋಷಿಗಳೊಡನೆ ತಪಸ್ಸುಮಾಡುತ್ತಿದ್ದ ವಿಶ್ವಾಮಿತ್ರರನ್ನು ಕಂಡೊಡನೆ ಅವನ ದುಃಖವು ಉಮ್ಮಳಿಸಿತು. ಅವನು ಬದುಕುವ ಹಂಬಲದಿಂದ ಓಡಿಹೋಗಿ ವಿಶ್ವಾಮಿತ್ರಮುನಿಗಳ ತೊಡೆಯಮೇಲೆ ಬಿದ್ದು "ಮುನಿಗಳೆ, ನನ್ನ ಪಾಲಿಗೆ ತಾಯಿ ಇಲ್ಲ ತಂದೆ ಇಲ್ಲ ಇನ್ನು ಬಂಧು ಬಳಗಗಳು ಎಲ್ಲಿಂದ ಬರಬೇಕು? (೩-೪) ನೀವು ನನ್ನನ್ನು ಧರ್ಮದೃಷ್ಟಿ ಯಿಂದ ಕಾಪಾಡಬೇಕು. ಶರಣಾಗತರೆಲ್ಲರನ್ನೂ ನೀವು ಕಾಪಾಡತಕ್ಕವರು. ಎಲ್ಲರಿಗೂ ಹಿತವನ್ನು ಬಯಸತಕ್ಕವರು. ಈ ರಾಜನ ಕಾರ್ಯವೂ ನೆರವೇರಬೇಕು. ನಾನೂ ಉಳಿದುಕೊಂಡು ದೀರ್ಘಾಯುವಾಗಬೇಕು. ನಾನೂ ಬದುಕಿದ್ದರೆ ಶ್ರೇಷ್ಠವಾದ ತಪಸ್ಸನ್ನಾಚರಿಸಿ ಸದ್ಗತಿಯನ್ನು ಕಂಡುಕೊಳ್ಳುತ್ತೇನೆ (೫-೬). ನೀವು ದೊಡ್ಡ ಮನಸ್ಸು ಮಾಡಿ ದಿಕ್ಕಿಲ್ಲದ ನನಗೆ ದಿಕ್ಕಾಗಬೇಕು. ಪುಣ್ಯಾತ್ಮರೆ, ನಿಮ್ಮ ಮಗನೆಂದು ತಿಳಿದು

---

* ವಿಶ್ವಾಮಿತ್ರರ ಅಕ್ಕ ಸತ್ಯವತಿಯನ್ನು ಋಚೀಕಮುನಿಗೆ ಕೊಟ್ಟು ವಿವಾಹ ವಾಗಿತ್ತು. ಋಚೀಕಮುನಿಯ ಪುತ್ರ ಶುನಃಶೇಫ.

ತಸ್ಯ ತದ್ವಚನಂ ಶ್ರುತ್ವಾ ವಿಶ್ವಾಮಿತ್ರೋ ಮಹಾತಪಾಃ ।
ಸಾಂತಯಿತ್ವಾ ಬಹುವಿಧಂ ಪುತ್ರಾನಿದಮುವಾಚ ಹ ॥ ೮

ಯತ್ಕೃತೇ ಪಿತರಃ ಪುತ್ರಾನ್ ಜನಯಂತಿ ಶುಭಾರ್ಥಿನಃ ।
ಪರಲೋಕಹಿತಾರ್ಥಾಯ ತಸ್ಯ ಕಾಲೋಽಯಮಾಗತಃ ॥ ೯

ಅಯಂ ಮುನಿಸುತೋ ಬಾಲೋ ಮತ್ತಃ ಶರಣಮಿಚ್ಛತಿ ।
ಅಸ್ಯ ಜೀವಿತಮಾತ್ರೇಣ ಪ್ರಿಯಂ ಕುರುತ ಪುತ್ರಕಾಃ ॥ ೧೦

ಸರ್ವೇ ಸುಕೃತಕರ್ಮಾಣಃ ಸರ್ವೇ ಧರ್ಮಪರಾಯಣಾಃ ।
ಪಶುಭೂತಾ ನರೇಂದ್ರಸ್ಯ ತೃಪ್ತಿಮಗ್ನೇಃ ಪ್ರಯಚ್ಛತ ॥ ೧೧

ನಾಥವಾಂಶ್ಚ ಶುನಃಶೇಪೋ ಯಜ್ಞಶ್ಚಾವಿಘ್ನಿತೋ ಭವೇತ್ ।
ದೇವತಾಸ್ತರ್ಪಿತಾಶ್ಚ ಸ್ಯುರ್ಮಮ ಚಾಪಿ ಕೃತಂ ವಚಃ ॥ ೧೨

ಮುನೇಸ್ತು ವಚನಂ ಶ್ರುತ್ವಾ ಮಧುಷ್ಯಂದಾದಯಃ ಸುತಾಃ ।
ಸಾಭಿಮಾನಂ ನರಶ್ರೇಷ್ಠ ಸಲೀಲಮಿದಮಬ್ರುವನ್ ॥ ೧೩

---

ನನ್ನನ್ನು ವಿಪತ್ತಿನಿಂದ ಪಾರುಮಾಡಿರಿ" ಎಂದು ಗೋಳಾಡಿದನು. ಆಗ ವಿಶ್ವಾಮಿತ್ರಮುನಿಗಳು ಅವನಿಗೆ ಬಹುವಿಧದಿಂದ ಸಮಾಧಾನ ವನ್ನು ಹೇಳಿ ತಮ್ಮ ಮಕ್ಕಳನ್ನು ಕರೆದು ಹೀಗೆಂದರು (೭-೮): "ಪುತ್ರರೆ, ತಂದೆತಾಯಿಗಳು ಪರಲೋಕಹಿತಕ್ಕಾಗಿ ಸಂತಾನವನ್ನು ಬಯಸುತ್ತಾರೆ. ಅಂಥ ಸಂದರ್ಭ ಈಗ ಒದಗಿಬಂದಿದೆ. ಈ ಹುಡುಗನು ಒಬ್ಬ ಮುನಿಪುತ್ರ. ಈತನು ನನ್ನನ್ನು ಮರೆಹೊಕ್ಕಿದ್ದಾನೆ ಮಕ್ಕಳೆ, ಇವನಿ ಗೋಸ್ಕರ ಪ್ರಾಣವನ್ನು ಕೊಟ್ಟು ನನಗೆ ಸಂತೋಷವನ್ನುಂಟುಮಾಡಿರಿ (೯-೧೦). ನೀವೆಲ್ಲರೂ ಪುಣ್ಯವಂತರು; ಧರ್ಮಪರಾಯಣರು. ನೀವು ಅಂಬರೀಷರಾಜನ ಯಾಗದಲ್ಲಿ ಪಶುಗಳಾಗಿ ಅಗ್ನಿದೇವನನ್ನು ತೃಪ್ತಿಗೊಳಿಸಿರಿ. ಶುನಃಶೇಫನಿಗೆ ಅಭಯವನ್ನು ಕೊಟ್ಟು ರಕ್ಷಿಸತಕ್ಕವರಿದ್ದಾರೆ ಎಂದಾಗಲಿ. ಯಜ್ಞವೂ ನಿರ್ವಿಘ್ನವಾಗಿ ನೆರವೇರಲಿ. ದೇವತೆಗಳು ತೃಪ್ತರಾಗುವವರು. ನನ್ನ ಮಾತನ್ನು ಪಾಲಿಸಿರಿ" (೧೧-೧೨). ವಿಶ್ವಾಮಿತ್ರರ ಈ ಮಾತಿಗೆ ಮಧುಷ್ಯಂದ ಮುಂತಾದ ಅವರ ಪುತ್ರರು ಅಹಂಕಾರದಿಂದ ಗೇಲಿ ಮಾಡುತ್ತ

ಕಥಮಾತ್ಮಸುತಾನ್ ಹಿತ್ವಾ ತ್ರಾಯಸೇಽನ್ಯಸುತಂ ವಿಭೋ ।
ಅಕಾರ್ಯಮಿವ ಪಶ್ಯಾಮಃ ಶ್ವಮಾಂಸಮಿವ ಭೋಜನೇ ॥ ೧೪

ತೇಷಾಂ ತದ್ವಚನಂ ಶ್ರುತ್ವಾ ಪುತ್ರಾಣಾಂ ಮುನಿಪುಂಗವಃ ।
ಕ್ರೋಧಸಂರಕ್ತನಯನೋ ವ್ಯಾಹರ್ತುಮುಪಚಕ್ರಮೇ ॥ ೧೫

ನಿಃಸಾಧ್ವಸಮಿದಂ ಪ್ರೋಕ್ತಂ ಧರ್ಮಾದಪಿ ವಿಗರ್ಹಿತಮ್ ।
ಅತಿಕ್ರಮ್ಯ ತು ಮದ್ವಾಕ್ಯಂ ದಾರುಣಂ ರೋಮಹರ್ಷಣಮ್ ॥ ೧೬

ಶ್ವಮಾಂಸಭೋಜಿನಃ ಸರ್ವೇ ವಾಸಿಷ್ಠಾ ಇವ ಜಾತಿಷು ।
ಪೂರ್ಣಂ ವರ್ಷಸಹಸ್ರಂ ತು ಪೃಥಿವ್ಯಾಮನುವತ್ಸ್ಯಥ ॥ ೧೭

ಕೃತ್ವಾ ಶಾಪಸಮಾಯುಕ್ತಾನ್ ಪುತ್ರಾನ್ ಮುನಿವರಸ್ತದಾ ।
ಶುನಃಶೇಪಮುವಾಚಾರ್ತಂ ಕೃತ್ವಾ ರಕ್ಷಾಂ ನಿರಾಮಯಮ್ ॥ ೧೮

ಪವಿತ್ರಪಾಶೈರಾಸಕ್ತೋ ರಕ್ತಮಾಲ್ಯಾನುಲೇಪನಃ ।
ವೈಷ್ಣವಂ ಯೂಪಮಾಸಾದ್ಯ ವಾಗ್ಭಿರಗ್ನಿಮುದಾಹರ ॥ ೧೯

---

"ಸ್ವಾಮಿ, ನಿಮ್ಮ ಮಕ್ಕಳನ್ನು ಬಲಿಕೊಟ್ಟು ಇನ್ನೊಬ್ಬರ ಮಗನನ್ನು ಕಾಪಾಡುತ್ತೀರಾ? ಇದು, ಒಳ್ಳೆಯ ಆಹಾರವಿರುವಾಗ ಅದನ್ನು ಬಿಟ್ಟು ನಾಯಿ ಮಾಂಸವನ್ನು ತಿಂದಹಾಗೆ!" ಎಂದು ಹೇಳಿಬಿಟ್ಟರು (೧೩-೧೪). ಅವರ ಮಾತನ್ನು ಕೇಳಿ ವಿಶ್ವಾಮಿತ್ರರ ಕಣ್ಣು ಕ್ರೋಧದಿಂದ ಕೆಂಡವಾಯಿತು. "ಎಲೈ, ನನ್ನೆದುರಿಗೆ ನಿರ್ಭಯವಾಗಿ ಇಂಥ ಮಾತನ್ನಾಡುವಿರಾ? ನನ್ನ ಮಾತನ್ನು ಮೀರುವುದು ಧರ್ಮಬಾಹಿರ. ಇದು ಕರ್ಣಕಠೋರವಾದ ಮೈನವಿರೇಳಿಸುವಂಥ ಉತ್ತರ. ಆ ವಸಿಷ್ಠನ ಮಕ್ಕಳಂತೆ ನೀವೂ ಶ್ವಪಚರಾಗಿ ಒಂದು ಸಾವಿರ ವರ್ಷ ನಾಯಿಮಾಂಸವನ್ನು ತಿನ್ನುತ್ತಿರಿ!" ಎಂದು ಶಪಿಸಿದರು (೧೫-೧೭). ಅನಂತರ ಖಿನ್ನನಾದ ಶುನಃಶೇಫನಿಗೆ ಸಕಲ ಕಷ್ಟಗಳನ್ನೂ ಪರಿಹರಿಸುವ ಮಂತ್ರರಕ್ಷೆಯನ್ನು ಮಾಡಿ "ಮಗು, ಅಂಬರೀಷನ ಯಾಗಕಾಲದಲ್ಲಿ ನಿನಗೆ ಕೆಂಪುಮಾಲೆಯನ್ನು ಹಾಕಿ ಕೆಂಪುಗಂಧವನ್ನು ಹಚ್ಚಿ ಪವಿತ್ರಪಾಶಗಳಿಂದ ವೈಷ್ಣವಯೂಪಸ್ತಂಭಕ್ಕೆ ನಿನ್ನನ್ನು ಕಟ್ಟುತ್ತಾರೆ.

ಇಮೇ ತು ಗಾಥೇ ದ್ವೇ ದಿವ್ಯೇ ಗಾಯೇಥಾ ಮುನಿಪುತ್ರಕ ।
ಅಂಬರೀಷಸ್ಯ ಯಜ್ಞೇಽಸ್ಮಿಂಸ್ತತಃ ಸಿದ್ಧಿಮವಾಪ್ಸ್ಯಸಿ ॥ ೨೦
ಶುನಃಶೇಫೊ ಗೃಹೀತ್ವಾ ತು ತೇ ಗಾಥೇ ಸುಸಮಾಹಿತಃ ।
ತ್ವರಯಾ ರಾಜಸಿಂಹಂ ತಮಂಬರೀಷಮುವಾಚ ಹ ॥ ೨೧
ರಾಜಸಿಂಹ ಮಹಾಸತ್ತ್ವ ಶೀಘ್ರಂ ಗಚ್ಛಾವಹೇ ಸದಃ ।
ನಿರ್ವರ್ತಯಸ್ವ ರಾಜೇಂದ್ರ ದೀಕ್ಷಾಂ ಚ ಸಮುಪಾವಿಶ ॥ ೨೨
ತದ್ವಾಕ್ಯಮೃಷಿಪುತ್ರಸ್ಯ ಶ್ರುತ್ವಾ ಹರ್ಷಸಮುತ್ಸುಕಃ ।
ಜಗಾಮ ನೃಪತಿಃ ಶೀಘ್ರಂ ಯಜ್ಞವಾಟಮತಂದ್ರಿತಃ ॥ ೨೩
ಸದಸ್ಯಾನುಮತೇ ರಾಜಾ ಪವಿತ್ರಕೃತಲಕ್ಷಣಮ್ ।
ಪಶುಂ ರಕ್ತಾಂಬರಂ ಕೃತ್ವಾ ಯೂಪೇ ತಂ ಸಮಬಂಧಯತ್ ॥ ೨೪
ಸ ಬದ್ಧೋ ವಾಗ್ಭಿರಗ್ರ್ಯಾಭಿರಭಿತುಷ್ಟಾವ ವೈ ಸುರೌ ।
ಇಂದ್ರಮಿಂದ್ರಾನುಜಂ ಚೈವ ಯಥಾವನ್ಮುನಿಪುತ್ರಕಃ ॥ ೨೫
ತತಃ ಪ್ರೀತಃ ಸಹಸ್ರಾಕ್ಷೋ ರಹಸ್ಯಸ್ತುತಿತರ್ಪಿತಃ ।
ದೀರ್ಘಮಾಯುಸ್ತದಾ ಪ್ರಾದಾಚ್ಛುನಃಶೇಪಾಯ ರಾಘವ ॥ ೨೬

---

ಆ ಸಮಯದಲ್ಲಿ ನೀನು ಅಗ್ನಿಗೆ ಅಭಿಮುಖನಾಗಿ ನಿಂತು ಈ ಎರಡು ದಿವ್ಯ ಮಂತ್ರಗಳನ್ನು ಹಾಡು. ನಿನ್ನ ಕಾರ್ಯಸಿದ್ಧಿಯಾಗುವುದು” ಎಂದು ನುಡಿದು ಆ ಮಂತ್ರಗಳನ್ನು ಉಪದೇಶಿಸಿದರು (೧೮-೨೦). ಶುನಃಶೇಫನು ಏಕಾಗ್ರತೆಯಿಂದ ಅವೆರಡು ಮಂತ್ರಗಳ ಉಪದೇಶವನ್ನು ಪಡೆದು ಅಂಬರೀಷರಾಜನ ಸಮೀಪಕ್ಕೆ ತ್ವರೆಯಿಂದ ಹೋದನು. ರಾಜನನ್ನು ಕುರಿತು “ಮಹಾರಾಜ, ಇನ್ನು ಬೇಗನೆ ಹೊರಡು. ಯಜ್ಞಸದಸ್ಸಿಗೆ ಹೋಗೋಣ ಯಜ್ಞವನ್ನು ನೆರವೇರಿಸು. ದೀಕ್ಷೆಯನ್ನು ಸ್ವೀಕರಿಸು” ಎಂದನು (೨೧-೨೨) ಋಷಿಪುತ್ರನ ನುಡಿಯನ್ನು ಕೇಳಿ ಅಂಬರೀಷನು ಆನಂದೋತ್ಸಾಹಗಳಿಂದ ಯಜ್ಞಶಾಲೆಗೆ ಹೋಗಿ ಸೇರಿದನು. ಋತ್ವಿಜರ ಒಪ್ಪಿಗೆಯಂತೆ ಶುನಃಶೇಫನು ಪಶುವಾದನು. ರಾಜನು ಅವನಿಗೆ ಕೆಂಪುಬಟ್ಟೆಯನ್ನುಡಿಸಿ ಪವಿತ್ರದರ್ಭೆಗಳಿಂದ ಯೂಪಸ್ತಂಭಕ್ಕೆ ಕಟ್ಟಿದನು (೨೩-೨೪). ಆಗ ಆ ಮುನಿಪುತ್ರನು ದಿವ್ಯ ಮಂತ್ರಗಳಿಂದ ಯಥಾವತ್ತಾಗಿ ಇಂದ್ರ ಉಪೇಂದ್ರ ಎಂಬ ದೇವತೆಗಳನ್ನು

ಸ ಚ ರಾಜಾ ನರಶ್ರೇಷ್ಠ ಯಜ್ಞಸ್ಯಾಂತಮವಾಪ್ತವಾನ್ ।
ಫಲಂ ಬಹುಗುಣಂ ರಾಮ ಸಹಸ್ರಾಕ್ಷಪ್ರಸಾದಜಮ್ ॥ ೨೭

ವಿಶ್ವಾಮಿತ್ರೋಽಪಿ ಧರ್ಮಾತ್ಮಾ ಭೂಯಸ್ತೇಪೇ ಮಹಾತಪಾಃ ।
ಪುಷ್ಕರೇಷು ನರಶ್ರೇಷ್ಠ ದಶವರ್ಷಶತಾನಿ ಚ ॥ ೨೮

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ದ್ವಿಷಷ್ಟಿತಮಃ ಸರ್ಗಃ



ಸ್ತೋತ್ರಮಾಡಿದನು. ವಿಶ್ವಾಮಿತ್ರರು ಉಪದೇಶಿಸಿದ ಆ ರಹಸ್ಯಮಂತ್ರಗಳಿಂದ ಸ್ತುತಿಸಲು, ಇಂದ್ರ ಉಪೇಂದ್ರರು ಪ್ರಸನ್ನರಾದರು. ಇಂದ್ರನು ಶುನಃಶೇಫನಿಗೆ ದೀರ್ಘವಾದ ಆಯುಸ್ಸನ್ನು ಅನುಗ್ರಹಿಸಿದನು * (೨೫-೨೬). ಶ್ರೀರಾಮ, ಇಂದ್ರಾನುಗ್ರಹದಿಂದ ಅಂಬರೀಷನಿಗೆ ನಾಂಗವಾಗಿ ಯಜ್ಞವನ್ನು ನೆರವೇರಿಸಿದ ಫಲವು ದೊರಕಿತು. ಧರ್ಮಾತ್ಮರಾದ ವಿಶ್ವಾಮಿತ್ರರು ಪುಷ್ಕರ ಕ್ಷೇತ್ರದಲ್ಲಿ ಪುನಃ ಒಂದು ಸಾವಿರ ವರ್ಷಗಳವರೆಗೆ ಮಹತ್ತರವಾದ ತಪಸ್ಸನ್ನಾಚರಿಸಿದರು" (೨೭-೨೮).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಅರುವತ್ತೆರಡನೆಯ ಸರ್ಗ



---

* ಅನುಬಂಧವನ್ನು ನೋಡಿ.

## ತ್ರಿಷಷ್ಟಿತಮಃ ಸರ್ಗಃ

### ಮೇನಕಾನಿರ್ವಾಸಃ

ಪೂರ್ಣೇ ವರ್ಷಸಹಸ್ರೇ ತು ವ್ರತಸ್ನಾತಂ ಮಹಾಮುನಿಮ್ ।
ಅಭ್ಯಾಗಚ್ಛನ್ ಸುರಾಃ ಸರ್ವೇ ತಪಃಫಲಚಿಕೀರ್ಷವಃ ॥ ೧

ಅಬ್ರವೀತ್ ಸುಮಹಾತೇಜಾ ಬ್ರಹ್ಮಾ ಸುರುಚಿರಂ ವಚಃ ।
ಋಷಿಸ್ತ್ವಮಸಿ ಭದ್ರಂ ತೇ ಸ್ವಾರ್ಜಿತೈಃ ಕರ್ಮಭಿಃ ಶುಭೈಃ ॥ ೨

ತಮೇವಮುಕ್ತ್ವಾ ದೇವೇಶಸ್ತ್ರಿದಿವಂ ಪುನರಭ್ಯಗಾತ್ ।
ವಿಶ್ವಾಮಿತ್ರೋ ಮಹಾತೇಜಾ ಭೂಯಸ್ತೇಪೇ ಮಹತ್ತಪಃ ॥ ೩

ತತಃ ಕಾಲೇನ ಮಹತಾ ಮೇನಕಾ ಪರಮಾಪ್ಸರಾಃ ।
ಪುಷ್ಕರೇಷು ನರಶ್ರೇಷ್ಠ ಸ್ನಾತುಂ ಸಮುಪಚಕ್ರಮೇ ॥ ೪

## ಸರ್ಗ ೬೩

### ವಿಶ್ವಾಮಿತ್ರರಿಗೆ ಋಷಿತ್ವಪ್ರಾಪ್ತಿ ; ಮೇನಕಾ ಪ್ರಸಂಗ ; ಮಹರ್ಷಿತ್ವಪ್ರಾಪ್ತಿ.

ಶತಾನಂದರು ಹೇಳಿದರು: "ಶ್ರೀರಾಮ, ಪುನಃ ಒಂದು ಸಾವಿರ ವರ್ಷಗಳು ಕಳೆದವು. ತಪೋನಿಯಮವು ಪೂರ್ಣವಾದ್ದರಿಂದ ವಿಶ್ವಾಮಿತ್ರ ಮುನಿಗಳು ವ್ರತಸ್ನಾನವನ್ನು ಮಾಡಿದರು. ಆಗ ತಪಸ್ಸಿಗೆ ಫಲವನ್ನು ಕೊಡುವುದಕ್ಕಾಗಿ ಬ್ರಹ್ಮಾದಿದೇವತೆಗಳು ಪ್ರತ್ಯಕ್ಷರಾದರು (೧). ಮಹಾತೇಜಸ್ವಿಯಾದ ಬ್ರಹ್ಮನು 'ವಿಶ್ವಾಮಿತ್ರ, ನೀನು ಮಾಡಿದ ಶುಭ ಕರ್ಮಗಳಿಂದ ಋಷಿಯಾಗಿದ್ದೀಯೆ. ನಿನಗೆ ಮಂಗಳವಾಗಲಿ' ಎಂದು ನುಡಿದು ದೇವತೆಗಳೊಡನೆ ಸ್ವರ್ಗಕ್ಕೆ ತೆರಳಿದನು. ವಿಶ್ವಾಮಿತ್ರಋಷಿಗಳು ಅಸಂತುಷ್ಟರಾಗಿ ಮತ್ತೆ ಘೋರತಪಸ್ಸಿನಲ್ಲಿ ಮಗ್ನರಾದರು (೨-೩). ದೀರ್ಘಕಾಲವು ಕಳೆಯಿತು. ಒಂದು ದಿನ ಮೇನಕೆ ಎಂಬ ಅಪ್ಸರೆಯು ಪುಷ್ಕರತೀರ್ಥಕ್ಕೆ

**ತಾಂ ದದರ್ಶ ಮಹಾತೇಜಾ ಮೇನಕಾಂ ಕುಶಿಕಾತ್ಮಜಃ ।**
**ರೂಪೇಣಾಪ್ರತಿಮಾಂ ತತ್ರ ವಿದ್ಯುತಂ ಜಲದೇ ಯಥಾ ॥** ೫
**ದೃಷ್ಟ್ವಾ ಕಂದರ್ಪವಶಗೋ ಮುನಿಸ್ತಾಮಿದಮಬ್ರವೀತ್ ।**
**ಅಪ್ಸರಃ ಸ್ವಾಗತಂ ತೇಽಸ್ತು ವಸ ಚೇಹ ಮಮಾಶ್ರಮೇ ॥** ೬
**ಅನುಗೃಹ್ಣೀಷ್ವ ಭದ್ರಂ ತೇ ಮದನೇನ ಸುಮೋಹಿತಮ್ ।**
**ಇತ್ಯುಕ್ತಾ ಸಾ ವರಾರೋಹಾ ತತ್ರ ವಾಸಮಥಾಕರೋತ್ ॥** ೭
**ತಸ್ಯಾಂ ವಸಂತ್ಯಾಂ ವರ್ಷಾಣಿ ಪಂಚ ಪಂಚ ಚ ರಾಘವ ।**
**ವಿಶ್ವಾಮಿತ್ರಾಶ್ರಮೇ ತಸ್ಮಿನ್ ಸುಖೇನ ವ್ಯತಿಚಕ್ರಮುಃ ॥** ೮
**ಅಥ ಕಾಲೇ ಗತೇ ತಸ್ಮಿನ್ ವಿಶ್ವಾಮಿತ್ರೋ ಮಹಾಮುನಿಃ ।**
**ಸವ್ರೀಡ ಇವ ಸಂವೃತ್ತಶ್ಚಿಂತಾಶೋಕಪರಾಯಣಃ ॥** ೯
**ಬುದ್ಧಿರ್ಮುನೇಃ ಸಮುತ್ಪನ್ನಾ ಸಾಮರ್ಷಾ ರಘುನಂದನ ।**
**ಸರ್ವಂ ಸುರಾಣಾಂ ಕರ್ಮೈತತ್ತಪೋಽಪಹರಣಂ ಮಹತ್ ॥** ೧೦
**ಅಹೋರಾತ್ರಾಪದೇಶೇನ ಗತಾಃ ಸಂವತ್ಸರಾ ದಶ ।**
**ಕಾಮಮೋಹಾಭಿಭೂತಸ್ಯ ವಿಘ್ನೋಽಯಂ ಪ್ರತ್ಯುಪಸ್ಥಿತಃ ॥** ೧೧

---

ಬಂದು ಸ್ನಾನಮಾಡುತ್ತಿದ್ದಳು ಅವಳು ಅಪ್ರತಿಮ ಸುಂದರಿ. ಆ ಮೇನಕೆಯು ಮೇಘಮಧ್ಯದಲ್ಲಿ ಮಿಂಚಿನಂತೆ, ನೀರಿನಲ್ಲಿ ಸುಳಿದಾಡುತ್ತ ಸ್ನಾನಮಾಡು ತ್ತಿರುವುದನ್ನು ವಿಶ್ವಾಮಿತ್ರರು ಕಂಡರು (೪-೫). ಮುನಿಗಳು ಕಾಮವಶ ರಾದರು. ಅವರು 'ಅಪ್ಸರೆ, ನಿನಗೆ ಸ್ವಾಗತ. ನೀನು ನನ್ನ ಆಶ್ರಮದಲ್ಲಿ ಇರಬಹುದಲ್ಲ! ಕಾಮಮೋಹಿತನಾದ ನನ್ನನ್ನು ಅನುಗ್ರಹಿಸು. ನಿನಗೆ ಶುಭವಾಗಲಿ' ಎಂದರು. ಆ ಸುಂದರಿಯು ಅದಕ್ಕೆ ಒಪ್ಪಿ ವಿಶ್ವಾಮಿತ್ರರ ಆಶ್ರಮದಲ್ಲಿ ನೆಲೆಸಿದಳು (೬-೭). ರಾಘವ, ಅಲ್ಲಿ ಸುಖವಾಗಿ ಹತ್ತು ವರ್ಷ ಗಳು ಕಳೆದವು. ಆಮೇಲೆ ವಿಶ್ವಾಮಿತ್ರಮುನಿಗಳಿಗೆ ತಮ್ಮ ಕೃತ್ಯಕ್ಕಾಗಿ ಲಜ್ಜೆಯಾಯಿತು. ಚಿಂತೆ ಶೋಕಗಳು ಆವರಿಸಿದವು (೮-೯). ಹಾಗೆಯೇ ಕೋಪವು ಅಂಕುರಿಸಿತು. 'ಆಹಾ! ಇದೆಲ್ಲವೂ ದೇವತೆಗಳ ಚೇಷ್ಟೆ! ನನ್ನ ತಪಸ್ಸಿಗೆ ಮಹತ್ತರವಾದ ಅಡ್ಡಿಯನ್ನೊಡ್ಡಿದರು. ಈ ಹಗಲು—ಈ ರಾತ್ರಿ ಎನ್ನುತ್ತ ಹತ್ತು ವರ್ಷಗಳೇ ಕಳೆದುಹೋದವು! ನಾನು ಕಾಮಮೋಹಗಳಿಗೆ

ವಿನಿಃಶ್ವಸನ್ ಮುನಿವರಃ ಪಶ್ಚಾತ್ತಾಪೇನ ದುಃಖಿತಃ ।
ಭೀತಾಮಪ್ಸರಸಂ ದೃಷ್ಟ್ವಾ ವೇಪಂತೀಂ ಪ್ರಾಂಜಲಿಂ ಸ್ಥಿತಾಮ್ ॥

ಮೇನಕಾಂ ಮಧುರೈರ್ವಾಕ್ಯೈರ್ವಿಸೃಜ್ಯ ಕುಶಿಕಾತ್ಮಜಃ ।
ಉತ್ತರಂ ಪರ್ವತಂ ರಾಮ ವಿಶ್ವಾಮಿತ್ರೋ ಜಗಾಮ ಹ ॥ ೧೩

ಸ ಕೃತ್ವಾ ನೈಷ್ಠಿಕೀಂ ಬುದ್ಧಿಂ ಜೇತುಕಾಮೋ ಮಹಾತಪಾಃ ।
ಕೌಶಿಕೀತೀರಮಾಸಾದ್ಯ ತಪಸ್ತೇಪೇ ಸುದಾರುಣಮ್ ॥ ೧೪

ತಸ್ಯ ವರ್ಷಸಹಸ್ರಾಣಿ ಘೋರಂ ತಪ ಉಪಾಸತಃ ।
ಉತ್ತರೇ ಪರ್ವತೇ ರಾಮ ದೇವತಾನಾಮಭೂದ್ಭಯಮ್ ॥ ೧೫

ಅಮಂತ್ರಯನ್ ಸಮಾಗಮ್ಯ ಸರ್ವೇ ಸರ್ಷಿಗಣಾಃ ಸುರಾಃ ।
ಮಹರ್ಷಿಶಬ್ದಂ ಲಭತಾಂ ಸಾಧ್ವಯಂ ಕುಶಿಕಾತ್ಮಜಃ ॥ ೧೬

ದೇವತಾನಾಂ ವಚಃ ಶ್ರುತ್ವಾ ಸರ್ವಲೋಕಪಿತಾಮಹಃ ।
ಅಬ್ರವೀನ್ಮಧುರಂ ವಾಕ್ಯಂ ವಿಶ್ವಾಮಿತ್ರಂ ತಪೋಧನಮ್ ॥ ೧೭

---

ಒಳಗಾಗಿ ಇಂಥ ವಿಘ್ನವನ್ನು ತಂದುಕೊಂಡೆ' (೧೦-೧೧) ಎಂದು ನುಡಿದು ನಿಟ್ಟುಸಿರುಬಿಡುತ್ತ ಪಶ್ಚಾತ್ತಾಪದಿಂದ ತಳಮಳಿಸಿದರು. ಮೇನಕೆಯು ಹೆದರಿ ನಡುಗಿಹೋದಳು. ಕೈಮುಗಿದುಕೊಂಡು ಭಯದಿಂದ ಕಂಪಿಸುತ್ತ ನಿಂತಳು. ವಿಶ್ವಾಮಿತ್ರಮುನಿಗಳು ಮೃದುವಾದ ಮಾತುಗಳಿಂದ ಅವಳಿಗೆ ಸಮಾಧಾನ ವನ್ನು ಹೇಳಿಕಳುಹಿಸಿ ಉತ್ತರದಿಕ್ಕಿನಲ್ಲಿರುವ ಹಿಮಾಲಯಪರ್ವತದ ಕಡೆಗೆ ಹೊರಟುಹೋದರು (೧೨-೧೩). ಇನ್ನು ಕಾಮವನ್ನು ಗೆಲ್ಲುತ್ತೇನೆಂದು ದೃಢನಿಶ್ಚಯದಿಂದ ಕೌಶಿಕೀನದಿಯ ತೀರದಲ್ಲಿ ದಾರುಣವಾದ ತಪಸ್ಸ ನ್ನಾರಂಭಿಸಿದರು. ರಾಮ, ಮತ್ತೆ ಒಂದು ಸಾವಿರ ವರ್ಷಗಳು ಕಳೆದವು. ವಿಶ್ವಾಮಿತ್ರರ ಘೋರವಾದ ತಪಸ್ಸನ್ನು ನೋಡಿ ದೇವತೆಗಳಿಗೆ ಭಯ ಹುಟ್ಟಿತು (೧೪-೧೫). ಅವರೆಲ್ಲರೂ ಬ್ರಹ್ಮನ ಸಮೀಪಕ್ಕೆ ಹೋಗಿ 'ವಿಶ್ವಾಮಿತ್ರನು ಮಹರ್ಷಿ ಎನ್ನಿಸಿಕೊಳ್ಳಲಿ. ಅದಕ್ಕೆ ತಕ್ಕ ಅರ್ಹತೆ ಬಂದಿದೆ' ಎಂದು ಅರಿಕೆಮಾಡಿದರು (೧೬). ಆಗ ಸರ್ವಲೋಕಪಿತಾಮಹನಾದ ಬ್ರಹ್ಮನು ತಪೋಧನರಾದ ವಿಶ್ವಾಮಿತ್ರರನ್ನುದ್ದೇಶಿಸಿ 'ಮಹರ್ಷಿ, ವತ್ಸ—

ಮಹರ್ಷೇ ಸ್ವಾಗತಂ ವತ್ಸ ತಪಸೋಗ್ರೇಣ ತೋಷಿತಃ ।
ಮಹತ್ತ್ವಮೃಷಿಮುಖ್ಯತ್ವಂ ದದಾಮಿ ತವ ಸುವ್ರತ ॥ ೧೮

ಬ್ರಹ್ಮಣಃ ಸ ವಚಃ ಶ್ರುತ್ವಾ ಸರ್ವಲೋಕೇಶ್ವರಸ್ಯ ಹ ।
ನ ವಿಷಣ್ಣೋ ನ ಸಂತುಷ್ಟೋ ವಿಶ್ವಾಮಿತ್ರಸ್ತಪೋಧನಃ । ೧೯

ಪ್ರಾಂಜಲಿಃ ಪ್ರಣತೋ ಭೂತ್ವಾ ಸರ್ವಲೋಕಪಿತಾಮಹಮ್ ।
ಪ್ರತ್ಯುವಾಚ ತತೋ ವಾಚಂ ವಿಶ್ವಾಮಿತ್ರೋ ಮಹಾಮುನಿಃ ॥ ೨೦

ಬ್ರಹ್ಮರ್ಷಿಶಬ್ದಮತುಲಂ ಸ್ವಾರ್ಜಿತೈಃ ಕರ್ಮಭಿಃ ಶುಭೈಃ ।
ಯದಿ ಮೇ ಭಗವಾನಾಹ ತತೋಽಹಂ ವಿಜಿತೇಂದ್ರಿಯಃ ॥ ೨೧

ತಮುವಾಚ ತತೋ ಬ್ರಹ್ಮಾ ನ ತಾವತ್ತ್ವಂ ಜಿತೇಂದ್ರಿಯಃ ।
ಯತಸ್ವ ಮುನಿಶಾರ್ದೂಲ ಇತ್ಯುಕ್ತ್ವಾ ತ್ರಿದಿವಂ ಗತಃ ॥ ೨೨

ವಿಪ್ರಸ್ಥಿತೇಷು ದೇವೇಷು ವಿಶ್ವಾಮಿತ್ರೋ ಮಹಾಮುನಿಃ ।
ಊರ್ಧ್ವಬಾಹುರ್ನಿರಾಲಂಬೋ ವಾಯುಭಕ್ಷಸ್ತಪಶ್ಚರನ್ ॥ ೨೩

---

ವಿಶ್ವಾಮಿತ್ರ, ನೀನು ಇಲ್ಲಿಗೆ ಬಂದದ್ದು ಒಳ್ಳೆಯದಾಯಿತು. ನಿನ್ನ ಉಗ್ರ ತಪಸ್ಸಿಗೆ ಮೆಚ್ಚಿದ್ದೇನೆ. ನೀನು ಋಷಿಮುಖ್ಯನಾದೆ. ನಿನ್ನನ್ನು ಮಹರ್ಷಿ ಎಂದು ಗಣಿಸುತ್ತೇವೆ' ಎಂದನು (೧೭-೧೮). ಜಗದೀಶ್ವರನಾದ ಬ್ರಹ್ಮನ ನುಡಿಯನ್ನು ಕೇಳಿ ವಿಶ್ವಾಮಿತ್ರರಿಗೆ ವಿಷಾದವೂ ಆಗಲಿಲ್ಲ; ಸಂತೋಷವೂ ಆಗಲಿಲ್ಲ. ಅವರು ಬ್ರಹ್ಮನಿಗೆ ನಮಸ್ಕರಿಸಿ ಬದ್ಧಾಂಜಲಿಗಳಾಗಿ 'ಭಗವನ್, ನಾನು ಆರ್ಜಿಸಿದ ಶುಭಕರ್ಮಗಳಿಂದಾಗಿ ನನ್ನನ್ನು 'ಬ್ರಹ್ಮರ್ಷಿ' ಎಂಬ ಅಸಾಧಾರಣ ಶಬ್ದದಿಂದ ಕರೆದರೆ ಮಾತ್ರ ನಾನು ಜಿತೇಂದ್ರಿಯನೆಂದು ತಿಳಿದು ಕೊಳ್ಳುತ್ತೇನೆ' ಎಂದು ಹೇಳಿದರು (೧೯-೨೧). ಆಗ ಬ್ರಹ್ಮನು 'ಮುನಿಶ್ರೇಷ್ಠ, ನೀನು ಇನ್ನೂ ಜಿತೇಂದ್ರಿಯನಾಗಲಿಲ್ಲ ಪ್ರಯತ್ನಮಾಡು' ಎಂದು ಹೇಳಿ ತನ್ನ ಲೋಕಕ್ಕೆ ಹೋದನು (೨೨). ಅನಂತರ ದೇವತೆಗಳೆಲ್ಲರೂ ಹೋದಮೇಲೆ ವಿಶ್ವಾಮಿತ್ರಮುನಿಗಳು ಪುನಃ ತಪಶ್ಚರಣೆಯನ್ನಾರಂಭಿಸಿ ದರು. ಆಲಂಬನವಿಲ್ಲದೆ ಊರ್ಧ್ವಬಾಹುಗಳಾಗಿ ನಿಂತರು. ವಾಯುವೇ

ಘರ್ಮೇ ಪಂಚತಪಾ ಭೂತ್ವಾ ವರ್ಷಾಸ್ವಾಕಾಶಸಂಶ್ರಯಃ ।
ಶಿಶಿರೇ ಸಲಿಲಸ್ಥಾಯೀ ರಾತ್ರ್ಯಹಾನಿ ತಪೋಧನಃ ॥ ೨೪

ಏವಂ ವರ್ಷಸಹಸ್ರಂ ಹಿ ತಪೋ ಘೋರಮುಪಾಗಮತ್ ।
ತಸ್ಮಿನ್ ಸಂತಪ್ಯಮಾನೇ ತು ವಿಶ್ವಾಮಿತ್ರೇ ಮಹಾಮುನೌ ॥ ೨೫

ಸಂಭ್ರಮಃ ಸುಮಹಾನಾಸೀತ್ ಸುರಾಣಾಂ ವಾಸವಸ್ಯ ಚ ।
ರಂಭಾಮಪ್ಸರಸಂ ಶಕ್ರಃ ಸಹ ಸರ್ವೈರ್ಮರುದ್ಗಣೈಃ ॥ ೨೬

ಉವಾಚಾತ್ಮಹಿತಂ ವಾಕ್ಯಮಹಿತಂ ಕೌಶಿಕಸ್ಯ ಚ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ತ್ರಿಷಷ್ಟಿತಮಃ ಸರ್ಗಃ



ಆಹಾರವಾಯಿತು (೨೩). ಬೇಸಿಗೆಯಲ್ಲಿ ಪಂಚಾಗ್ನಿಮಧ್ಯದಲ್ಲಿಯೂ ಮಳೆಗಾಲದಲ್ಲಿ ಬಯಲಿನಲ್ಲಿಯೂ ಚಳಿಗಾಲದಲ್ಲಿ ನೀರಿನಲ್ಲಿಯೂ ನಿಂತು ಅಹೋರಾತ್ರವೂ ತಪಸ್ಸಿನಲ್ಲಿ ಮುಳುಗಿದರು. ಈ ಘೋರ ತಪಸ್ಸು ಒಂದು ಸಾವಿರ ವರ್ಷ ನಡೆಯಿತು (೨೪-೨೫). ವಿಶ್ವಾಮಿತ್ರಮುನಿಗಳ ಈ ತಪಸ್ಸಿನಿಂದ ಇಂದ್ರನಿಗೂ ದೇವತೆಗಳಿಗೂ ಬಹಳ ಭೀತಿ ಹುಟ್ಟಿತು ಇಂದ್ರನು ದೇವತೆಗಳೆದುರಿಗೆ ರಂಭೆಯೆಂಬ ಅಪ್ಸರೆಯನ್ನು ಕರೆದು ತನಗೆ ಹಿತಕಾರಿಯೂ ವಿಶ್ವಾಮಿತ್ರರಿಗೆ ಅಹಿತಕಾರಿಯೂ ಆದ ಒಂದು ಮಾತನ್ನು ಹೇಳಿದನು" (೨೬).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಅರುವತ್ತು ಮೂರನೆಯ ಸರ್ಗ



## ಚತುಃಷಷ್ಟಿತಮಃ ಸರ್ಗಃ

### ರಂಭಾಶಾಪಃ

ಸುರಕಾರ್ಯಮಿದಂ ರಂಭೇ ಕರ್ತವ್ಯಂ ಸುಮಹತ್ತ್ವಯಾ ।
ಲೋಭನಂ ಕೌಶಿಕಸ್ಯೇಹ ಕಾಮಮೋಹಸಮನ್ವಿತಮ್ ॥ ೧

ತಥೋಕ್ತಾ ಸಾಪ್ಸರಾ ರಾಮ ಸಹಸ್ರಾಕ್ಷೇಣ ಧೀಮತಾ ।
ವ್ರೀಡಿತಾ ಪ್ರಾಂಜಲಿರ್ಭೂತ್ವಾ ಪ್ರತ್ಯುವಾಚ ಸುರೇಶ್ವರಮ್ ॥ ೨

ಅಯಂ ಸುರಪತೇ ಘೋರೋ ವಿಶ್ವಾಮಿತ್ರೋ ಮಹಾಮುನಿಃ ।
ಕ್ರೋಧಮುತ್ಸ್ರಕ್ಷ್ಯತೇ ಘೋರಂ ಮಯಿ ದೇವ ನ ಸಂಶಯಃ ॥ ೩

ತತೋ ಹಿ ಮೇ ಭಯಂ ದೇವ ಪ್ರಸಾದಂ ಕರ್ತುಮರ್ಹಸಿ ।
ಏವಮುಕ್ತಸ್ತಯಾ ರಾಮ ರಂಭಯಾ ಭೀತಯಾ ತಯಾ ॥ ೪

ತಾಮುವಾಚ ಸಹಸ್ರಾಕ್ಷೋ ವೇಪಮಾನಾಂ ಕೃತಾಂಜಲಿಮ್ ।
ಮಾ ಭೈಷಿ ರಂಭೇ ಭದ್ರಂ ತೇ ಕುರುಷ್ವ ಮಮ ಶಾಸನಮ್ ॥ ೫

## ಸರ್ಗ ೬೪

ತಪೋಭಂಗಕ್ಕಾಗಿ ಯತ್ನಿಸಿದ ರಂಭೆಗೆ ಶಿಲೆಯಾಗುವಂತೆ ವಿಶ್ವಾಮಿತ್ರರ ಶಾಪ.

"ಶ್ರೀರಾಮ, ಇಂದ್ರನು 'ರಂಭೆ, ಈಗ ಕೌಶಿಕಮುನಿಗೆ ಕಾಮವನ್ನುಂಟುಮಾಡಿ ಚಿತ್ತವನ್ನು ಕ್ಷೋಭೆಗೊಳಿಸಿ ಆಕರ್ಷಿಸಬೇಕು. ಇದು ದೇವತೆಗಳಿಗೋಸ್ಕರ ಮಾಡಬೇಕಾದ ದೊಡ್ಡ ಕಾರ್ಯ. ಇದು ನಿನ್ನಿಂದಾಗಬೇಕು' ಎಂದನು (೧). ಅಪ್ಸರೆಯು ನಾಚುತ್ತ 'ಸುರೇಶ್ವರ, ವಿಶ್ವಾಮಿತ್ರ ಮಹರ್ಷಿಯು ಭಯಂಕರ ಸ್ವಭಾವದವನು. ಈತನು ನನ್ನಮೇಲೆ ಘೋರ ರೀತಿಯಲ್ಲಿ ತನ್ನ ಕ್ರೋಧವನ್ನು ತೋರಿಸುವುದು ನಿಶ್ಚಯ. ನನಗೆ ಭಯವಾಗುತ್ತದೆ ಪ್ರಭು, ನನ್ನನ್ನು ಕ್ಷಮಿಸಬೇಕು' ಎಂದು ವಿಜ್ಞಾಪಿಸಿ ನಡುಗುತ್ತ ಕೈಮುಗಿದುಕೊಂಡು ನಿಂತಳು (೨-೪) ಆಗ ದೇವೇಂದ್ರನು 'ರಂಭೆ, ಹೆದರಬೇಡ. ನಿನಗೆ ಒಳ್ಳೆಯದಾಗಲಿ ನನ್ನ ಆಜ್ಞೆಯನ್ನು ಪಾಲಿಸು. ನಾನೂ

**ಕೋಕಿಲೋ ಹೃದಯಗ್ರಾಹೀ ಮಾಧವೇ ರುಚಿರದ್ರುಮೇ ।**
**ಅಹಂ ಕಂದರ್ಪಸಹಿತಃ ಸ್ಥಾಸ್ಯಾಮಿ ತವ ಪಾರ್ಶ್ವತಃ ॥ ೬**

**ತ್ವಂ ಹಿ ರೂಪಂ ಬಹುಗುಣಂ ಕೃತ್ವಾ ಪರಮಭಾಸ್ವರಮ್ ।**
**ತಮೃಷಿಂ ಕೌಶಿಕಂ ಭದ್ರೇ ಭೇದಯಸ್ವ ತಪಸ್ವಿನಮ್ ॥ ೭**

**ಸಾ ಶ್ರುತ್ವಾ ವಚನಂ ತಸ್ಯ ಕೃತ್ವಾ ರೂಪಮನುತ್ತಮಮ್ ।**
**ಲೋಭಯಾಮಾಸ ಲಲಿತಾ ವಿಶ್ವಾಮಿತ್ರಂ ಶುಚಿಸ್ಮಿತಾ ॥ ೮**

**ಕೋಕಿಲಸ್ಯ ಸ ಶುಶ್ರಾವ ವಲ್ಗು ವ್ಯಾಹರತಃ ಸ್ವನಮ್ ।**
**ಸಂಪ್ರಹೃಷ್ಟೇನ ಮನಸಾ ತತ ಏನಾಮುದೈಕ್ಷತ ॥ ೯**

**ಅಥ ತಸ್ಯ ಚ ಶಬ್ದೇನ ಗೀತೇನಾಪ್ರತಿಮೇನ ಚ ।**
**ದರ್ಶನೇನ ಚ ರಂಭಾಯಾ ಮುನಿಃ ಸಂದೇಹಮಾಗತಃ ॥ ೧೦**

**ಸಹಸ್ರಾಕ್ಷಸ್ಯ ತತ್ ಕರ್ಮ ವಿಜ್ಞಾಯ ಮುನಿಪುಂಗವಃ ।**
**ರಂಭಾಂ ಕ್ರೋಧಸಮಾವಿಷ್ಟಃ ಶಶಾಪ ಕುಶಿಕಾತ್ಮಜಃ ॥ ೧೧**

---

ಮನ್ಮಥನೂ ನಿನ್ನ ಪಾರ್ಶ್ವದಲ್ಲಿಯೇ ಇರುತ್ತೇವೆ. ಈ ವಸಂತಋತುವಿನಲ್ಲಿ ಸುಂದರವಾದ ವೃಕ್ಷದಮೇಲೆ ನಾನು ಕೋಗಿಲೆಯಾಗಿ ಕೂಗುತ್ತ ಆ ಮುನಿಯ ಹೃದಯವನ್ನು ಸೆಳೆಯುವೆನು (೫-೬) ಭದ್ರೆ, ನೀನು ಅತಿಮನೋಹರವಾದ ರೂಪಿನಿಂದ ಹಾವಭಾವಗಳನ್ನು ಪ್ರಕಟಿಸುತ್ತ ಕೌಶಿಕಮುನಿಯನ್ನು ಮೋಹಗೊಳಿಸು' ಎಂದನು. ಅವನ ಆಜ್ಞೆಯಂತೆ ಆ ಸುಂದರಿಯು ಅತ್ಯಂತ ಮನೋಜ್ಞವಾದ ರೂಪವನ್ನು ಧರಿಸಿ ಮಂದಹಾಸವನ್ನು ಬೀರುತ್ತ ವಿಶ್ವಾಮಿತ್ರರ ಮನಸ್ಸನ್ನು ಕದಡಲು ಪ್ರಯತ್ನಿಸಿದಳು (೭-೮). ತಪಸ್ಸುಮಾಡುತ್ತಿದ್ದ ವಿಶ್ವಾಮಿತ್ರಋಷಿಗಳಿಗೆ ಕೋಗಿಲೆಯ ಮಂಜುಲನಾದವು ಕೇಳಿಸಿತು. ಅಂತರಂಗಕ್ಕೆ ಒಂದು ಬಗೆಯ ಹರ್ಷವಾಯಿತು. ಅವರು ಕಣ್ದೆರೆದು ನೋಡಿದರು. ಎದುರಿಗೆ ರಂಭೆಯು (ಹಾಡುತ್ತ) ನಿಂತಿದ್ದಳು. ಕೋಗಿಲೆಯ ಮಂಜುಲನಾದ, ಇಂಪಾದ ಸಂಗೀತ, ಎದುರಿಗೆ ಸಾಕ್ಷಾತ್ ರಂಭೆ—ಇವುಗಳನ್ನು ಗಮನಿಸಿದಾಗ ಇವೆಲ್ಲವೂ ಆಕಸ್ಮಿಕವೊ ಉದ್ದೇಶಪೂರ್ವಕವೊ ಎಂದು ಮುನಿಗಳಿಗೆ ಸಂದೇಹವಾಯಿತು (೯-೧೦). ಆ ಮುನಿಶ್ರೇಷ್ಠರು ಇಂದ್ರನ ಪ್ರೇರಣೆಯಿಂದ ಉದ್ದೇಶಪೂರ್ವಕವಾಗಿ ರಂಭೆ ಬಂದಿರುವಳೆಂಬುದನ್ನು ಜ್ಞಾನದೃಷ್ಟಿ

ಯನ್ಮಾಂ ಲೋಭಯಸೇ ರಂಭೇ ಕಾಮಕ್ರೋಧಜಯೈಷಿಣಮ್ ।
ದಶ ವರ್ಷಸಹಸ್ರಾಣಿ ಶೈಲೀ ಸ್ಥಾಸ್ಯಸಿ ದುರ್ಭಗೇ ॥ ೧೨

ಬ್ರಾಹ್ಮಣಃ ಸುಮಹಾತೇಜಾಸ್ತಪೋಬಲಸಮನ್ವಿತಃ ।
ಉದ್ಧರಿಷ್ಯತಿ ರಂಭೇ ತ್ವಾಂ ಮತ್ಕ್ರೋಧಕಲುಷೀಕೃತಾಮ್ ॥ ೧೩

ಏವಮುಕ್ತ್ವಾ ಮಹಾತೇಜಾ ವಿಶ್ವಾಮಿತ್ರೋ ಮಹಾಮುನಿಃ ।
ಅಶಕ್ನುವನ್ ಧಾರಯಿತುಂ ಕ್ರೋಧಂ ಸಂತಾಪಮಾಗತಃ ॥ ೧೪

ತಸ್ಯ ಶಾಪೇನ ಮಹತಾ ರಂಭಾ ಶೈಲೀ ತದಾಭವತ್ ।
ವಚಃ ಶ್ರುತ್ವಾ ಚ ಕಂದರ್ಪೋ ಮಹರ್ಷೇಃ ಸ ಚ ನಿರ್ಗತಃ ॥ ೧೫

ಕೋಪೇನ ಸುಮಹಾತೇಜಾಸ್ತಪೋಽಪಹರಣೇ ಕೃತೇ ।
ಇಂದ್ರಿಯೈರಜಿತೈ ರಾಮ ನ ಲೇಭೇ ಶಾಂತಿಮಾತ್ಮನಃ ॥ ೧೬

ಬಭೂವಾಸ್ಯ ಮನಶ್ಚಿಂತಾ ತಪೋಽಪಹರಣೇ ಕೃತೇ ।
ನೈವ ಕ್ರೋಧಂ ಗಮಿಷ್ಯಾಮಿ ನ ಚ ವಕ್ಷ್ಯೇ ಕಥಂಚನ ॥ ೧೭

ಯಿಂದರಿತು ಎಲೌ ರಂಭೆ, ಕಾಮಕ್ರೋಧಗಳನ್ನು ಜಯಿಸಬೇಕೆಂದು ಸಂಕಲ್ಪಿಸಿರುವ ನನಗೆ ಚಿತ್ತಕ್ಷೋಭವನ್ನುಂಟುಮಾಡುತ್ತೀಯಾ? ದುಷ್ಟೇ, ಹತ್ತುಸಾವಿರ ವರ್ಷಗಳವರೆಗೆ ಕಲ್ಲಾಗಿಹೋಗು!' ಎಂದು ಶಪಿಸಿದರು (೧೧-೧೨). ಅನಂತರ 'ರಂಭೆ, ನನ್ನ ಕೋಪಕ್ಕೆ ಗುರಿಯಾಗಿ ಶಿಲೆಯಾದ ನಿನ್ನನ್ನು ಮಹಾತೇಜಸ್ವಿಯೂ ತಪೋಬಲಸಮನ್ವಿತನೂ ಆದ ಬ್ರಾಹ್ಮಣನೊಬ್ಬನು ಉದ್ಧರಿಸುತ್ತಾನೆ' ಎಂದು ನುಡಿದರು (೧೩). ಹೀಗೆ ವಿಶ್ವಾಮಿತ್ರ ಮುನಿಗಳು ಕೋಪವನ್ನು ತಡೆದುಕೊಳ್ಳಲಾರದೆ ರಂಭೆಯನ್ನು ಶಪಿಸಿ ಅನಂತರ ತಮ್ಮ ಕೃತ್ಯಕ್ಕಾಗಿ ಪಶ್ಚಾತ್ತಾಪಪಟ್ಟರು. ರಂಭೆಯು ಶಾಪವಶದಿಂದ ಶಿಲೆಯಾಗಿ ನಿಂತಳು. ಮನ್ಮಥನೂ ದೇವೇಂದ್ರನೂ ಮೆಲ್ಲನೆ ಅಲ್ಲಿಂದ ಹೊರಟು ಹೋದರು! (೧೪-೧೫). ರಾಮ, ಈ ರೀತಿಯಲ್ಲಿ ಕೋಪವಶರಾಗಿ ವಿಶ್ವಾಮಿತ್ರರು ತಪಸ್ಸಿನ ಬಹುಭಾಗವನ್ನು ಕಳೆದುಕೊಂಡರು. ಇಂದ್ರಿಯಗಳನ್ನು ಜಯಿಸಲಾಗಲಿಲ್ಲವಲ್ಲ ಎಂದು ಅವರ ಮನಸ್ಸಿಗೆ ಶಾಂತಿಯೇ ಲಭಿಸಲಿಲ್ಲ (೧೬). ಅವರು ಚಿಂತಿಸಿ ಚಿಂತಿಸಿ ಕೊನೆಗೆ ಒಂದು ಅಸಾಧಾರಣವಾದ ಪ್ರತಿಜ್ಞೆಯನ್ನು ಕೈಗೊಂಡರು. 'ಇನ್ನುಮೇಲೆ ನಾನು ಎಂತಹ ಸನ್ನಿವೇಶ

ಅಥವಾ ನೋಚ್ಛ್ವಸಿಷ್ಯಾಮಿ ಸಂವತ್ಸರಶತಾನ್ಯಪಿ ।
ಅಹಂ ವಿಶೋಷಯಿಷ್ಯಾಮಿ ಹ್ಯಾತ್ಮಾನಂ ವಿಜಿತೇಂದ್ರಿಯಃ ॥ ೧೮

ತಾವದ್ಯಾವದ್ಧಿ ಮೇ ಪ್ರಾಪ್ತಂ ಬ್ರಾಹ್ಮಣ್ಯಂ ತಪಸಾರ್ಜಿತಮ್ ।
ಅನುಚ್ಛ್ವಸನ್ನಭುಂಜಾನಸ್ತಿಷ್ಠೇಯಂ ಶಾಶ್ವತೀಃ ಸಮಾಃ ॥ ೧೯

ನ ಹಿ ಮೇ ತಪ್ಯಮಾನಸ್ಯ ಕ್ಷಯಂ ಯಾಸ್ಯಂತಿ ಮೂರ್ತಯಃ ।
ಏವಂ ವರ್ಷಸಹಸ್ರಸ್ಯ ದೀಕ್ಷಾಂ ಸ ಮುನಿಪುಂಗವಃ ॥ ೨೦

ಚಕಾರಾಪ್ರತಿಮಾಂ ಲೋಕೇ ಪ್ರತಿಜ್ಞಾಂ ರಘುನಂದನ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಚತುಃಷಷ್ಟಿತಮಃ ಸರ್ಗಃ



ದಲ್ಲಿಯೂ ಕೋಪವನ್ನು ತಾಳುವುದೇ ಇಲ್ಲ ಮಾತನ್ನೇ ಆಡುವುದಿಲ್ಲ ಅಥವಾ ನೂರಾರು ವರ್ಷಗಳವರೆಗೆ ಉಸಿರಾಡುವುದನ್ನೇ ನಿಲ್ಲಿಸಿಬಿಡುತ್ತೇನೆ ನನಗೆ ಬ್ರಾಹ್ಮಣ್ಯವು ತಪೋಬಲದಿಂದ ಲಭಿಸುವವರೆಗೂ ಇಂದ್ರಿಯಗಳನ್ನು ನಿಗ್ರಹಿಸಿ ಶರೀರವನ್ನು ಶೋಷಿಸುತ್ತೇನೆ (೧೭-೧೮) ನಾನು ಉಸಿರಾಡದೆ ಊಟಮಾಡದೆ ಎಷ್ಟು ವರ್ಷಗಳವರೆಗಾದರೂ ಇರಬಲ್ಲೆ ತಪಸ್ಸಿನಲ್ಲಿ ನಿರತನಾಗಿರುವ ನನ್ನ ಅಂಗಗಳು ಕುಂದಲಾರವು, ಕುಗ್ಗಲಾರವು.' ರಘುನಂದನ, ಈ ಪ್ರಕಾರ ಈ ಮುನಿಶ್ರೇಷ್ಠರು ಒಂದು ಸಾವಿರ ವರ್ಷಗಳವರೆಗೆ ದೀಕ್ಷಾಬದ್ಧರಾಗಿರಬೇಕೆಂದು ಪಣತೊಟ್ಟರು" (೧೯-೨೦).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಅರುವತ್ತುನಾಲ್ಕನೆಯ ಸರ್ಗ



## ಪಂಚಷಷ್ಟಿತಮಃ ಸರ್ಗಃ

### ಬ್ರಹ್ಮರ್ಷಿತ್ವಪ್ರಾಪ್ತಿಃ

ಅಥ ಹೈಮವತೀಂ ರಾಮ ದಿಶಂ ತ್ಯಕ್ತ್ವಾ ಮಹಾಮುನಿಃ ।
ಪೂರ್ವಾಂ ದಿಶಮನುಪ್ರಾಪ್ಯ ತಪಸ್ತೇಪೇ ಸುದಾರುಣಮ್ ॥ ೧

ಮೌನಂ ವರ್ಷಸಹಸ್ರಸ್ಯ ಕೃತ್ವಾ ವ್ರತಮನುತ್ತಮಮ್ ।
ಚಕಾರಾಪ್ರತಿಮಂ ರಾಮ ತಪಃ ಪರಮದುಷ್ಕರಮ್ ॥ ೨

ಪೂರ್ಣೇ ವರ್ಷಸಹಸ್ರೇ ತು ಕಾಷ್ಠಭೂತಂ ಮಹಾಮುನಿಮ್ ।
ವಿಘ್ನೈರ್ಬಹುಭಿರಾಧೂತಂ ಕ್ರೋಧೋ ನಾಂತರಮಾವಿಶತ್ ॥ ೩

ಸ ಕೃತ್ವಾ ನಿಶ್ಚಯಂ ರಾಮ ತಪ ಆತಿಷ್ಠದವ್ಯಯಮ್ ।
ತಸ್ಯ ವರ್ಷಸಹಸ್ರಸ್ಯ ವ್ರತೇ ಪೂರ್ಣೇ ಮಹಾವ್ರತಃ ॥ ೪

ಭೋಕ್ತುಮಾರಬ್ಧವಾನನ್ನಂ ತಸ್ಮಿನ್ ಕಾಲೇ ರಘೂತ್ತಮ ।
ಇಂದ್ರೋ ದ್ವಿಜಾತಿರ್ಭೂತ್ವಾ ತಂ ಸಿದ್ಧಮನ್ನಮಯಾಚತ ॥ ೫

## ಸರ್ಗ ೬೫

### ವಿಶ್ವಾಮಿತ್ರರು ಬ್ರಹ್ಮರ್ಷಿತ್ವವನ್ನು ಪಡೆಯುವುದು

ಶತಾನಂದರು ಹೇಳಿದರು: "ಅನಂತರ ವಿಶ್ವಾಮಿತ್ರಮುನಿಗಳು ಉತ್ತರ ದಿಕ್ಕನ್ನು ತ್ಯಜಿಸಿ ಪೂರ್ವದಿಕ್ಕಿಗೆ ಹೋದರು ಅಲ್ಲಿ ಸಾವಿರವರ್ಷಗಳ ಮೌನ ವ್ರತವನ್ನು ಸ್ವೀಕರಿಸಿ ದಾರುಣವಾದ ತಪಸ್ಸಿನಲ್ಲಿ ಮಗ್ನರಾದರು (೧-೨). ತಪೋಮಧ್ಯದಲ್ಲಿ ನಾನಾವಿಘ್ನಗಳು ಅಡ್ಡಬಂದವು. ಆದರೂ ಅವರು ಕಟ್ಟಿಗೆಯಂತೆ ನಿಶ್ಚಲರಾಗಿದ್ದರೇ ಹೊರತು ಕೋಪಕ್ಕೆ ಎಡೆಯನ್ನೇ ಕೊಡಲಿಲ್ಲ. ರಘೂತ್ತಮ, ಹೀಗೆ ಹಠದಿಂದ ಅವರು ಸಾವಿರ ವರ್ಷಗಳವರೆಗೆ ವ್ರತನಿಷ್ಠರಾಗಿ ತಪಸ್ಸನ್ನಾಚರಿಸಿದರು. ವ್ರತವು ಪೂರ್ಣವಾಗಲು ಆಹಾರವನ್ನು ತೆಗೆದುಕೊಳ್ಳಬೇಕೆಂದು ಊಟಕ್ಕೆ ಕುಳಿತರು (೩-೪). ಆ ಸಮಯಕ್ಕೆ ಸರಿಯಾಗಿ ಇಂದ್ರನು ಬ್ರಾಹ್ಮಣವೇಷದಲ್ಲಿ ಬಂದು ಸಿದ್ಧವಾಗಿದ್ದ ಅನ್ನವನ್ನು ತನಗೆ

ತಸ್ಮೈ ದತ್ವಾ ತದಾ ಸಿದ್ಧಂ ಸರ್ವಂ ವಿಪ್ರಾಯ ನಿಶ್ಚಿತಃ ।
ನಿಃಶೇಷಿತೇಽನ್ನೇ ಭಗವಾನಭುಕ್ತ್ವೈವ ಮಹಾತಪಾಃ ॥ ೬

ನ ಕಿಂಚಿದವದದ್ವಿಪ್ರಂ ಮೌನವ್ರತಮುಥಾಸ್ಥಿತಃ ।
ಅಥ ವರ್ಷಸಹಸ್ರಂ ವೈ ನೋಚ್ಛ್ವಸನ್ಮುನಿಪುಂಗವಃ ॥ ೭

ತಸ್ಯಾನುಚ್ಛ್ವಸಮಾನಸ್ಯ ಮೂರ್ಧ್ನಿ ಧೂಮೋ ವ್ಯಜಾಯತ ।
ತ್ರೈಲೋಕ್ಯಂ ಯೇನ ಸಂಭ್ರಾಂತಮಾದೀಪಿತಮಿವಾಭವತ್ ॥ ೮

ತತೋ ದೇವಾಃ ಸಗಂಧರ್ವಾಃ ಪನ್ನಗಾಸುರರಾಕ್ಷಸಾಃ ।
ಮೋಹಿತಾಸ್ತೇಜಸಾ ತಸ್ಯ ತಪಸಾ ಮಂದರಶ್ಮಯಃ ॥ ೯

ಕಶ್ಮಲೋಪಹತಾಃ ಸರ್ವೇ ಪಿತಾಮಹಮಥಾಬ್ರುವನ್ ।
ಬಹುಭಿಃ ಕಾರಣೈರ್ದೇವ ವಿಶ್ವಾಮಿತ್ರೋ ಮಹಾಮುನಿಃ ॥ ೧೦

ಲೋಭಿತಃ ಕ್ರೋಧಿತಶ್ಚೈವ ತಪಸಾ ಚಾಭಿವರ್ಧತೇ ।
ನ ಹ್ಯಸ್ಯ ವೃಜಿನಂ ಕಿಂಚಿದ್ದೃಶ್ಯತೇ ಸೂಕ್ಷ್ಮಮಪ್ಯಥ ॥ ೧೧

---

ಕೊಡಬೇಕೆಂದು ಬೇಡಿದನು. ಆಗ ಈ ಮಹರ್ಷಿಗಳು ಸ್ವಲ್ಪವೂ ಹಿಂದೆಮುಂದೆ ನೋಡದೆ ಅನ್ನವೆಲ್ಲವನ್ನೂ ಬ್ರಾಹ್ಮಣನಿಗೆ ಸಮರ್ಪಿಸಿದರು. ತಾವು ಊಟ ಮಾಡಲಿಲ್ಲ. ಬ್ರಾಹ್ಮಣನಿಗೆ ಏನನ್ನೂ ಹೇಳಲಿಲ್ಲ (೫-೬). ಮತ್ತೆ ಮೌನ ವ್ರತವನ್ನವಲಂಬಿಸಿ ಉಚ್ಛ್ವಾಸನಿಃಶ್ವಾಸಗಳನ್ನು ನಿಲ್ಲಿಸಿ ಸಾವಿರವರ್ಷಗಳ ತಪೋವ್ರತವನ್ನು ಸ್ವೀಕರಿಸಿ ತಪಸ್ಸಿನಲ್ಲಿ ಮಗ್ನರಾದರು. ಹೀಗೆ ಉಸಿರಾಡದೆ ಘೋರ ತಪಸ್ಸಿನಲ್ಲಿ ನಿಮಗ್ನರಾಗಿರಲು, ರಾಮ, ಈ ಮಹಾತ್ಮರ ಶಿರಸ್ಸಿನಿಂದ ಹೊಗೆಯು ಮೇಲೆದ್ದಿತು ಮೂರು ಲೋಕವೂ ಸುಟ್ಟಂತಾಗಿ ಸಕಲರೂ ಸಂಭ್ರಾಂತರಾದರು (೭-೮). ತಪೋಜನ್ಯವಾದ ಆ ತೇಜಸ್ಸಿನಿಂದ ದೇವ ಗಂಧರ್ವರೂ ಪನ್ನಗರೂ ಅಸುರರಾಕ್ಷಸರೂ ದಿಕ್ಕುಗೆಟ್ಟು ಮಂಕುಹಿಡಿದಂತಾ ದರು. ಅವರೆಲ್ಲರೂ ಖೇದದಿಂದ ಪಿತಾಮಹನ ಬಳಿಗೆ ಹೋಗಿ ನಿವೇದಿಸಿ ಕೊಂಡರು (೯): 'ಬ್ರಹ್ಮದೇವ, ವಿಶ್ವಾಮಿತ್ರಮಹಾಮುನಿಗೆ ಕಾಮಕ್ರೋಧ ಗಳನ್ನು ಹುಟ್ಟಿಸಬೇಕೆಂದು ಅನೇಕ ಉಪಾಯಗಳನ್ನು ಮಾಡಿದೆವು. ಅದಕ್ಕೆ ಪ್ರತಿಯಾಗಿ ಆತನ ತಪೋನಿಶ್ಚಯವು ಹೆಚ್ಚುತ್ತಲೇ ಇದೆ. ಎಷ್ಟು ಪರೀಕ್ಷಿ ಸಿದರೂ ಅವನಲ್ಲಿ ಕಾಮಕ್ರೋಧ ಮುಂತಾದ ದೋಷವು ಸ್ವಲ್ಪವೂ ಕಂಡು

ನ ದೀಯತೇ ಯದಿ ತ್ವಸ್ಯ ಮನಸಾ ಯದಭೀಪ್ಸಿತಮ್ ।
ವಿನಾಶಯತಿ ತ್ರೈಲೋಕ್ಯಂ ತಪಸಾ ಸಚರಾಚರಮ್ ॥ ೧೨

ವ್ಯಾಕುಲಾಶ್ಚ ದಿಶಃ ಸರ್ವಾ ನ ಚ ಕಿಂಚಿತ್ ಪ್ರಕಾಶತೇ ।
ಸಾಗರಾಃ ಕ್ಷುಭಿತಾಃ ಸರ್ವೇ ವಿಶೀರ್ಯಂತೇ ಚ ಪರ್ವತಾಃ ॥ ೧೩

ಪ್ರಕಂಪತೇ ಚ ಪೃಥಿವೀ ವಾಯುರ್ವಾತಿ ಭೃಶಾಕುಲಃ ।
ಬ್ರಹ್ಮನ್ನ ಪ್ರತಿಜಾನೀಮೋ ನಾಸ್ತಿಕೋ ಜಾಯತೇ ಜನಃ ॥ ೧೪

ಸಂಮೂಢಮಿವ ತ್ರೈಲೋಕ್ಯಂ ಸಂಪ್ರಕ್ಷುಭಿತಮಾನಸಮ್ ।
ಭಾಸ್ಕರೋ ನಿಷ್ಪ್ರಭಶ್ಚೈವ ಮಹರ್ಷೇಸ್ತಸ್ಯ ತೇಜಸಾ ॥ ೧೫

ಬುದ್ಧಿಂ ನ ಕುರುತೇ ಯಾವನ್ನಾಶೇ ದೇವ ಮಹಾಮುನಿಃ ।
ತಾವತ್ ಪ್ರಸಾದ್ಯೋ ಭಗವಾನಗ್ನಿರೂಪೋ ಮಹಾದ್ಯುತಿಃ ॥ ೧೬

ಕಾಲಾಗ್ನಿನಾ ಯಥಾ ಪೂರ್ವಂ ತ್ರೈಲೋಕ್ಯಂ ದಹ್ಯತೇಽಖಿಲಮ್ ।
ದೇವರಾಜ್ಯಂ ಚಿಕೀರ್ಷೇತ ದೀಯತಾಮಸ್ಯ ಯನ್ಮತಮ್ ॥ ೧೭

---

ಬರುವುದಿಲ್ಲ (೧೦-೧೧) ಈಗ ಅವನ ಮನೋರಥವನ್ನು ಸಲ್ಲಿಸದಿದ್ದರೆ ತಪೋಬಲದಿಂದ ಚರಚರಾತ್ಮಕವಾದ ಜಗತ್ತನ್ನೇ ಅವನು ನಾಶಮಾಡುವನು. ಸಕಲ ದಿಕ್ಕುಗಳೂ ಮಲಿನವಾಗಿವೆ ಯಾವ ಜ್ಯೋತಿಯೂ ಬೆಳಗುವುದಿಲ್ಲ. ಸಾಗರಗಳು ಉಲ್ಲೋಲಕಲ್ಲೋಲವಾಗಿ ಉಕ್ಕುತ್ತಿವೆ. ಪರ್ವತಗಳು ಸಿಡಿದು ಬೀಳುತ್ತಿವೆ (೧೨-೧೩). ಪೃಥ್ವಿಯು ನಡುಗುತ್ತಿದೆ. ಗಾಳಿಯು ಮಹಾರಭಸದಿಂದ ಬೀಸುತ್ತಿದೆ. ಪಿತಾಮಹ, ಏನು ಮಾಡಬೇಕೆಂಬುದು ನಮಗೆ ತೋರುವುದಿಲ್ಲ. ಜಗದ್ರಕ್ಷಕನೇ ಇಲ್ಲವೆಂದು ಜನರು ನಾಸ್ತಿಕರಾಗುತ್ತಿದ್ದಾರೆ (೧೪). ಮೂರು ಲೋಕವೂ ಕಂಗೆಟ್ಟುಹೋಗಿದೆ. (ಯಾವಾಗ ಏನಾಗುವುದೋ ಎಂದು) ಎಲ್ಲರ ಮನಸ್ಸೂ ಕ್ಷೋಭೆಗೊಂಡಿದೆ ಆ ಮಹರ್ಷಿಯ ತೇಜಸ್ಸಿನೆದುರಿಗೆ ಸೂರ್ಯನು ಮಾಸಿಹೋಗಿದ್ದಾನೆ (೧೫). ಸ್ವಾಮಿ, ಆ ಮಹಾಮುನಿಗೆ ಪ್ರಪಂಚವನ್ನು ನಾಶಮಾಡಬೇಕೆಂಬ ಬುದ್ಧಿ ಹುಟ್ಟುವುದರೊಳಗಾಗಿ ಅವನನ್ನು ಸಮಾಧಾನಪಡಿಸಬೇಕು. ಆ ಮಹಾತ್ಮನು ಸಾಕ್ಷಾದಗ್ನಿಯಂತೆ ಮಹಾತೇಜಸ್ಸಿನಿಂದ ಜ್ವಲಿಸುತ್ತಿದ್ದಾನೆ (೧೬). ಪ್ರಳಯಕಾಲದಲ್ಲಿ ಕಾಲಾಗ್ನಿಯು ಸಕಲವನ್ನೂ ಸುಟ್ಟುಹಾಕಿದಂತಾದೀತು. ಅವನು ದೇವರಾಜ್ಯ

ತತಃ ಸುರಗಣಾಃ ಸರ್ವೇ ಪಿತಾಮಹಪುರೋಗಮಾಃ ।
ವಿಶ್ವಾಮಿತ್ರಂ ಮಹಾತ್ಮಾನಂ ವಾಕ್ಯಂ ಮಧುರಮಬ್ರುವನ್ ॥ ೧೮

ಬ್ರಹ್ಮರ್ಷೇ ಸ್ವಾಗತಂ ತೇಽಸ್ತು ತಪಸಾ ಸ್ಮ ಸುತೋಷಿತಾಃ ।
ಬ್ರಾಹ್ಮಣ್ಯಂ ತಪಸೋಗ್ರೇಣ ಪ್ರಾಪ್ತವಾನಸಿ ಕೌಶಿಕ ॥ ೧೯

ದೀರ್ಘಮಾಯುಶ್ಚ ತೇ ಬ್ರಹ್ಮನ್ ದದಾಮಿ ಸಮರುದ್ಗಣಃ ।
ಸ್ವಸ್ತಿ ಪ್ರಾಪ್ನುಹಿ ಭದ್ರಂ ತೇ ಗಚ್ಛ ಸೌಮ್ಯ ಯಥಾಸುಖಮ್ ॥ ೨೦

ಪಿತಾಮಹವಚಃ ಶ್ರುತ್ವಾ ಸರ್ವೇಷಾಂ ಚ ದಿವೌಕಸಾಮ್ ।
ಕೃತ್ವಾ ಪ್ರಣಾಮಂ ಮುದಿತೋ ವ್ಯಾಜಹಾರ ಮಹಾಮುನಿಃ ॥ ೨೧

ಬ್ರಾಹ್ಮಣ್ಯಂ ಯದಿ ಮೇ ಪ್ರಾಪ್ತಂ ದೀರ್ಘಮಾಯುಸ್ತಥೈವ ಚ ।
ಓಂಕಾರಶ್ಚ ವಷಟ್‌ಕಾರೋ ವೇದಾಶ್ಚ ವರಯಂತು ಮಾಮ್ ॥

ವನ್ನು ಆಳಲು ಬಯಸಿದರೂ ಚಿಂತೆ ಇಲ್ಲ ಅವನ ಇಷ್ಟವನ್ನು ದಯವಿಟ್ಟು ನಲ್ಲಿಸು' (೧೭). ಹೀಗೆ ನಿವೇದಿಸಿ ಬ್ರಹ್ಮನೊಡನೆ ದೇವಗಣಗಳೆಲ್ಲರೂ ವಿಶ್ವಾಮಿತ್ರರಿದ್ದಲ್ಲಿಗೆ ಬಂದರು. ದೇವಗಣ ಸಹಿತನಾದ ಬ್ರಹ್ಮನು ವಿಶ್ವಾಮಿತ್ರರನ್ನು ಸಂತೈಸುತ್ತ 'ಬ್ರಹ್ಮರ್ಷಿಯೆ ! ನಿನಗೆ ಶುಭವಾಗಲಿ. ನಿನ್ನ ತಪಸ್ಸಿಗೆ ನಾವು ಸಂಪ್ರೀತರಾದೆವು ವಿಶ್ವಾಮಿತ್ರ, ಉಗ್ರತಪಸ್ಸಿನಿಂದ ನೀನು ಬ್ರಾಹ್ಮಣ್ಯವನ್ನು ಪಡೆದೆ (೧೮-೧೯) ಬ್ರಾಹ್ಮಣ! ನಿನಗೆ ದೀರ್ಘಾಯುಸ್ಸನ್ನು ಕೊಟ್ಟಿದ್ದೇನೆ. ಇದಕ್ಕೆ ದೇವತೆಗಳೂ ಸಮ್ಮತಿಸಿದ್ದಾರೆ. ಸ್ವಸ್ತಿ ; ನಿನಗೆ ಮಂಗಳವಾಗಲಿ. ಸೌಮ್ಯ, ಇಷ್ಟಬಂದಂತೆ ಸಂತೋಷದಿಂದ ತೆರಳು' ಎಂದು ನುಡಿದನು (೨೦). ಆಗ ವಿಶ್ವಾಮಿತ್ರಮುನಿಗಳು ಆ ದೇವತೆಗಳೆಲ್ಲರಿಗೂ ನಮಸ್ಕರಿಸಿ ಸಂತೋಷದಿಂದ 'ದೇವತೆಗಳೆ, ನನಗೆ ಬ್ರಹ್ಮರ್ಷಿಪದವಿಯೂ ದೀರ್ಘಾಯುಸ್ಸೂ ಲಭಿಸಿರುವುದಾದರೆ ಓಂಕಾರವಷಟ್‌ಕಾರಗಳೂ ಸಕಲ ವೇದಗಳೂ ನನಗೆ ಒಲಿಯಬೇಕು.* ಧನುರ್ವಿದ್ಯೆ, ಬ್ರಹ್ಮವಿದ್ಯೆಗಳಲ್ಲಿ

* ಬ್ರಹ್ಮಜ್ಞಾನಪೂರ್ವಕ ವೇದವೇದಾಂಗಗಳು ಹೃದ್ಗತವಾಗಿ ಅಧ್ಯಾಪನ ಯಾಜನಗಳಿಗೆ ಅಧಿಕಾರ ಉಂಟಾಗಬೇಕೆಂದು ಅಭಿಪ್ರಾಯ.

ಕ್ಷತ್ರವೇದವಿದಾಂ ಶ್ರೇಷ್ಠೋ ಬ್ರಹ್ಮವೇದವಿದಾಮಪಿ ।
ಬ್ರಹ್ಮಪುತ್ರೋ ವಸಿಷ್ಠೋ ಮಾಮೇವಂ ವದತು ದೇವತಾಃ ॥ ೨೩

ಯದ್ಯಯಂ ಪರಮಃ ಕಾಮಃ ಕೃತೋ ಯಾಂತು ಸುರರ್ಷಭಾಃ ।
ತತಃ ಪ್ರಸಾದಿತೋ ದೇವೈರ್ವಸಿಷ್ಠೋ ಜಪತಾಂ ವರಃ ॥ ೨೪

ಸಖ್ಯಂ ಚಕಾರ ಬ್ರಹ್ಮರ್ಷಿರೇವಮಸ್ತ್ವಿತಿ ಚಾಬ್ರವೀತ್ ।
ಬ್ರಹ್ಮರ್ಷಿಸ್ತ್ವಂ ನ ಸಂದೇಹಃ ಸರ್ವಂ ಸಂಪತ್ಸ್ಯತೇ ತವ ॥ ೨೫

ಇತ್ಯುಕ್ತ್ವಾ ದೇವತಾಶ್ಚಾಪಿ ಸರ್ವಾ ಜಗ್ಮುರ್ಯಥಾಗತಮ್ ।
ವಿಶ್ವಾಮಿತ್ರೋಽಪಿ ಧರ್ಮಾತ್ಮಾ ಲಬ್ಧ್ವಾ ಬ್ರಾಹ್ಮಣ್ಯಮುತ್ತಮಮ್

ಪೂಜಯಾಮಾಸ ಬ್ರಹ್ಮರ್ಷಿಂ ವಸಿಷ್ಠಂ ಜಪತಾಂ ವರಮ್ ।
ಕೃತಕಾಮೋ ಮಹೀಂ ಸರ್ವಾಂ ಚಚಾರ ತಪಸಿ ಸ್ಥಿತಃ ॥ ೨೭

ಏವಂ ತ್ವನೇನ ಬ್ರಾಹ್ಮಣ್ಯಂ ಪ್ರಾಪ್ತಂ ರಾಮ ಮಹಾತ್ಮನಾ ।
ಏಷ ರಾಮ ಮುನಿಶ್ರೇಷ್ಠ ಏಷ ವಿಗ್ರಹವತ್ತಪಃ ॥ ೨೮

---

ನಿಷ್ಣಾತರೂ ಬ್ರಹ್ಮಪುತ್ರರೂ ಆದ ವಸಿಷ್ಠರು ನನ್ನನ್ನು ಬ್ರಹ್ಮರ್ಷಿಯೆಂದು ಕರೆಯಬೇಕು ! ಇದೇ ನನ್ನ ಪರಮಧ್ಯೇಯ. ಈ ಧ್ಯೇಯವನ್ನು ನೆರವೇರಿಸಿಕೊಟ್ಟು ನೀವು ತೆರಳಬಹುದು" ಎಂದು ಹೇಳಿದರು (೨೧-೨೩). ಆಗ ದೇವತೆಗಳು ಹೋಗಿ ವಸಿಷ್ಠಮಹರ್ಷಿಗಳನ್ನು ಒಲಿಸಿಕೊಂಡರು. ಬ್ರಹ್ಮರ್ಷಿಗಳಾದ ವಸಿಷ್ಠರು ಹಾಗೆಯೇ ಆಗಲೆಂದು ಅಂಗೀಕರಿಸಿ ಬಂದು 'ವಿಶ್ವಾಮಿತ್ರರೆ, ನೀವು ಬ್ರಹ್ಮರ್ಷಿಗಳಾಗಿದ್ದೀರಿ. ಸಂದೇಹವಿಲ್ಲ. ನಿಮ್ಮ ಇಷ್ಟಾರ್ಥವೆಲ್ಲವೂ ನೆರವೇರುವುದು' ಎಂದು ಹೇಳಿ ವಿಶ್ವಾಮಿತ್ರಮುನಿಗಳೊಡನೆ ಸಖ್ಯವನ್ನು ಬೆಳಸಿದರು (೨೪-೨೫). ದೇವತೆಗಳೂ ಬ್ರಹ್ಮನೂ ತಮ್ಮ ತಮ್ಮ ಲೋಕಗಳಿಗೆ ಹೊರಟುಹೋದರು. ವಿಶ್ವಾಮಿತ್ರಮುನಿಗಳು ಬ್ರಹ್ಮರ್ಷಿಗಳೆನಿಸಿಕೊಂಡು ವಸಿಷ್ಠಮಹರ್ಷಿಗಳನ್ನು ಪೂಜಿಸಿ ಗೌರವಿಸಿದರು. ಹೀಗೆ ತಮ್ಮ ಮನೋರಥವನ್ನು ಸಾಧಿಸಿ ಗೆದ್ದು ತಪಸ್ಸನ್ನಾಚರಿಸುತ್ತ ಭೂಮಿಯಲ್ಲಿ ಯಥೇಚ್ಛವಾಗಿ ಸಂಚರಿಸಲಾರಂಭಿಸಿದರು (೨೬-೨೭). ರಾಮ, ಈ ರೀತಿಯಲ್ಲಿ ಈ ಮಹಾತ್ಮರು ಬ್ರಾಹ್ಮಣ್ಯವನ್ನು ಸಂಪಾದಿಸಿದರು. ಇವರು

**ಏಷ ಧರ್ಮಃ ಪರೋ ನಿತ್ಯಂ ವೀರ್ಯಸ್ಯೈಷ ಪರಾಯಣಮ್ ।**
**ಏವಮುಕ್ತ್ವಾ ಮಹಾತೇಜಾ ವಿರರಾಮ ದ್ವಿಜೋತ್ತಮಃ ॥** ೨೯

**ಶತಾನಂದವಚಃ ಶ್ರುತ್ವಾ ರಾಮಲಕ್ಷ್ಮಣಸಂನಿಧೌ ।**
**ಜನಕಃ ಪ್ರಾಂಜಲಿರ್ವಾಕ್ಯಮುವಾಚ ಕುಶಿಕಾತ್ಮಜಮ್ ॥** ೩೦

**ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಯಸ್ಯ ಮೇ ಮುನಿಪುಂಗವ ।**
**ಯಜ್ಞಂ ಕಾಕುತ್ಸ್ಥಸಹಿತಃ ಪ್ರಾಪ್ತವಾನಸಿ ಧಾರ್ಮಿಕ ॥** ೩೧

**ಪಾವಿತೋಽಹಂ ತ್ವಯಾ ಬ್ರಹ್ಮನ್ ದರ್ಶನೇನ ಮಹಾಮುನೇ ।**
**ಗುಣಾ ಬಹುವಿಧಾಃ ಪ್ರಾಪ್ತಾಸ್ತವ ಸಂದರ್ಶನಾನ್ಮಯಾ ।** ೩೨

**ವಿಸ್ತರೇಣ ಚ ತೇ ಬ್ರಹ್ಮನ್ ಕೀರ್ತ್ಯಮಾನಂ ಮಹತ್ತಪಃ ।**
**ಶ್ರುತಂ ಮಯಾ ಮಹಾತೇಜೋ ರಾಮೇಣ ಚ ಮಹಾತ್ಮನಾ ॥** ೩೩

**ಸದಸ್ಯೈಃ ಪ್ರಾಪ್ಯ ಚ ಸದಃ ಶ್ರುತಾಸ್ತೇ ಬಹವೋ ಗುಣಾಃ ।**
**ಅಪ್ರಮೇಯಂ ತಪಸ್ತುಭ್ಯಮಪ್ರಮೇಯಂ ಚ ತೇ ಬಲಮ್ ॥** ೩೪

---

ಮುನಿಗಳಲ್ಲಿ ಶ್ರೇಷ್ಠರು. ಇವರು ಸಾಕ್ಷಾತ್ ದೇಹಧಾರಿಯಾದ ತಪಸ್ಸು. ಇವರು ಶಾಶ್ವತವಾದ ಪರಮಧರ್ಮಸ್ವರೂಪರು ಇವರು ತಪೋವೀರ್ಯದ ಪರಾಕಾಷ್ಠೆ" ಎಂದು ಹೇಳಿ ಮಹಾತೇಜಸ್ವಿಗಳಾದ ಶತಾನಂದರು ವಿರಮಿಸಿದರು (೨೮-೨೯). ರಾಮಲಕ್ಷ್ಮಣರೆದುರಿಗೆ ಶತಾನಂದರು ಹೇಳುತ್ತಿದ್ದ ಈ ವೃತ್ತಾಂತವನ್ನು ಜನಕರಾಜನು ಆಲಿಸುತ್ತಿದ್ದನು ಅನಂತರ ಬದ್ಧಾಂಜಲಿಯಾಗಿ ಕೌಶಿಕಮುನಿಗಳನ್ನು ಕುರಿತು "ಮುನಿಶ್ರೇಷ್ಠರೆ, ತಾವು ರಾಮಲಕ್ಷ್ಮಣರನ್ನು ಕರೆದುಕೊಂಡು ನನ್ನ ಯಜ್ಞಕ್ಕೆ ದಯಮಾಡಿಸಿದ್ದರಿಂದ ನಾನು ಧನ್ಯನಾದೆ. ಅನುಗೃಹೀತನಾದೆ (೩೦-೩೧). ಬ್ರಹ್ಮರ್ಷಿಗಳೆ, ತಮ್ಮ ದರ್ಶನದಿಂದ ನಾನು ಪವಿತ್ರನಾದೆ. ನನಗೆ ಅನೇಕ ಬಗೆಯಲ್ಲಿ ಲಾಭವಾಯಿತು. ಮಹಾತ್ಮರೆ, ವಿಸ್ತಾರವಾಗಿ ವಿವರಿಸಲ್ಪಟ್ಟ ಮಹತ್ತರವಾದ ತಮ್ಮ ತಪಶ್ಚರ್ಯೆಯನ್ನು ಕೇಳಿದೆನು. ಶ್ರೀರಾಮನೂ ಕೇಳಿದ್ದಾನೆ (೩೨-೩೩). ಈ ಸದಸ್ಸಿನಲ್ಲಿರುವ ಸರ್ವರೂ ತಮ್ಮ ಬಹುವಿಧವಾದ ಮಹಿಮೆಗಳನ್ನು ಆಲಿಸಿದರು. ತಮ್ಮ ತಪಸ್ಸು, ತಮ್ಮ ಬಲ, ತಮ್ಮ ಗುಣಗಳು ಅಸಾಧಾರಣ

ಅಪ್ರಮೇಯಾ ಗುಣಾಶ್ಚೈವ ನಿತ್ಯಂ ತೇ ಕುಶಿಕಾತ್ಮಜ ।
ತೃಪ್ತಿರಾಶ್ಚರ್ಯಭೂತಾನಾಂ ಕಥಾನಾಂ ನಾಸ್ತಿ ಮೇ ವಿಭೋ ॥
ಕರ್ಮಕಾಲೋ ಮುನಿಶ್ರೇಷ್ಠ ಲಂಬತೇ ರವಿಮಂಡಲಮ್ ।
ಶ್ವಃ ಪ್ರಭಾತೇ ಮಹಾತೇಜೋ ದ್ರಷ್ಟುಮರ್ಹಸಿ ಮಾಂ ಪುನಃ ॥
ಸ್ವಾಗತಂ ತಪತಾಂ ಶ್ರೇಷ್ಠ ಮಾಮನುಜ್ಞಾತುಮರ್ಹಸಿ ।
ಏವಮುಕ್ತೋ ಮುನಿವರಃ ಪ್ರಶಸ್ಯ ಪುರುಷರ್ಷಭಮ್ ॥ ೩೭
ವಿಸಸರ್ಜಾಶು ಜನಕಂ ಪ್ರೀತಂ ಪ್ರೀತಮನಾಸ್ತದಾ ।
ಏವಮುಕ್ತ್ವಾ ಮುನಿಶ್ರೇಷ್ಠಂ ವೈದೇಹೋ ಮಿಥಿಲಾಧಿಪಃ ॥ ೩೮
ಪ್ರದಕ್ಷಿಣಂ ಚಕಾರಾಥ ಸೋಽಪಾಧ್ಯಾಯಃ ಸಬಾಂಧವಃ ।
ವಿಶ್ವಾಮಿತ್ರೋಽಪಿ ಧರ್ಮಾತ್ಮಾ ಸಹರಾಮಃ ಸಲಕ್ಷ್ಮಣಃ ॥ ೩೯
ಸ್ವವಾಟಮಭಿಚಕ್ರಾಮ ಪೂಜ್ಯಮಾನೋ ಮಹರ್ಷಿಭಿಃ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಪಂಚಷಷ್ಟಿತಮಃ ಸರ್ಗಃ

---

ವಾದವು. ಆಶ್ಚರ್ಯಕರವಾದ ತಮ್ಮ ಚರಿತ್ರೆಗಳನ್ನು ಎಷ್ಟು ಕೇಳಿದರೂ ನನಗೆ ತೃಪ್ತಿಯಿಲ್ಲ (೩೪-೩೫). ಇನ್ನು ಸಾಯಂತನಕರ್ಮವನ್ನಾಚರಿಸುವುದಕ್ಕೆ ಸಮಯವಾಗಿದೆ ಸೂರ್ಯನು ಅಸ್ತಂಗತನಾಗುತ್ತಿದ್ದಾನೆ. ನಾಳೆ ಪ್ರಾತಃಕಾಲ ಪುನಃ ತಮ್ಮ ದರ್ಶನವನ್ನು ಕರುಣಿಸಬೇಕು. ತಮಗೆ ಸದಾ ಸ್ವಾಗತ. ಈಗ ನನಗೆ ಹೋಗಲು ಅನುಜ್ಞೆಯನ್ನು ಕೊಡಬೇಕು" ಎಂದು ಹೇಳಿದನು (೩೬-೩೭) ವಿಶ್ವಾಮಿತ್ರರು ಜನಕರಾಜನನ್ನು ಶ್ಲಾಘಿಸಿ ಕಳಿಸಿದರು. ಜನಕನು ತನ್ನ ಬಂಧುಗಳಿಂದೊಡಗೂಡಿ ಪುರೋಹಿತರೊಡನೆ ವಿಶ್ವಾಮಿತ್ರಮುನಿಗಳಿಗೆ ಪ್ರದಕ್ಷಿಣನಮಸ್ಕಾರಗಳನ್ನು ಮಾಡಿ ಹೊರಟನು. ಇತ್ತ ಸಭೆಯಲ್ಲಿ ನೆರೆದಿದ್ದ ಮಹರ್ಷಿಗಳು ವಿಶ್ವಾಮಿತ್ರರನ್ನು ಪ್ರಶಂಸೆಮಾಡುತ್ತಿರಲು, ಅವರು ರಾಮಲಕ್ಷ್ಮಣರೊಡನೆ ತಮ್ಮ ಬಿಡಾರಕ್ಕೆ ತೆರಳಿದರು (೩೮-೩೯).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಅರುವತ್ತೈದನೆಯ ಸರ್ಗ

## ಷಟ್‌ಷಷ್ಟಿತಮಃ ಸರ್ಗಃ

### ಧನುಃಪ್ರಸಂಗಃ

ತತಃ ಪ್ರಭಾತೇ ವಿಮಲೇ ಕೃತಕರ್ಮಾ ನರಾಧಿಪಃ ।
ವಿಶ್ವಾಮಿತ್ರಂ ಮಹಾತ್ಮಾನಮಾಜುಹಾವ ಸರಾಘವಮ್ ॥ ೧

ತಮರ್ಚಯಿತ್ವಾ ಧರ್ಮಾತ್ಮಾ ಶಾಸ್ತ್ರದೃಷ್ಟೇನ ಕರ್ಮಣಾ ।
ರಾಘವೌ ಚ ಮಹಾತ್ಮಾನೌ ತದಾ ವಾಕ್ಯಮುವಾಚ ಹ ॥ ೨

ಭಗವನ್ ಸ್ವಾಗತಂ ತೇಽಸ್ತು ಕಿಂ ಕರೋಮಿ ತವಾನಘ ।
ಭವಾನಾಜ್ಞಾಪಯತು ಮಾಮಾಜ್ಞಾಪ್ಯೋ ಭವತಾ ಹ್ಯಹಮ್ ॥ ೩

ಏವಮುಕ್ತಃ ಸ ಧರ್ಮಾತ್ಮಾ ಜನಕೇನ ಮಹಾತ್ಮನಾ ।
ಪ್ರತ್ಯುವಾಚ ಮುನಿರ್ವೀರಂ ವಾಕ್ಯಂ ವಾಕ್ಯವಿಶಾರದಃ ॥ ೪

ಪುತ್ರೌ ದಶರಥಸ್ಯೇಮೌ ಕ್ಷತ್ರಿಯೌ ಲೋಕವಿಶ್ರುತೌ ।
ದ್ರಷ್ಟುಕಾಮೌ ಧನುಃಶ್ರೇಷ್ಠಂ ಯದೇತತ್ತ್ವಯಿ ತಿಷ್ಠತಿ ॥ ೫

### ಸರ್ಗ ೬೬

ರಾಮಲಕ್ಷ್ಮಣರಿಗೆ ಶಿವಧನುಸ್ಸನ್ನು ತೋರಿಸುವಂತೆ ವಿಶ್ವಾಮಿತ್ರರು ·
ಜನಕರಾಜನಿಗೆ ಹೇಳುವುದು. ಧನುಸ್ಸಿನ ವೃತ್ತಾಂತ.

ಮಾರನೆಯ ದಿನ ಬೆಳಗಾಗಲು ಜನಕರಾಜನು ಪ್ರಾತಃಕೃತ್ಯಗಳನ್ನು ತೀರಿಸಿ, ರಾಮಲಕ್ಷ್ಮಣರೊಡನೆ ಬರುವಂತೆ ವಿಶ್ವಾಮಿತ್ರಮುನಿಗಳಿಗೆ ಹೇಳಿ ಕಳಿಸಿದನು. ಅದರಂತೆ ಅವರು ಬರಲಾಗಿ ವಿಶ್ವಾಮಿತ್ರಋಷಿಗಳನ್ನೂ ರಾಮಲಕ್ಷ್ಮಣರನ್ನೂ ವಿಧಿವತ್ತಾಗಿ ಸತ್ಕರಿಸಿ ಹೀಗೆಂದನು (೧-೨): "ಮಹರ್ಷಿಗಳೆ, ನಿಮಗೆ ಸ್ವಾಗತವನ್ನು ಬಯಸುತ್ತೇನೆ. ಏನಾದರೂ ಮಾಡುವುದಿದ್ದರೆ ನನಗೆ ಆಜ್ಞಾಪಿಸಬೇಕು. ನಾನು ನಿಮ್ಮ ಆಜ್ಞೆಗೆ ಬದ್ಧನು" (೩). ಆಗ ವಾಗ್ವಿಶಾರದರಾದ ವಿಶ್ವಾಮಿತ್ರರು "ಜನಕಮಹಾರಾಜ, ದಶರಥ ಪುತ್ರರಾದ ಈ ರಾಮಲಕ್ಷ್ಮಣರು ಉತ್ತಮವಾದ ಕ್ಷತ್ರಿಯಕುಲದಲ್ಲಿ ಹುಟ್ಟಿದವರು; ಜಗದ್ವಿಖ್ಯಾತರು. ನಿನ್ನ ಬಳಿ ಇರುವ ಆ ಶ್ರೇಷ್ಠ ಧನುಸ್ಸನ್ನು

ಏತದ್ದರ್ಶಯ ಭದ್ರಂ ತೇ ಕೃತಕಾಮೌ ನೃಪಾತ್ಮಜೌ ।
ದರ್ಶನಾದಸ್ಯ ಧನುಷೋ ಯಥೇಷ್ಟಂ ಪ್ರತಿಯಾಸ್ಯತಃ ॥ ೬

ಏವಮುಕ್ತಸ್ತು ಜನಕಃ ಪ್ರತ್ಯುವಾಚ ಮಹಾಮುನಿಮ್ ।
ಶ್ರೂಯತಾಮಸ್ಯ ಧನುಷೋ ಯದರ್ಥಮಿಹ ತಿಷ್ಠತಿ ॥ ೭

ದೇವರಾತ ಇತಿ ಖ್ಯಾತೋ ನಿಮೇಃ ಷಷ್ಠೋ ಮಹೀಪತಿಃ ।
ನ್ಯಾಸೋಽಯಂ ತಸ್ಯ ಭಗವನ್ ಹಸ್ತೇ ದತ್ತೋ ಮಹಾತ್ಮನಃ ॥ ೮

ದಕ್ಷಯಜ್ಞವಧೇ ಪೂರ್ವಂ ಧನುರಾಯಮ್ಯ ವೀರ್ಯವಾನ್ ।
ರುದ್ರಸ್ತು ತ್ರಿದಶಾನ್ ರೋಷಾತ್ ಸಲೀಲಮಿದಮಬ್ರವೀತ್ ॥ ೯

ಯಸ್ಮಾದ್ಭಾಗಾರ್ಥಿನೋ ಭಾಗಂ ನಾಕಲ್ಪಯತ ಮೇ ಸುರಾಃ ।
ವರಾಂಗಾನಿ ಮಹಾರ್ಹಾಣಿ ಧನುಷಾ ಶಾತಯಾಮಿ ವಃ ॥ ೧೦

ತತೋ ವಿಮನಸಃ ಸರ್ವೇ ದೇವಾ ವೈ ಮುನಿಪುಂಗವ ।
ಪ್ರಸಾದಯಂತಿ ದೇವೇಶಂ ತೇಷಾಂ ಪ್ರೀತೋಽಭವದ್ಭವಃ ॥ ೧೧

---

ನೋಡಲಪೇಕ್ಷಿಸುತ್ತಾರೆ ಅದನ್ನು ತೋರಿಸು. ನಿನಗೆ ಶುಭವಾಗಲಿ. ಈ ರಾಜಕುಮಾರರು ಒಂದು ಸಲ ಆ ಧನುಸ್ಸನ್ನು ನೋಡಿ ತೃಪ್ತರಾಗಿ ಹೋಗಬೇಕೆಂದಿದ್ದಾರೆ" ಎಂದು ಹೇಳಿದರು (೪-೬). ಜನಕರಾಜನು "ಭಗವನ್, ಆ ಧನುಸ್ಸು ಇಲ್ಲಿಗೆ ಹೇಗೆ ಬಂದಿತೆಂದರೆ—ನಮ್ಮ ವಂಶದ ನಿಮಿರಾಜನಿಗೆ ದೇವರಾತಭೂಪಾಲನು ಆರನೆಯ ತಲೆಯವನು. ಅವನ ಕೈಗೆ ಇದು ನ್ಯಾಸವಾಗಿ ಕೊಡಲ್ಪಟ್ಟಿತು (೭-೮) ಹಿಂದೆ ದಕ್ಷಯಜ್ಞವನ್ನು ಧ್ವಂಸ ಮಾಡುವಾಗ ರುದ್ರನು ಈ ಧನುಸ್ಸನ್ನು ಲೀಲೆಯಿಂದ ಹಿಡಿದು ಹೆದೆಯೇರಿಸಿ ರೋಷಪೂರ್ಣನಾಗಿ ದೇವತೆಗಳನ್ನುದ್ದೇಶಿಸಿ "ಎಲೈ ದೇವತೆಗಳೆ, ಯಜ್ಞದಲ್ಲಿ ನನಗೆ ಸಲ್ಲಿಸಬೇಕಾದ ಭಾಗವನ್ನು ನೀವು ಸಲ್ಲಿಸಲಿಲ್ಲ ಆದ್ದರಿಂದ ಮಹಾ ಪೂಜ್ಯವೆಂದು ನೆಡೆದು ನಿಂತಿರುವ ನಿಮ್ಮ ಶಿರಸ್ಸುಗಳನ್ನು ಛೇದಿಸಿಬಿಡುತ್ತೇನೆ!" ಎಂದು ಆರ್ಭಟಿಸಿದನು (೯-೧೦). ಆಗ ದೇವತೆಗಳು ಖಿನ್ನರಾಗಿ (ಕ್ಷಮೆಯನ್ನು ಬೇಡಿ) ಆ ದೇವೇಶ್ವರನನ್ನು ಒಲಿಸಿಕೊಂಡರು. ಶಿವನು ಪ್ರೀತನಾಗಿ ಶ್ರೇಷ್ಠ ವಾದ ಧನುಸ್ಸನ್ನು ದೇವತೆಗಳೆದುರಿನಲ್ಲಿ ದೇವರಾತನಿಗೆ ಅನುಗ್ರಹಿಸಿದನು.

ಪ್ರೀತಿಯುಕ್ತಃ ಸ ಸರ್ವೇಷಾಂ ದದೌ ತೇಷಾಂ ಮಹಾತ್ಮನಾಮ್ ।
ತದೇತದ್ದೇವದೇವಸ್ಯ ಧನೂರತ್ನಂ ಮಹಾತ್ಮನಃ ॥ ೧೨

ನ್ಯಾಸಭೂತಂ ತದಾ ನ್ಯಸ್ತಮಸ್ಮಾಕಂ ಪೂರ್ವಕೇ ವಿಭೋ ।
ಅಥ ಮೇ ಕೃಷತಃ ಕ್ಷೇತ್ರಂ ಲಾಂಗಲಾದುತ್ಥಿತಾ ಮಮ ॥ ೧೩

ಕ್ಷೇತ್ರಂ ಶೋಧಯತಾ ಲಬ್ಧಾ ನಾಮ್ನಾ ಸೀತೇತಿ ವಿಶ್ರುತಾ ।
ಭೂತಲಾದುತ್ಥಿತಾ ಸಾ ತು ವ್ಯವರ್ಧತ ಮಮಾತ್ಮಜಾ ॥ ೧೪

ವೀರ್ಯಶುಲ್ಕೇತಿ ಮೇ ಕನ್ಯಾ ಸ್ಥಾಪಿತೇಯಮಯೋನಿಜಾ ।
ಭೂತಲಾದುತ್ಥಿತಾಂ ತಾಂ ತು ವರ್ಧಮಾನಾಂ ಮಮಾತ್ಮಜಾಮ್ ॥

ವರಯಾಮಾಸುರಾಗಮ್ಯ ರಾಜಾನೋ ಮುನಿಪುಂಗವ ।
ತೇಷಾಂ ವರಯತಾಂ ಕನ್ಯಾಂ ಸರ್ವೇಷಾಂ ಪೃಥಿವೀಕ್ಷಿತಾಮ್ ॥

ವೀರ್ಯಶುಲ್ಕೇತಿ ಭಗವನ್ನ ದದಾಮಿ ಸುತಾಮಹಮ್ ।
ತತಃ ಸರ್ವೇ ನೃಪತಯಃ ಸಮೇತ್ಯ ಮುನಿಪುಂಗವ ॥ ೧೭

---

ಅಲ್ಲಿಂದ ಆ ದೇವದೇವನ ಧನುಸ್ಸು ನಮ್ಮ ಹಿರಿಯರಲ್ಲಿ ನ್ಯಾಸವಾಗಿ ಉಳಿದಿದೆ (೧೧-೧೨) ಒಮ್ಮೆ ನಾನು (ಯಜ್ಞಾರ್ಥವಾಗಿ) ನೇಗಿಲಿನಿಂದ ಭೂಮಿಯನ್ನು ಶೋಧಿಸುತ್ತಿರಲು (ನೆಲದಮೇಲೆ ಆದ ಗೆರೆಯಲ್ಲಿ) ಒಬ್ಬ ಕನ್ಯೆಯು ನನಗೆ ದೊರಕಿದಳು ಅವಳಿಗೆ ಸೀತೆ[1] ಎಂದು ಹೆಸರಿಟ್ಟೆನು ಭೂತಳದಿಂದ ಜನಿಸಿದ ಆ ಕುಮಾರಿಯು ನನ್ನ ಮಗಳಾಗಿ ಬೆಳೆದಳು (೧೩-೧೪). ಅವಳು ಅಯೋನಿಜೆ[2] ಅವಳು ವೀರ್ಯಶುಲ್ಕಳೆಂದು[3] ನಿಶ್ಚಯಿಸಿದೆನು. ಮಹರ್ಷಿಗಳೆ, ಹೀಗೆ ಭೂತಳದಿಂದ ಜನಿಸಿ ನನಗೆ ಮಗಳಾದವಳು ಸೀತೆ ಇವಳನ್ನು ಮದುವೆಯಾಗಬೇಕೆಂದು ಬಹುಮಂದಿ ರಾಜರು ಅಪೇಕ್ಷಿಸಿದ್ದರು. ಆದರೆ ಇವಳು ವೀರ್ಯಶುಲ್ಕಳೆಂದು ನಾನು ನಿರ್ಧರಿಸಿದ ಕಾರಣ

---

1. ಸೀತಾ = ನೇಗಿಲಿನಿಂದಾದ ಗೆರೆ. ಸೀತೆಯಲ್ಲಿ ದೊರೆತದ್ದರಿಂದ ಸೀತೆ ಎಂದು ನಾಮಕರಣ.

2. ಗರ್ಭದಿಂದ ಹುಟ್ಟಿದವಳಲ್ಲ.

3. ಪರಾಕ್ರಮವೇ ಅವಳ ಶುಲ್ಕ ; ಗೊತ್ತಾದ ಪರಾಕ್ರಮವನ್ನು ತೋರಿಸಿದವನು ಅವಳನ್ನು ಮದುವೆಯಾಗಬಹುದು.

ಮಿಥಿಲಾಮಭ್ಯುಪಾಗಮ್ಯ ವೀರ್ಯಜಿಜ್ಞಾಸವಸ್ತದಾ ।
ತೇಷಾಂ ಜಿಜ್ಞಾಸಮಾನಾನಾಮ್ಶೈಲಂ ಧನುರುಪಾಹೃತಮ್ ॥ ೧೮

ನ ಶೇಕುರ್ಗ್ರಹಣೇ ತಸ್ಯ ಧನುಷಸ್ತೋಲನೇಽಪಿ ವಾ ।
ತೇಷಾಂ ವೀರ್ಯವತಾಂ ವೀರ್ಯಮಲ್ಪಂ ಜ್ಞಾತ್ವಾ ಮಹಾಮುನೇ

ಪ್ರತ್ಯಾಖ್ಯಾತಾ ನೃಪತಯಸ್ತನ್ನಿಬೋಧ ತಪೋಧನ ।
ತತಃ ಪರಮಕೋಪೇನ ರಾಜಾನೋ ಮುನಿಪುಂಗವ ॥ ೨೦

ನ್ಯರುಂಧನ್ ಮಿಥಿಲಾಂ ಸರ್ವೇ ವೀರ್ಯಸಂದೇಹಮಾಗತಾಃ ।
ಆತ್ಮಾನಮವಧೂತಂ ತೇ ವಿಜ್ಞಾಯ ನೃಪಪುಂಗವಾಃ ॥ ೨೧

ರೋಷೇಣ ಮಹತಾವಿಷ್ಟಾಃ ಪೀಡಯನ್ ಮಿಥಿಲಾಂ ಪುರೀಮ್ ।
ತತಃ ಸಂವತ್ಸರೇ ಪೂರ್ಣೇ ಕ್ಷಯಂ ಯಾತಾನಿ ಸರ್ವಶಃ ॥ ೨೨

ಸಾಧನಾನಿ ಮುನಿಶ್ರೇಷ್ಠ ತತೋಽಹಂ ಭೃಶದುಃಖಿತಃ ।
ತತೋ ದೇವಗಣಾನ್ ಸರ್ವಾಂಸ್ತಪಸಾಹಂ ಪ್ರಸಾದಯಮ್ ॥ ೨೩

ದದುಶ್ಚ ಪರಮಪ್ರೀತಾಶ್ಚತುರಂಗಬಲಂ ಸುರಾಃ ।
ತತೋಭಗ್ನಾ ನೃಪತಯೋ ಹನ್ಯಮಾನಾ ದಿಶೋ ಯಯುಃ ॥ ೨೪

---

ಯಾರಿಗೂ ಕೊಡಲಿಲ್ಲ (೧೫-೧೭). ಅನಂತರ ಆ ಭೂಪಾಲರೆಲ್ಲರೂ ಮಿಥಿಲೆಗೆ ಬಂದು, ನಾವು ತೋರಿಸಬೇಕಾದ ಪರಾಕ್ರಮ ಯಾವುದೆಂದು ವಿಚಾರಿಸಿದರು. ನಾನು ಅವರಿಗೆ ಶಿವಧನುಸ್ಸನ್ನು ತೋರಿಸಿದೆ ಧನುಸ್ಸಿಗೆ ಹೆದೆ ಏರಿಸುವುದಿರಲಿ, ಅದನ್ನು ಎತ್ತುವುದಕ್ಕೂ ಅವರಿಗೆ ಆಗಲಿಲ್ಲ. ‘ಈ ಪರಾಕ್ರಮಿಗಳ ಪರಾಕ್ರಮ ಅತ್ಯಲ್ಪ’ ಎಂದು ಭಾವಿಸಿ ಅವರ ಪ್ರಾರ್ಥನೆಯನ್ನು ನಾನು ನಿರಾಕರಿಸಿದೆನು (೧೮-೧೯). ತಪೋಧನರೆ, ಮುಂದಿನ ವಿಷಯವನ್ನು ಕೇಳಿರಿ. ಅವರ ಪರಾಕ್ರಮವು ಸಂದೇಹಕ್ಕೊಳಗಾದ್ದರಿಂದ ತಮಗೆ ಅವಮಾನವಾಯಿತೆಂದು ಎಲ್ಲರೂ ಕುಪಿತರಾದರು. ಅವರೆಲ್ಲರೂ ಒಟ್ಟುಗೂಡಿ ಮಿಥಿಲಾನಗರಕ್ಕೆ ಮುತ್ತಿಗೆ ಹಾಕಿದರು. ಒಂದು ವರ್ಷಕಾಲ ಕಳೆಯಿತು. ನನ್ನ ಯುದ್ಧಸಾಧನಗಳು ಕ್ಷಯಿಸಿದವು (೨೦-೨೨) ಆಗ ನಾನು ದುಃಖಿತನಾಗಿ ದೇವತೆಗಳನ್ನು ಕುರಿತು ತಪಸ್ಸು ಮಾಡಿದೆ. ಅವರು ಪ್ರಸನ್ನರಾಗಿ ನನಗೆ ಚತುರಂಗ ಸೇನಾಬಲವನ್ನು ಅನುಗ್ರಹಿಸಿದರು. ನಾನು

ಅವೀರ್ಯಾ ವೀರ್ಯಸಂದಿಗ್ಧಾಃ ಸಾಮಾತ್ಯಾಃ ಪಾಪಕಾರಿಣಃ ।
ತದೇತನ್ಮುನಿಶಾರ್ದೂಲ ಧನುಃ ಪರಮಭಾಸ್ವರಮ್ ॥ ೨೫

ರಾಮಲಕ್ಷ್ಮಣಯೋಶ್ಚಾಪಿ ದರ್ಶಯಿಷ್ಯಾಮಿ ಸುವ್ರತ ।
ಯದ್ಯಸ್ಯ ಧನುಷೋ ರಾಮಃ ಕುರ್ಯಾದಾರೋಪಣಂ ಮುನೇ ॥

ಸುತಾಮಯೋನಿಜಾಂ ಸೀತಾಂ ದದ್ಯಾಂ ದಾಶರಥೇರಹಮ್ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಷಟ್‌ಷಷ್ಟಿತಮಃ ಸರ್ಗಃ



ಅದರ ಸಹಾಯದಿಂದ ಯುದ್ಧಮಾಡಲು ಆ ರಾಜರೆಲ್ಲರೂ ಪರಾಜಿತರಾದರು (೨೩-೨೪); ಶೌರ್ಯವಿಲ್ಲದಿದ್ದರೂ ಶೌರ್ಯವಿದೆಯೆಂದು ಭ್ರಾಂತರಾಗಿದ್ದ ಆ ದುಷ್ಟರು ಅಮಾತ್ಯಸಹಿತರಾಗಿ ಪೆಟ್ಟುತಿಂದು ದಿಕ್ಕುದಿಕ್ಕಿಗೆ ಓಡಿಹೋದರು. ಅತ್ಯಂತ ಪ್ರಕಾಶಮಾನವಾದ ಆ ಧನುಸ್ಸಿನ ವೃತ್ತಾಂತ ಇದು (೨೫). ಮುನಿಗಳೆ, ಆ ಧನುಸ್ಸನ್ನು ರಾಮಲಕ್ಷ್ಮಣರಿಗೂ ತೋರಿಸುತ್ತೇನೆ. ದಶರಥಕುಮಾರನಾದ ರಾಮನು ಧನುಸ್ಸಿನ ಹೆದೆಯೇರಿಸುವುದಾದರೆ ಅಯೋನಿಜೆಯಾದ ನನ್ನ ಪುತ್ರಿ ಸೀತೆಯನ್ನು ಈತನಿಗೆ ವಿವಾಹಮಾಡಿ ಕೊಡುತ್ತೇನೆ" ಎಂದು ನುಡಿದನು (೨೬).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಅರುವತ್ತಾರನೆಯ ಸರ್ಗ



## ಸಪ್ತಷಷ್ಟಿತಮಃ ಸರ್ಗಃ

### ಧನುರ್ಭಂಗಃ

ಜನಕಸ್ಯ ವಚಃ ಶ್ರುತ್ವಾ ವಿಶ್ವಾಮಿತ್ರೋ ಮಹಾಮುನಿಃ ।
ಧನುರ್ದರ್ಶಯ ರಾಮಾಯ ಇತಿ ಹೋವಾಚ ಪಾರ್ಥಿವಮ್ ॥ ೧

ತತಃ ಸ ರಾಜಾ ಜನಕಃ ಸಚಿವಾನ್ ವ್ಯಾದಿದೇಶ ಹ ।
ಧನುರಾನೀಯತಾಂ ದಿವ್ಯಂ ಗಂಧಮಾಲ್ಯವಿಭೂಷಿತಮ್ ॥ ೨

ಜನಕೇನ ಸಮಾದಿಷ್ಟಾಃ ಸಚಿವಾಃ ಪ್ರಾವಿಶನ್ ಪುರೀಮ್ ।
ತದ್ಧನುಃ ಪುರತಃ ಕೃತ್ವಾ ನಿರ್ಜಗ್ಮುಃ ಪಾರ್ಥಿವಾಜ್ಞಯಾ ॥ ೩

ನೃಣಾಂ ಶತಾನಿ ಪಂಚಾಶದ್ವ್ಯಾಯತಾನಾಂ ಮಹಾತ್ಮನಾಮ್ ।
ಮಂಜೂಷಾಮಷ್ಟಚಕ್ರಾಂ ತಾಂ ಸಮೂಹುಸ್ತೇ ಕಥಂಚನ ॥ ೪

ತಾಮಾದಾಯ ತು ಮಂಜೂಷಾಮಾಯಸೀಂ ಯತ್ರ ತದ್ಧನುಃ ।
ಸುರೋಪಮಂ ತೇ ಜನಕಮೂಚುರ್ನೃಪತಿಮಂತ್ರಿಣಃ ॥ ೫

## ಸರ್ಗ ೬೭

ಶಿವಧನುರ್ಭಂಗ ; ದಶರಥನನ್ನು ಕರೆತರಲು ಜನಕನು
ದೂತರನ್ನು ಅಯೋಧ್ಯೆಗೆ ಕಳಿಸುವುದು.

ಅನಂತರ ವಿಶ್ವಾಮಿತ್ರಮುನಿಗಳು ರಾಮನಿಗೆ ಧನುಸ್ಸನ್ನು ತೋರಿಸ ಬೇಕೆಂದು ಜನಕರಾಜನಿಗೆ ಹೇಳಿದರು. ಆಗ ಜನಕರಾಜನು ಗಂಧಮಾಲ್ಯ ವಿಭೂಷಿತವಾದ ದಿವ್ಯಧನುಸ್ಸನ್ನು ತರುವಂತೆ ಸಚಿವರಿಗೆ ತಿಳಿಸಿದನು (೧-೨). ಸಚಿವರು ರಾಜಾಜ್ಞೆಯಂತೆ ನಗರಕ್ಕೆ ಹೋಗಿ ಆ ಧನುಸ್ಸನ್ನು ತೆಗೆಸಿಕೊಂಡು ಬಂದರು. ಧನುಸ್ಸನ್ನು ಎಂಟುಚಕ್ರಗಳಿರುವ ಒಂದು ದೊಡ್ಡ ಪೆಟ್ಟಿಗೆಯಲ್ಲಿ ಇಡಲಾಗಿತ್ತು. ಅದನ್ನು ಗಟ್ಟಿಮುಟ್ಟಾಗಿದ್ದ ಐದುಸಾವಿರ ಕಟ್ಟಾಳುಗಳು ಮಹಾಪ್ರಯತ್ನದಿಂದ ತಳ್ಳಿಕೊಂಡು ಬಂದರು (೩-೪). ಆ ಮಂತ್ರಿಗಳು ಧನುಸ್ಸನ್ನಿಟ್ಟಿದ್ದ ಕಬ್ಬಿಣದ ಪೆಟ್ಟಿಗೆಯನ್ನು ಈ ರೀತಿಯಲ್ಲಿ

ಇದಂ ಧನುರ್ವರಂ ರಾಜನ್ ಪೂಜಿತಂ ಸರ್ವರಾಜಭಿಃ ।
ಮಿಥಿಲಾಧಿಪ ರಾಜೇಂದ್ರ ದರ್ಶನೀಯಂ ಯದೀಚ್ಛಸಿ ॥ ೬

ತೇಷಾಂ ನೃಪೋ ವಚಃ ಶ್ರುತ್ವಾ ಕೃತಾಂಜಲಿರಭಾಷತ ।
ವಿಶ್ವಾಮಿತ್ರಂ ಮಹಾತ್ಮಾನಂ ತಾವುಭೌ ರಾಮಲಕ್ಷ್ಮಣೌ ॥ ೭

ಇದಂ ಧನುರ್ವರಂ ಬ್ರಹ್ಮನ್ ಜನಕೈರಭಿಪೂಜಿತಮ್ ।
ರಾಜಭಿಶ್ಚ ಮಹಾವೀರ್ಯೈರಶಕ್ಯಂ ಪೂರಿತುಂ ತದಾ ॥ ೮

ನೈತತ್ ಸುರಗಣಾಃ ಸರ್ವೇ ನಾಸುರಾ ನ ಚ ರಾಕ್ಷಸಾಃ ।
ಗಂಧರ್ವಯಕ್ಷಪ್ರವರಾಃ ಸಕಿಂನರಮಹೋರಗಾಃ ॥ ೯

ಕ್ವ ಗತಿರ್ಮಾನುಷಾಣಾಂ ಚ ಧನುಷೋಽಸ್ಯ ಪ್ರಪೂರಣೇ ।
ಆರೋಪಣೇ ಸಮಾಯೋಗೇ ವೇಪನೇ ತೋಲನೇಽಪಿ ವಾ ॥ ೧೦

ತದೇತದ್ಧನುಷಾಂ ಶ್ರೇಷ್ಠಮಾನೀತಂ ಮುನಿಪುಂಗವ ।
ದರ್ಶಯೈತನ್ಮಹಾಭಾಗ ಅನಯೋ ರಾಜಪುತ್ರಯೋಃ ॥ ೧೧

---

ತಂದು ದೇವೋಪಮನಾದ ಜನಕರಾಜನನ್ನು ಕುರಿತು "ಮಹಾರಾಜ, ಸಕಲ ರಾಜರೂ ಗೌರವಿಸುತ್ತಿರುವ ಮಹಾಧನುಸ್ಸು ಇಲ್ಲಿದೆ. ಬೇಕಾದರೆ (ರಾಮನಿಗೆ) ತೋರಿಸಬಹುದು" ಎಂದರು (೫-೬). ಆಗ ಜನಕರಾಜನು ರಾಮಲಕ್ಷ್ಮಣ ರೆದುರಿಗೆ ವಿಶ್ವಾಮಿತ್ರಮುನಿಗಳನ್ನು ಕುರಿತು ಬದ್ಧಾಂಜಲಿಯಾಗಿ "ಬ್ರಹ್ಮರ್ಷಿ ಗಳೆ, ನಮ್ಮ ಜನಕವಂಶದ ರಾಜರು ಪೂಜಿಸುತ್ತ ಬಂದಿರುವ ಮಹಾಧನುಸ್ಸು ಇದು. ಮಹಾಪರಾಕ್ರಮಶಾಲಿಗಳಾದ ರಾಜರಿಗೂ ಇದನ್ನು ಹೆದೆಯೇರಿಸಲು ಸಾಧ್ಯವಾಗಲಿಲ್ಲ (೭-೮) ದೇವತೆಗಳು, ಅಸುರ ರಾಕ್ಷಸರು, ಗಂಧರ್ವ ಯಕ್ಷರು, ಕಿಂನರ ಮಹೋರಗರು — ಇವರಲ್ಲಿ ಯಾರಿಗೂ ಸಾಧ್ಯವಿಲ್ಲ. ಇನ್ನು ಮನುಷ್ಯರಿಗೆ ಅಂಥ ಸಾಮರ್ಥ್ಯ ಎಲ್ಲಿ ಬರಬೇಕು? ಇದನ್ನು ಯಾರಾ ದರೂ ಬಗ್ಗಿಸಬಲ್ಲರೆ? ಹೆದೆಯೇರಿಸಬಲ್ಲರೆ? ಶರಸಂಧಾನ ಮಾಡಬಲ್ಲರೆ? ಧನುಷ್ಟಂಕಾರ ಮಾಡಬಲ್ಲರೆ? ಹೋಗಲಿ, ಇದನ್ನು ಯಾರಾದರೂ ಅಲ್ಲಾಡಿಸಿಯಾರೆ? (೯-೧೦). ಮುನಿಗಳೆ, ಈ ಶ್ರೇಷ್ಠ ಧನುಸ್ಸನ್ನು ತರಿಸಿ ದ್ದೇನೆ. ರಾಜಪುತ್ರರಿಗೆ ತೋರಿಸೋಣವಾಗಲಿ" ಎಂದನು. ಧರ್ಮಾತ್ಮ

ವಿಶ್ವಾಮಿತ್ರಸ್ತು ಧರ್ಮಾತ್ಮಾ ಶ್ರುತ್ವಾ ಜನಕಭಾಷಿತಮ್ ।
ವತ್ಸ ರಾಮ ಧನುಃ ಪಶ್ಯ ಇತಿ ರಾಘವಮಬ್ರವೀತ್ ॥ ೧೨

ಬ್ರಹ್ಮರ್ಷೇರ್ವಚನಾದ್ರಾಮೋ ಯತ್ರ ತಿಷ್ಠತಿ ತದ್ಧನುಃ ।
ಮಂಜೂಷಾಂ ತಾಮಪಾವೃತ್ಯ ದೃಷ್ಟ್ವಾ ಧನುರಥಾಬ್ರವೀತ್ ॥

ಇದಂ ಧನುರ್ವರಂ ಬ್ರಹ್ಮನ್ ಸಂಸ್ಪೃಶಾಮೀಹ ಪಾಣಿನಾ ।
ಯತ್ನವಾಂಶ್ಚ ಭವಿಷ್ಯಾಮಿ ತೋಲನೇ ಪೂರಣೇಽಪಿ ವಾ ॥ ೧೪

ಬಾಢಮಿತ್ಯೇವ ತಂ ರಾಜಾ ಮುನಿಶ್ಚ ಸಮಭಾಷತ ।
ಲೀಲಯಾ ಸ ಧನುರ್ಮಧ್ಯೇ ಜಗ್ರಾಹ ವಚನಾನ್ಮುನೇಃ ॥ ೧೫

ಪಶ್ಯತಾಂ ನೃಸಹಸ್ರಾಣಾಂ ಬಹೂನಾಂ ರಘುನಂದನಃ ।
ಆರೋಪಯತ್ಸ ಧರ್ಮಾತ್ಮಾ ಸಲೀಲಮಿವ ತದ್ಧನುಃ ॥ ೧೬

ಆರೋಪಯಿತ್ವಾ ಧರ್ಮಾತ್ಮಾ ಪೂರಯಾಮಾಸ ವೀರ್ಯವಾನ್ ।
ತದ್ಬಭಂಜ ಧನುರ್ಮಧ್ಯೇ ನರಶ್ರೇಷ್ಠೋ ಮಹಾಯಶಾಃ ॥ ೧೭

ತಸ್ಯ ಶಬ್ದೋ ಮಹಾನಾಸೀನ್ನಿರ್ಘಾತಸಮನಿಃಸ್ವನಃ ।
ಭೂಮಿಕಂಪಶ್ಚ ಸುಮಹಾನ್ ಪರ್ವತಸ್ಯೇವ ದೀರ್ಯತಃ ॥ ೧೮

---

ರಾದ ವಿಶ್ವಾಮಿತ್ರರು ರಾಘವನ ಕಡೆಗೆ ತಿರುಗಿ "ವತ್ಸ-ರಾಮ, ಧನುಸ್ಸನ್ನು ನೋಡು" ಎಂದು ಹೇಳಿದರು (೧೧-೧೨). ರಾಮನು ಧನುಸ್ಸಿದ್ದಲ್ಲಿಗೆ ಹೋಗಿ ಪೆಟ್ಟಿಗೆಯ ಮುಚ್ಚಳನ್ನು ತೆರೆದು ಧನುಸ್ಸನ್ನು ಒಮ್ಮೆ ನೋಡಿದನು. ಅನಂತರ ವಿಶ್ವಾಮಿತ್ರ ಜನಕರ ಕಡೆಗೆ ತಿರುಗಿ "ಮಹರ್ಷಿಗಳೆ, ಈ ಧನುಸ್ಸನ್ನು ಒಂದು ಸಲ ಮುಟ್ಟಿನೋಡುತ್ತೇನೆ. ಇದನ್ನು ಅಲ್ಲಾಡಿಸುವುದಕ್ಕಾಗಲಿ ಬಗ್ಗಿಸುವುದಕ್ಕಾಲಿ ಸಾಧ್ಯವೆ ಎಂದು ಪ್ರಯತ್ನಿಸುವೆನು" ಎಂದನು (೧೩-೧೪). ಆಗ ಜನಕನೂ ವಿಶ್ವಾಮಿತ್ರಮುನಿಗಳೂ 'ಓಹೋ! ಆಗಬಹುದು' ಎಂದರು. ಮಹರ್ಷಿಗಳ ನುಡಿಯನ್ನು ಕೇಳಿ ರಘುನಂದನನು ಬಹು ಸುಲಭವಾಗಿ ಆ ಧನುಸ್ಸಿನ ಮಧ್ಯವನ್ನು ಹಿಡಿದೆತ್ತಿದನು (೧೫). ನೆರೆದಿದ್ದ ಸಾವಿರಾರು ಜನರು ದಿಟ್ಟಿಸಿ ನೋಡುತ್ತಿದ್ದರು. ಶ್ರೀರಾಮನು ಅನಾಯಾಸವಾಗಿ ಧನುಸ್ಸಿನ ಹೆದೆಯೇರಿಸಿದನು! ಅನಂತರ ಆ ವೀರನು ಧನುಸ್ಸು-ಬಗ್ಗುವಂತೆ ಹೆದೆಯನ್ನು ಕರ್ಣಾಂತದವರೆಗೆ ಸೆಳೆದನು. ಧನುಸ್ಸು ಮಧ್ಯದಲ್ಲಿ ಮುರಿದು

ನಿಪೇತುಶ್ಚ ನರಾಃ ಸರ್ವೇ ತೇನ ಶಬ್ದೇನ ಮೋಹಿತಾಃ ।
ವರ್ಜಯಿತ್ವಾ ಮುನಿವರಂ ರಾಜಾನಂ ತೌ ಚ ರಾಘವೌ ॥ ೧೯

ಪ್ರತ್ಯಾಶ್ವಸ್ತೇ ಜನೇ ತಸ್ಮಿನ್ ರಾಜಾ ವಿಗತಸಾಧ್ವಸಃ ।
ಉವಾಚ ಪ್ರಾಂಜಲಿರ್ವಾಕ್ಯಂ ವಾಕ್ಯಜ್ಞೋ ಮುನಿಪುಂಗವಮ್ ॥

ಭಗವನ್ ದೃಷ್ಟವೀರ್ಯೋ ಮೇ ರಾಮೋ ದಶರಥಾತ್ಮಜಃ ।
ಅತ್ಯದ್ಭುತಮಚಿಂತ್ಯಂ ಚ ನ ತರ್ಕಿತಮಿದಂ ಮಯಾ ॥ ೨೦

ಜನಕಾನಾಂ ಕುಲೇ ಕೀರ್ತಿಮಾಹರಿಷ್ಯತಿ ಮೇ ಸುತಾ ।
ಸೀತಾ ಭರ್ತಾರಮಾಸಾದ್ಯ ರಾಮಂ ದಶರಥಾತ್ಮಜಮ್ ॥ ೨೨

ಮಮ ಸತ್ಯಾ ಪ್ರತಿಜ್ಞಾ ಚ ವೀರ್ಯಶುಲ್ಕೇತಿ ಕೌಶಿಕ ।
ಸೀತಾ ಪ್ರಾಣೈರ್ಬಹುಮತಾ ದೇಯಾ ರಾಮಾಯ ಮೇ ಸುತಾ ॥

ಭವತೋಽನುಮತೇ ಬ್ರಹ್ಮನ್ ಶೀಘ್ರಂ ಗಚ್ಛಂತು ಮಂತ್ರಿಣಃ ।
ಮಮ ಕೌಶಿಕ ಭದ್ರಂ ತೇ ಅಯೋಧ್ಯಾಂ ತ್ವರಿತಾ ರಥೈಃ ॥ ೨೪

ಸಿಡಿಲು ಹೊಡೆದಂತೆ ಮಹಾಶಬ್ದವಾಯಿತು. ಪರ್ವತವು ಸೀಳಿದಂತಾಗಿ ಭೂಮಿಯು ನಡುಗಿಹೋಯಿತು (೧೬-೧೮). ವಿಶ್ವಾಮಿತ್ರರು, ಜನಕರಾಜ, ರಾಮಲಕ್ಷ್ಮಣರು—ಇವರನ್ನು ಬಿಟ್ಟು ಅಲ್ಲಿದ್ದ ಜನರೆಲ್ಲರೂ ಆ ಶಬ್ದದಿಂದ ಮೂರ್ಛಿತರಾಗಿ ನೆಲದಮೇಲೆ ಬಿದ್ದರು. ಸ್ವಲ್ಪಹೊತ್ತಿನಮೇಲೆ ಮೂರ್ಛಿತರೆಲ್ಲರೂ ಎಚ್ಚತ್ತರು ಜನಕರಾಜನ ಮನಸ್ಸಿಗೆ ನೆಮ್ಮದಿಯಾಯಿತು (೧೯-೨೦) ಅವನು ವಿಶ್ವಾಮಿತ್ರರಿಗೆ ಕೈಮುಗಿದು "ಭಗವನ್, ದಶರಥಪುತ್ರನಾದ ಶ್ರೀರಾಮನ ಪರಾಕ್ರಮವನ್ನು ಕಣ್ಣಾರೆ ಕಂಡೆನು. ಇದು ಅತ್ಯದ್ಭುತ. ಕಲ್ಪನೆಗೆ ಮೀರಿದ್ದು. ಇಂಥ ಪರಾಕ್ರಮವಿದೆಯೆಂದು ನಾನು ಊಹಿಸಿರಲಿಲ್ಲ ನನ್ನ ಮಗಳಾದ ಸೀತೆಯು ಈ ದಶರಥಕುಮಾರನನ್ನು ಮದುವೆಯಾದರೆ ಜನಕವಂಶಕ್ಕೆ ಕೀರ್ತಿಯನ್ನು ತರುವಳು (೨೧-೨೨.) ಕೌಶಿಕಮುನಿಗಳೆ, ಸೀತೆಯು ವೀರ್ಯಶುಲ್ಕಳೆಂಬ ನನ್ನ ಪ್ರತಿಜ್ಞೆ ಸತ್ಯವಾಯಿತು. ನನ್ನ ಮಗಳನ್ನು ಪ್ರಾಣಕ್ಕಿಂತಲೂ ಹೆಚ್ಚು ಪ್ರೀತಿಯಿಂದ ಸಾಕಿದ್ದೇನೆ ಅವಳನ್ನು ರಾಮನಿಗೆ ವಿವಾಹಮಾಡಿಕೊಡುತ್ತೇನೆ (೨೩). ಮಹರ್ಷಿಗಳೆ, ನಿಮ್ಮ ಆಗಮನವು ಮಂಗಳಕರವಾಯಿತು. ನೀವು ಅನುಮತಿ

ರಾಜಾನಂ ಪ್ರಶ್ರಿತೈರ್ವಾಕ್ಯೈರಾನಯಂತು ಪುರಂ ಮಮ ।
ಪ್ರಧಾನಂ ವೀರ್ಯಶುಲ್ಕಾಯಾಃ ಕಥಯಂತು ಚ ಸರ್ವಶಃ ॥ ೨೫

ಮುನಿಗುಪ್ತೌ ಚ ಕಾಕುತ್ಸ್ಥೌ ಕಥಯಂತು ನೃಪಾಯ ವೈ ।
ಪ್ರೀಯಮಾಣಂ ತು ರಾಜಾನಮಾನಯಂತು ಸುಶೀಘ್ರಗಾಃ ॥ ೨೬

ಕೌಶಿಕಶ್ಚ ತಥೇತ್ಯಾಹ ರಾಜಾ ಚಾಭಾಷ್ಯ ಮಂತ್ರಿಣಃ ।
ಅಯೋಧ್ಯಾಂ ಪ್ರೇಷಯಾಮಾಸ ಧರ್ಮಾತ್ಮಾ ಕೃತಶಾಸನಾನ್ ॥
ಯಥಾವೃತ್ತಂ ಸಮಾಖ್ಯಾತುಮಾನೇತುಂ ಚ ನೃಪಂ ತದಾ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಸಪ್ತಷಷ್ಟಿತಮಃ ಸರ್ಗಃ



ಕೊಡುವುದಾದರೆ ನನ್ನ ಮಂತ್ರಿಗಳು ಈಗಲೇ ರಥವನ್ನೇರಿ ಶೀಘ್ರವಾಗಿ ಅಯೋಧ್ಯೆಗೆ ಹೋಗಲಿ. ವಿನಯಪೂರ್ವಕವಾಗಿ ಸಂಭಾಷಿಸಿ ದಶರಥ ಮಹಾರಾಜನನ್ನು ನನ್ನ ಪಟ್ಟಣಕ್ಕೆ ಕರೆತರಲಿ. ವೀರ್ಯಶುಲ್ಕಳಾದ ನನ್ನ ಸೀತೆಯನ್ನು ವಿವಾಹಮಾಡಿಕೊಡುತ್ತೇನೆಂಬ ವಿಷಯವೆಲ್ಲವನ್ನೂ ತಿಳಿಸಲಿ (೨೪-೨೫) ರಾಮಲಕ್ಷ್ಮಣರು ಋಷಿಗಳ ರಕ್ಷಣೆಯಲ್ಲಿ ಸುಖವಾಗಿದ್ದಾರೆಂದು ಹೇಳಿ, ಸಂತುಷ್ಟನಾದ ದಶರಥಮಹಾರಾಜನನ್ನು ಬೇಗನೆ ಕರೆತರಲಿ" ಎಂದು ಹೇಳಿದನು (೨೬) ವಿಶ್ವಾಮಿತ್ರರು 'ತಥಾಸ್ತು' ಎಂದರು. ಧರ್ಮಾತ್ಮನಾದ ಜನಕರಾಜನು ಮಂತ್ರಿಗಳೊಡನೆ ಮಾತನಾಡಿ ಅವರು ಕೂಡಲೆ ಅಯೋಧ್ಯೆಗೆ ಹೋಗಬೇಕೆಂದೂ ವಿಷಯವೆಲ್ಲವನ್ನೂ ತಿಳಿಸಿ ದಶರಥನನ್ನು ಕರೆದುಕೊಂಡು ಬರಬೇಕೆಂದೂ ಆಜ್ಞಾಪಿಸಿದನು (೨೭)

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಅರುವತ್ತೇಳನೆಯ ಸರ್ಗ



## ಅಷ್ಟಷಷ್ಟಿತಮಃ ಸರ್ಗಃ

### ದಶರಥಾಹ್ವಾನಮ್

ಜನಕೇನ ಸಮಾದಿಷ್ಟಾ ದೂತಾಸ್ತೇ ಕ್ಲಾಂತವಾಹನಾಃ ।
ತ್ರಿರಾತ್ರಮುಷಿತಾ ಮಾರ್ಗೇ ತ್ವಯೋಧ್ಯಾಂ ಪ್ರಾವಿಶನ್ ಪುರೀಮ್

ರಾಜ್ಞೋ ಭವನಮಾಸಾದ್ಯ ದ್ವಾರಸ್ಥಾನಿದಮಬ್ರುವನ್ ।
ಶೀಘ್ರಂ ನಿವೇದ್ಯತಾಂ ರಾಜ್ಞೇ ದೂತಾನ್ನೋ ಜನಕಸ್ಯ ಚ ॥ ೨

ಇತ್ಯುಕ್ತಾ ದ್ವಾರಪಾಲಾಸ್ತೇ ರಾಘವಾಯ ನ್ಯವೇದಯನ್ ।
ತೇ ರಾಜವಚನಾಚ್ಛೀಘ್ರಂ ದ್ವಾಃಸ್ಥಾ ದೂತಾನ್ ಬಭಾಷಿರೇ ॥ ೩

ದ್ರುಶಂ ಗಚ್ಛಂತು ದೂತಾ ವೈ ರಾಜವೇಶ್ಮ ಮಹಾದ್ಯುತಿ ।
ತೇ ರಾಜವಚನಾದ್ದೂತಾ ರಾಜವೇಶ್ಮ ಪ್ರವೇಶಿತಾಃ ॥ ೪

ದದೃಶುರ್ದೇವಸಂಕಾಶಂ ವೃದ್ಧಂ ದಶರಥಂ ನೃಪಮ್ ।
ಬದ್ಧಾಂಜಲಿಪುಟಾಃ ಸರ್ವೇ ದೂತಾ ವಿಗತಸಾಧ್ವಸಾಃ ॥ ೫

## ಸರ್ಗ ೬೮

ಜನಕರಾಜನ ದೂತರು ದಶರಥನಿಗೆ ಶ್ರೀರಾಮನ ವೃತ್ತಾಂತವನ್ನು ತಿಳಿಸಿ
ಮಿಥಿಲೆಗೆ ಬರುವಂತೆ ಆಹ್ವಾನಿಸುವುದು. ದಶರಥನ ಪ್ರಯಾಣನಿಶ್ಚಯ.

ಜನಕರಾಜನ ಸಂದೇಶವನ್ನು ಹೊತ್ತು ದೂತರಾಗಿ ಹೊರಟ ಮಂತ್ರಿಗಳು ವಾಹನಗಳಿಗೆ ಆಯಾಸವಾಗುವಷ್ಟು ತ್ವರೆಯಿಂದ ಪ್ರಯಾಣಮಾಡಿದರು. ಅವರು ಮಾರ್ಗದಲ್ಲಿ ಮೂರು ರಾತ್ರಿಯನ್ನು ಕಳೆದು ಅಯೋಧ್ಯಾನಗರಕ್ಕೆ ಹೋಗಿ ಸೇರಿದರು (೧). ನೇರವಾಗಿ ರಾಜಭವನಕ್ಕೆ ಹೋಗಿ, ತಾವು ಜನಕರಾಜನ ದೂತರೆಂಬುದನ್ನು ದಶರಥನಿಗೆ ತಿಳಿಸುವಂತೆ ದ್ವಾರಪಾಲಕರಿಗೆ ಹೇಳಿದರು. ದ್ವಾರಪಾಲಕರು ರಾಜನಿಗೆ ಈ ವಿಷಯವನ್ನು ತಿಳಿಸಿ ಅವನ ಆಜ್ಞೆಯಂತೆ ದೂತರನ್ನು ದಿವ್ಯವಾದ ರಾಜಭವನದೊಳಕ್ಕೆ ಪ್ರವೇಶಮಾಡಿಸಿದರು (೨-೪). ಅಲ್ಲಿ ದೂತರು ದೇವತೆಯಂತೆ ವಿರಾಜಮಾನನಾದ ವೃದ್ಧ

ರಾಜಾನಂ ಪ್ರಯತಾ ವಾಕ್ಯಮಬ್ರುವನ್ ಮಧುರಾಕ್ಷರಮ್ ।
ಮೈಥಿಲೋ ಜನಕೋ ರಾಜಾ ಸಾಗ್ನಿಹೋತ್ರಪುರಸ್ಕೃತಮ್ ॥ ೬

ಕುಶಲಂ ಚಾವ್ಯಯಂ ಚೈವ ಸೋಪಾಧ್ಯಾಯಪುರೋಹಿತಮ್ ।
ಮುಹುರ್ಮುಹುರ್ಮಧುರಯಾ ಸ್ನೇಹಸಂಯುಕ್ತಯಾ ಗಿರಾ ॥ ೭

ಜನಕಸ್ತ್ವಾಂ ಮಹಾರಾಜಾ ಪೃಚ್ಛತೇ ಸಪುರಃಸರಮ್ ।
ಪೃಷ್ಟ್ವಾ ಕುಶಲಮವ್ಯಗ್ರಂ ವೈದೇಹೋ ಮಿಥಿಲಾಧಿಪಃ ॥ ೮

ಕೌಶಿಕಾನುಮತೋ ವಾಕ್ಯಂ ಭವಂತಮಿದಮಬ್ರವೀತ್ ।
ಪೂರ್ವಂ ಪ್ರತಿಜ್ಞಾ ವಿದಿತಾ ವೀರ್ಯಶುಲ್ಕಾ ಮಮಾತ್ಮಜಾ ॥ ೯

ರಾಜಾನಶ್ಚ ಕೃತಾಮರ್ಷಾ ನಿರ್ವೀರ್ಯಾ ವಿಮುಖೀಕೃತಾಃ ।
ಸೇಯಂ ಮಮ ಸುತಾ ರಾಜನ್ ವಿಶ್ವಾಮಿತ್ರಪುರಃಸರೈಃ ॥ ೧೦

---

ದಶರಥನೃಪಾಲನನ್ನು ಕಂಡು ವಂದಿಸಿದರು. ಅವರು ಕೈಮುಗಿದುಕೊಂಡು ಸಲಿಗೆಯಿಂದ ಮಧುರವಾಗಿ ಸಂಭಾಷಿಸಿದರು. ಆದರೆ ಎಚ್ಚರಿಕೆಯಿಂದ ನುಡಿಯುತ್ತ ಹೀಗೆಂದರು (೫-೬): "ಮಹಾರಾಜ, ಮಿಥಿಲಾಧಿಪತಿಯಾದ ಜನಕರಾಜನು ಋತ್ವಿಜರೊಂದಿಗೆ ಸಮನ್ವಿತನಾಗಿ ನಿನ್ನ ಕ್ಷೇಮವನ್ನು ವಿಚಾರಿಸಿದ್ದಾನೆ. ನಿನಗೂ ನಿನ್ನ ಗುರುಗಳಿಗೂ ಋತ್ವಿಜರಿಗೂ ಪರಿವಾರಕ್ಕೂ ಕ್ಷೇಮವು ನೆಲಸಿದೆಯೆ ಎಂದು ಸ್ನೇಹಾರ್ದ್ರವಾದ ಮಧುರವಾಕ್ಯದಿಂದ ಮತ್ತೆ ಮತ್ತೆ ಕೇಳಿದ್ದಾನೆ (೭-೮). ನಿನ್ನ ಕ್ಷೇಮವನ್ನು ವಿಚಾರಿಸಿ ಕೌಶಿಕಮುನಿಗಳ ಆಜ್ಞೆಯಂತೆ ಈ ಸಂದೇಶವನ್ನು ನಿವೇದಿಸುವಂತೆ ಹೇಳಿದ್ದಾನೆ. ಏನೆಂದರೆ :— "ನನ್ನ ಮಗಳಾದ ಸೀತೆಯು ವೀರ್ಯಶುಲ್ಕಳೆಂದು ನಾನು ಪ್ರತಿಜ್ಞೆಮಾಡಿರುವುದು ನಿನಗೆ ವಿದಿತವಾಗಿದೆ (೯). ಬಹುಮಂದಿ ರಾಜರು ಹರದಿಂದ ಬಂದು ಪರಾಕ್ರಮಹೀನರಾದ್ದರಿಂದ (ಧನುಸ್ಸನ್ನೆತ್ತಲಾರದೆ) ವಿಮುಖರಾಗಿ ಹೋಗಿದ್ದಾರೆಂಬುದೂ ವಿದಿತವಾಗಿದೆ. ಹೀಗಿರಲು ವಿಶ್ವಾಮಿತ್ರಮುನಿಗಳೊಡನೆ ಆಕಸ್ಮಿಕವಾಗಿ ಇಲ್ಲಿಗೆ ಬಂದ ನಿನ್ನ ವೀರಪುತ್ರರು ವೀರ್ಯಶುಲ್ಕಳಾದ ನನ್ನ

**ಯದೃಚ್ಛಯಾಗತೈರ್ವೀರೈರ್ನಿರ್ಜಿತಾ ತವ ಪುತ್ರಕೈಃ ।**
**ತಚ್ಚ ರಾಜನ್ ಧನುರ್ದಿವ್ಯಂ ಮಧ್ಯೇ ಭಗ್ನಂ ಮಹಾತ್ಮನಾ ॥ ೧೧**
**ರಾಮೇಣ ಹಿ ಮಹಾವೀರ ಮಹತ್ಯಾಂ ಜನಸಂಸದಿ ।**
**ಅಸ್ಮೈ ದೇಯಾ ಮಯಾ ಸೀತಾ ವೀರ್ಯಶುಲ್ಕಾ ಮಮಾತ್ಮಜಾ**
**ಪ್ರತಿಜ್ಞಾಂ ತರ್ತುಮಿಚ್ಛಾಮಿ ತದನುಜ್ಞಾತುಮರ್ಹಸಿ ।**
**ಸೋಪಾಧ್ಯಾಯೋ ಮಹಾರಾಜ ಪುರೋಹಿತಪುರಃಸರಃ ॥ ೧೩**
**ಶೀಘ್ರಮಾಗಚ್ಛ ಭದ್ರಂ ತೇ ದ್ರಷ್ಟುಮರ್ಹಸಿ ರಾಘವೌ ।**
**ಪ್ರತಿಜ್ಞಾಂ ಮಮ ರಾಜೇಂದ್ರ ನಿರ್ವರ್ತಯಿತುಮರ್ಹಸಿ ॥ ೧೪**
**ಪುತ್ರಯೋರುಭಯೋಃ ಪ್ರೀತಿಂ ಲಪ್ಸ್ಯಸೇ ವೀರ್ಯನಿರ್ಜಿತಾಮ್**
**ಏವಂ ವಿದೇಹಾಧಿಪತಿರ್ಮಧುರಂ ವಾಕ್ಯಮಬ್ರವೀತ್ ॥ ೧೫**
**ವಿಶ್ವಾಮಿತ್ರಾಭ್ಯನುಜ್ಞಾತಃ ಶತಾನಂದಮತೇ ಸ್ಥಿತಃ ।**
**ದೂತವಾಕ್ಯಂ ತು ತಚ್ಛ್ರುತ್ವಾ ರಾಜಾ ಪರಮಹರ್ಷಿತಃ ॥ ೧೬**

---

ಮಗಳನ್ನು ಗೆದ್ದುಬಿಟ್ಟಿದ್ದಾರೆ* (೧೦). ದೊಡ್ಡ ಜನಸ್ತೋಮದೆದುರಿಗೆ ಮಹಾತ್ಮನಾದ ರಾಮನು ಆ ದಿವ್ಯಧನುಸ್ಸನ್ನು ಮಧ್ಯದಲ್ಲಿ ಮುರಿದುಬಿಟ್ಟಿದ್ದಾನೆ. ನನ್ನ ಮಗಳಾದ ಸೀತೆ ವೀರ್ಯಶುಲ್ಕಳು. ಆದ್ದರಿಂದ ಅವಳನ್ನು ರಾಮನಿಗೆ ವಿವಾಹಮಾಡಿಕೊಟ್ಟು ನನ್ನ ಪ್ರತಿಜ್ಞೆಯನ್ನು ನೆರವೇರಿಸಿಕೊಳ್ಳಬೇಕೆಂದಿದ್ದೇನೆ. ಇದಕ್ಕೆ ನೀನು ದಯವಿಟ್ಟು ಅನುಜ್ಞೆಯನ್ನು ಕೊಡಬೇಕು (೧೧-೧೨). ಮಹಾರಾಜ, ಕೂಡಲೇ ನೀನು ಪುರೋಹಿತರನ್ನೂ ಋತ್ವಿಜರನ್ನೂ ಕರೆದುಕೊಂಡು ಪರಿವಾರಸಮೇತನಾಗಿ ಇಲ್ಲಿಗೆ ಆಗಮಿಸಬೇಕು. ನಿನಗೆ ಶುಭವಾಗಲಿ. ಇಲ್ಲಿಗೆ ಬಂದು ರಘುಕುಲೋತ್ಪನ್ನರಾದ ನಿನ್ನ ಪುತ್ರರನ್ನು ನೋಡು. ರಾಜೇಂದ್ರ, ನನ್ನ ಪ್ರತಿಜ್ಞೆಯನ್ನು ನೆರವೇರಿಸಿಕೊಡು (೧೩-೧೪) ನಿನ್ನ ಪುತ್ರರ ಶೌರ್ಯವನ್ನು ಕಂಡು ಸಂಪ್ರೀತನಾಗು" ಈ ರೀತಿಯಲ್ಲಿ ವಿದೇಹಾಧಿಪತಿಯು ಮಧುರವಾದ ಸಂದೇಶವನ್ನು ಹೇಳಿ ಕಳುಹಿಸಿರುತ್ತಾನೆ. ಇದಕ್ಕೆ ವಿಶ್ವಾಮಿತ್ರರಿಂದಲೂ ಶತಾನಂದರಿಂದಲೂ ಸಮ್ಮತಿಯನ್ನು ಪಡೆದಿದ್ದಾನೆ" (೧೫). ದೂತರ ಈ ವಚನವನ್ನು ಕೇಳಿ

---

* ಅನುಬಂಧವನ್ನು ನೋಡಿ.

**ವಸಿಷ್ಠಂ ವಾಮದೇವಂ ಚ ಮಂತ್ರಿಣೋಽನ್ಯಾಂಶ್ಚ ಸೋಽಬ್ರವೀತ್ ।**
**ಗುಪ್ತಃ ಕುಶಿಕಪುತ್ರೇಣ ಕೌಸಲ್ಯಾನಂದವರ್ಧನಃ ॥ ೧೭**

**ಲಕ್ಷ್ಮಣೇನ ಸಹ ಭ್ರಾತ್ರಾ ವಿದೇಹೇಷು ವಸತ್ಯಸೌ ।**
**ದೃಷ್ಟವೀರ್ಯಸ್ತು ಕಾಕುತ್ಸ್ಥೋ ಜನಕೇನ ಮಹಾತ್ಮನಾ ॥ ೧೮**

**ಸಂಪ್ರದಾನಂ ಸುತಾಯಾಸ್ತು ರಾಘವೇ ಕರ್ತುಮಿಚ್ಛತಿ ।**
**ಯದಿ ವೋ ರೋಚತೇ ವೃತ್ತಂ ಜನಕಸ್ಯ ಮಹಾತ್ಮನಃ ॥ ೧೯**

**ಪುರೀಂ ಗಚ್ಛಾಮಹೇ ಶೀಘ್ರಂ ಮಾಭೂತ್ ಕಾಲಸ್ಯ ಪರ್ಯಯಃ ।**
**ಮಂತ್ರಿಣೋ ಬಾಢಮಿತ್ಯಾಹುಃ ಸಹ ಸರ್ವೈರ್ಮಹರ್ಷಿಭಿಃ ॥ ೨೦**

**ಸುಪ್ರೀತಶ್ಚಾಬ್ರವೀದ್ರಾಜಾ ಶ್ವೋ ಯಾತ್ರೇತಿ ಸ ಮಂತ್ರಿಣಃ ।**
**ಮಂತ್ರಿಣಸ್ತು ನರೇಂದ್ರೇಣ ರಾತ್ರಿಂ ಪರಮಸತ್ಕೃತಾಃ ॥ ೨೧**
**ಊಷುಃ ಪ್ರಮುದಿತಾಃ ಸರ್ವೇ ಗುಣೈಃ ಸರ್ವೈಃ ಸಮನ್ವಿತಾಃ ॥**

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಅಷ್ಟಷಷ್ಟಿತಮಃ ಸರ್ಗಃ

---

ದಶರಥರಾಜನಿಗೆ ಪರಮಾನಂದವಾಯಿತು ಅವನು ವಸಿಷ್ಠವಾಮದೇವರನ್ನೂ ಇತರ ಮಂತ್ರಿಗಳನ್ನೂ ಕುರಿತು "ಮಾನ್ಯರೆ, ಕೌಸಲ್ಯೆಯ ಮುದ್ದು ಮಗನಾದ ನನ್ನ ರಾಮನು ವಿಶ್ವಾಮಿತ್ರಮುನಿಗಳ ರಕ್ಷಣೆಯಲ್ಲಿ ತಮ್ಮನಾದ ಲಕ್ಷ್ಮಣನೊಡನೆ ವಿದೇಹದೇಶಕ್ಕೆ ಹೋಗಿದ್ದಾನೆ (೧೬-೧೭) ಜನಕಮಹಾರಾಜನು ಇವನ ಪರಾಕ್ರಮವನ್ನು ಕಣ್ಣಾರೆ ಕಂಡು ತನ್ನ ಮಗಳನ್ನು ರಾಮನಿಗೆ ಮದುವೆ ಮಾಡಿಕೊಡಬೇಕೆಂದಿದ್ದಾನೆ. ಜನಕರಾಜನ ಆಚಾರವ್ಯವಹಾರಗಳು ಸಂಬಂಧಯೋಗ್ಯವೆಂದು ನೀವು ಮೆಚ್ಚುವುದಾದರೆ, ಶೀಘ್ರವಾಗಿ ಮಿಥಿಲಾನಗರಕ್ಕೆ ಪ್ರಯಾಣಮಾಡೋಣ. ಕಾಲಾತಿಕ್ರಮವಾಗುವುದು ಬೇಡ" ಎಂದು ಹೇಳಿದನು. ಆಗ ಮಂತ್ರಿಗಳೂ ವಸಿಷ್ಠವಾಮದೇವಾದಿಮಹರ್ಷಿಗಳೂ ಒಮ್ಮನಸ್ಸಿನಿಂದ ಆಗಬಹುದೆಂದರು (೧೮-೨೦). ದಶರಥನು ಸಂತೋಷದಿಂದ 'ನಾಳೆ ಪ್ರಯಾಣದ ಏರ್ಪಾಡು ನಡೆಯಲಿ' ಎಂದು ತನ್ನ ಮಂತ್ರಿಗಳಿಗೆ ಸೂಚಿಸಿದನು. ದೂತರಾಗಿ ಬಂದಿದ್ದ ಜನಕರಾಜನ ಮಂತ್ರಿಗಳು ದಶರಥನ ವಿಶೇಷ ಸತ್ಕಾರಗಳನ್ನು ಸ್ವೀಕರಿಸಿ ಆ ರಾತ್ರಿ ಅಲ್ಲಿಯೇ ತಂಗಿದರು (೨೧).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಅರುವತ್ತೆಂಟನೆಯ ಸರ್ಗ

## ಏಕೋನಸಪ್ತತಿತಮಃ ಸರ್ಗಃ

### ದಶರಥಜನಕಸಮಾಗಮಃ

ತತೋ ರಾತ್ರ್ಯಾಂ ವ್ಯತೀತಾಯಾಂ ಸೋಪಾಧ್ಯಾಯಃ ಸಬಾಂಧವಃ
ರಾಜಾ ದಶರಥೋ ಹೃಷ್ಟಃ ಸುಮಂತ್ರಮಿದಮಬ್ರವೀತ್ ॥ ೧

ಅದ್ಯ ಸರ್ವೇ ಧನಾಧ್ಯಕ್ಷಾ ಧನಮಾದಾಯ ಪುಷ್ಕಲಮ್ ।
ವ್ರಜಂತ್ವಗ್ರೇ ಸುವಿಹಿತಾ ನಾನಾರತ್ನಸಮನ್ವಿತಾಃ ॥ ೨

ಚತುರಂಗಬಲಂ ಸರ್ವಂ ಶೀಘ್ರಂ ನಿರ್ಯಾತು ಸರ್ವಶಃ ।
ಮಮಾಜ್ಞಾಸಮಕಾಲಂ ಚ ಯಾನಯುಗ್ಯಮನುತ್ತಮಮ್ ॥ ೩

ವಸಿಷ್ಠೋ ವಾಮದೇವಶ್ಚ ಜಾಬಾಲಿರಥ ಕಾಶ್ಯಪಃ ।
ಮಾರ್ಕಂಡೇಯಃ ಸುದೀರ್ಘಾಯುರೃಷಿಃ ಕಾತ್ಯಾಯನಸ್ತಥಾ ॥

ಏತೇ ದ್ವಿಜಾಃ ಪ್ರಯಾಂತ್ವಗ್ರೇ ಸ್ಯಂದನಂ ಯೋಜಯಸ್ವ ಮೇ ।
ಯಥಾ ಕಾಲಾತ್ಯಯೋ ನ ಸ್ಯಾದ್ದೂತಾ ಹಿ ತ್ವರಯಂತಿ ಮಾಮ್ ॥

## ಸರ್ಗ ೬೯

### ಪರಿವಾರಸಮೇತನಾಗಿ ದಶರಥನು ಮಿಥಿಲೆಗೆ ಪ್ರಯಾಣಮಾಡುವುದು. ಜನಕರಾಜನು ಸ್ವಾಗತಿಸುವುದು

ರಾತ್ರಿ ಕಳೆಯಿತು. ದಶರಥನು ಪುರೋಹಿತರಿಂದಲೂ ಬಾಂಧವರಿಂದಲೂ ಪರಿವೃತನಾಗಿ ಹರ್ಷದಿಂದ ಸುಮಂತ್ರನಿಗೆ ಹೇಳಿದನು: "ಸುಮಂತ್ರ, ಈಗ ಕೋಶಾಧಿಕಾರಿಗಳು ಪುಷ್ಕಳಧನವನ್ನೂ ನಾನಾರತ್ನಗಳನ್ನೂ ತೆಗೆದುಕೊಂಡು ವಿವಾಹೋಚಿತ ಸಾಮಗ್ರಿಗಳಿಂದ ಸಜ್ಜಾಗಿ ಮುಂದೆ ಹೊರಡಲಿ (೧-೨). ಚತುರಂಗಸೈನ್ಯವೂ (ಪಲ್ಲಕ್ಕಿ ರಥ ಮುಂತಾದ) ವಾಹನಗಳೂ ನನ್ನ ಆಜ್ಞೆಯಾದ ಕೂಡಲೆ ಹೊರಡುವಂತೆ ಸಿದ್ಧವಾಗಿ ನಿಲ್ಲಲಿ ವಸಿಷ್ಠವಾಮದೇವರೂ ಜಾಬಾಲಿ ಕಾಶ್ಯಪ ಮಾರ್ಕಂಡೇಯ ಕಾತ್ಯಾಯನರೂ ಮುಂದುಗಡೆ ಪ್ರಯಾಣ ಮಾಡಲಿ ನನ್ನ ರಥವನ್ನು ಸಿದ್ಧಪಡಿಸು. ವಿಲಂಬವಾಗಬಾರದು. ದೂತ . ನ್ನನ್ನು ತ್ವರೆಗೊಳಿಸುತ್ತಿದ್ದಾರೆ" ಎಂದು ಆಜ್ಞಾಪಿಸಿದನು (೩-೫).

ವಚನಾತ್ತು ನರೇಂದ್ರಸ್ಯ ಸಾ ಸೇನಾ ಚತುರಂಗಿಣೀ ।
ರಾಜಾನಮೃಷಿಭಿಃ ಸಾರ್ಧಂ ವ್ರಜಂತಂ ಪೃಷ್ಠತೋಽನ್ವಗಾತ್ ॥ ೬

ಗತ್ವಾ ಚತುರಹಂ ಮಾರ್ಗಂ ವಿದೇಹಾನಭ್ಯುಪೇಯಿವಾನ್ ।
ರಾಜಾ ತು ಜನಕಃ ಶ್ರೀಮಾನ್ ಶ್ರುತ್ವಾ ಪೂಜಾಮಕಲ್ಪಯತ್ ॥ ೭

ತತೋ ರಾಜಾನಮಾಸಾದ್ಯ ವೃದ್ಧಂ ದಶರಥಂ ನೃಪಮ್ ।
ಜನಕೋ ಮುದಿತೋ ರಾಜಾ ಹರ್ಷಂ ಚ ಪರಮಂ ಯಯೌ ॥ ೮

ಉವಾಚ ಚ ನರಶ್ರೇಷ್ಠೋ ನರಶ್ರೇಷ್ಠಂ ಮುದಾನ್ವಿತಃ ।
ಸ್ವಾಗತಂ ತೇ ಮಹಾರಾಜ ದಿಷ್ಟ್ಯಾ ಪ್ರಾಪ್ತೋಽಸಿ ರಾಘವ ॥ ೯

ಪುತ್ರಯೋರುಭಯೋಃ ಪ್ರೀತಿಂ ಲಪ್ಸ್ಯಸೇ ವೀರ್ಯನಿರ್ಜಿತಾಮ್
ದಿಷ್ಟ್ಯಾ ಪ್ರಾಪ್ತೋ ಮಹಾತೇಜಾ ವಸಿಷ್ಠೋ ಭಗವಾನೃಷಿಃ ॥ ೧೦

ಸಹ ಸರ್ವೈರ್ದ್ವಿಜಶ್ರೇಷ್ಠೈರ್ದೇವೈರಿವ ಶತಕ್ರತುಃ ।
ದಿಷ್ಟ್ಯಾ ಮೇ ನಿರ್ಜಿತಾ ವಿಘ್ನಾ ದಿಷ್ಟ್ಯಾ ಮೇ ಪೂಜಿತಂ ಕುಲಮ್

---

ಅನಂತರ ಎಲ್ಲವೂ ಸಿದ್ಧವಾಗಲು ವಸಿಷ್ಠಾದಿಮಹರ್ಷಿಗಳೊಡನೆ ದಶರಥನು ಪ್ರಯಾಣ ಮಾಡಿದನು. ರಾಜಾಜ್ಞೆಯಂತೆ ಚತುರಂಗಬಲವು ಅವನ ಹಿಂದೆ ನಾಗಿತು. ಹೀಗೆ ನಾಲ್ಕುದಿನ ಪ್ರಯಾಣಮಾಡಿ ದಶರಥನು ವಿದೇಹರಾಜಧಾನಿಯಾದ ಮಿಥಿಲೆಯನ್ನು ಸೇರಿದನು. ಜನಕರಾಜನು ದಶರಥನ ಆಗಮನವನ್ನು ಕೇಳಿ ಅತಿಥಿಸತ್ಕಾರಮಾಡಿ ಗೌರವಿಸಿದನು (೬–೭). ಮೊದಲೇ ಸಂತುಷ್ಟನಾಗಿದ್ದ ಜನಕನಿಗೆ ವೃದ್ಧನಾದ ದಶರಥನೃಪಾಲನು ಬಂದುದರಿಂದ ಪರಮಾನಂದವಾಯಿತು. ಅವನು "ಮಹಾರಾಜ, ನಿನಗೆ ಸ್ವಾಗತ. ನೀನು ದಯಮಾಡಿಸಿರುವುದು ನನ್ನ ಭಾಗ್ಯ (೮–೯). ನಿನ್ನ ಮಕ್ಕಳ ಶೌರ್ಯವನ್ನು ಕಂಡು ನೀನು ಆನಂದಿಸುವೆ. ಭಗವಾನ್ ವಸಿಷ್ಠಮಹರ್ಷಿಗಳೂ ನನ್ನ ಭಾಗ್ಯದಿಂದ ದಯಮಾಡಿಸಿದ್ದಾರೆ. ದೇವೇಂದ್ರನೊಡನೆ ದೇವತೆಗಳಂತೆ ಈ ಮಹಾತೇಜಸ್ವಿಗಳೊಡನೆ ಸಕಲ ಬ್ರಾಹ್ಮಣಶ್ರೇಷ್ಠರೂ ಆಗಮಿಸಿದ್ದಾರೆ ನನ್ನ ಪುಣ್ಯದಿಂದ ವಿಘ್ನಗಳೆಲ್ಲವೂ ಪರಿಹೃತವಾದವು. ನನ್ನ ಕುಲವು ಧನ್ಯವಾಯಿತು

ರಾಘವೈಃ ಸಹ ಸಂಬಂಧಾದ್ವೀರ್ಯಶ್ರೇಷ್ಠೈರ್ಮಹಾತ್ಮಭಿಃ ।
ಶ್ವಃ ಪ್ರಭಾತೇ ನರೇಂದ್ರ ತ್ವಂ ನಿರ್ವರ್ತಯಿತುಮರ್ಹಸಿ ॥ ೧೨

ಯಜ್ಞಸ್ಯಾಂತೇ ನರಶ್ರೇಷ್ಠ ವಿವಾಹಮೃಷಿಸಂಮತಮ್ ।
ತಸ್ಯ ತದ್ವಚನಂ ಶ್ರುತ್ವಾ ಋಷಿಮಧ್ಯೇ ನರಾಧಿಪಃ ॥ ೧೩

ವಾಕ್ಯಂ ವಾಕ್ಯವಿದಾಂ ಶ್ರೇಷ್ಠಃ ಪ್ರತ್ಯುವಾಚ ಮಹೀಪತಿಮ್ ।
ಪ್ರತಿಗ್ರಹೋ ದಾತೃವಶಃ ಶ್ರುತಮೇತನ್ಮಯಾ ಪುರಾ ॥ ೧೪

ಯಥಾ ವಕ್ಷ್ಯಸಿ ಧರ್ಮಜ್ಞ ತತ್ ಕರಿಷ್ಯಾಮಹೇ ವಯಮ್ ।
ಧರ್ಮಿಷ್ಠಂ ಚ ಯಶಸ್ಯಂ ಚ ವಚನಂ ಸತ್ಯವಾದಿನಃ ॥ ೧೫

ಶ್ರುತ್ವಾ ವಿದೇಹಾಧಿಪತಿಃ ಪರಂ ವಿಸ್ಮಯಮಾಗತಃ ।
ತತಃ ಸರ್ವೇ ಮುನಿಗಣಾಃ ಪರಸ್ಪರಸಮಾಗಮೇ ॥ ೧೬

ಹರ್ಷೇಣ ಮಹತಾ ಯುಕ್ತಾಸ್ತಾಂ ನಿಶಾಮವಸನ್ ಸುಖಮ್ ।
ಅಥ ರಾಮೋ ಮಹಾತೇಜಾ ಲಕ್ಷ್ಮಣೇನ ಸಮಂ ಯಯೌ ॥ ೧೭

---

(೧೦-೧೧). ಮಹಾವೀರರೂ ಮಹಾತ್ಮರೂ ಆದ ರಘುವಂಶದವರೊಡನೆ ಸಂಬಂಧವನ್ನು ಬೆಳೆಸಿದುದೇ ಇದಕ್ಕೆಲ್ಲ ಕಾರಣ ಮಹಾರಾಜ, ನಾಳೆ ಪ್ರಾತಃಕಾಲ ನನ್ನ ಯಜ್ಞಕಾರ್ಯವು ಸಮಾಪ್ತವಾದಮೇಲೆ ವಿವಾಹವನ್ನು ನೆರವೇರಿಸಬಹುದೆಂದು ಋಷಿಗಳು ಸಮ್ಮತಿಸಿದ್ದಾರೆ ಇದನ್ನು ನೀನು ನಡೆಸಿಕೊಡಬೇಕು" ಎಂದು ದಶರಥನಿಗೆ ಹೇಳಿದನು (೧೨-೧೩). ಆಗ ಸಂಭಾಷಣಾಚತುರನಾದ ದಶರಥನು "ಜನಕಮಹಾರಾಜ, ತೆಗೆದುಕೊಳ್ಳುವುದು ಕೊಡುವವನ ಅಧೀನವೆಂದು ನಾನು ಕೇಳಿಬಲ್ಲೆನು! ಧರ್ಮಜ್ಞನಾದ ನೀನು ಹೇಳುವಂತೆ ನಾವು ಮಾಡುತ್ತೇವೆ" ಎಂದು ನುಡಿದನು (೧೪-೧೫). ಧರ್ಮಯುಕ್ತವೂ ಪ್ರಶಂಸನೀಯವೂ ಆದ ದಶರಥನ ಮಾತನ್ನು ಕೇಳಿ (ಅವನ ವಿನಯಕ್ಕಾಗಿ) ಜನಕರಾಜನಿಗೆ ಬಹಳ ಆಶ್ಚರ್ಯವಾಯಿತು. (ಅನೇಕ ಸ್ಥಳಗಳಿಂದ) ಅಲ್ಲಿಗೆ ಬಂದಿದ್ದ ಮುನಿಗಳಿಗೆ ಪರಸ್ಪರ ದರ್ಶನಲಾಭವಾಗಿ ಎಲ್ಲರಿಗೂ ಹರ್ಷವಾಯಿತು. ಅವರೆಲ್ಲರೂ ರಾತ್ರಿಯನ್ನು ಸುಖವಾಗಿ ಕಳೆದರು (೧೬-೧೭). ಇತ್ತ ವಿಶ್ವಾಮಿತ್ರರು ರಾಮಲಕ್ಷ್ಮಣರನ್ನು ಕರೆದುಕೊಂಡು ದಶರಥನ ಬಳಿಗೆ ಬಂದರು. ಅವರಿಬ್ಬರೂ ತಂದೆಯ ಪಾದಗಳನ್ನು ಮುಟ್ಟಿ

**ವಿಶ್ವಾಮಿತ್ರಂ ಪುರಸ್ಕೃತ್ಯ ಪಿತುಃ ಪಾದಾವುಪಸ್ಪೃಶನ್ ।**
**ರಾಜಾ ಚ ರಾಘವೌ ಪುತ್ರೌ ನಿಶಾಮ್ಯ ಪರಿಹರ್ಷಿತಃ ॥ ೧೮**

**ಉವಾಸ ಪರಮಪ್ರೀತೋ ಜನಕೇನಾಭಿಪೂಜಿತಃ ।**
**ಜನಕೋಽಪಿ ಮಹಾತೇಜಾಃ ಕ್ರಿಯಾಂ ಧರ್ಮೇಣ ತತ್ತ್ವವಿತ್ ॥**

**ಯಜ್ಞಸ್ಯ ಚ ಸುತಾಭ್ಯಾಂ ಚ ಕೃತ್ವಾ ರಾತ್ರಿಮುವಾಸ ಹ ॥**

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕೋನಸಪ್ತತಿತಮಃ ಸರ್ಗಃ



ನಮಸ್ಕರಿಸಿದರು. ದಶರಥನಿಗೆ ತನ್ನ ಪುತ್ರರನ್ನು ಕಂಡು ಆನಂದವಾಯಿತು (೧೮). ಜನಕರಾಜನ ಆತಿಥ್ಯವನ್ನು ಸ್ವೀಕರಿಸುತ್ತ ಅವನು ಸಂತೋಷದಲ್ಲಿದ್ದನು. ಧರ್ಮಜ್ಞನಾದ ಜನಕನು ವಿಧಿವತ್ತಾಗಿ ಯಜ್ಞದ ಅವಶಿಷ್ಟ ಕ್ರಿಯೆಗಳನ್ನು ಮಾಡಿ ತನ್ನ ಪುತ್ರಿಯರಾದ ಸೀತೆ ಮತ್ತು ಊರ್ಮಿಳೆಯರಿಗೆ* ಅಂಕುರಾರ್ಪಣಾದಿ ಕಾರ್ಯಗಳನ್ನು ನೆರವೇರಿಸಿ ಸಂತೋಷದಿಂದ ಆ ರಾತ್ರಿಯನ್ನು ಕಳೆದನು (೧೯).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಅರುವತ್ತೊಂಬತ್ತನೆಯ ಸರ್ಗ



---

*ಊರ್ಮಿಳೆಯ ವಿವಾಹದ ವಿಷಯ ಹಿಂದೆ ಪ್ರಸ್ತುತವಾಗಿಲ್ಲ. ಆದರೂ ಮುಂದಿನ ಸಂದರ್ಭದಿಂದ ಊರ್ಮಿಳೆಯ ವಿವಾಹದ ಮಾತುಕಥೆಯು ನಡೆದು ನಿಶ್ಚಿತವಾಗಿತ್ತೆಂದು ತಿಳಿಯಬೇಕು.

## ಸಪ್ತತಿತಮಃ ಸರ್ಗಃ

### ಕನ್ಯಾವರಣಮ್

ತತಃ ಪ್ರಭಾತೇ ಜನಕಃ ಕೃತಕರ್ಮಾ ಮಹರ್ಷಿಭಿಃ ।
ಉವಾಚ ವಾಕ್ಯಂ ವಾಕ್ಯಜ್ಞಃ ಶತಾನಂದಂ ಪುರೋಹಿತಮ್ ॥ ೧

ಭ್ರಾತಾ ಮಮ ಮಹಾತೇಜಾ ಯವೀಯಾನತಿಧಾರ್ಮಿಕಃ ।
ಕುಶಧ್ವಜ ಇತಿ ಖ್ಯಾತಃ ಪುರೀಮಧ್ಯವಸಚ್ಛುಭಾಮ್ ॥ ೨

ವಾರ್ಯಾಫಲಕಪರ್ಯಂತಾಂ ಪಿಬನ್ನಿಕ್ಷುಮತೀಂ ನದೀಮ್ ।
ಸಾಂಕಾಶ್ಯಾಂ ಪುಣ್ಯಸಂಕಾಶಾಂ ವಿಮಾನಮಿವ ಪುಷ್ಪಕಮ್ ॥ ೩

ತಮಹಂ ದ್ರಷ್ಟುಮಿಚ್ಛಾಮಿ ಯಜ್ಞಗೋಪ್ತಾ ಸ ಮೇ ಮತಃ ।
ಪ್ರೀತಿಂ ಸೋಽಪಿ ಮಹಾತೇಜಾ ಇಮಾಂ ಭೋಕ್ತಾ ಮಯಾ ಸಹ

ಏವಮುಕ್ತೇ ತು ವಚನೇ ಶತಾನಂದಸ್ಯ ಸಂನಿಧೌ ।
ಆಗತಾಃ ಕೇಚಿದವ್ಯಗ್ರಾ ಜನಕಸ್ತಾನ್ ಸಮಾದಿಶತ್ ॥ ೫

## ಸರ್ಗ ೭೦

### ಕುಶಧ್ವಜನ ಆಗಮನ. ದಶರಥವಂಶದ ಪೂರ್ವಜರ ವರ್ಣನೆ.

ಮಾರನೆಯ ದಿನ ಪ್ರಾತಃಕಾಲ ಜನಕರಾಜನು ಮಹರ್ಷಿಗಳೊಡನೆ ಯಜ್ಞಾದಿಕ್ರಿಯೆಗಳನ್ನು ಸಮಾಪ್ತಿಗೊಳಿಸಿ (ದಶರಥ ಮುಂತಾದವರಿಗೆ ತಿಳಿಯಲೆಂದು ಅವರೆದುರಿಗೆ) ಪುರೋಹಿತರಾದ ಶತಾನಂದರನ್ನು ಕುರಿತು ಹೀಗೆಂದನು (೧): "ಶತಾನಂದರೆ, ನನ್ನ ತಮ್ಮನಾದ ಕುಶಧ್ವಜನು ಮಹಾತೇಜಸ್ವಿ. ಅತ್ಯಂತ ಧಾರ್ಮಿಕ. ಅವನು ಇಕ್ಷುಮತೀ ನದಿಯನ್ನು ಉಪಭೋಗಿಸುತ್ತ (ಅದರ ತೀರದಲ್ಲಿರುವ) ಸಾಂಕಾಶ್ಯಾನಗರದಲ್ಲಿ ವಾಸವಾಗಿದ್ದಾನೆ. ಗಜಬಂಧನಶಾಲೆಗಳಿಂದಲೂ ಆಫಲಕಗಳೆಂಬ ಕಟಾಂಜನದ ಪ್ರಾಕಾರಗಳಿಂದಲೂ ಯುಕ್ತವಾದ ಆ ನಗರವು ಪುಷ್ಪಕವಿಮಾನದಂತೆ ಸುಂದರವಾಗಿದೆ (೨-೩). ಅವನು ನನ್ನ ಯಜ್ಞಕ್ಕೆ ರಕ್ಷಣೆಯನ್ನು ಕೊಟ್ಟು ಸಹಾಯಮಾಡುತ್ತಿರುವನು. ಅವನನ್ನು ಈಗ ನೋಡಬೇಕೆಂದು ನನಗೆ

ಶಾಸನಾತ್ತು ನರೇಂದ್ರಸ್ಯ ಪ್ರಯಯುಃ ಶೀಘ್ರವಾಜಿಭಿಃ ।
ಸಮಾನೇತುಂ ನರವ್ಯಾಘ್ರಂ ವಿಷ್ಣುಮಿಂದ್ರಾಜ್ಞಯಾ ಯಥಾ ॥ ೬

ಸಾಂಕಾಶ್ಯಾಂ ತೇ ಸಮಾಗಮ್ಯ ದದೃಶುಶ್ಚ ಕುಶಧ್ವಜಮ್ ।
ನ್ಯವೇದಯನ್ ಯಥಾವೃತ್ತಂ ಜನಕಸ್ಯ ಚ ಚಿಂತಿತಮ್ ॥ ೭

ತದ್ವೃತ್ತಂ ನೃಪತಿಃ ಶ್ರುತ್ವಾ ದೂತಶ್ರೇಷ್ಠೈರ್ಮಹಾಜವೈಃ ।
ಆಜ್ಞಯಾಥ ನರೇಂದ್ರಸ್ಯ ಆಜಗಾಮ ಕುಶಧ್ವಜಃ ॥ ೮

ಸ ದದರ್ಶ ಮಹಾತ್ಮಾನಂ ಜನಕಂ ಧರ್ಮವತ್ಸಲಮ್ ।
ಸೋಽಭಿವಾದ್ಯ ಶತಾನಂದಂ ಜನಕಂ ಚಾಪಿ ಧಾರ್ಮಿಕಃ ॥ ೯

ರಾಜಾರ್ಹಂ ಪರಮಂ ದಿವ್ಯಮಾಸನಂ ಸೋಽಧ್ಯರೋಹತ ।
ಉಪವಿಷ್ಟಾವುಭೌ ತೌ ತು ಭ್ರಾತರಾವಮಿತೌಜಸೌ ॥ ೧೦

ಪ್ರೇಷಯಾಮಾಸತುರ್ವೀರೌ ಮಂತ್ರಿಶ್ರೇಷ್ಠಂ ಸುದಾಮನಮ್ ।
ಗಚ್ಛ ಮಂತ್ರಿಪತೇ ಶೀಘ್ರಮೈಕ್ಷ್ವಾಕಮಮಿತಪ್ರಭಮ್ ॥ ೧೧

---

ಇಚ್ಛೆಯಾಗಿದೆ. ಆ ತೇಜಸ್ವಿಯು ಇಲ್ಲಿಗೆ ಬಂದು ನನ್ನ ಈ ಸಂತೋಷದಲ್ಲಿ ಭಾಗಿಯಾಗಲಿ" ಹೀಗೆ ಹೇಳುತ್ತಿರಲು ಕಾರ್ಯದಕ್ಷರಾದ ಕೆಲವು ಸೇವಕರು ಬಂದು ನಿಂತರು. ಕುಶಧ್ವಜನನ್ನು ಕರೆತರುವಂತೆ ಜನಕನು ಅವರಿಗೆ ಆಜ್ಞಾಪಿಸಿದನು (೪-೫). ರಾಜಾಜ್ಞೆಯನ್ನು ಪಡೆದು ದೂತರು ಇಂದ್ರಾಜ್ಞೆಯಿಂದ ಉಪೇಂದ್ರನನ್ನು ಕರೆತರಲು ಹೊರಡುವಂತೆ ಕುದುರೆಗಳನ್ನೇರಿ ಹೊರಟರು. ಅವರು ಸಾಂಕಾಶ್ಯಾನಗರಕ್ಕೆ ಬಂದು ಕುಶಧ್ವಜನನ್ನು ಸಂದರ್ಶಿಸಿ ಜನಕರಾಜನ ಉದ್ದೇಶವನ್ನು ವಿವರವಾಗಿ ತಿಳಿಸಿದರು (೬-೭) ದೂತರಿಂದ ವೃತ್ತಾಂತವೆಲ್ಲವನ್ನೂ ತಿಳಿದು ರಾಜಾಜ್ಞೆಯಂತೆ ಕುಶಧ್ವಜನು ಮಿಥಿಲೆಗೆ ಬಂದು ಜನಕರಾಜನನ್ನು ಕಂಡನು ಅವನು ಶತಾನಂದರಿಗೂ ಜನಕನಿಗೂ ಅಭಿವಾದನೆಮಾಡಿ ರಾಜಾರ್ಹವಾದ ದಿವ್ಯಾಸನದಲ್ಲಿ ಕುಳಿತುಕೊಂಡನು (೮-೯). ಅನಂತರ ಜೊತೆಗೆ ಕುಳಿತಿದ್ದ ಜನಕ ಮತ್ತು ಕುಶಧ್ವಜರು ಸುದಾಮನನೆಂಬ ಮುಖ್ಯಮಂತ್ರಿಯನ್ನು ಕರೆದು ಶೀಘ್ರವಾಗಿ ದಶರಥರಾಜನನ್ನು ಪುತ್ರರೊಡನೆಯೂ ಮಂತ್ರಿಗಳೊಡನೆಯೂ ಕರೆದುತರಬೇಕೆಂದು

ಆತ್ಮಜೈಃ ಸಹ ದುರ್ಧರ್ಷಮಾನಯಸ್ವ ಸಮಂತ್ರಿಣಮ್ ।
ಔಪಕಾರ್ಯಾಂ ಸ ಗತ್ವಾ ತು ರಘೂಣಾಂ ಕುಲವರ್ಧನಮ್ ॥ ೧೨

ದದರ್ಶ ಶಿರಸಾ ಚೈನಮಭಿವಾದ್ಯೇದಮಬ್ರವೀತ್ ।
ಅಯೋಧ್ಯಾಧಿಪತೇ ವೀರ ವೈದೇಹೋ ಮಿಥಿಲಾಧಿಪಃ ॥ ೧೩

ಸ ತ್ವಾಂ ದ್ರಷ್ಟುಂ ವ್ಯವಸಿತಃ ಸೋಪಾಧ್ಯಾಯಪುರೋಹಿತಮ್ ।
ಮಂತ್ರಿಶ್ರೇಷ್ಠವಚಃ ಶ್ರುತ್ವಾ ರಾಜಾ ಸರ್ಷಿಗಣಸ್ತದಾ ॥ ೧೪

ಸಬಂಧುರಗಮತ್ತತ್ರ ಜನಕೋ ಯತ್ರ ವರ್ತತೇ ।
ಸ ರಾಜಾ ಮಂತ್ರಿಸಹಿತಃ ಸೋಪಾಧ್ಯಾಯಃ ಸಬಾಂಧವಃ ॥ ೧೫

ವಾಕ್ಯಂ ವಾಕ್ಯವಿದಾಂ ಶ್ರೇಷ್ಠೋ ವೈದೇಹಮಿದಮಬ್ರವೀತ್ ।
ವಿದಿತಂ ತೇ ಮಹಾರಾಜ ಇಕ್ಷ್ವಾಕುಕುಲದೈವತಮ್ ॥ ೧೬

ವಕ್ತಾ ಸರ್ವೇಷು ಕೃತ್ಯೇಷು ವಸಿಷ್ಠೋ ಭಗವಾನೃಷಿಃ ।
ವಿಶ್ವಾಮಿತ್ರಾಭ್ಯನುಜ್ಞಾತಃ ಸಹ ಸರ್ವೈರ್ಮಹರ್ಷಿಭಿಃ ॥ ೧೭

ಏಷ ವಕ್ಷ್ಯತಿ ಧರ್ಮಾತ್ಮಾ ವಸಿಷ್ಠೋ ಮೇ ಯಥಾಕ್ರಮಮ್ ।
ಏವಮುಕ್ತ್ವಾ ನರಶ್ರೇಷ್ಠೇ ರಾಜ್ಞಾಂ ಮಧ್ಯೇ ಮಹಾತ್ಮನಾಮ್ ॥

---

ತಿಳಿಸಿದರು (೧೦-೧೧). ಅದರಂತೆ ಸುದಾಮನನು ದಶರಥನಿದ್ದ ಬಿಡಾರಕ್ಕೆ ತೆರಳಿ, ದಶರಥನನ್ನು ಸಂದರ್ಶಿಸಿ, ತಲೆಬಾಗಿ ನಮಸ್ಕರಿಸಿ "ಹೇ ಅಯೋಧ್ಯಾಧಿಪತಿ, ಮಿಥಿಲಾಧಿಪತಿಯಾದ ಜನಕರಾಜನು ಪುರೋಹಿತಾದಿ ಪರಿವಾರಸಮೇತನಾದ ನಿನ್ನನ್ನು ನೋಡಲಾಶಿಸುತ್ತಾನೆ" ಎಂದನು (೧೨-೧೩). ಪ್ರಧಾನಮಂತ್ರಿಯ ನುಡಿಯನ್ನು ಕೇಳಿ ದಶರಥನು ಋಷಿಗಳನ್ನೂ ಬಂಧುಗಳನ್ನೂ ಜೊತೆಗೂಡಿ ಪರಿವಾರಸಮೇತನಾಗಿ ಜನಕರಾಜನಿದ್ದಲ್ಲಿಗೆ ಬಂದನು (೧೪-೧೫). ಅವನು ಜನಕನನ್ನುದ್ದೇಶಿಸಿ "ಮಹಾರಾಜ, ಭಗವಾನ್ ವಸಿಷ್ಠಮಹರ್ಷಿಗಳು ಇಕ್ಷ್ವಾಕುವಂಶದವರಿಗೆ ಕುಲದೇವತೆಯೆಂದು ನಿನಗೆ ವಿದಿತವಾಗಿಯೇ ಇದೆ. ನನ್ನ ಸಕಲ ಕೃತ್ಯಗಳಲ್ಲಿಯೂ ಅವರು ಮುಂದೆ ನಿಂತು ಮಾತನಾಡತಕ್ಕವರು. ವಿಶ್ವಾಮಿತ್ರರೇ ಮೊದಲಾದ ಸಕಲ ಮಹರ್ಷಿಗಳ ಸಮ್ಮತಿಯಂತೆ ಅವರು ನನ್ನ ವಂಶವನ್ನು ಯಥಾಕ್ರಮವಾಗಿ

ತೂಷ್ಣೀಂಭೂತೇ ದಶರಥೇ ವಸಿಷ್ಠೋ ಭಗವಾನೃಷಿಃ ।
ಉವಾಚ ವಾಕ್ಯಂ ವಾಕ್ಯಜ್ಞೋ ವೈದೇಹಂ ಸಪುರೋಧಸಮ್ ॥

ಅವ್ಯಕ್ತಪ್ರಭವೋ ಬ್ರಹ್ಮಾ ಶಾಶ್ವತೋ ನಿತ್ಯ ಅವ್ಯಯಃ ।
ತಸ್ಮಾನ್ಮರೀಚಿಃ ಸಂಜಜ್ಞೇ ಮರೀಚೇಃ ಕಶ್ಯಪಃ ಸುತಃ ॥ ೨೦

ವಿವಸ್ವಾನ್ ಕಶ್ಯಪಾಜ್ಜಜ್ಞೇ ಮನುರ್ವೈವಸ್ವತಃ ಸ್ಮೃತಃ ।
ಮನುಃ ಪ್ರಜಾಪತಿಃ ಪೂರ್ವಮಿಕ್ಷ್ವಾಕುಸ್ತು ಮನೋಃ ಸುತಃ ॥ ೨೧

ತಮಿಕ್ಷ್ವಾಕುಮಯೋಧ್ಯಾಯಾಂ ರಾಜಾನಂ ವಿದ್ಧಿ ಪೂರ್ವಕಮ್ ।
ಇಕ್ಷ್ವಾಕೋಸ್ತು ಸುತಃ ಶ್ರೀಮಾನ್ ಕುಕ್ಷಿರಿತ್ಯೇವ ವಿಶ್ರುತಃ ॥ ೨೨

ಕುಕ್ಷೇರಥಾತ್ಮಜಃ ಶ್ರೀಮಾನ್ ವಿಕುಕ್ಷಿರುದಪದ್ಯತ ।
ವಿಕುಕ್ಷೇಸ್ತು ಮಹಾತೇಜಾ ಬಾಣಃ ಪುತ್ರಃ ಪ್ರತಾಪವಾನ್ ॥ ೨೩

ಬಾಣಸ್ಯ ತು ಮಹಾತೇಜಾ ಅನರಣ್ಯಃ ಪ್ರತಾಪವಾನ್ ।
ಅನರಣ್ಯಾತ್ ಪೃಥುರ್ಜಜ್ಞೇ ತ್ರಿಶಂಕುಸ್ತು ಪೃಥೋಃ ಸುತಃ ॥ ೨೪

ತ್ರಿಶಂಕೋರಭವತ್ ಪುತ್ರೋ ಧುಂಧುಮಾರೋ ಮಹಾಯಶಾಃ ।
ಧುಂಧುಮಾರಾನ್ಮಹಾತೇಜಾ ಯುವನಾಶ್ವೋ ವ್ಯಜಾಯತ ॥ ೨೫

---

ತಿಳಿಸುತ್ತಾರೆ" ಎಂದು ನುಡಿದನು (೧೬-೧೮). ನೆರೆದಿದ್ದ ಬಹುಮಂದಿ ರಾಜರೆದುರಿಗೆ ದಶರಥನು ಹೀಗೆ ಹೇಳಿ ವಿರಮಿಸಲು, ವಸಿಷ್ಠರು ಜನಕರಾಜನನ್ನೂ ಶತಾನಂದರನ್ನೂ ಉದ್ದೇಶಿಸಿ ಈ ಪ್ರಕಾರ ಹೇಳಲುಪಕ್ರಮಿಸಿದರು (೧೯): "ಅಗೋಚರವಾದ ಬ್ರಹ್ಮವಸ್ತುವಿನಿಂದ ಅನಾದಿಯೂ ನಾಶರಹಿತನೂ ಪರಿಣಾಮರಹಿತನೂ ಆದ ಬ್ರಹ್ಮನು ಆವಿರ್ಭವಿಸಿದನು. ಅವನಿಂದ ಮರೀಚಿಯು ಜನಿಸಿದನು ಮರೀಚಿಯ ಮಗ ಕಶ್ಯಪ (೨೦). ಕಶ್ಯಪನಿಂದ ವಿವಸ್ವಂತನೂ ಅವನಿಂದ ಮನುವೆಂಬ ರಾಜನೂ ಜನಿಸಿದರು. ಮನುವಿನ ಪುತ್ರ ಇಕ್ಷ್ವಾಕು. ಇಕ್ಷ್ವಾಕುವು ಅಯೋಧ್ಯಾಧಿಪತಿಗಳಲ್ಲಿ ಮೊದಲನೆಯವನು. ಅವನ ಮಗ ಕುಕ್ಷಿ. ಅವನ ಮಗ ವಿಕುಕ್ಷಿ. ಅವನಿಗೆ ಬಾಣನೆಂಬ ಪ್ರತಾಪಶಾಲಿಯು ಪುತ್ರನಾಗಿ ಜನಿಸಿದನು (೨೧-೨೩). ಬಾಣನ ಪುತ್ರ ಅನರಣ್ಯ. ಅವನ ಪುತ್ರ ಪೃಥು. ಪೃಥುವಿನ ಮಗ ತ್ರಿಶಂಕು. ತ್ರಿಶಂಕು

ಯುವನಾಶ್ವಸುತಸ್ತ್ವಾಸೀನ್ಮಾಂಧಾತಾ ಪೃಥಿವೀಪತಿಃ ।
ಮಾಂಧಾತುಸ್ತು ಸುತಃ ಶ್ರೀಮಾನ್ ಸುಸಂಧಿರುದಪದ್ಯತ ॥ ೨೬

ಸುಸಂಧೇರಪಿ ಪುತ್ರೌ ದ್ವೌ ಧ್ರುವಸಂಧಿಃ ಪ್ರಸೇನಜಿತ್ ।
ಯಶಸ್ವೀ ಧ್ರುವಸಂಧೇಸ್ತು ಭರತೋ ನಾಮ ನಾಮತಃ ॥ ೨೭

ಭರತಾತ್ತು ಮಹಾತೇಜಾ ಅಸಿತೋ ನಾಮ ಜಾತವಾನ್ ।
ಯಸ್ಯೈತೇ ಪ್ರತಿರಾಜಾನ ಉದಪದ್ಯಂತ ಶತ್ರವಃ ॥ ೨೮

ಹೈಹಯಾಸ್ತಾಲಜಂಘಾಶ್ಚ ಶೂರಾಶ್ಚ ಶಶಿಬಿಂದವಃ ।
ತಾಂಸ್ತು ಸ ಪ್ರತಿಯುಧ್ಯನ್ ವೈ ಯುದ್ಧೇ ರಾಜ್ಯಾತ್ ಪ್ರವಾಸಿತಃ॥

ಹಿಮವಂತಮುಪಾಗಮ್ಯ ಭೃಗುಪ್ರಸ್ರವಣೇಽವಸತ್ ।
ಅಸಿತೋಽಲ್ಪಬಲೋ ರಾಜಾ ಕಾಲಧರ್ಮಮುಪೇಯಿವಾನ್ ॥ ೩೦

ದ್ವೇ ಚಾಸ್ಯ ಭಾರ್ಯೇ ಗರ್ಭಿಣ್ಯೌ ಬಭೂವತುರಿತಿ ಶ್ರುತಮ್ ।
ಏಕಾ ಗರ್ಭವಿನಾಶಾಯ ಸಪತ್ನ್ಯೈ ಸಗರಂ ದದೌ ॥ ೩೧

ತತಃ ಶೈಲವರೇ ರಮ್ಯೇ ಬಭೂವಾಭಿರತೋ ಮುನಿಃ ।
ಭಾರ್ಗವಶ್ಚ್ಯವನೋ ನಾಮ ಹಿಮವಂತಮುಪಾಶ್ರಿತಃ ॥ ೩೨

---

ಇಗೆ ಧುಂಧುಮಾರನೆಂಬ ಕೀರ್ತಿಶಾಲಿಯಾದ ಮಗನು ಹುಟ್ಟಿದನು. ಧುಂಧುಮಾರನ ಮಗ ಯುವನಾಶ್ವ (೨೪-೨೫). ಅವನ ತನಯನೇ ಮಾಂಧಾತೃ ಚಕ್ರವರ್ತಿ. ಅವನ ಪುತ್ರ ಸುಸಂಧಿ ಸುಸಂಧಿಗೆ ಧ್ರುವಸಂಧಿ, ಪ್ರಸೇನಜಿತ್ ಎಂಬ ಇಬ್ಬರು ಮಕ್ಕಳು. ಧ್ರುವಸಂಧಿಯ ಮಗನೇ ಭರತಚಕ್ರವರ್ತಿ. ಅವನ ಮಗ ಅಸಿತ. ಅಸಿತನಿಗೆ ಹೈಹಯರು, ತಾಲಜಂಘರು, ಶಶಿಬಿಂದುಗಳು ಎಂಬ ಕ್ಷತ್ರಿಯರು ವೈರಿಗಳಾಗಿದ್ದರು. ಅವರೊಡನೆ ಯುದ್ಧಮಾಡಿ ಅಸಿತನು ರಾಜ್ಯಭ್ರಷ್ಟನಾದನು (೨೬-೨೯). ಅವನು ಹಿಮಾಲಯಕ್ಕೆ ಹೋಗಿ ಭೃಗುಪ್ರಸ್ರವಣದಲ್ಲಿ ವಾಸಮಾಡುತ್ತ ಅಲ್ಲಿಯೇ ಮೃತನಾದನು. ಆ ಸಮಯದಲ್ಲಿ ಅವನ ಇಬ್ಬರು ಪತ್ನಿಯರು ಗರ್ಭಿಣಿಯರಾಗಿದ್ದರೆಂದು ಕೇಳಿದ್ದೇನೆ. ಅವರಲ್ಲೊಬ್ಬಳು ಗರ್ಭನಾಶವಾಗಲೆಂದು ತನ್ನ ಸವತಿಗೆ ಸಗರವಾದ * ಭಕ್ಷ್ಯವನ್ನು ಕೊಟ್ಟಳು (೩೦-೩೧). ಆ ಸಮಯದಲ್ಲಿ ಭೃಗುವಂಶೀಯನಾದ ಚ್ಯವನನೆಂಬ

---

* ಗರ = ವಿಷ, ಸಗರ = ವಿಷಮಿಶ್ರವಾದ.

ತತ್ರೈಕಾ ತು ಮಹಾಭಾಗಾ ಭಾರ್ಗವಂ ದೇವವರ್ಚಸಮ್ ।
ವವಂದೇ ಪದ್ಮಪತ್ರಾಕ್ಷೀ ಕಾಂಕ್ಷಂತೀ ಸುತಮಾತ್ಮನಃ ॥ ೩೩

ತಮೃಷಿಂ ಸಾಭ್ಯುಪಾಗಮ್ಯ ಕಾಲಿಂದೀ ಚಾಭ್ಯವಾದಯತ್ ।
ಸ ತಾಮಭ್ಯವದದ್ವಿಪ್ರಃ ಪುತ್ರೇಪ್ಸುಂ ಪುತ್ರಜನ್ಮನಿ ॥ ೩೪

ತವ ಕುಕ್ಷೌ ಮಹಾಭಾಗೇ ಸುಪುತ್ರಃ ಸುಮಹಾಬಲಃ ।
ಮಹಾವೀರ್ಯೋ ಮಹಾತೇಜಾ ಅಚಿರಾತ್ ಸಂಜನಿಷ್ಯತಿ ॥ ೩೫

ಗರೇಣ ಸಹಿತಃ ಶ್ರೀಮಾನ್ ಮಾ ಶುಚಃ ಕಮಲೇಕ್ಷಣೇ ।
ಏವಮುಕ್ತ್ವಾ ಮಹಾತೇಜಾ ಅಸಿತೇ ಸ್ವರ್ಗತೇ ಸತಿ ॥ ೩೬

ವಿಧಾಯ ಚೇತೋ ನೃಪತೌ ವಿದ್ಯುಲ್ಲೇಖೇವ ಸುಪ್ರಭಾ ।
ಚ್ಯವನಂ ತು ನಮಸ್ಕೃತ್ಯ ರಾಜಪುತ್ರೀ ಪತಿವ್ರತಾ ॥ ೩೭

ಪತಿಶೋಕಾತುರಾ ತಸ್ಮಾತ್ ಪುತ್ರಂ ದೇವೀ ವ್ಯಜಾಯತ ।
ಸಪತ್ನ್ಯಾ ತು ಗರಸ್ತಸ್ಯೈ ದತ್ತೋ ಗರ್ಭಜಿಘಾಂಸಯಾ ॥ ೩೮

ಸಹ ತೇನ ಗರೇಣೈವ ಜಾತಃ ಸ ಸಗರೋಽಭವತ್ ।
ಸಗರಸ್ಯಾಸಮಂಜಸ್ತು ಅಸಮಂಜಾದಥಾಂಶುಮಾನ್ ॥ ೩೯

---

ಋಷಿಯು ಹಿಮಾಲಯದಲ್ಲಿ ತಪೋನಿರತನಾಗಿದ್ದನು ಆಗ (ವಿಷಮಿಶ್ರವಾದ ಆಹಾರವನ್ನು ಸೇವಿಸಿದ್ದ) ಕಾಲಿಂದಿಯು ಚ್ಯವನನಿಗೆ ಅಭಿವಂದಿಸಿ ತನ್ನ ಪುತ್ರಾಪೇಕ್ಷೆಯನ್ನು ವ್ಯಕ್ತಪಡಿಸಿದಳು (೩೨-೩೪) ಚ್ಯವನಮುನಿಯು "ಮಹಾಶಯಳೆ, ನಿನ್ನ ಗರ್ಭದಿಂದ ಮಹಾವೀರನೂ ತೇಜಸ್ವಿಯೂ ಆದ ಒಬ್ಬ ಸುಪುತ್ರನು ಉದಯಿಸುವನು. (ನೀನು ಸೇವಿಸಿದ) ವಿಷದೊಡನೆಯೇ ಆತನು ಹುಟ್ಟುತ್ತಾನೆ. ಶೋಕಿಸಬೇಡ" ಎಂದು ನುಡಿದನು (೩೫-೩೬). ಅನಂತರ ವಿದ್ಯುಲ್ಲತೆಯಂತೆ ಸುಂದರಿಯೂ ಪತಿವ್ರತೆಯೂ ಆಗಿದ್ದ ಕಾಲಿಂದಿಯು ತನ್ನ ಪತಿಯನ್ನೇ ಧ್ಯಾನಿಸುತ್ತ ಶೋಕಾತುರಳಾಗಿದ್ದಳು. ಕೆಲವು ಕಾಲದ ಮೇಲೆ ಚ್ಯವನಮುನಿಯ ವರಪ್ರಸಾದದಿಂದ ಅವಳು ಒಬ್ಬ ಪುತ್ರನನ್ನು ಹಡೆದಳು. ಆ ಕುಮಾರನು ಗರದಿಂದ ಸಹಿತನಾದ್ದರಿಂದ ಸಗರನೆಂದು ಪ್ರಸಿದ್ಧನಾದನು. ಸಗರನ ಮಗ ಅಸಮಂಜ. ಅವನ ಮಗ

ದಿಲೀಪೋಂಽಶುಮತಃ ಪುತ್ರೋ ದಿಲೀಪಸ್ಯ ಭಗೀರಥಃ ।
ಭಗೀರಥಾತ್ ಕಕುತ್ಸ್ಥೋಽಭೂತ್ ಕಕುತ್ಸ್ಥಸ್ಯ ರಘುಃ ಸುತಃ ॥

ರಘೋಸ್ತು ಪುತ್ರಸ್ತೇಜಸ್ವೀ ಪ್ರವೃದ್ಧಃ ಪುರುಷಾದಕಃ ।
ಕಲ್ಮಾಷಪಾದೋ ಹ್ಯಭವತ್ತಸ್ಮಾಜ್ಜಾತಶ್ಚ ಶಂಖಣಃ ॥ ೪೧

ಸುದರ್ಶನಃ ಶಂಖಣಸ್ಯ ಅಗ್ನಿವರ್ಣಃ ಸುದರ್ಶನಾತ್ ।
ಶೀಘ್ರಗಸ್ತ್ವಗ್ನಿವರ್ಣಸ್ಯ ಶೀಘ್ರಗಸ್ಯ ಮರುಃ ಸುತಃ ॥ ೪೨

ಮರೋಃ ಪ್ರಶುಶ್ರುಕಸ್ತ್ವಾಸೀದಂಬರೀಷಃ ಪ್ರಶುಶ್ರುಕಾತ್ ।
ಅಂಬರೀಷಸ್ಯ ಪುತ್ರೋಽಭೂನ್ನಹುಷಃ ಪೃಥಿವೀಪತಿಃ ॥ ೪೩

ನಹುಷಸ್ಯ ಯಯಾತಿಶ್ಚ ನಾಭಾಗಸ್ತು ಯಯಾತಿಜಃ ।
ನಾಭಾಗಸ್ಯ ಬಭೂವಾಜಃ ಅಜಾದ್ದಶರಥೋಽಭವತ್ ॥ ೪೪

ಅಸ್ಮಾದ್ದಶರಥಾಜ್ಜಾತೌ ಭ್ರಾತರೌ ರಾಮಲಕ್ಷ್ಮಣೌ ।
ಆದಿವಂಶವಿಶುದ್ಧಾನಾಂ ರಾಜ್ಞಾಂ ಪರಮಧರ್ಮಿಣಾಮ್ ॥ ೪೫

---

ಅಂಶುಮಂತ (೩೭-೩೯). ಅಂಶುಮಂತನ ಮಗ ದಿಲೀಪ. ಅವನ ಮಗ ಭಗೀರಥ ಭಗೀರಥನಿಂದ ಕಕುತ್ಸ್ಥನೂ ಕಕುತ್ಸ್ಥನಿಂದ ರಘುವೂ ಹುಟ್ಟಿದರು. ರಘುವಿನ ಪುತ್ರನು ತೇಜಸ್ವಿಯಾದ ಪ್ರವೃದ್ಧ. ಅವನು ಮುಂದೆ ರಾಕ್ಷಸನಾದನು. ಅವನಿಗೆ ಕಲ್ಮಾಷಪಾದನೆಂದು ಇನ್ನೊಂದು ಹೆಸರಿತ್ತು.* ಅವನಿಂದ ಶಂಖಣನು ಜನಿಸಿದನು (೪೦-೪೧). ಶಂಖಣನ ಪುತ್ರ ಸುದರ್ಶನ. ಅವನಿಂದ ಅಗ್ನಿವರ್ಣನು ಹುಟ್ಟಿದನು. ಅಗ್ನಿವರ್ಣನ ಮಗ ಶೀಘ್ರಗ. ಅವನ ಮಗ ಮರು. ಮರುವಿಗೆ ಪ್ರಶುಶ್ರುಕನೂ ಅವನಿಗೆ ಅಂಬರೀಷನೂ ಪುತ್ರರಾಗಿ ಉದ್ಭವಿಸಿದರು. ಅಂಬರೀಷನ ಸುತನೇ ನಹುಷ ಚಕ್ರವರ್ತಿ (೪೨-೪೩). ಯಯಾತಿಯು ನಹುಷನ ಮಗ. ನಾಭಾಗನು ಯಯಾತಿಯ ಮಗ. ನಾಭಾಗನ ಪುತ್ರನೇ ಅಜಮಹಾರಾಜ. ಅಜಮಹಾರಾಜನಿಗೆ ಈ ದಶರಥಮಹಾರಾಜನು ಪುತ್ರನಾಗಿ ಜನಿಸಿದ್ದಾನೆ (೪೪). ಈ ಅಣ್ಣತಮ್ಮಂದಿರಾದ ರಾಮಲಕ್ಷ್ಮಣರು ದಶರಥನ ಕುಮಾರರು. ಹೇ ಜನಕರಾಜ, ಆದಿ

---

* ಅನುಬಂಧವನ್ನು ನೋಡಿ.

ಇಕ್ಷ್ವಾಕುಕುಲಜಾತಾನಾಂ ವೀರಾಣಾಂ ಸತ್ಯವಾದಿನಾಮ್ ।
ರಾಮಲಕ್ಷ್ಮಣಯೋರರ್ಥೇ ತ್ವತ್ಸುತೇ ವರಯೇ ನೃಪ ॥ ೪೬
ಸದೃಶಾಭ್ಯಾಂ ನರಶ್ರೇಷ್ಠ ಸದೃಶೇ ದಾತುಮರ್ಹಸಿ ॥

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಸಪ್ತತಿತಮಃ ಸರ್ಗಃ



ಯಿಂದಲೂ ಪರಿಶುದ್ಧವಂಶದಲ್ಲಿ ಜನಿಸಿದವರೂ ಪರಮಧಾರ್ಮಿಕರೂ ವೀರರೂ ಸತ್ಯಸಂಧರೂ ಆದ ಇಕ್ಷ್ವಾಕುವಂಶದ ರಾಜರ ಪರಂಪರೆಯಲ್ಲಿ ಜನಿಸಿರುವ ರಾಮಲಕ್ಷ್ಮಣರಿಗೋಸ್ಕರ ನಿನ್ನ ಇಬ್ಬರು ಕನ್ಯೆಯರನ್ನು ಸ್ವೀಕರಿಸುತ್ತೇನೆ. ಅನುರೂಪರಾದ ಇವರಿಗೆ ನಿನ್ನ ಪುತ್ರಿಯರನ್ನು ವಿವಾಹಮಾಡಿಕೊಡಬೇಕು" (೪೫-೪೬).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಎಪ್ಪತ್ತನೆಯ ಸರ್ಗ



## ಏಕಸಪ್ತತಿತಮಃ ಸರ್ಗಃ

### ಕನ್ಯಾದಾನಪ್ರತಿಶ್ರವಃ

ಏವಂ ಬ್ರುವಾಣಂ ಜನಕಃ ಪ್ರತ್ಯುವಾಚ ಕೃತಾಂಜಲಿಃ ।
ಶ್ರೋತುಮರ್ಹಸಿ ಭದ್ರಂ ತೇ ಕುಲಂ ನಃ ಪರಿಕೀರ್ತಿತಮ್ ॥ ೧

ಪ್ರದಾನೇ ಹಿ ಮುನಿಶ್ರೇಷ್ಠ ಕುಲಂ ನಿರವಶೇಷತಃ ।
ವಕ್ತವ್ಯಂ ಕುಲಜಾತೇನ ತನ್ನಿಬೋಧ ಮಹಾಮುನೇ ॥ ೨

ರಾಜಾಭೂತ್ ತ್ರಿಷು ಲೋಕೇಷು ವಿಶ್ರುತಃ ಸ್ವೇನ ಕರ್ಮಣಾ ।
ನಿಮಿಃ ಪರಮಧರ್ಮಾತ್ಮಾ ಸರ್ವಸತ್ತ್ವವತಾಂ ವರಃ ॥ ೩

ತಸ್ಯ ಪುತ್ರೋ ಮಿಥಿರ್ನಾಮ ಜನಕೋ ಮಿಥಿಪುತ್ರಕಃ ।
ಪ್ರಥಮೋ ಜನಕೋ ರಾಜಾ ಜನಕಾದಪ್ಯುದಾವಸುಃ ॥ ೪

## ಸರ್ಗ ೭೧

ಜನಕನು ತನ್ನ ವಂಶವನ್ನು ಕೀರ್ತಿಸಿ ರಾಮನಿಗೆ ಸೀತೆಯನ್ನೂ ಲಕ್ಷ್ಮಣನಿಗೆ ಊರ್ಮಿಳೆಯನ್ನೂ ವಾಗ್ದಾನ ಮಾಡುವುದು.

ವಸಿಷ್ಠರು ಈ ರೀತಿಯಲ್ಲಿ ನುಡಿಯಲು ಜನಕರಾಜನು ಕೃತಾಂಜಲಿಯಾಗಿ ಹೀಗೆಂದನು: "ಮುನಿಶ್ರೇಷ್ಠರೆ, ಒಳ್ಳೆಯದು. ಈಗ ನನ್ನ ವಂಶವನ್ನು ಕೀರ್ತಿಸುತ್ತೇನೆ. ಕೇಳೋಣವಾಗಬೇಕು. ಸತ್ಕುಲಪ್ರಸೂತನು ಕನ್ಯಾದಾನ ಸಮಯದಲ್ಲಿ ತನ್ನ ಕುಲವನ್ನು ಪೂರ್ಣವಾಗಿ ತಿಳಿಸಬೇಕು (೧-೨). ಪೂರ್ವದಲ್ಲಿ ತನ್ನ ಕೃತಿಯಿಂದ ಲೋಕತ್ರಯವಿಖ್ಯಾತನಾದ ನಿಮಿಯೆಂಬ ರಾಜನಿದ್ದನು. ಅವನು ಪರಮಧರ್ಮಿಷ್ಠ. ವೀರರಲ್ಲಿ ಅಗ್ರೇಸರ. ಅವನ ಪುತ್ರ ಮಿಥಿ ಮಿಥಿಯ ಪುತ್ರನೇ ಜನಕ. (ಅವನ ವಂಶದವರಾದ ನಮಗೆ ಜನಕರೆಂದು ಹೆಸರುಬರಲು ಕಾರಣನಾದ) ಪ್ರಥಮ ಜನಕನೇ

ಉದಾವಸೋಽಸ್ತು ಧರ್ಮಾತ್ಮಾ ಜಾತೋ ವೈ ನಂದಿವರ್ಧನಃ ।
ನಂದಿವರ್ಧನಪುತ್ರಸ್ತು ಸುಕೇತುರ್ನಾಮ ನಾಮತಃ ॥ ೫
ಸುಕೇತೋರಪಿ ಧರ್ಮಾತ್ಮಾ ದೇವರಾತೋ ಮಹಾಬಲಃ ।
ದೇವರಾತಸ್ಯ ರಾಜರ್ಷೇರ್ಬೃಹದ್ರಥ ಇತಿ ಶ್ರುತಃ ॥ ೬
ಬೃಹದ್ರಥಸ್ಯ ಶೂರೋಽಭೂನ್ಮಹಾವೀರಃ ಪ್ರತಾಪವಾನ್ ।
ಮಹಾವೀರಸ್ಯ ಧೃತಿಮಾನ್ ಸುಧೃತಿಃ ಸತ್ಯವಿಕ್ರಮಃ ॥ ೭
ಸುಧೃತೇರಪಿ ಧರ್ಮಾತ್ಮಾ ಧೃಷ್ಟಕೇತುಃ ಸುಧಾರ್ಮಿಕಃ ।
ಧೃಷ್ಟಕೇತೋಸ್ತು ರಾಜರ್ಷೇರ್ಹರ್ಯಶ್ವ ಇತಿ ವಿಶ್ರುತಃ ॥ ೮
ಹರ್ಯಶ್ವಸ್ಯ ಮರುಃ ಪುತ್ರೋ ಮರೋಃ ಪುತ್ರಃ ಪ್ರತೀಂಧಕಃ ।
ಪ್ರತೀಂಧಕಸ್ಯ ಧರ್ಮಾತ್ಮಾ ರಾಜಾ ಕೀರ್ತಿರಥಃ ಸುತಃ ॥ ೯
ಪುತ್ರಃ ಕೀರ್ತಿರಥಸ್ಯಾಪಿ ದೇವಮೀಢ ಇತಿ ಶ್ರುತಃ ।
ದೇವಮೀಢಸ್ಯ ವಿಬುಧೋ ವಿಬುಧಸ್ಯ ಮಹೀಧ್ರಕಃ ॥ ೧೦
ಮಹೀಧ್ರಕಸುತೋ ರಾಜಾ ಕೀರ್ತಿರಾತೋ ಮಹಾಬಲಃ ।
ಕೀರ್ತಿರಾತಸ್ಯ ರಾಜರ್ಷೇರ್ಮಹಾರೋಮಾ ವ್ಯಜಾಯತ ॥ ೧೧
ಮಹಾರೋಮ್ಣಸ್ತು ಧರ್ಮಾತ್ಮಾ ಸ್ವರ್ಣರೋಮಾ ವ್ಯಜಾಯತ ।
ಸ್ವರ್ಣರೋಮ್ಣಸ್ತು ರಾಜರ್ಷೇರ್ಹ್ರಸ್ವರೋಮಾ ವ್ಯಜಾಯತ ॥ ೧೨

ಅವನು. ಜನಕನಿಂದ ಉದಾವಸುವು ಜನಿಸಿದನು (೩–೪) ಉದಾವಸುವಿಗೆ ನಂದಿವರ್ಧನನೂ ಅವನಿಗೆ ಸುಕೇತು ಎಂಬವನೂ ಹುಟ್ಟಿದರು ಮಹಾ ಬಲಶಾಲಿಯಾದ ದೇವರಾತನು ಸುಕೇತುವಿನ ಪುತ್ರ. ಬೃಹದ್ರಥನು ದೇವ ರಾತನ ಪುತ್ರ. ಅವನ ಮಗ ಮಹಾವೀರ. ಅವನ ಸುತ ಸತ್ಯಸಂಧನಾದ ಸುಧೃತಿ (೫–೭). ಆತನಿಗೆ ಧರ್ಮಾತ್ಮನಾದ ಧೃಷ್ಟಕೇತುವೂ, ಆತನಿಗೆ ಹರ್ಯಶ್ವನೂ ಪುತ್ರರಾಗಿ ಜನಿಸಿದರು ಹರ್ಯಶ್ವನ ಪುತ್ರ ಮರು. ಮರು ವಿನ ಪುತ್ರ ಪ್ರತೀಂಧಕ. ಅವನ ತನಯ ಕೀರ್ತಿರಥ (೮–೯). ಕೀರ್ತಿರಥನ ಪುತ್ರ ದೇವಮೀಢ ಅವನ ಮಗ ವಿಬುಧ. ಅವನ ಮಗ ಮಹೀಧ್ರಕ. ಅವನ ಮಗ ಕೀರ್ತಿರಾತ. ಅವನಿಗೆ ಮಹಾರೋಮನು ಪುತ್ರನಾಗಿ ಜನಿಸಿ ದನು. ಮಹಾರೋಮನಿಗೆ ಸ್ವರ್ಣರೋಮನು ಮಗನಾಗಿ ಜನಿಸಿದನು.

ತಸ್ಯ ಪುತ್ರದ್ವಯಂ ಜಜ್ಞೇ ಧರ್ಮಜ್ಞಸ್ಯ ಮಹಾತ್ಮನಃ ।
ಜ್ಯೇಷ್ಠೋಽಹಮನುಜೋ ಭ್ರಾತಾ ಮಮ ವೀರಃ ಕುಶಧ್ವಜಃ ॥

ಮಾಂ ತು ಜ್ಯೇಷ್ಠಂ ಪಿತಾ ರಾಜ್ಯೇ ಸೋಽಭಿಷಿಚ್ಯ ನರಾಧಿಪಃ ।
ಕುಶಧ್ವಜಂ ಸಮಾವೇಶ್ಯ ಭಾರಂ ಮಯಿ ವನಂ ಗತಃ ॥ ೧೪

ವೃದ್ಧೇ ಪಿತರಿ ಸ್ವರ್ಯಾತೇ ಧರ್ಮೇಣ ಧುರಮಾವಹನ್ ।
ಭ್ರಾತರಂ ದೇವಸಂಕಾಶಂ ಸ್ನೇಹಾತ್ ಪಶ್ಯನ್ ಕುಶಧ್ವಜಮ್ ॥

ಕಸ್ಯಚಿತ್ತ್ವಥ ಕಾಲಸ್ಯ ಸಾಂಕಾಶ್ಯಾದಾಗತಃ ಪುರಾತ್ ।
ಸುಧನ್ವಾ ವೀರ್ಯವಾನ್ ರಾಜಾ ಮಿಥಿಲಾಮವರೋಧಕಃ ॥ ೧೬

ಸ ಚ ಮೇ ಪ್ರೇಷಯಾಮಾಸ ಶೈವಂ ಧನುರನುತ್ತಮಮ್ ।
ಸೀತಾ ಕನ್ಯಾ ಚ ಪದ್ಮಾಕ್ಷೀ ಮಹ್ಯಂ ವೈ ದೀಯತಾಮಿತಿ ॥ ೧೭

ತಸ್ಯಾಪ್ರದಾನಾದ್ಬ್ರಹ್ಮರ್ಷೇ ಯುದ್ಧಮಾಸೀನ್ಮಯಾ ಸಹ ।
ಸ ಹತೋಽಭಿಮುಖೋ ರಾಜಾ ಸುಧನ್ವಾ ತು ಮಯಾ ರಣೇ ॥ ೧೮

---

ಅವನಿಗೆ ಹ್ರಸ್ವರೋಮನು ಪುತ್ರನಾಗಿ ಜನಿಸಿದನು (೧೦-೧೨). ಮಹಾತ್ಮನಾದ ಹ್ರಸ್ವರೋಮನಿಗೆ ಇಬ್ಬರು ಮಕ್ಕಳು. ಅವರಲ್ಲಿ ನಾನು ಜ್ಯೇಷ್ಠಪುತ್ರ. ವೀರನಾದ ಕುಶಧ್ವಜನು ನನ್ನ ತಮ್ಮ. ನನ್ನ ತಂದೆಯು ಜ್ಯೇಷ್ಠನಾದ ನನಗೆ ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿ ಕುಶಧ್ವಜನ ಯೋಗಕ್ಷೇಮದ ಭಾರವನ್ನು ನನಗೆ ವಹಿಸಿ (ತಪಸ್ಸಿಗಾಗಿ) ವನಕ್ಕೆ ಹೊರಟುಹೋದನು (೧೩-೧೪). ಅಲ್ಲಿ ವೃದ್ಧನಾದ ನನ್ನ ತಂದೆಯು ಸ್ವರ್ಗಸ್ಥನಾದಮೇಲೆ ನಾನು ರಾಜ್ಯಭಾರವನ್ನು ಮಾಡುತ್ತ ದೇವತಾಸದೃಶನಾದ ನನ್ನ ತಮ್ಮನನ್ನು ಸ್ನೇಹದಿಂದ ನೋಡಿಕೊಳ್ಳುತ್ತಿದ್ದೇನೆ. ಹೀಗಿರಲು ಒಂದು ಸಲ ಸಾಂಕಾಶ್ಯಾನಗರದಿಂದ ಸುಧನ್ವನೆಂಬ ರಾಜನು ಬಂದು ಈ ಮಿಥಿಲಾನಗರವನ್ನು ಮುತ್ತಿದನು (೧೫-೧೬) ಅವನು ಶೈವಧನುಸ್ಸನ್ನೂ ಪದ್ಮನೇತ್ರೆಯಾದ ನನ್ನ ಮಗಳು ಸೀತೆಯನ್ನೂ ತನಗೆ ಕೊಡಬೇಕೆಂದು ಹೇಳಿಕಳಿಸಿದನು. ನಾನು ಅದಕ್ಕೆ ಒಪ್ಪಲಿಲ್ಲ. ಬ್ರಹ್ಮರ್ಷಿಗಳೆ, ಅನಂತರ ಅವನಿಗೂ ನನಗೂ ಯುದ್ಧವಾಯಿತು. ರಣರಂಗದಲ್ಲಿ ನಾನು ಸುಧನ್ವನನ್ನು ಸಂಹರಿಸಿದೆನು (೧೭-೧೮).

ನಿಹತ್ಯಂ ತಂ ಮುನಿಶ್ರೇಷ್ಠ ಸುಧನ್ವಾನಂ ನರಾಧಿಪಮ್ ।
ಸಾಂಕಾಶ್ಯೇ ಭ್ರಾತರಂ ವೀರಮಭ್ಯಷಿಂಚಂ ಕುಶಧ್ವಜಮ್ ॥ ೧೯
ಕನೀಯಾನೇಷ ಮೇ ಭ್ರಾತಾ ಅಹಂ ಜ್ಯೇಷ್ಠೋ ಮಹಾಮುನೇ ।
ದದಾಮಿ ಪರಮಪ್ರೀತೋ ವಧ್ವೌ ತೇ ಮುನಿಪುಂಗವ ॥ ೨೦
ಸೀತಾಂ ರಾಮಾಯ ಭದ್ರಂ ತೇ ಊರ್ಮಿಲಾಂ ಲಕ್ಷ್ಮಣಾಯ ಚ ।
ವೀರ್ಯಶುಲ್ಕಾಂ ಮಮ ಸುತಾಂ ಸೀತಾಂ ಸುರಸುತೋಪಮಾಮ್
ದ್ವಿತೀಯಾಮೂರ್ಮಿಲಾಂ ಚೈವ ತ್ರಿರ್ದದಾಮಿ ನ ಸಂಶಯಃ ।
ರಾಮಲಕ್ಷ್ಮಣಯೋ ರಾಜನ್ ಗೋದಾನಂ ಕಾರಯಸ್ವ ಹ ॥ ೨೨
ಪಿತೃಕಾರ್ಯಂ ಚ ಭದ್ರಂ ತೇ ತತೋ ವೈವಾಹಿಕಂ ಕುರು ।
ಮಘಾ ಹ್ಯದ್ಯ ಮಹಾಬಾಹೋ ತೃತೀಯೇ ದಿವಸೇ ವಿಭೋ ॥ ೨೩
ಫಲ್ಗುನ್ಯಾಮುತ್ತರೇ ರಾಜಂಸ್ತಸ್ಮಿನ್ ವೈವಾಹಿಕಂ ಕುರು ।
ರಾಮಲಕ್ಷ್ಮಣಯೋರರ್ಥೇ ದಾನಂ ಕಾರ್ಯಂ ಸುಖೋದಯಮ್

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಏಕಸಪ್ತತಿತಮಃ ಸರ್ಗಃ

---

ಸುಧನ್ವನನ್ನು ಸಂಹರಿಸಿ ವೀರನಾದ ನನ್ನ ಸೋದರ ಕುಶಧ್ವಜನಿಗೆ ಸಾಂಕಾಶ್ಯದಲ್ಲಿ ರಾಜ್ಯಾಭಿಷೇಕಮಾಡಿದೆನು. ಮಹರ್ಷಿಗಳೆ, ಈತನು ನನ್ನ ತಮ್ಮ, ನಾನು ಇವನ ಅಣ್ಣ. ಒಳ್ಳೆಯದು ಈಗ ನಾನು ಸಂತೋಷದಿಂದ ನನ್ನ ಪುತ್ರಿಯರಲ್ಲಿ ಸೀತೆಯನ್ನು ಶ್ರೀರಾಮನಿಗೂ ಊರ್ಮಿಳೆಯನ್ನು ಲಕ್ಷ್ಮಣನಿಗೂ ವಿವಾಹಮಾಡಿಕೊಡುತ್ತೇನೆ (೧೯-೨೦). ಮಹಾರಾಜ— ದಶರಥ, ನನ್ನ ಮಗಳಾದ ಸೀತೆ ಸಾಕ್ಷಾತ್ ದೇವತೆಯಂತಿದ್ದಾಳೆ. ಅವಳು ವೀರ್ಯಶುಲ್ಕಳು. ಅವಳನ್ನು ರಾಮನಿಗೂ ಎರಡನೆಯ ಮಗಳಾದ ಊರ್ಮಿಳೆಯನ್ನು ಲಕ್ಷ್ಮಣನಿಗೂ ವಿವಾಹಮಾಡಿಕೊಡುತ್ತೇನೆ-ಕೊಡುತ್ತೇನೆ -ಕೊಡುತ್ತೇನೆ. ಸಂದೇಹವಿಲ್ಲ (೨೧-೨೨) ರಾಮಲಕ್ಷ್ಮಣರಿಗೆ ಸಮಾವರ್ತನೆಯನ್ನು ಮಾಡಿಸು. ನಾಂದಿಯನ್ನು ಇಟ್ಟುಕೊ. ಅನಂತರ ವಿವಾಹವನ್ನು ನಡೆಸು. ಇಂದುಮಘಾನಕ್ಷತ್ರ. ಇಂದಿಗೆ ಮೂರನೆಯ ದಿನ ಉತ್ತರಾಫಲ್ಗುನೀ ನಕ್ಷತ್ರದಲ್ಲಿ ವಿವಾಹವು ನಡೆಯಲಿ. ರಾಮಲಕ್ಷ್ಮಣರಿಗೆ ಶುಭವಾಗಲೆಂದು ಗೋದಾನಾದಿಗಳನ್ನು ಮಾಡಬೇಕು" (೨೩-೨೪).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಎಪ್ಪತ್ತೊಂದನೆಯ ಸರ್ಗ

## ದ್ವಿಸಪ್ತತಿತಮಃ ಸರ್ಗಃ

### ಗೋದಾನಮಂಗಲಮ್

ತಮುಕ್ತವಂತಂ ವೈದೇಹಂ ವಿಶ್ವಾಮಿತ್ರೋ ಮಹಾಮುನಿಃ ।
ಉವಾಚ ವಚನಂ ವೀರಂ ವಸಿಷ್ಠಸಹಿತೋ ನೃಪಮ್ ॥ ೧

ಅಚಿಂತ್ಯಾನ್ಯಪ್ರಮೇಯಾನಿ ಕುಲಾನಿ ನರಪುಂಗವ ।
ಇಕ್ಷ್ವಾಕೂಣಾಂ ವಿದೇಹಾನಾಂ ನೈಷಾಂ ತುಲ್ಯೋಽಸ್ತಿ ಕಶ್ಚನ ॥ ೨

ಸದೃಶೋ ಧರ್ಮಸಂಬಂಧಃ ಸದೃಶೋ ರೂಪಸಂಪದಾ ।
ರಾಮಲಕ್ಷ್ಮಣಯೋ ರಾಜನ್ ಸೀತಾ ಚೋರ್ಮಿಲಯಾ ಸಹ ॥ ೩

ವಕ್ತವ್ಯಂ ಚ ನರಶ್ರೇಷ್ಠ ಶ್ರೂಯತಾಂ ವಚನಂ ಮಮ ।
ಭ್ರಾತಾ ಯವೀಯಾನ್ ಧರ್ಮಜ್ಞ ಏಷ ರಾಜಾ ಕುಶಧ್ವಜಃ ॥ ೪

ಅಸ್ಯ ಧರ್ಮಾತ್ಮನೋ ರಾಜನ್ ರೂಪೇಣಾಪ್ರತಿಮಂ ಭುವಿ ।
ಸುತಾದ್ವಯಂ ನರಶ್ರೇಷ್ಠ ಪತ್ನ್ಯರ್ಥಂ ವರಯಾಮಹೇ ॥ ೫

### ಸರ್ಗ ೭೨

ಕುಶಧ್ವಜನ ಪುತ್ರಿಯರನ್ನು ಭರತ ಶತ್ರುಘ್ನರಿಗೆ ಕೊಡಬೇಕೆಂದು
ನಿಶ್ಚಯಿಸುವುದು. ಗೋದಾನ.

ಅನಂತರ ವಿಶ್ವಾಮಿತ್ರಮುನಿಗಳು ವಸಿಷ್ಠರ ಅನುಮೋದನೆಯನ್ನು ಪಡೆದು ಜನಕರಾಜನಿಗೆ ಹೇಳಿದರು: "ಮಹಾರಾಜ, ಇಕ್ಷ್ವಾಕುವಂಶವೂ ಜನಕವಂಶವೂ ಅಸಾಧಾರಣವಾದವು. ಇವುಗಳ ಮಹಿಮೆ ಊಹಾತೀತವಾದದ್ದು ಈ ವಂಶಗಳ ರಾಜರಿಗೆ ಸದೃಶನಾದವನು ಇನ್ನೊಬ್ಬನಿಲ್ಲ (೧–೨). ಈ ಎರಡು ವಂಶದವರಿಗೂ ವಿವಾಹ ಸಂಬಂಧವು ಪರಸ್ಪರ ಯೋಗ್ಯವಾಗಿದೆ. ರಾಮನಿಗೆ ಸೀತೆಯೂ ಲಕ್ಷ್ಮಣನಿಗೆ ಊರ್ಮಿಳೆಯೂ ಅನುರೂಪರಾಗಿದ್ದಾರೆ (೩) ನಾನು ಹೇಳಬೇಕಾದ ಒಂದು ಮಾತು ಇದೆ, ಕೇಳು. ನಿನ್ನ ತಮ್ಮನಾದ ಈ ಧರ್ಮಾತ್ಮ ಕುಶಧ್ವಜನಿಗೆ ಅತ್ಯಂತ ಸುಂದರಿಯರಾದ

ಭರತಸ್ಯ ಕುಮಾರಸ್ಯ ಶತ್ರುಘ್ನಸ್ಯ ಚ ಧೀಮತಃ ।
ವರಯೇಮ ಸುತೇ ರಾಜಂಸ್ತಯೋರರ್ಥೇ ಮಹಾತ್ಮನೋಃ ॥ ೬

ಪುತ್ರಾ ದಶರಥಸ್ಯೇಮೇ ರೂಪಯೌವನಶಾಲಿನಃ ।
ಲೋಕಪಾಲೋಪಮಾಃ ಸರ್ವೇ ದೇವತುಲ್ಯಪರಾಕ್ರಮಾಃ ॥ ೭

ಉಭಯೋರಪಿ ರಾಜೇಂದ್ರ ಸಂಬಂಧೋ ಹ್ಯನುಬಧ್ಯತಾಮ್ ।
ಇಕ್ಷ್ವಾಕೋಃ ಕುಲಮವ್ಯಗ್ರಂ ಭವತಃ ಪುಣ್ಯಕರ್ಮಣಃ ॥ ೮

ವಿಶ್ವಾಮಿತ್ರವಚಃ ಶ್ರುತ್ವಾ ವಸಿಷ್ಠಸ್ಯ ಮತೇ ತದಾ ।
ಜನಕಃ ಪ್ರಾಂಜಲಿರ್ವಾಕ್ಯಮುವಾಚ ಮುನಿಪುಂಗವೌ ॥ ೯

ಕುಲಂ ಧನ್ಯಮಿದಂ ಮನ್ಯೇ ಯೇಷಾಂ ನೋ ಮುನಿಪುಂಗವೌ ।
ಸದೃಶಂ ಕುಲಸಂಬಂಧಂ ಯದಾಜ್ಞಾಪಯಥಃ ಸ್ವಯಮ್ ॥ ೧೦

ಏವಂ ಭವತು ಭದ್ರಂ ವಃ ಕುಶಧ್ವಜಸುತೇ ಇಮೇ ।
ಪತ್ನ್ಯೌ ಭಜೇತಾಂ ಸಹಿತೌ ಶತ್ರುಘ್ನಭರತಾವುಭೌ ॥ ೧೧

---

ಇಬ್ಬರು ಹೆಣ್ಣು ಮಕ್ಕಳಿದ್ದಾರಷ್ಟೆ. ಅವರನ್ನು ರಾಜಕುಮಾರರಾದ ಭರತನಿಗೂ ಶತ್ರುಘ್ನನಿಗೂ ಮದುವೆಮಾಡಿಕೊಡಬೇಕೆಂದು ಕೇಳಿಕೊಳ್ಳುತ್ತೇವೆ (೪-೬). ದಶರಥನ ಈ ನಾಲ್ವರು ಪುತ್ರರೂ ರೂಪಯೌವನಸಂಪನ್ನರು. ದಿಕ್ಪಾಲಕರಂತೆ ವಿರಾಜಿಸುತ್ತಿದ್ದಾರೆ ದೇವತೆಗಳಂತೆ ಪರಾಕ್ರಮಿಗಳು. ರಾಜ, ನೀವಿಬ್ಬರೂ ಸಂಬಂಧವನ್ನು ಬೆಳೆಸಿರಿ. ನಿರ್ದೋಷವಾದ ಇಕ್ಷ್ವಾಕು ವಂಶವೂ ಪುಣ್ಯಶಾಲಿಯಾದ ನಿನ್ನ ವಂಶವೂ ಈ ಸಂಬಂಧದಿಂದ ಉತ್ಕರ್ಷವನ್ನು ಪಡೆಯಲಿ" (೭-೮). ವಿಶ್ವಾಮಿತ್ರರು ಹೀಗೆ ಹೇಳಲು ಅದನ್ನು ವಸಿಷ್ಠರೂ ಅನುಮೋದಿಸಿದರು. ಜನಕರಾಜನು ಕೈಮುಗಿದುಕೊಂಡು "ನನ್ನ ವಂಶವೇ ಧನ್ಯವಾಯಿತೆಂದು ಭಾವಿಸುತ್ತೇನೆ. ಮುನಿಶ್ರೇಷ್ಠರಾದ ನೀವಿಬ್ಬರೂ ಈ ಸಂಬಂಧವು ಯೋಗ್ಯವಾದ್ದೆಂದು ನೀವಾಗಿ ಆಜ್ಞೆಮಾಡುತ್ತಿದ್ದೀರಿ (೯-೧೦). ಒಳ್ಳೆಯದು, ಹಾಗೆಯೇ ಆಗಲಿ. ಭರತ ಶತ್ರುಘ್ನರು ಕುಶಧ್ವನ ಪುತ್ರಿಯರನ್ನು ಮದುವೆಯಾಗಲಿ ನಾಲ್ವರು ರಾಜಪುತ್ರರಿಗೂ

ಏಕಾಹ್ನಾ ರಾಜಪುತ್ರೀಣಾಂ ಚತಸ್ರೂಣಾಂ ಮಹಾಮುನೇ ।
ಪಾಣೀನ್ ಗೃಹ್ಣಂತು ಚತ್ವಾರೋ ರಾಜಪುತ್ರಾ ಮಹಾಬಲಾಃ ॥

ಉತ್ತರೇ ದಿವಸೇ ಬ್ರಹ್ಮನ್ ಫಲ್ಗುನೀಭ್ಯಾಂ ಮನೀಷಿಣಃ ।
ವೈವಾಹಿಕಂ ಪ್ರಶಂಸಂತಿ ಭಗೋ ಯತ್ರ ಪ್ರಜಾಪತಿಃ ॥ ೧೩

ಏವಮುಕ್ತ್ವಾ ವಚಃ ಸೌಮ್ಯಂ ಪ್ರತ್ಯುತ್ಥಾಯ ಕೃತಾಂಜಲಿಃ ।
ಉಭೌ ಮುನಿವರೌ ರಾಜಾ ಜನಕೋ ವಾಕ್ಯಮಬ್ರವೀತ್ ॥ ೧೪

ಪರೋ ಧರ್ಮಃ ಕೃತೋ ಮಹ್ಯಂ ಶಿಷ್ಯೋಽಸ್ಮಿ ಭವತೋಃ ಸದಾ ।
ಇಮಾನ್ಯಾಸನಮುಖ್ಯಾನಿ ಆಸಾತಾಂ ಮುನಿಪುಂಗವೌ ॥ ೧೫

ಯಥಾ ದಶರಥಸ್ಯೇಯಂ ತಥಾಽಯೋಧ್ಯಾ ಪುರೀ ಮಮ ।
ಪ್ರಭುತ್ವೇ ನಾಸ್ತಿ ಸಂದೇಹೋ ಯಥಾರ್ಹಂ ಕರ್ತುಮರ್ಹಥ ॥ ೧೬

ತಥಾ ಬ್ರುವತಿ ವೈದೇಹೇ ಜನಕೇ ರಘುನಂದನಃ ।
ರಾಜಾ ದಶರಥೋ ಹೃಷ್ಟಃ ಪ್ರತ್ಯುವಾಚ ಮಹೀಪತಿಮ್ ॥ ೧೭

---

ನಾಲ್ವರು ರಾಜಪುತ್ರಿಯರೊಡನೆ ಒಂದೇ ದಿವಸ ಪಾಣಿಗ್ರಹಣವು ನೆರವೇರಲಿ (೧೧-೧೨). ಬ್ರಹ್ಮರ್ಷಿಗಳೆ, ಭಗನು ದೇವತೆಯಾಗಿರುವ ಉತ್ತರಾನಕ್ಷತ್ರದಲ್ಲಿ ವಿವಾಹವು ಶ್ರೇಷ್ಠವೆಂದು ಪಂಡಿತರು ಹೇಳುತ್ತಾರೆ" ಎಂಬುದಾಗಿ ವಿನಯದಿಂದ ನುಡಿದು ಎದ್ದುನಿಂತುಕೊಂಡನು (೧೩). ಪುನಃ ಆ ಋಷಿಗಳನ್ನು ಕುರಿತು "ನನಗೆ ಮಹಾಪುಣ್ಯಕಾರ್ಯವನ್ನು ಮಾಡಲು ಅವಕಾಶ ಮಾಡಿಕೊಟ್ಟಿರಿ. ನಾನು ಯಾವಾಗಲೂ ನಿಮ್ಮ ಆಜ್ಞೆಗೆ ಬದ್ಧನಾಗಿದ್ದೇನೆ. ಈ ಸಿಂಹಾಸನಗಳಮೇಲೆ ನಿಮ್ಮದೇ ಪ್ರಭುತ್ವವು ನಡೆಯುತ್ತದೆ (೧೪-೧೫). ದಶರಥನಿಗೆ ಈ ಮಿಥಿಲೆಯು ಸೇರಿದಂತೆ ನನಗೆ ಅಯೋಧ್ಯೆಯು ಸೇರಿದೆಯೆಂದು ತಿಳಿಯುತ್ತೇನೆ. ಆದ್ದರಿಂದ ಮುನಿಶ್ರೇಷ್ಠರಾದ ನಿಮ್ಮಿಬ್ಬರ ಪ್ರಭುತ್ವದಲ್ಲಿ ಸಂದೇಹವಿಲ್ಲ. ನಿಮಗೆ ಯೋಗ್ಯವಾಗಿ ತೋರಿದಂತೆ ಮಾಡಬಹುದು" ಎಂದು ಹೇಳಿದನು (೧೬). ಆಗ ದಶರಥನು ಸಂತೋಷದಿಂದ "ಮಹಾರಾಜ, ಮಿಥಿಲಾಧಿಪತಿಗಳಾದ ನೀವಿಬ್ಬರು ಸಹೋದರರೂ ಗುಣ

ಯುವಾಮಸಂಖ್ಯೇಯಗುಣೌ ಭ್ರಾತರೌ ಮಿಥಿಲೇಶ್ವರೌ ।
ಋಷಯೋ ರಾಜಸಂಘಾಶ್ಚ ಭವದ್ಭ್ಯಾಮಭಿಪೂಜಿತಾಃ ॥ ೧೮

ಸ್ವಸ್ತಿ ಪ್ರಾಪ್ನುಹಿ ಭದ್ರಂ ತೇ ಗಮಿಷ್ಯಾಮಿ ಸ್ವಮಾಲಯಮ್ ।
ಶ್ರಾದ್ಧಕರ್ಮಾಣಿ ಸರ್ವಾಣಿ ವಿಧಾಸ್ಯ ಇತಿ ಚಾಬ್ರವೀತ್ ॥ ೧೯

ತಮಾಪೃಷ್ಟ್ವಾ ನರಪತಿಂ ರಾಜಾ ದಶರಥಸ್ತದಾ ।
ಮುನೀಂದ್ರೌ ತೌ ಪುರಸ್ಕೃತ್ಯ ಜಗಾಮಾಶು ಮಹಾಯಶಾಃ ॥ ೨೦

ಸ ಗತ್ವಾ ನಿಲಯಂ ರಾಜಾ ಶ್ರಾದ್ಧಂ ಕೃತ್ವಾ ವಿಧಾನತಃ ।
ಪ್ರಭಾತೇ ಕಾಲ್ಯಮುತ್ಥಾಯ ಚಕ್ರೇ ಗೋದಾನಮುತ್ತಮಮ್ ॥

ಗವಾಂ ಶತಸಹಸ್ರಾಣಿ ಬ್ರಾಹ್ಮಣೇಭ್ಯೋ ನರಾಧಿಪಃ ।
ಏಕೈಕಶೋ ದದೌ ರಾಜಾ ಪುತ್ರಾನುದ್ದಿಶ್ಯ ಧರ್ಮತಃ ॥ ೨೨

ಸುವರ್ಣಶೃಂಗಾಃ ಸಂಪನ್ನಾಃ ಸವತ್ಸಾಃ ಕಾಂಸ್ಯದೋಹನಾಃ ।
ಗವಾಂ ಶತಸಹಸ್ರಾಣಿ ಚತ್ವಾರಿ ಪುರುಷರ್ಷಭಃ ॥ ೨೩

---

ಶಾಲಿಗಳು ನೆರೆದಿರುವ ಋಷಿಗಳನ್ನೂ ರಾಜರುಗಳನ್ನೂ ಚೆನ್ನಾಗಿ ಸತ್ಕರಿಸಿದ್ದೀರಿ (೧೭–೧೮). ನಿನಗೆ ಶುಭವಾಗಲಿ; ಕಲ್ಯಾಣವಾಗಲಿ. ನಾನು ನನ್ನ ಶಿಬಿರಕ್ಕೆ ಹೋಗುತ್ತೇನೆ ನಾಂದಿ ಮುಂತಾದ ಕಾರ್ಯಗಳನ್ನು ನಡೆಸುತ್ತೇನೆ" ಎಂದು ಹೇಳಿ ಬೀಳ್ಕೊಂಡು ವಸಿಷ್ಠವಿಶ್ವಾಮಿತ್ರರೊಡನೆ ತನ್ನ ನಿವಾಸಕ್ಕೆ ಹೋದನು (೧೯–೨೦). ಅಲ್ಲಿ ನಾಂದಿಯನ್ನಿಟ್ಟುಕೊಂಡು ಪ್ರಾತಃಕಾಲ ಸುಮುಹೂರ್ತದಲ್ಲಿ ಮಕ್ಕಳಿಗೆ ಸಮಾವರ್ತನೆಯನ್ನು* ಮಾಡಿಸಿದನು. ಅನಂತರ ಒಬ್ಬೊಬ್ಬ ಮಗನಿಗೋಸ್ಕರ ಒಂದು ಲಕ್ಷ ಗೋವುಗಳಂತೆ ನಾಲ್ಕು ಲಕ್ಷ ಗೋವುಗಳನ್ನು ಬ್ರಾಹ್ಮಣರಿಗೆ ದಾನಮಾಡಿದನು (೨೧–೨೨) ಎಲ್ಲ ಗೋವುಗಳಿಗೂ ಕರುಗಳಿದ್ದವು. ಗೋವುಗಳ ಕೊಂಬುಗಳಿಗೆ ಚಿನ್ನದ ತಗಡುಗಳನ್ನು ಸುತ್ತಿಸಿ ಹಾಲುಕರೆಯುವ ಚಿನ್ನದ ಪಾತ್ರೆಗಳ

---

* ಮೂಲದಲ್ಲಿ ಗೋದಾನ ಎಂದಿದೆ. ಗೋದಾನವೆಂದರೆ ಸಮಾವರ್ತನೆಗೆ ಪೂರ್ವದಲ್ಲಿ ಮಾಡುವ ಕ್ಷೌರಕರ್ಮ. ವ್ಯವಹಾರಾನುಗುಣವಾಗಿ ಅದನ್ನೂ ಸೇರಿಸಿ ಸಮಾವರ್ತನೆಯೆಂದು ಇಲ್ಲಿ ವ್ಯವಹರಿಸಲಾಗಿದೆ.

ವಿತ್ತಮನ್ಯಚ್ಚ ಸುಬಹು ದ್ವಿಜೇಭ್ಯೋ ರಘುನಂದನಃ ।
ದದೌ ಗೋದಾನಮುದ್ದಿಶ್ಯ ಪುತ್ರಾಣಾಂ ಪುತ್ರವತ್ಸಲಃ ॥ ೨೪

ಸ ಸುತೈಃ ಕೃತಗೋದಾನೈರ್ವೃತಸ್ತು ನೃಪತಿಸ್ತದಾ ।
ಲೋಕಪಾಲೈರಿವಾಭಾತಿ ವೃತಃ ಸೌಮ್ಯಃ ಪ್ರಜಾಪತಿಃ ॥ ೨೫

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ದ್ವಿಸಪ್ತತಿತಮಃ ಸರ್ಗಃ



ಸಹಿತವಾಗಿ ದಾನಮಾಡಿದನು. ಪುತ್ರವತ್ಸಲನಾದ ದಶರಥರಾಜನು ಸಮಾವರ್ತನೆಯ ಅಂಗವಾಗಿ ಇನ್ನೂ ಬೇಕಾದಷ್ಟು ಧನವನ್ನು ದ್ವಿಜರಿಗೆ ದಾನಮಾಡಿದನು (೨೩–೨೪). ಹೀಗೆ ಸಮಾವೃತ್ತರಾದ ಪುತ್ರರಿಂದೊಡಗೂಡಿದ ದಶರಥನೃಪಾಲನು ನಾಲ್ಕು ದಿಕ್ಪಾಲಕರಿಂದ ಸಮೇತನಾದ ಬ್ರಹ್ಮನಂತೆ ಪ್ರಸನ್ನಚಿತ್ತನಾಗಿ ವಿರಾಜಿಸುತ್ತಿದ್ದನು (೨೫).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಎಪ್ಪತ್ತೆರಡನೆಯ ಸರ್ಗ



## ತ್ರಿಸಪ್ತತಿತಮಃ ಸರ್ಗಃ

### ದಶರಥಪುತ್ರೋದ್ವಾಹಃ

ಯಸ್ಮಿಂಸ್ತು ದಿವಸೇ ರಾಜಾ ಚಕ್ರೇ ಗೋದಾನಮುತ್ತಮಮ್ ।
ತಸ್ಮಿಂಸ್ತು ದಿವಸೇ ಶೂರೋ ಯುಧಾಜಿತ್ ಸಮುಪೇಯಿವಾನ್

ಪುತ್ರಃ ಕೇಕಯರಾಜಸ್ಯ ಸಾಕ್ಷಾದ್ಭರತಮಾತುಲಃ ।
ದೃಷ್ಟ್ವಾ ಪೃಷ್ಟ್ವಾ ಚ ಕುಶಲಂ ರಾಜಾನಮಿದಮಬ್ರವೀತ್ ॥ ೨

ಕೇಕಯಾಧಿಪತೀ ರಾಜಾ ಸ್ನೇಹಾತ್ ಕುಶಲಮಬ್ರವೀತ್ ।
ಯೇಷಾಂ ಕುಶಲಕಾಮೋಽಸಿ ತೇಷಾಂ ಸಂಪ್ರತ್ಯನಾಮಯಮ್ ॥

ಸ್ವಸ್ರೀಯಂ ಮಮ ರಾಜೇಂದ್ರ ದ್ರಷ್ಟುಕಾಮೋ ಮಹೀಪತಿಃ ।
ತದರ್ಥಮುಪಯಾತೋಽಹಮಯೋಧ್ಯಾಂ ರಘುನಂದನ ॥ ೪

ಶ್ರುತ್ವಾ ತ್ವಹಮಯೋಧ್ಯಾಯಾಂ ವಿವಾಹಾರ್ಥಂ ತವಾತ್ಮಜಾನ್ ।
ಮಿಥಿಲಾಮುಪಯಾತಾಂಸ್ತು ತ್ವಯಾ ಸಹ ಮಹೀಪತೇ ॥ ೫

## ಸರ್ಗ ೭೩

### ಶ್ರೀರಾಮ ಲಕ್ಷ್ಮಣ ಭರತ ಶತ್ರುಘ್ನರ ವಿವಾಹ

ದಶರಥನು ತನ್ನ ಮಕ್ಕಳಿಗೆ ಸಮಾವರ್ತನೆಯನ್ನು ನೆರವೇರಿಸಿದ ದಿವಸವೇ ಕೇಕಯರಾಜನ ಪುತ್ರನಾದ ಯುಧಾಜಿತನು ಅಲ್ಲಿಗೆ ಬಂದನು. ಅವನು ಭರತನ ಸೋದರಮಾವ. ಯುಧಾಜಿತನು ದಶರಥನನ್ನು ಸಂದರ್ಶಿಸಿ ಕುಶಲವನ್ನು ವಿಚಾರಿಸುತ್ತ ಹೀಗೆಂದನು (೧-೨): "ಮಹಾರಾಜ, ಕೇಕಯಾಧಿಪತಿಯು ನಿಮ್ಮೆಲ್ಲರ ಕ್ಷೇಮವನ್ನು ವಿಚಾರಿಸಿದ್ದಾನೆ. ನೀನು ಯಾರಿಗೆ ಕುಶಲವನ್ನು ಕೋರುವೆಯೋ ಅಂಥ ನಾವೆಲ್ಲರೂ ಸಾಂಪ್ರತದಲ್ಲಿ ಕುಶಲದಿಂದ ಇದ್ದೇವೆ. ಮಹಾರಾಜನು ನನ್ನ ಸೋದರಳಿಯನನ್ನು ನೋಡಲು ಬಯಸಿದ್ದರಿಂದ ಅವನನ್ನು ಕರೆದುಕೊಂಡು ಹೋಗುವುದಕ್ಕಾಗಿ ನಾನು ಅಯೋಧ್ಯೆಗೆ ಬಂದೆನು (೩-೪). ಅಲ್ಲಿ ವಿವಾಹದ ವೃತ್ತಾಂತ ತಿಳಿಯಿತು. ನೀವೆಲ್ಲರೂ ಮಿಥಿಲೆಗೆ ಬಂದಿದ್ದೀರೆಂಬುದನ್ನು ತಿಳಿದು ನಾನು ಇಲ್ಲಿಗೆ ಬಂದೆನು.

ತ್ವರಯಾಭ್ಯುಪಯಾತೋಽಹಂ ದ್ರಷ್ಟುಕಾಮಃ ಸ್ವಸುಃ ಸುತಮ್ ।
ಅಥ ರಾಜಾ ದಶರಥಃ ಪ್ರಿಯಾತಿಥಿಮುಪಸ್ಥಿತಮ್ ॥ ೬

ದೃಷ್ಟ್ವಾ ಪರಮಸತ್ಕಾರೈಃ ಪೂಜನಾರ್ಹಮಪೂಜಯತ್ ।
ತತಸ್ತಾಮುಷಿತೋ ರಾತ್ರಿಂ ಸಹ ಪುತ್ರೈರ್ಮಹಾತ್ಮಭಿಃ ॥ ೭

ಪ್ರಭಾತೇ ಪುನರುತ್ಥಾಯ ಕೃತ್ವಾ ಕರ್ಮಾಣಿ ಕರ್ಮವಿತ್ ।
ಋಷೀಂಸ್ತದಾ ಪುರಸ್ಕೃತ್ಯ ಯಜ್ಞವಾಟಮುಪಾಗಮತ್ ॥ ೮

ಯುಕ್ತೇ ಮುಹೂರ್ತೇ ವಿಜಯೇ ಸರ್ವಾಭರಣಭೂಷಿತೈಃ ।
ಭ್ರಾತೃಭಿಃ ಸಹಿತೋ ರಾಮಃ ಕೃತಕೌತುಕಮಂಗಲಃ ॥ ೯

ವಸಿಷ್ಠಂ ಪುರತಃ ಕೃತ್ವಾ ಮಹರ್ಷೀನಪರಾನಪಿ ।
ಪಿತುಃ ಸಮೀಪಮಾಶ್ರಿತ್ಯ ತಸ್ಥೌ ಭ್ರಾತೃಭಿರಾವೃತಃ ॥ ೧೦

ವಸಿಷ್ಠೋ ಭಗವಾನೇತ್ಯ ವೈದೇಹಮಿದಮಬ್ರವೀತ್ ।
ರಾಜಾ ದಶರಥೋ ರಾಜನ್ ಕೃತಕೌತುಕಮಂಗಲೈಃ ॥ ೧೧

---

ಭರತನನ್ನು ನೋಡುವ ಉದ್ದೇಶದಿಂದ ನಾನು ಕೂಡಲೆ ಹೊರಟು ಬರಬೇಕಾಯಿತು." ಆಗ ದಶರಥನು ಪ್ರಿಯನಾದ ಅತಿಥಿಯು ಬಂದನೆಂದು ಸಂಪ್ರೀತನಾಗಿ ಯುಧಾಜಿತನನ್ನು ಆದರದಿಂದ ಸತ್ಕರಿಸಿದನು (೫-೭). ರಾತ್ರಿ ಕಳೆದು ಬೆಳಗಾಯಿತು. ದಶರಥರಾಜನು ಎದ್ದು ಪುತ್ರರೊಡನೆ ಪ್ರಾತಃಕೃತ್ಯಗಳನ್ನು ನೆರವೇರಿಸಿ ಋಷಿಗಳನ್ನು ಮುಂದಿರಿಸಿಕೊಂಡು ಜನಕನ ಯಜ್ಞಶಾಲೆಯ ಬಳಿಗೆ ಬಂದನು (೭-೮). ಶ್ರೀರಾಮನೂ ಅವನ ತಮ್ಮಂದಿರೂ ಮಂಗಳ ಕಂಕಣವನ್ನು ಧರಿಸಿ ಸರ್ವಾಭರಣಭೂಷಿತರಾಗಿದ್ದರು. ಅವರೆಲ್ಲರೂ ಶುಭ ಲಗ್ನಯುಕ್ತವಾದ ವಿಜಯಮುಹೂರ್ತದಲ್ಲಿ ವಸಿಷ್ಠಾದಿಮಹರ್ಷಿಗಳನ್ನು ಮುಂದಿರಿಸಿಕೊಂಡು ತಂದೆಯ ಸಮೀಪದಲ್ಲಿ ಬಂದು ನಿಂತಿದ್ದರು (೯-೧೦). ವಸಿಷ್ಠರು ಜನಕರಾಜನ ಬಳಿಗೆ ಹೋಗಿ "ರಾಜ, ದಶರಥರಾಜನು ಮಂಗಳಕಂಕಣವನ್ನು ಧರಿಸಿದ ಪುತ್ರರೊಡನೆ ಬಂದಿದ್ದಾನೆ. ಅವನು ಕನ್ಯಾದಾತೃವಾದ ನಿನ್ನ ಪ್ರತೀಕ್ಷೆಯಲ್ಲಿದ್ದಾನೆ. ದಾತೃಪ್ರತಿಗೃಹೀತೃಗಳು

ಪುತ್ರೈರ್ನರವರಶ್ರೇಷ್ಠ ದಾತಾರಮಭಿಕಾಂಕ್ಷತೇ ।
ದಾತೃಪ್ರತಿಗೃಹೀತೃಭ್ಯಾಂ ಸರ್ವಾರ್ಥಾಃ ಪ್ರಭವಂತಿ ಹಿ ॥ ೧೨

ಸ್ವಧರ್ಮಂ ಪ್ರತಿಪದ್ಯಸ್ವ ಕೃತ್ವಾ ವೈವಾಹ್ಯಮುತ್ತಮಮ್ ।
ಇತ್ಯುಕ್ತಃ ಪರಮೋದಾರೋ ವಸಿಷ್ಠೇನ ಮಹಾತ್ಮನಾ ॥ ೧೩

ಪ್ರತ್ಯುವಾಚ ಮಹಾತೇಜಾ ವಾಕ್ಯಂ ಪರಮಧರ್ಮವಿತ್ ।
ಕಃ ಸ್ಥಿತಃ ಪ್ರತಿಹಾರೋ ಮೇ ಕಸ್ಯಾಜ್ಞಾ ಸಂಪ್ರತೀಕ್ಷ್ಯತೇ ॥ ೧೪

ಸ್ವಗೃಹೇ ಕೋ ವಿಚಾರೋಽಸ್ತಿ ಯಥಾ ರಾಜ್ಯಮಿದಂ ತವ ।
ಕೃತಕೌತುಕಸರ್ವಸ್ವಾ ವೇದಿಮೂಲಮುಪಾಗತಾಃ ॥ ೧೫

ಮಮ ಕನ್ಯಾ ಮುನಿಶ್ರೇಷ್ಠ ದೀಪ್ತಾ ವಹ್ನೇರ್ಯಥಾರ್ಚಿಷಃ ।
ಸಜ್ಜೋಽಹಂ ತ್ವತ್ಪ್ರತೀಕ್ಷೋಽಸ್ಮಿ ವೇದ್ಯಾಮಸ್ಯಾಂ ಪ್ರತಿಷ್ಠಿತಃ ॥

ಅವಿಘ್ನಂ ಕ್ರಿಯತಾಂ ಸರ್ವಂ ಕಿಮರ್ಥಂ ಹಿ ವಿಲಂಬ್ಯತೇ ।
ತದ್ವಾಕ್ಯಂ ಜನಕೇನೋಕ್ತಂ ಶ್ರುತ್ವಾ ದಶರಥಸ್ತದಾ ॥ ೧೭

---

ಒಟ್ಟಿಗೆ ಸೇರಿದರೆ ತಾನೆ ದಾನಧರ್ಮಾದಿ ಕಾರ್ಯಗಳು ನಡೆಯಬೇಕು? ಈಗ ವಿವಾಹವನ್ನು ನೆರವೇರಿಸಿಕೊಡುವುದು ನಿನ್ನ ಧರ್ಮ" ಎಂದು ನುಡಿದರು (೧೧-೧೨). ಆಗ ಉದಾರ ಸ್ವಭಾವದವನೂ ಧರ್ಮಜ್ಞನೂ ಆದ ಜನಕನು "ಮುನಿಶ್ರೇಷ್ಠರೆ, ಅಲ್ಲಿ ಯಾವನಾದರೂ ಕಾವಲುಗಾರ ನಿದ್ದಾನೆಯೆ? ಯಾರ ಆಜ್ಞೆಗಾಗಿ ನೀವು ಕಾಯಬೇಕು? (೧೩-೧೪). ನಿಮ್ಮ ಮನೆಯಲ್ಲಿ ವಿಚಾರಿಸಬೇಕಾದ್ದು ತಾನೆ ಏನಿದೆ? ಇದೆಲ್ಲವೂ ನಿಮ್ಮ ರಾಜ್ಯವೆಂದೇ ಭಾವಿಸಬೇಕು. ನನ್ನ ಕುಮಾರಿಯರಿಗೆ ವಿವಾಹೋಚಿತವಾದ ಮಂಗಳಾಚಾರಗಳೆಲ್ಲವನ್ನೂ ನೆರವೇರಿಸಿದ್ದೇನೆ. ಅವರು ಹೋಮ ವೇದಿಕೆಯ ಸಮೀಪದಲ್ಲಿ ಅಗ್ನಿಜ್ವಾಲೆಗಳಂತೆ ವಿರಾಜಿಸುತ್ತಿದ್ದಾರೆ. ನಾನು ಸಿದ್ಧನಾಗಿ ಈ ವೇದಿಕೆಯಲ್ಲಿ ನಿಮ್ಮೆಲ್ಲರನ್ನೂ ಪ್ರತೀಕ್ಷೆಮಾಡುತ್ತಿದ್ದೇನೆ (೧೫-೧೬). ವಿಲಂಬವಿಲ್ಲದೆ ಎಲ್ಲವೂ ನಡೆಯಲಿ. (ಯಜ್ಞಶಾಲೆಯ ಬಾಗಿಲಿನಲ್ಲಿ) ತಡಮಾಡುವುದೇಕೆ?" ಎಂದನು. ಅನಂತರ ದಶರಥನು ತನ್ನ ಮಕ್ಕಳನ್ನೂ

**ಪ್ರವೇಶಯಾಮಾಸ ಸುತಾನ್ ಸರ್ವಾನೃಷಿಗಣಾನಪಿ ।**
**ತತೋ ರಾಜಾ ವಿದೇಹಾನಾಂ ವಸಿಷ್ಠಮಿದಮಬ್ರವೀತ್ ॥ ೧೮**
**ಕಾರಯಸ್ವ ಋಷೇ ಸರ್ವಮೃಷಿಭಿಃ ಸಹ ಧಾರ್ಮಿಕ ।**
**ರಾಮಸ್ಯ ಲೋಕರಾಮಸ್ಯ ಕ್ರಿಯಾಂ ವೈವಾಹಿಕೀಂ ಪ್ರಭೋ ॥**
**ತಥೇತ್ಯುಕ್ತ್ವಾ ತು ಜನಕಂ ವಸಿಷ್ಠೋ ಭಗವಾನೃಷಿಃ ।**
**ವಿಶ್ವಾಮಿತ್ರಂ ಪುರಸ್ಕೃತ್ಯ ಶತಾನಂದಂ ಚ ಧಾರ್ಮಿಕಮ್ ॥ ೨೦**
**ಪ್ರಪಾಮಧ್ಯೇ ತು ವಿಧಿವದ್ವೇದಿಂ ಕೃತ್ವಾ ಮಹಾತಪಾಃ ।**
**ಅಲಂಚಕಾರ ತಾಂ ವೇದಿಂ ಗಂಧಪುಷ್ಪೈಃ ಸಮಂತತಃ ॥ ೨೧**
**ಸುವರ್ಣಪಾಲಿಕಾಭಿಶ್ಚ ಛಿದ್ರಕುಂಭೈಶ್ಚ ಸಾಂಕುರೈಃ ।**
**ಅಂಕುರಾಢ್ಯೈಃ ಶರಾವೈಶ್ಚ ಧೂಪಪಾತ್ರೈಃ ಸಧೂಪಕೈಃ ॥ ೨೨**
**ಶಂಖಪಾತ್ರೈಃ ಸ್ರುವೈಃ ಸ್ರುಗ್ಭಿಃ ಪಾತ್ರೈ ರರ್ಘ್ಯಾಭಿಪೂರಿತೈಃ ।**
**ಲಾಜಪೂರ್ಣೈಶ್ಚ ಪಾತ್ರೀಭಿರಕ್ಷತೈರಪಿ ಸಂಸ್ಕೃತೈಃ ॥ ೨೩**
**ದರ್ಭೈಃ ಸಮೈಃ ಸಮಾಸ್ತೀರ್ಯ ವಿಧಿವನ್ಮಂತ್ರಪೂರ್ವಕಮ್ ।**
**ಅಗ್ನಿಮಾಧಾಯ ವೇದ್ಯಾಂ ತು ವಿಧಿಮಂತ್ರಪುರಸ್ಕೃತಮ್ ॥ ೨೪**

---

ಋಷಿಗಳನ್ನೂ ಕರೆದುಕೊಂಡು ಒಳಕ್ಕೆ ಬಂದನು. ಜನಕನು ವಸಿಷ್ಠರನ್ನು ಕುರಿತು "ಧರ್ಮಜ್ಞರೆ, ನೀವು ಋಷಿಸಹಿತರಾಗಿ ಲೋಕಪ್ರಿಯನಾದ ರಾಮನ ವಿವಾಹವನ್ನು ಮಾಡಿಸಿರಿ" ಎಂದನು (೧೭-೧೯). ವಸಿಷ್ಠರು ವಿಶ್ವಾಮಿತ್ರರನ್ನೂ ಶತಾನಂದರನ್ನೂ ಜೊತೆಗೂಡಿ ವಿವಾಹಮಂಟಪದ ಮಧ್ಯದಲ್ಲಿ ವಿಧಿವತ್ತಾಗಿ ಹೋಮಕುಂಡವನ್ನು ರಚಿಸಿ ಗಂಧಪುಷ್ಪಗಳಿಂದ ಸುತ್ತಲೂ ಅಲಂಕರಿಸಿದರು (೨೦-೨೧). ಸುವರ್ಣಕಲಶಗಳು, ಅಂಕುರಗಳಿಂದ ತುಂಬಿದ ರಂಧ್ರಯುಕ್ತ ಕಲಶಗಳು, ಹರಿವಾಣಗಳು, ಧೂಪ ತುಂಬಿದ ಪಾತ್ರೆಗಳು, ಶಂಖಗಳು, ಸ್ರುವಸ್ರುಕ್ಕು*ಗಳು, ಜಲಪೂರ್ಣ ಪಾತ್ರೆಗಳು, ಅರಳು ತುಂಬಿದ ಪಾತ್ರೆಗಳು, ಅಕ್ಷತೆ—ಇವುಗಳನ್ನು ವೇದಿಯ ಸುತ್ತ ಆಯಾ ಸ್ಥಾನಗಳಲ್ಲಿಟ್ಟರು (೨೨-೨೩). ಸಮಸಂಖ್ಯೆಯ ದರ್ಭೆಗಳನ್ನು ವಿಧಿವತ್ತಾಗಿ ಆಸ್ತರಣ ಮಾಡಿದರು. ವೇದಿಯಲ್ಲಿ ಮಂತ್ರಪೂರ್ವಕವಾಗಿ

---

* ಸ್ರುವ ಸ್ರುಕ್ಕು—ಇವೆರಡೂ ಯಜ್ಞಪಾತ್ರೆಗಳು.

ಜುಹಾವಾಗ್ನೌ ಮಹಾತೇಜಾ ವಸಿಷ್ಠೋ ಭಗವಾನೃಷಿಃ ।
ತತಃ ಸೀತಾಂ ಸಮಾನೀಯ ಸರ್ವಾಭರಣಭೂಷಿತಾಮ್ ॥ ೨೫

ಸಮಕ್ಷಮಗ್ನೇಃ ಸಂಸ್ಥಾಪ್ಯ ರಾಘವಾಭಿಮುಖೇ ತದಾ ।
ಅಬ್ರವೀಜ್ಜನಕೋ ರಾಜಾ ಕೌಸಲ್ಯಾನಂದವರ್ಧನಮ್ ॥ ೨೬

ಇಯಂ ಸೀತಾ ಮಮ ಸುತಾ ಸಹಧರ್ಮಚರೀ ತವ ।
ಪ್ರತೀಚ್ಛ ಚೈನಾಂ ಭದ್ರಂ ತೇ ಪಾಣಿಂ ಗೃಹ್ಣೀಷ್ವ ಪಾಣಿನಾ ॥

ಪತಿವ್ರತಾ ಮಹಾಭಾಗಾ ಛಾಯೇವಾನುಗತಾ ಸದಾ ।
ಇತ್ಯುಕ್ತ್ವಾ ಪ್ರಾಕ್ಷಿಪದ್ರಾಜಾ ಮಂತ್ರಪೂತಂ ಜಲಂ ತದಾ ॥ ೨೮

ಸಾಧು ಸಾಧ್ವಿತಿ ದೇವಾನಾಮೃಷೀಣಾಂ ವದತಾಂ ತದಾ ।
ದೇವದುಂದುಭಿನಿರ್ಘೋಷಃ ಪುಷ್ಪವರ್ಷೋ ಮಹಾನಭೂತ್ ॥

ಏವಂ ದತ್ತ್ವಾ ಸುತಾಂ ಸೀತಾಂ ಮಂತ್ರೋದಕಪುರಸ್ಕೃತಾಮ್ ।
ಅಬ್ರವೀಜ್ಜನಕೋ ರಾಜಾ ಹರ್ಷೇಣಾಭಿಪರಿಪ್ಲುತಃ ॥ ೩೦

---

ಅಗ್ನಿಯನ್ನು ಪ್ರತಿಷ್ಠಾಪಿಸಿ ಶಾಸ್ತ್ರೋಕ್ತವಾದ ರೀತಿಯಲ್ಲಿ ಹೋಮ ಮಾಡಿದರು. ಅನಂತರ ಜನಕನು ಸರ್ವಾಭರಣಭೂಷಿತಳಾದ ಸೀತಾದೇವಿಯನ್ನು ಕರೆತಂದು ಅಗ್ನಿಯ ಸಮಕ್ಷದಲ್ಲಿ ಶ್ರೀರಾಮನಿಗೆ ಅಭಿಮುಖವಾಗಿ ನಿಲ್ಲಿಸಿದನು (೨೪-೨೬). ಅವನು ಕೌಸಲ್ಯಾತನಯನಾದ ಶ್ರೀರಾಮಚಂದ್ರನನ್ನು ಉದ್ದೇಶಿಸಿ "ನನ್ನ ಮಗಳಾದ ಈ ಸೀತೆಯು ನಿನಗೆ ಸಹಧರ್ಮಚಾರಿಣಿಯಾಗಿರುತ್ತಾಳೆ. ಇವಳನ್ನು ಸ್ವೀಕರಿಸು. ನಿನಗೆ ಮಂಗಳವಾಗಲಿ. ಇವಳ ಪಾಣಿಯನ್ನು ಗ್ರಹಣಮಾಡು. ಈ ಸೀತೆಯು ಪತಿವ್ರತೆಯೂ ಭಾಗ್ಯಶಾಲಿನಿಯೂ ಆಗಿ ನೆರಳಿನಂತೆ ಸದಾ ನಿನ್ನನ್ನು ಅನುಸರಿಸಿಕೊಂಡಿರುವಳು" ಎಂದು ಹೇಳಿ ಶ್ರೀರಾಮನ ಹಸ್ತದಲ್ಲಿ ಮಂತ್ರಪೂತವಾದ ನೀರನ್ನು ಬಿಟ್ಟು ಧಾರೆಯೆರೆದನು (೨೭-೨೮). ದೇವತೆಗಳೂ ಋಷಿಗಳೂ 'ಬಹಳ ಒಳ್ಳೆಯದಾಯಿತು. ಭಲಾ! ಭಲಾ!' ಎಂದು ಉದ್ಗಾರಮಾಡಿದರು. ದೇವದುಂದುಭಿಗಳು ಮೊಳಗಿದವು. ಪುಷ್ಪವೃಷ್ಟಿ ಸುರಿಯಿತು (೨೯). ಜನಕರಾಜನು ಆನಂದದಲ್ಲಿ ಮುಳುಗಿದನು. ಹೀಗೆ ಸುತೆಯಾದ ಸೀತೆಯನ್ನು ಮಂತ್ರೋದಕ



ಇಯಂ ಸೀತಾ ಮಮ ಸುತಾ ಸಹಧರ್ಮಚರೀ ತವ |

ಲಕ್ಷ್ಮಣಾಗಚ್ಛ ಭದ್ರಂ ತೇ ಊರ್ಮಿಲಾಮುದ್ಯತಾಂ ಮಯಾ ।
ಪ್ರತೀಚ್ಛ ಪಾಣಿಂ ಗೃಹ್ಣೀಷ್ವ ಮಾ ಭೂತ್ ಕಾಲಸ್ಯ ಪರ್ಯಯಃ॥

ತಮೇವಮುಕ್ತ್ವಾ ಜನಕೋ ಭರತಂ ಚಾಭ್ಯಭಾಷತ ।
ಪಾಣಿಂ ಗೃಹಾಣ ಮಾಂಡವ್ಯಾಃ ಪಾಣಿನಾ ರಘುನಂದನ ॥ ೩೨

ಶತ್ರುಘ್ನಂ ಚಾಪಿ ಧರ್ಮಾತ್ಮಾ ಅಬ್ರವೀಜ್ಜನಕೇಶ್ವರಃ ।
ಶ್ರುತಕೀರ್ತ್ಯಾ ಮಹಾಬಾಹೋ ಪಾಣಿಂ ಗೃಹ್ಣೀಷ್ವ ಪಾಣಿನಾ ॥

ಸರ್ವೇ ಭವಂತಃ ಸೌಮ್ಯಾಶ್ಚ ಸರ್ವೇ ಸುಚರಿತವ್ರತಾಃ ।
ಪತ್ನೀಭಿಃ ಸಂತು ಕಾಕುತ್ಸ್ಥಾ ಮಾ ಭೂತ್ ಕಾಲಸ್ಯ ಪರ್ಯಯಃ ॥

ಜನಕಸ್ಯ ವಚಃ ಶ್ರುತ್ವಾ ಪಾಣೀನ್ ಪಾಣಿಭಿರಸ್ಪೃಶನ್ ।
ಚತ್ವಾರಸ್ತೇ ಚತಸೃಣಾಂ ವಸಿಷ್ಠಸ್ಯ ಮತೇ ಸ್ಥಿತಾಃ ॥ ೩೫

---

ಪೂರ್ವಕವಾಗಿ ಪಾಣಿಗ್ರಹಣಮಾಡಿಸಿ, "ಲಕ್ಷ್ಮಣ, ಇತ್ತ ಬಾ. ನಿನಗೆ ಮಂಗಳವಾಗಲಿ; ನಾನು ಕೊಟ್ಟಿರುವ ಊರ್ಮಿಳೆಯನ್ನು ಸ್ವೀಕರಿಸು. ಇವಳ ಪಾಣಿಯನ್ನು ಗ್ರಹಣಮಾಡು ಕಾಲಾತಿಕ್ರಮಣವಾದೀತು" ಎಂದನು (೩೦-೩೧). ಅನಂತರ ಜನಕನು ಭರತನನ್ನು ಕರೆದು "ರಘುನಂದನ, ಮಾಂಡವಿಯ ಪಾಣಿಗ್ರಹಣಮಾಡು" ಎಂದು ಹೇಳಿ ಶತ್ರುಘ್ನನನ್ನುದ್ದೇಶಿಸಿ "ಮಹಾಬಾಹು, ನೀನು ಶ್ರುತಕೀರ್ತಿಯ ಪಾಣಿಗ್ರಹಣಮಾಡು" ಎಂದು ನುಡಿದನು * (೩೨-೩೩). ಆಮೇಲೆ ನಾಲ್ವರನ್ನೂ ಸಂಬೋಧಿಸಿ "ರಾಜಪುತ್ರರೆ, ನೀವೆಲ್ಲರೂ ಸೌಮ್ಯಸ್ವಭಾವದವರು. ಬ್ರಹ್ಮಚರ್ಯಾದಿ ವ್ರತವನ್ನು ಪಾಲಿಸಿದವರು. ಇನ್ನುಮೇಲೆ ಪತ್ನೀಸಮೇತರಾಗಿರಿ. ಕಾಲವಿಳಂಬ ಬೇಡ" ಎಂದನು (೩೪). ಆಗ ರಾಜಪುತ್ರರು ವಸಿಷ್ಠರ ಅನುಜ್ಞೆಯಂತೆ ನಾಲ್ವರು ರಾಜಕುಮಾರಿಯರನ್ನು ಯಥಾಕ್ರಮವಾಗಿ ಪಾಣಿಗ್ರಹಣಮಾಡಿದರು (೩೫).

---

* ಲಕ್ಷ್ಮಣನು ಭರತನಿಗಿಂತ ಚಿಕ್ಕವನಾದರೂ ಭಿನ್ನೋದರನಾದ್ದರಿಂದ ಭರತನಿಗಿಂತ ಮೊದಲು ಆವನ ಪಾಣಿಗ್ರಹಣ ದೋಷಾವಹವಲ್ಲ. ಜನಕರಾಜನು ಜ್ಯೇಷ್ಠನಾದ್ದರಿಂದ ಇಲ್ಲಿ ಭರತಶತ್ರುಘ್ನರನ್ನುದ್ದೇಶಿಸಿ ಮಾತನಾಡಿದ್ದಾನೆ. ಅವರಿಗೆ ಕನ್ಯಾದಾನ ಮಾಡಿದವನು ಕುಶಧ್ವಜ.

ಅಗ್ನಿಂ ಪ್ರದಕ್ಷಿಣಂ ಕೃತ್ವಾ ವೇದಿಂ ರಾಜಾನಮೇವ ಚ ।
ಋಷೀಂಶ್ಚೈವ ಮಹಾತ್ಮಾನಃ ಸಭಾರ್ಯಾ ರಘುಸತ್ತಮಾಃ ॥ ೩೬
ಯಥೋಕ್ತೇನ ತದಾ ಚಕ್ರುರ್ವಿವಾಹಂ ವಿಧಿಪೂರ್ವಕಮ್ ।
ಕಾಕುತ್ಸ್ಥೈಶ್ಚ ಗೃಹೀತೇಷು ಲಲಿತೇಷು ಚ ಪಾಣಿಷು ॥ ೩೭
ಪುಷ್ಪವೃಷ್ಟಿರ್ಮಹತ್ಯಾಸೀದಂತರಿಕ್ಷಾತ್ ಸುಭಾಸ್ವರಾ ।
ದಿವ್ಯದುಂದುಭಿನಿರ್ಘೋಷೈರ್ಗೀತವಾದಿತ್ರನಿಃಸ್ವನೈಃ ॥ ೩೮
ನನೃತುಶ್ಚಾಪ್ಸರಃಸಂಘಾ ಗಂಧರ್ವಾಶ್ಚ ಜಗುಃ ಕಲಮ್ ।
ವಿವಾಹೇ ರಘುಮುಖ್ಯಾನಾಂ ತದದ್ಭುತಮದೃಶ್ಯತ ॥ ೩೯
ಈದೃಶೇ ವರ್ತಮಾನೇ ತು ತೂರ್ಯೋದ್ಘುಷ್ಟನಿನಾದಿತೇ ।
ತ್ರಿರಗ್ನಿಂ ತೇ ಪರಿಕ್ರಮ್ಯ ಊಹುರ್ಭಾರ್ಯಾ ಮಹೌಜಸಃ ॥ ೪೦
ಅಥೋಪಕಾರ್ಯಾಂ ಜಗ್ಮುಸ್ತೇ ಸಭಾರ್ಯಾ ರಘುನಂದನಾಃ ।
ರಾಜಾಪ್ಯನುಯಯೌ ಪಶ್ಯನ್ ಸರ್ಷಿಸಂಘಃ ಸಬಾಂಧವಃ ॥ ೪೧

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ತ್ರಿಸಪ್ತತಿತಮಃ ಸರ್ಗಃ

---

ಅನಂತರ ಆ ರಾಜಪುತ್ರರು ತಮ್ಮ ತಮ್ಮ ಪತ್ನಿಯರ ಕೈಗಳನ್ನು ಹಿಡಿದುಕೊಂಡು ವೇದಿಯನ್ನು ಸುತ್ತಿ ಅಗ್ನಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ಜನಕರಾಜನಿಗೂ ವಸಿಷ್ಠಾದಿಮುನಿಗಳಿಗೂ ಅಭಿವಾದನೆ ಮಾಡಿದರು (೩೬). ಬಳಿಕ ವಿಧಿಪೂರ್ವಕವಾಗಿ ಮುಂದಿನ ವಿವಾಹಕಾರ್ಯವು ನಡೆಯಿತು. ಆ ಸಮಯದಲ್ಲಿ ದೇವದುಂದುಭಿಗಳು ಧ್ವನಿಗೈದವು. ಗೀತವಾದ್ಯಗಳೊಡನೆ ಅಪ್ಸರೆಯರು ನರ್ತಿಸಿದರು. ಗಂಧರ್ವರು ಇಂಪಾಗಿ ಹಾಡಿದರು ಇದೆಲ್ಲವೂ ಜನರಿಗೆ ಅದ್ಭುತವಾಗಿ ತೋರಿತು (೩೭-೩೯). ಈ ರೀತಿಯಲ್ಲಿ ಮಂಗಳ ವಾದ್ಯವು ನಡೆಯುತ್ತಿರಲು ಆ ವೀರಕುಮಾರರು ಯಜ್ಞೇಶ್ವರನನ್ನು ಮೂರುಸಲ ಪ್ರದಕ್ಷಿಣೆಮಾಡಿ ಪತ್ನಿಯರನ್ನು ಸ್ವೀಕರಿಸಿ ವಿವಾಹಕಾರ್ಯವನ್ನು ಸಮಾಪ್ತಿಗೊಳಿಸಿದರು (೪೦). ಅನಂತರ ಅವರು ಭಾರ್ಯೆಯರೊಂದಿಗೆ ತಮ್ಮ ಶಿಬಿರಕ್ಕೆ ತೆರಳಿದರು. ದಶರಥರಾಜನು ಅವರೆಲ್ಲರನ್ನೂ ನೋಡಿಕೊಳ್ಳುತ್ತ ಋಷಿಗಳಿಂದಲೂ ಬಂಧುಗಳಿಂದಲೂ ಸಮೇತನಾಗಿ ಅವರ ಹಿಂದೆ ಹೋದನು (೪೧).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಎಪ್ಪತ್ತುಮೂರನೆಯ ಸರ್ಗ

## ಚತುಃಸಪ್ತತಿತಮಃ ಸರ್ಗಃ

ಜಾಮದಗ್ನ್ಯಾಭಿಯೋಗಃ

ಅಥ ರಾತ್ರ್ಯಾಂ ವ್ಯತೀತಾಯಾಂ ವಿಶ್ವಾಮಿತ್ರೋ ಮಹಾಮುನಿಃ ।
ಆಪೃಚ್ಛ್ಯ ತೌ ಚ ರಾಜಾನೌ ಜಗಮೋತ್ತರಪರ್ವತಮ್ ॥ ೧

ಆಶೀರ್ಭಿಃ ಪೂರಯಿತ್ವಾ ಚ ಕುಮಾರಾಂಶ್ಚ ಸರಾಘವಾನ್ ।
ವಿಶ್ವಾಮಿತ್ರೇ ಗತೇ ರಾಜಾ ವೈದೇಹಂ ಮಿಥಿಲಾಧಿಪಮ್ ॥ ೨

ಆಪೃಚ್ಛ್ಯಾಥ ಜಗಮಾಶು ರಾಜಾ ದಶರಥಃ ಪುರೀಮ್ ।
ಗಚ್ಛಂತಂ ತಂ ತು ರಾಜಾನಮನ್ವಗಚ್ಛನ್ನರಾಧಿಪಃ ॥ ೩

ಅಥ ರಾಜಾ ವಿದೇಹಾನಾಂ ದದೌ ಕನ್ಯಾಧನಂ ಬಹು ।
ಗವಾಂ ಶತಸಹಸ್ರಾಣಿ ಬಹೂನಿ ಮಿಥಿಲೇಶ್ವರಃ ॥ ೪

ಕಂಬಲಾನಾಂ ಚ ಮುಖ್ಯಾನಾಂ ಕ್ಷೌಮಕೋಟ್ಯಂಬರಾಣಿ ಚ ।
ಹಸ್ತ್ಯಶ್ವರಥಪಾದಾತಂ ದಿವ್ಯರೂಪಂ ಸ್ವಲಂಕೃತಮ್ ॥ ೫

### ಸರ್ಗ ೭೪

ದಶರಥನು ಪರಿವಾರಸಮೇತನಾಗಿ ಅಯೋಧ್ಯೆಗೆ ಪ್ರಯಾಣಮಾಡುವುದು.
ಮಾರ್ಗದಲ್ಲಿ ಪರಶುರಾಮನ ಆಗಮನ.

ಆ ರಾತ್ರಿಯು ಕಳೆಯಿತು. ಮಾರನೆಯದಿನ ವಿಶ್ವಾಮಿತ್ರಮುನಿಗಳು ಶ್ರೀರಾಮನಿಗೂ ಇತರ ರಾಜಕುಮಾರರಿಗೂ ಆಶೀರ್ವಾದವನ್ನು ಮಾಡಿ ದಶರಥನನ್ನೂ ಜನಕನನ್ನೂ ಬೀಳ್ಕೊಂಡು ಹಿಮಾಲಯಪರ್ವತದ ಕಡೆಗೆ ಹೊರಟು ಹೋದರು (೧-೨). ಅನಂತರ ದಶರಥನು ಮಿಥಿಲಾಧಿಪತಿಯಾದ ಜನಕನ ಅನುಜ್ಞೆಯನ್ನು ಪಡೆದು ಅಯೋಧ್ಯೆಗೆ ಹೊರಡಲು ಸಿದ್ಧನಾದನು. ಅವನನ್ನು ಕಳಿಸುತ್ತ ಜನಕರಾಜನು ಸ್ವಲ್ಪದೂರ ಹೋದನು (೩). ಆ ಸಮಯದಲ್ಲಿ ಜನಕನು ತನ್ನ ಹೆಣ್ಣುಮಕ್ಕಳಿಗೆ ಬಳುವಳಿಯಾಗಿ ಲಕ್ಷಗಟ್ಟಲೆ ಗೋವುಗಳನ್ನೂ, ಉತ್ತಮವಾದ ಉಣ್ಣೆ ಮತ್ತು ರೇಷ್ಮೆಯ ಬಟ್ಟೆಗಳನ್ನೂ, ದಿವ್ಯವಾಗಿ ಅಲಂಕರಿಸಿದ ಆನೆ ಕುದುರೆ ರಥಪದಾತಿಗಳನ್ನೂ ಕೊಟ್ಟನು

ದದೌ ಕನ್ಯಾಪಿತಾ ತಾಸಾಂ ದಾಸೀದಾಸಮನುತ್ತಮಮ್ ।
ಹಿರಣ್ಯಸ್ಯ ಸುವರ್ಣಸ್ಯ ಮುಕ್ತಾನಾಂ ವಿದ್ರುಮಸ್ಯ ಚ ॥ ೬
ದದೌ ಪರಮಸಂಹೃಷ್ಟಃ ಕನ್ಯಾಧನಮನುತ್ತಮಮ್ ।
ದತ್ವಾ ಬಹುಧನಂ ರಾಜಾ ಸಮನುಜ್ಞಾಪ್ಯ ಪಾರ್ಥಿವಮ್ ॥ ೭
ಪ್ರವಿವೇಶ ಸ್ವನಿಲಯಂ ಮಿಥಿಲಾಂ ಮಿಥಿಲೇಶ್ವರಃ ।
ರಾಜಾಪ್ಯಯೋಧ್ಯಾಧಿಪತಿಃ ಸಹ ಪುತ್ರೈರ್ಮಹಾತ್ಮಭಿಃ ॥ ೮
ಋಷೀನ್ ಸರ್ವಾನ್ ಪುರಸ್ಕೃತ್ಯ ಜಗಾಮ ಸಬಲಾನುಗಃ ।
ಗಚ್ಛಂತಂ ತಂ ನರವ್ಯಾಘ್ರಂ ಸರ್ಷಿಸಂಘಂ ಸರಾಘವಮ್ ॥ ೯
ಘೋರಾಃ ಸ್ಮ ಪಕ್ಷಿಣೋ ವಾಚೋ ವ್ಯಾಹರಂತಿ ಸಮಂತತಃ ।
ಭೌಮಾಶ್ಚೈವ ಮೃಗಾಃ ಸರ್ವೇ ಗಚ್ಛಂತಿ ಸ್ಮ ಪ್ರದಕ್ಷಿಣಮ್ ॥ ೧೦
ತಾನ್ ದೃಷ್ಟ್ವಾ ರಾಜಶಾರ್ದೂಲೋ ವಸಿಷ್ಠಂ ಪರ್ಯಪೃಚ್ಛತ ।
ಅಸೌಮ್ಯಾಃ ಪಕ್ಷಿಣೋ ಘೋರಾ ಮೃಗಾಶ್ಚಾಪಿ ಪ್ರದಕ್ಷಿಣಾಃ ॥ ೧೧
ಕಿಮಿದಂ ಹೃದಯೋತ್ಕಂಪಿ ಮನೋ ಮಮ ವಿಷೀದತಿ ।
ರಾಜ್ಞೋ ದಶರಥಸ್ಯೈತಚ್ಛ್ರುತ್ವಾ ವಾಕ್ಯಂ ಮಹಾನೃಷಿಃ ॥ ೧೨

---

(೪-೫). ಇವಲ್ಲದೆ ಅನೇಕಮಂದಿ ದಾಸಿಯರನ್ನೂ, ಸೇವಕರನ್ನೂ, ಅಸಂಖ್ಯಾತವಾದ ಚಿನ್ನ ಬೆಳ್ಳಿ ಮುತ್ತು ಹವಳಗಳನ್ನೂ ಸಂತೋಷದಿಂದ ಬಳುವಳಿಯಾಗಿ ಕೊಟ್ಟನು. ಹೀಗೆ ಧನರಾಶಿಯನ್ನೇ ಅರ್ಪಿಸಿ ಜನಕರಾಜನು ದಶರಥ ಮುಂತಾದವರೆಲ್ಲರನ್ನೂ ಬೀಳ್ಕೊಂಡು ತನ್ನ ಅರಮನೆಗೆ ಹಿಂದಿರುಗಿದನು (೬-೭). ಇತ್ತ ದಶರಥನು ಮಹಾತ್ಮರಾದ ತನ್ನ ಪುತ್ರರು, (ಸೊಸೆಯರು), ಋಷಿಗಳು, ಸೈನಿಕರು ಮೊದಲಾದ ಪರಿವಾರದಿಂದೊಡಗೂಡಿ ಅಯೋಧ್ಯೆಯ ಕಡೆಗೆ ಪ್ರಯಾಣಮಾಡಿದನು. ಪ್ರಯಾಣಮಾಡುತ್ತಿರುವಾಗ ದಾರಿಯಲ್ಲಿ ಪಕ್ಷಿಗಳು ಕಠೋರವಾಗಿ ಕೂಗುತ್ತ ದುರ್ನಿಮಿತ್ತವನ್ನು ಸೂಚಿಸಿದವು. ನೆಲದಮೇಲೆ ಮೃಗಗಳು ಪ್ರದಕ್ಷಿಣಾಕಾರವಾಗಿ ಸಂಚರಿಸುತ್ತ ಶುಭವನ್ನು ಸೂಚಿಸುತ್ತಿದ್ದವು (೮-೧೦). ಆಗ ದಶರಥನು ವಸಿಷ್ಠರನ್ನು ಕಂಡು "ಮಹರ್ಷಿಗಳೆ, ಇದೇನು? ಪಕ್ಷಿಗಳು ಘೋರವಾಗಿ ಅರಚುತ್ತ ಕಠೋರವಾಗಿ ವರ್ತಿಸುತ್ತಿವೆ. ಮೃಗಗಳು ಪ್ರದಕ್ಷಿಣಾಕಾರವಾಗಿ ತಿರುಗಾಡುತ್ತಿವೆ

**ಉವಾಚ ಮಧುರಾಂ ವಾಣೀಂ ಶ್ರೂಯತಾಮಸ್ಯ ಯತ್ ಫಲಮ್**
**ಉಪಸ್ಥಿತಂ ಭಯಂ ಘೋರಂ ದಿವ್ಯಂ ಪಕ್ಷಿಮುಖಾಚ್ಚ್ಯುತಮ್ ॥**
**ಮೃಗಾಃ ಪ್ರಶಮಯಂತ್ಯೇತೇ ಸಂತಾಪಸ್ತ್ಯಜ್ಯತಾಮಯಮ್ ।**
**ತೇಷಾಂ ಸಂವದತಾಂ ತತ್ರ ವಾಯುಃ ಪ್ರಾದುರ್ಬಭೂವ ಹ ॥ ೧೪**
**ಕಂಪಯನ್ ಮೇದಿನೀಂ ಸರ್ವಾಂ ಪಾತಯಂಶ್ಚ ಮಹಾದ್ರುಮಾನ್**
**ತಮಸಾ ಸಂವೃತಃ ಸೂರ್ಯಃ ಸರ್ವಾ ನ ಪ್ರಬಭುರ್ದಿಶಃ ॥ ೧೫**
**ಭಸ್ಮನಾ ಚಾವೃತಂ ಸರ್ವಂ ಸಂಮೂಢಮಿವ ತದ್ಬಲಮ್ ।**
**ವಸಿಷ್ಠ ಋಷಯಶ್ಚಾನ್ಯೇ ರಾಜಾ ಚ ಸಸುತಸ್ತದಾ ॥ ೧೬**
**ಸಸಂಜ್ಞಾ ಇವ ತತ್ರಾಸನ್ ಸರ್ವಮನ್ಯದ್ವಿಚೇತನಮ್ ।**
**ತಸ್ಮಿಂಸ್ತಮಸಿ ಘೋರೇ ತು ಭಸ್ಮಚ್ಛನ್ನೇವ ಸಾ ಚಮೂಃ ॥ ೧೭**
**ದದರ್ಶ ಭೀಮಸಂಕಾಶಂ ಜಟಾಮಂಡಲಧಾರಿಣಮ್ ।**
**ಭಾರ್ಗವಂ ಜಾಮದಗ್ನ್ಯಂ ತಂ ರಾಜರಾಜವಿಮರ್ದಿನಮ್ ॥ ೧೮**

---

ನನ್ನ ಎದೆಯು ಬಡಿದುಕೊಳ್ಳುತ್ತಿದೆ ಮನಸ್ಸಿಗೆ ಕಳವಳವಾಗುತ್ತಿದೆ" ಎಂದು ಕೇಳಿದನು (೧೧-೧೨). ಆಗ ಮಹರ್ಷಿಗಳು ಅವನನ್ನು ಸಮಾಧಾನ ಪಡಿಸುತ್ತ "ರಾಜ, ಆಕಾಶದಲ್ಲಿನ ಪಕ್ಷಿಗಳ ಕೂಗು ಈಗ ಘೋರವಾದ ಭಯವು ಉಪಸ್ಥಿತವಾಗಿದೆಯೆಂದು ಸೂಚಿಸುತ್ತಿದೆ ಆ ಭಯವು ಪರಿಹೃತ ವಾಗುತ್ತದೆಯೆಂದು ಮೃಗಗಳು ಸೂಚಿಸುತ್ತಿವೆ. ವಿಷಾದಿಸಬೇಡ" ಎಂದರು (೧೩-೧೪). ಅಷ್ಟರಲ್ಲಿ ಒಂದು ಬಿರುಗಾಳಿ ಎದ್ದಿತು ಅದರಿಂದ ನೆಲವೇ ನಡುಗಿದಂತಾಯಿತು. ದೊಡ್ಡ ದೊಡ್ಡ ಮರಗಳು ಉರುಳಿದವು ಕತ್ತಲು ಕವಿದು ಸೂರ್ಯನು ಕಾಣಿಸದಂತಾದನು. ದಿಕ್ಕುಗಳು ಮಾಸಿದವು (೧೫). ಸರ್ವವೂ ಧೂಳಿನಿಂದ ಮುಚ್ಚಿಹೋಯಿತು ನಿಖಿಲ ಸೈನ್ಯವೇ ಎಚ್ಚರದಪ್ಪಿ ದಂತಾಯಿತು. ಕೇವಲ ವಸಿಷ್ಠರು, ಇತರ ಋಷಿಗಳು, ದಶರಥರಾಜ, ಅವನ ಮಕ್ಕಳು - ಇಷ್ಟು ಜನರಿಗೆ ಮಾತ್ರ ಚೇತನವಿದ್ದಂತೆ ಕಂಡಿತು. ಉಳಿದವರೆಲ್ಲರೂ ನಿಶ್ಚೇತನರಾದರು. ಸೈನ್ಯವೆಲ್ಲವೂ ಧೂಳಿನಿಂದ ತುಂಬಿಹೋಗಲು ಆ ಘೋರ ಕತ್ತಲೆಯಲ್ಲಿ ಒಬ್ಬ ವ್ಯಕ್ತಿಯು ಗೋಚರನಾದನು (೧೬-೧೭). ಅವನು ಭೀಮಾಕಾರನೂ ಜಟಾಮಂಡಲಧಾರಿಯೂ ಆಗಿದ್ದನು ಅವನೇ ಜಮದಗ್ನಿ

ಕೈಲಾಸಮಿವ ದುರ್ಧರ್ಷಂ ಕಾಲಾಗ್ನಿಮಿವ ದುಃಸಹಮ್ ।
ಜ್ವಲಂತಮಿವ ತೇಜೋಭಿರ್ದುರ್ನಿರೀಕ್ಷ್ಯಂ ಪೃಥಗ್ಜನೈಃ ॥ ೧೯

ಸ್ಕಂಧೇ ಚಾಸಜ್ಯ ಪರಶುಂ ಧನುರ್ವಿದ್ಯುದ್ಗಣೋಪಮಮ್ ।
ಪ್ರಗೃಹ್ಯ ಶರಮುಖ್ಯಂ ಚ ತ್ರಿಪುರಘ್ನಂ ಯಥಾ ಹರಮ್ ॥ ೨೦

ತಂ ದೃಷ್ಟ್ವಾ ಭೀಮಸಂಕಾಶಂ ಜ್ವಲಂತಮಿವ ಪಾವಕಮ್ ।
ವಸಿಷ್ಠಪ್ರಮುಖಾಃ ಸರ್ವೇ ಜಪಹೋಮಪರಾಯಣಾಃ ॥ ೨೧

ಸಂಗತಾ ಮುನಯಃ ಸರ್ವೇ ಸಂಜಜಲ್ಪುರಥೋ ಮಿಥಃ ।
ಕಚ್ಚಿತ್ ಪಿತೃವಧಾಮರ್ಷೀ ಕ್ಷತ್ರಂ ನೋತ್ಸಾದಯಿಷ್ಯತಿ ॥ ೨೨

ಪೂರ್ವಂ ಕ್ಷತ್ರವಧಂ ಕೃತ್ವಾ ಗತಮನ್ಯುರ್ಗತಜ್ವರಃ ।
ಕ್ಷತ್ರಸ್ಯೋತ್ಸಾದನಂ ಭೂಯೋ ನ ಖಲ್ವಸ್ಯ ಚಿಕೀರ್ಷಿತಮ್ ॥ ೨೩

---

ಪುತ್ರನಾದ ಭಾರ್ಗವರಾಮ. ಅವನೇ ರಾಜಾಧಿರಾಜರನ್ನು ಧ್ವಂಸಮಾಡಿದವನು (೧೮). ಅವನು ಕೈಲಾಸಗಿರಿಯಂತೆ ದುರ್ಧರ್ಷ. ಕಾಲಾಗ್ನಿಯಂತೆ ಸಹಿಸಲಶಕ್ಯ. ತೇಜಸ್ಸಿನಿಂದ ಜ್ವಲಿಸುತ್ತಿದ್ದ ಆತನನ್ನು ಸಾಮಾನ್ಯಜನರು ಕಣ್ಣುತೆರೆದು ನೋಡಲೂ ಸಾಧ್ಯವಿರಲಿಲ್ಲ (೧೯). ಆತನು ಹೆಗಲಿನ ಮೇಲೆ ಒಂದು ಕೊಡಲಿಯನ್ನು ಹೇರಿಕೊಂಡು ಕೈಯಲ್ಲಿ ಮಿಂಚುವ ಧನುಸ್ಸನ್ನೂ ಅಸ್ತ್ರವನ್ನೂ ಹಿಡಿದುಕೊಂಡು, ತ್ರಿಪುರಸಂಹಾರಕ್ಕೆ ಉದ್ಯುಕ್ತನಾದ ಸಾಕ್ಷಾತ್ ರುದ್ರನಂತೆ ಕಂಗೊಳಿಸುತ್ತಿದ್ದನು (೨೦). ಭೀಮಾಕಾರನಾಗಿ ಉರಿಯುವ ಬೆಂಕಿಯಂತಿದ್ದ ಪರಶುರಾಮನನ್ನು ಕಂಡು ವಸಿಷ್ಠಾದಿ ಮುನಿಗಳಲ್ಲಿ ಕೆಲವರು ಜಪವನ್ನಾರಂಭಿಸಿದರು ಕೆಲವರು ಮನಸ್ಸಿನಲ್ಲಿಯೇ ಹೋಮವನ್ನಾರಂಭಿಸಿದರು! ಕೆಲವರು "ತನ್ನ ತಂದೆಯ ವಧೆಯಿಂದ ಉದ್ದೀಪಿತನಾದ ಈತನು ಮತ್ತೆ ಕ್ಷತ್ರಿಯರನ್ನು ಕೊಲ್ಲಲು ಹೊರಟಿಲ್ಲವಷ್ಟೆ (೨೧-೨೨). ಹಿಂದೆ ಕ್ಷತ್ರಿಯರನ್ನು ಸಂಹರಿಸಿದಮೇಲೆ ಇವನ ಕೋಪವು ಶಾಂತವಾಗಿ ನಿಶ್ಚಿಂತನಾಗಿದ್ದನು. ಈಗ ಪುನಃ ಕ್ಷತ್ರಿಯರನ್ನು ಸಂಹರಿಸುವ ಇಚ್ಛೆ ಇರಲಿಕ್ಕಿಲ್ಲ"

ಏವಮುಕ್ತ್ವಾರ್ಘ್ಯಮಾದಾಯ ಭಾರ್ಗವಂ ಭೀಮದರ್ಶನಮ್ ।
ಋಷಯೋ ರಾಮ ರಾಮೇತಿ ವಚೋ ಮಧುರಮಬ್ರುವನ್ ॥ ೨೪

ಪ್ರತಿಗೃಹ್ಯ ತು ತಾಂ ಪೂಜಾಮೃಷಿದತ್ತಾಂ ಪ್ರತಾಪವಾನ್ ।
ರಾಮಂ ದಾಶರಥಿಂ ರಾಮೋ ಜಾಮದಗ್ನ್ಯೋಽಭ್ಯಭಾಷತ ॥ ೨೫

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಚತುಃಸಪ್ತತಿತಮಃ ಸರ್ಗಃ



ಎಂದು ಮಾತನಾಡಿಕೊಂಡರು (೨೩). ಅನಂತರ ಆ ಋಷಿಗಳು ಪೂಜಾ ಸಾಮಗ್ರಿಯನ್ನು ತೆಗೆದುಕೊಂಡು ಭೀಮಾಕಾರನಾದ ಭಾರ್ಗವರಾಮನ ಹತ್ತಿರಕ್ಕೆ ಹೋಗಿ ಮಧುರವಾದ ನುಡಿಗಳಿಂದ "ರಾಮ, ರಾಮ" ಎನ್ನುತ್ತ ಗೌರವಿಸಿದರು. ಆ ಪ್ರತಾಪಶಾಲಿಯು ಋಷಿಗಳು ಅರ್ಪಿಸಿದ ಪೂಜೆಯನ್ನು ಸ್ವೀಕರಿಸಿ ದಶರಥಪುತ್ರನಾದ ಶ್ರೀರಾಮನ ಕಡೆಗೆ ತಿರುಗಿ ಮಾತಾಡಿದನು (೨೪-೨೫).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಎಪ್ಪತ್ತನಾಲ್ಕನೆಯ ಸರ್ಗ



## ಪಂಚಸಪ್ತತಿತಮಃ ಸರ್ಗಃ

### ವೈಷ್ಣವಧನುಃಪ್ರಶಂಸಾ

ರಾಮ ದಾಶರಥೇ ವೀರ ವೀರ್ಯಂ ತೇ ಶ್ರೂಯತೇಽದ್ಭುತಮ್ ।
ಧನುಷೋ ಭೇದನಂ ಚೈವ ನಿಖಿಲೇನ ಮಯಾ ಶ್ರುತಮ್ ॥ ೧

ತದದ್ಭುತಮಚಿಂತ್ಯಂ ಚ ಭೇದನಂ ಧನುಷಸ್ತ್ವಯಾ ।
ತಚ್ಛ್ರುತ್ವಾಹಮನುಪ್ರಾಪ್ತೋ ಧನುರ್ಗೃಹ್ಯಾಪರಂ ಶುಭಮ್ ॥ ೨

ತದಿದಂ ಘೋರಸಂಕಾಶಂ ಜಾಮದಗ್ನ್ಯಂ ಮಹದ್ಧನುಃ ।
ಪೂರಯಸ್ವ ಶರೇಣೈವ ಸ್ವಬಲಂ ದರ್ಶಯಸ್ವ ಮೇ ॥ ೩

ತದಿದಂ ತೇ ಬಲಂ ದೃಷ್ಟ್ವಾ ಧನುಷೋಽಸ್ಯ ಪ್ರಪೂರಣೇ ।
ದ್ವಂದ್ವಯುದ್ಧಂ ಪ್ರದಾಸ್ಯಾಮಿ ವೀರ್ಯಶ್ಲಾಘ್ಯಮಹಂ ತವ ॥ ೪

ತಸ್ಯ ತದ್ವಚನಂ ಶ್ರುತ್ವಾ ರಾಜಾ ದಶರಥಸ್ತದಾ ।
ವಿಷಣ್ಣವದನೋ ದೀನಃ ಪ್ರಾಂಜಲಿರ್ವಾಕ್ಯಮಬ್ರವೀತ್ ॥ ೫

### ಸರ್ಗ ೭೫

ಪರಶುರಾಮನು ಶ್ರೀರಾಮನಿಗೆ ವೈಷ್ಣವಧನುಸ್ಸನ್ನು
ಹೆದೆಯೇರಿಸುವಂತೆ ಹೇಳುವುದು.

ಪರಶುರಾಮನು "ದಶರಥಪುತ್ರ—ರಾಮ, ನಿನ್ನ ಶೌರ್ಯವು ಅದ್ಭುತವಾದದ್ದೆಂದು ಕೇಳಿದ್ದೇನೆ. ಆ ಧನುಸ್ಸನ್ನು ಮುರಿದ ವಿಷಯವನ್ನೆಲ್ಲ ಕೇಳಿದೆ. ನೀನು ಧನುಸ್ಸನ್ನು ಮುರಿದದ್ದು ಆಶ್ಚರ್ಯವೇ ಸರಿ ಅದು ಊಹಾತೀತವಾದ ಸಂಗತಿ. ಆದ್ದರಿಂದ ನಾನು ಇನ್ನೊಂದು ಉತ್ತಮವಾದ ಧನುಸ್ಸನ್ನು ತೆಗೆದುಕೊಂಡು ಬಂದಿದ್ದೇನೆ (೧-೨). ಇದು ಜಮದಗ್ನಿಮುನಿಯಿಂದ ನನ್ನ ವಶಕ್ಕೆ ಬಂದಿದೆ. ಘೋರವೂ ಮಹತ್ತರವೂ ಆದ ಈ ಧನುಸ್ಸಿಗೆ ಹೆದೆಯೇರಿಸಿ ಬಾಣವನ್ನು ಹೂಡು. ನಿನ್ನ ಪರಾಕ್ರಮವನ್ನಾದರೂ ತೋರಿಸು, ನೋಡೋಣ. ಆಗ ನಿನ್ನ ಪರಾಕ್ರಮವನ್ನು ನೋಡಿ, ಅನಂತರ ನಿನ್ನೊಡನೆ ಘನವಾದ ದ್ವಂದ್ವಯುದ್ಧವನ್ನಾರಂಭಿಸುತ್ತೇನೆ!" ಎಂದು ಹೇಳಿದನು (೩-೪). ಪರಶುರಾಮನ ವಚನವನ್ನು ಕೇಳಿ ದಶರಥನ ಮುಖವು ಖಿನ್ನವಾಯಿತು.

ಕ್ಷತ್ರರೋಷಾತ್ ಪ್ರಶಾಂತಸ್ತ್ವಂ ಬ್ರಾಹ್ಮಣಶ್ಚ ಮಹಾಯಶಾಃ ।
ಬಾಲಾನಾಂ ಮಮ ಪುತ್ರಾಣಾಮಭಯಂ ದಾತುಮರ್ಹಸಿ ॥ ೬

ಭಾರ್ಗವಾಣಾಂ ಕುಲೇ ಜಾತಃ ಸ್ವಾಧ್ಯಾಯವ್ರತಶಾಲಿನಾಮ್ ।
ಸಹಸ್ರಾಕ್ಷೇ ಪ್ರತಿಜ್ಞಾಯ ಶಸ್ತ್ರಂ ನಿಕ್ಷಿಪ್ತವಾನಸಿ ॥ ೭

ಸ ತ್ವಂ ಧರ್ಮಪರೋ ಭೂತ್ವಾ ಕಶ್ಯಪಾಯ ವಸುಂಧರಾಮ್ ।
ದತ್ತ್ವಾ ವನಮುಪಾಗಮ್ಯ ಮಹೇಂದ್ರಕೃತಕೇತನಃ ॥ ೮

ಮಮ ಸರ್ವವಿನಾಶಾಯ ಸಂಪ್ರಾಪ್ತಸ್ತ್ವಂ ಮಹಾಮುನೇ ।
ನ ಚೈಕಸ್ಮಿನ್ ಹತೇ ರಾಮೇ ಸರ್ವೇ ಜೀವಾಮಹೇ ವಯಮ್ ॥

ಬ್ರುವತ್ಯೇವಂ ದಶರಥೇ ಜಾಮದಗ್ನ್ಯಃ ಪ್ರತಾಪವಾನ್ ।
ಅನಾದೃತ್ಯೈವ ತದ್ವಾಕ್ಯಂ ರಾಮಮೇವಾಭ್ಯಭಾಷತ ॥ ೧೦

ಇಮೇ ದ್ವೇ ಧನುಷೀ ಶ್ರೇಷ್ಠೇ ದಿವ್ಯೇ ಲೋಕಾಭಿವಿಶ್ರುತೇ ।
ದೃಢೇ ಬಲವತೀ ಮುಖ್ಯೇ ಸುಕೃತೇ ವಿಶ್ವಕರ್ಮಣಾ ॥ ೧೧

---

ಅವನು ದೈನ್ಯದಿಂದ ಕೈಮುಗಿದು "ಮಹರ್ಷಿ, ನೀನು ಕ್ಷತ್ರಿಯರಮೇಲೆ ರೋಷವನ್ನು ತ್ಯಜಿಸಿ ಶಾಂತನಾದವನು. ಕೀರ್ತಿಸಂಪನ್ನನಾದ ಬ್ರಾಹ್ಮಣನಾಗಿದ್ದೀಯೆ. ನನ್ನ ಮಕ್ಕಳು ಇನ್ನೂ ಬಾಲಕರು. ಅವರಿಗೆ ನೀನು ದಯವಿಟ್ಟು ಅಭಯವನ್ನು ಕೊಡಬೇಕು (೫-೬). ವೇದಾಧ್ಯಯನಸಂಪನ್ನರೂ ವ್ರತನಿಷ್ಠರೂ ಆದ ಭೃಗುವಂಶೀಯಮುನಿಗಳ ಕುಲದಲ್ಲಿ ಜನಿಸಿದ್ದೀಯೆ. ದೇವೇಂದ್ರನಿಗೆ ಮಾತುಕೊಟ್ಟು ಶಸ್ತ್ರವನ್ನು ಕೆಳಗಿಟ್ಟಿದ್ದೀಯೆ. ನೀನು ತಪೋನಿಷ್ಠನಾಗಿ ಕಶ್ಯಪಮುನಿಗೆ ಭೂಮಿಯನ್ನೆಲ್ಲ ದಾನಮಾಡಿ ಕಾಡಿಗೆ ಹೋಗಿ ಮಹೇಂದ್ರಪರ್ವತದಲ್ಲಿ ವಾಸವಾಗಿದ್ದೀಯಲ್ಲವೆ? (೭-೮). ಮಹರ್ಷಿ, ಇಂಥ ನೀನು ಈ ದಿನ ನನ್ನ ಸರ್ವನಾಶ ಮಾಡುವುದಕ್ಕಾಗಿ ಬಂದೆಯಾ? ನನ್ನ ರಾಮನೇನಾದರೂ ಹತನಾದರೆ ನಾವು ಯಾರೂ ಬದುಕಿರುವುದಿಲ್ಲ" ಎಂದು ಹೇಳತೊಡಗಿದನು (೯). ಪ್ರತಾಪಶಾಲಿಯಾದ ಜಾಮದಗ್ನ್ಯನು ಅವನ ಮಾತನ್ನು ಗಣನೆಗೇ ತಂದುಕೊಳ್ಳಲಿಲ್ಲ. ಅವನು ಶ್ರೀರಾಮನನ್ನೇ ಉದ್ದೇಶಿಸಿ, "ಇವೆರಡೂ ಶ್ರೇಷ್ಠವಾದ ದಿವ್ಯಧನುಸ್ಸುಗಳು. ಲೋಕವಿಖ್ಯಾತವಾದವು. ಇವನ್ನು ದೃಢವಾಗಿಯೂ ಬಲವಾಗಿಯೂ

*

ಅತಿಸೃಷ್ಟಂ ಸುರೈರೇಕಂ ತ್ರ್ಯಂಬಕಾಯ ಯುಯುತ್ಸವೇ ।
ತ್ರಿಪುರಘ್ನಂ ನರಶ್ರೇಷ್ಠ ಭಗ್ನಂ ಕಾಕುತ್ಸ್ಥ ಯತ್ತ್ವಯಾ ॥ ೧೨

ಇದಂ ದ್ವಿತೀಯಂ ದುರ್ಧರ್ಷಂ ವಿಷ್ಣೋರ್ದತ್ತಂ ಸುರೋತ್ತಮೈಃ ।
ತದಿದಂ ವೈಷ್ಣವಂ ರಾಮ ಧನುಃ ಪರಪುರಂಜಯಮ್ ॥ ೧೩

ಸಮಾನಸಾರಂ ಕಾಕುತ್ಸ್ಥ ರೌದ್ರೇಣ ಧನುಷಾ ತ್ವಿದಮ್ ।
ತದಾ ತು ದೇವತಾಃ ಸರ್ವಾಃ ಪೃಚ್ಛಂತಿ ಸ್ಮ ಪಿತಾಮಹಮ್ ॥ ೧೪

ಶಿತಿಕಂಠಸ್ಯ ವಿಷ್ಣೋಶ್ಚ ಬಲಾಬಲನಿರೀಕ್ಷಯಾ ।
ಅಭಿಪ್ರಾಯಂ ತು ವಿಜ್ಞಾಯ ದೇವತಾನಾಂ ಪಿತಾಮಹಃ ॥ ೧೫

ವಿರೋಧಂ ಜನಯಾಮಾಸ ತಯೋಃ ಸತ್ತ್ವಪರೀಕ್ಷಯಾ ।
ವಿರೋಧೇ ಚ ಮಹದ್ಯುದ್ಧಮಭವದ್ರೋಮಹರ್ಷಣಮ್ ॥ ೧೬

ಶಿತಿಕಂಠಸ್ಯ ವಿಷ್ಣೋಶ್ಚ ಪರಸ್ಪರಜಯೈಷಿಣೋಃ ।
ತದಾ ತು ಜೃಂಭಿತಂ ಶೈವಂ ಧನುರ್ಭೀಮಪರಾಕ್ರಮಮ್ ॥ ೧೭

---

ಇರುವಂತೆ ವಿಶ್ವಕರ್ಮನು ನಿರ್ಮಿಸಿದನು (೧೦-೧೧) ಇವುಗಳಲ್ಲೊಂದನ್ನು ದೇವತೆಗಳು ತ್ರಿಪುರಸಂಹಾರಕಾಲದಲ್ಲಿ ತ್ರಿಯಂಬಕನಿಗೆ ಕೊಟ್ಟರು. ಅದರಿಂದಲೇ ತ್ರಿಪುರಸಂಹಾರವಾಯಿತು. ಪುರುಷಶ್ರೇಷ್ಠ, ಅದನ್ನೇ ನೀನು ಮುರಿದದ್ದು. ದುರ್ಧರ್ಷವಾದ ಇನ್ನೊಂದು ಧನುಸ್ಸನ್ನು ದೇವತೆಗಳು ವಿಷ್ಣುವಿಗೆ ಕೊಟ್ಟಿದ್ದರು. ಶತ್ರುನಾಶಕರವಾದ ಆ ವೈಷ್ಣವ ಧನುಸ್ಸೇ ಇದು (೧೨-೧೩). ಈ ಧನುಸ್ಸು ಆ ಶಿವಧನುಸ್ಸಿನಷ್ಟೇ ಪ್ರಬಲವಾದದ್ದು. ತ್ರಿಪುರ ಸಂಹಾರವಾದಮೇಲೆ ದೇವತೆಗಳು ಶಿವನ ಬಲ ಅಧಿಕವೊ ವಿಷ್ಣುವಿನ ಬಲ ಅಧಿಕವೊ ಎಂದು ಬ್ರಹ್ಮನನ್ನು ಕೇಳಿದರು (೧೪). ಬ್ರಹ್ಮನು ಅವರ ಅಭಿಪ್ರಾಯವನ್ನು ತಿಳಿದು ಬಲಪರೀಕ್ಷೆಗೋಸ್ಕರ ಹರಿಹರರಲ್ಲಿ ವಿರೋಧ ವನ್ನುಂಟುಮಾಡಿದನು. ಆಗ ಅವರಿಬ್ಬರಿಗೆ ರೋಮಾಂಚಕರವಾದ ಮಹಾ ಯುದ್ಧವಾರಂಭವಾಯಿತು (೧೫-೧೬). ಶಿವನೂ ವಿಷ್ಣುವೂ ಪರಸ್ಪರರನ್ನು ಜಯಿಸಬೇಕೆಂದು ಯುದ್ಧಮಾಡಿದರು. ಆಗ ಭೀಮಪರಾಕ್ರಮವಾಗಿದ್ದ ಶಿವಧನುಸ್ಸು ಹಿಗ್ಗಿ (ನೆಡೆತವಿಲ್ಲದೆ ಯುದ್ಧಮಾಡಲು ಅಸಮರ್ಥ) ವಾಯಿತು.

ಹುಂಕಾರೇಣ ಮಹಾದೇವಃ ಸ್ತಂಭಿತೋಽಥ ತ್ರಿಲೋಚನಃ ।
ದೇವೈಸ್ತದಾ ಸಮಾಗಮ್ಯ ಸರ್ಷಿಸಂಘೈಃ ಸಚಾರಣೈಃ ॥ ೧೮

ಯಾಚಿತೌ ಪ್ರಶಮಂ ತತ್ರ ಜಗ್ಮತುಸ್ತೌ ಸುರೋತ್ತಮೌ ।
ಜೃಂಭಿತಂ ತದ್ಧನುರ್ದೃಷ್ಟ್ವಾ ಶೈವಂ ವಿಷ್ಣುಪರಾಕ್ರಮೈಃ ॥ ೧೯

ಅಧಿಕಂ ಮೇನಿರೇ ವಿಷ್ಣುಂ ದೇವಾಃ ಸರ್ಷಿಗಣಾಸ್ತಥಾ ।
ಧನೂ ರುದ್ರಸ್ತು ಸಂಕ್ರುದ್ಧೋ ವಿದೇಹೇಷು ಮಹಾಯಶಾಃ ॥ ೨೦

ದೇವರಾತಸ್ಯ ರಾಜರ್ಷೇರ್ದದೌ ಹಸ್ತೇ ಸಸಾಯಕಮ್ ।
ಇದಂ ಚ ವೈಷ್ಣವಂ ರಾಮ ಧನುಃ ಪರಪುರಂಜಯಮ್ ॥ ೨೧

ಋಚೀಕೇ ಭಾರ್ಗವೇ ಪ್ರಾದಾದ್ವಿಷ್ಣುಃ ಸಂನ್ಯಾಸಮುತ್ತಮಮ್ ।
ಋಚೀಕಸ್ತು ಮಹಾತೇಜಾಃ ಪುತ್ರಸ್ಯಾಪ್ರತಿಕರ್ಮಣಃ ॥ ೨೨

ಪಿತುರ್ಮಮ ದದೌ ದಿವ್ಯಂ ಜಮದಗ್ನೇರ್ಮಹಾತ್ಮನಃ ।
ನ್ಯಸ್ತಶಸ್ತ್ರೇ ಪಿತರಿ ಮೇ ತಪೋಬಲಸಮನ್ವಿತೇ ॥ ೨೩

---

ತ್ರಿಯಂಬಕನಾದ ಮಹಾದೇವನು ಹುಂಕರಿಸುತ್ತ ಸ್ತಂಭೀಭೂತನಾಗಿ ನಿಂತು ಬಿಟ್ಟನು (೧೭-೧೮). ಆಗ ದೇವಚಾರಣರೂ ಋಷಿಗಳೂ ಆಗಮಿಸಿ ಶಾಂತ ರಾಗಬೇಕೆಂದು ಹರಿಹರರನ್ನು ಪ್ರಾರ್ಥಿಸಿಕೊಳ್ಳಲು ಅವರು ಯುದ್ಧವನ್ನು ನಿಲ್ಲಿಸಿ ಹೊರಟುಹೋದರು. ವಿಷ್ಣುವಿನ ಪರಾಕ್ರಮದಿಂದ ಶಿವಧನುಸ್ಸು ಹಿಗ್ಗಿ ಕುಂಠಿತವಾದ್ದರಿಂದ ವಿಷ್ಣುವೇ ಅಧಿಕ ಬಲಶಾಲಿಯೆಂದು ದೇವತೆಗಳೂ ಋಷಿಗಳೂ ಭಾವಿಸಿದರು * (೧೯-೨೦). ಆಗ ರುದ್ರನು ಕ್ರುದ್ಧನಾಗಿ ವಿದೇಹಾಧಿಪತಿಯಾದ ದೇವರಾತನೆಂಬ ರಾಜರ್ಷಿಯ ಕೈಗೆ ಬಾಣಸಹಿತ ವಾಗಿ ತನ್ನ ಧನುಸ್ಸನ್ನು ಕೊಟ್ಟುಬಿಟ್ಟನು. ರಾಮ, ಶತ್ರುನಾಶಕವಾದ ಈ ವೈಷ್ಣವಧನುಸ್ಸನ್ನು ವಿಷ್ಣುವು ಭೃಗುವಂಶೋತ್ಪನ್ನನಾದ ಋಚೀಕನಿಗೆ ನ್ಯಾಸವಾಗಿ ಕೊಟ್ಟನು (೨೧-೨೨). ಋಚೀಕನು ತನ್ನ ಪುತ್ರನಾದ ಜಮದಗ್ನಿಗೆ ಅದನ್ನು ಕೊಟ್ಟನು. ಜಮದಗ್ನಿ ನನ್ನ ತಂದೆ. (ಶತ್ರುವಿಗೂ)

* ಅನುಬಂಧವನ್ನು ನೋಡಿ.

ಅರ್ಜುನೋ ವಿದಧೇ ಮೃತ್ಯುಂ ಪ್ರಾಕೃತಾಂ ಬುದ್ಧಿಮಾಸ್ಥಿತಃ |
ವಧಮಪ್ರತಿರೂಪಂ ತು ಪಿತುಃ ಶ್ರುತ್ವಾ ಸುದಾರುಣಮ್ || ೨೪
ಕ್ಷತ್ರಮುತ್ಸಾದಯನ್ ರೋಷಾಜ್ಜಾತಂ ಜಾತಮನೇಕಶಃ |
ಪೃಥಿವೀಂ ಚಾಖಿಲಾಂ ಪ್ರಾಪ್ಯ ಕಶ್ಯಪಾಯ ಮಹಾತ್ಮನೇ || ೨೫
ಯಜ್ಞಸ್ಯಾಂತೇ ತದಾ ರಾಮ ದಕ್ಷಿಣಾಂ ಪುಣ್ಯಕರ್ಮಣೇ |
ದತ್ತ್ವಾ ಮಹೇಂದ್ರನಿಲಯಸ್ತಪೋಬಲಸಮನ್ವಿತಃ || ೨೬
ತದಿದಂ ವೈಷ್ಣವಂ ರಾಮ ಪಿತೃಪೈತಾಮಹಂ ಮಹತ್ |
ಕ್ಷತ್ರಧರ್ಮಂ ಪುರಸ್ಕೃತ್ಯ ಗೃಹ್ಣೀಷ್ವ ಧನುರುತ್ತಮಮ್ || ೨೭
ಯೋಜಯಸ್ವ ಧನುಃಶ್ರೇಷ್ಠೇ ಶರಂ ಪರಪುರಂಜಯಮ್ |
ಯದಿ ಶಕ್ನೋಷಿ ಕಾಕುತ್ಸ್ಥ ದ್ವಂದ್ವಂ ದಾಸ್ಯಾಮಿ ತೇ ತತಃ || ೨೮

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಪಂಚಸಪ್ತತಿತಮಃ ಸರ್ಗಃ

---

ಪ್ರತೀಕಾರವನ್ನು ಮಾಡದಿರುವ ಮಹಾತ್ಮ. ನನ್ನ ತಂದೆ ಶಸ್ತ್ರವನ್ನು ಕೆಳಗಿಟ್ಟು ತಪೋನಿಷ್ಠನಾಗಿರಲು, ಕಾರ್ತವೀರ್ಯಾರ್ಜುನನು ತುಚ್ಛಬುದ್ಧಿಯಿಂದ ನನ್ನ ತಂದೆಗೆ ಮರಣವನ್ನು ತಂದಿಟ್ಟನು (೨೩-೨೪). ನನ್ನ ತಂದೆಗೆ ಅಯೋಗ್ಯವಾದ ಆ ಭೀಕರ ವಧೆಯನ್ನು ಕೇಳಿ ನನಗೆ ರೋಷ ಉಕ್ಕಿತು. ಹುಟ್ಟಿಹುಟ್ಟಿದ ಕ್ಷತ್ರಿಯರನ್ನು ಲೆಕ್ಕವಿಲ್ಲದಷ್ಟು ಸಂಹರಿಸಿ ಸಮಸ್ತ ಪೃಥ್ವಿಯನ್ನೇ ನನ್ನ ಸ್ವಾಧೀನಪಡಿಸಿಕೊಂಡೆನು (೨೫). ಈ ಕ್ಷತ್ರಿಯವಧೆಯೆಂಬ ಯಜ್ಞವನ್ನು ಮುಗಿಸಿ ಪುಣ್ಯಾತ್ಮನೂ ಮಹಾತ್ಮನೂ ಆದ ಕಶ್ಯಪಮುನಿಗೆ ಭೂಮಂಡಲವನ್ನು ದಕ್ಷಿಣೆಯಾಗಿ ಸಮರ್ಪಿಸಿದೆನು. ಅನಂತರ ಮಹೇಂದ್ರ ಪರ್ವತಕ್ಕೆ ಹೋಗಿ ತಪೋನಿಷ್ಠನಾಗಿದ್ದೇನೆ (೨೬). ರಾಮ, ಇದೇ ನನ್ನ ಪಿತೃಪಿತಾಮಹರಿಂದ ನನಗೆ ಬಂದಿರತಕ್ಕ ವೈಷ್ಣವ ಧನುಸ್ಸು. ಈಗ ನೀನು, ಕ್ಷತ್ರಿಯ ಧರ್ಮವನ್ನವಲಂಬಿಸಿ ಶ್ರೇಷ್ಠವಾದ ಈ ಧನುಸ್ಸನ್ನು ಕೈಯಲ್ಲಿ ಹಿಡಿ. ಶರವನ್ನು ಅದಕ್ಕೆ ಹೂಡು. ಇದು ನಿನಗೆ ಸಾಧ್ಯವಾದರೆ, ಕಾಕುತ್ಸ್ಥ, ಆಮೇಲೆ ನಿನಗೆ ದ್ವಂದ್ವಯುದ್ಧವನ್ನು ಕೊಡುತ್ತೇನೆ” ಎಂದು ಹೇಳಿದನು (೨೭-೨೮).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಎಪ್ಪತ್ತೈದನೆಯ ಸರ್ಗ

## ಷಟ್‌ಸಪ್ತತಿತಮಃ ಸರ್ಗಃ

### ಜಾಮದಗ್ನ್ಯಪ್ರತಿಷ್ಟಂಭಃ

ಶ್ರುತ್ವಾ ತಜ್ಜಾಮದಗ್ನ್ಯಸ್ಯ ವಾಕ್ಯಂ ದಾಶರಥಿಸ್ತದಾ ।
ಗೌರವಾದ್ಯಂತ್ರಿತಕಥಃ ಪಿತೂ ರಾಮಮಥಾಬ್ರವೀತ್ ॥ ೧

ಶ್ರುತವಾನಸ್ಮಿ ಯತ್ ಕರ್ಮ ಕೃತವಾನಸಿ ಭಾರ್ಗವ ।
ಅನುರುಧ್ಯಾಮಹೇ ಬ್ರಹ್ಮನ್ ಪಿತುರಾನೃಣ್ಯಮಾಸ್ಥಿತಃ ॥ ೨

ವೀರ್ಯಹೀನಮಿವಾಶಕ್ತಂ ಕ್ಷತ್ರಧರ್ಮೇಣ ಭಾರ್ಗವ ।
ಅವಜಾನಾಸಿ ಮೇ ತೇಜಃ ಪಶ್ಯ ಮೇಽದ್ಯ ಪರಾಕ್ರಮಮ್ ॥ ೩

ಇತ್ಯುಕ್ತ್ವಾ ರಾಘವಃ ಕ್ರುದ್ಧೋ ಭಾರ್ಗವಸ್ಯ ಶರಾಸನಮ್ ।
ಶರಂ ಚ ಪ್ರತಿಜಗ್ರಾಹ ಹಸ್ತಾಲ್ಲಘುಪರಾಕ್ರಮಃ ॥ ೪

## ಸರ್ಗ ೭೬

ಶ್ರೀರಾಮನು ವೈಷ್ಣವಧನುಸ್ಸಿನಲ್ಲಿ ಶರವನ್ನು ಹೂಡಿ ಪರಶುರಾಮನ
ತಪೋಲೋಕಗಳನ್ನು ಭಗ್ನಗೊಳಿಸುವುದು. ಪರಶುರಾಮನು
ತಪಸ್ಸಿಗೋಸ್ಕರ ಮಹೇಂದ್ರ ಪರ್ವತಕ್ಕೆ ಹೋಗುವುದು.

ಜಾಮದಗ್ನ್ಯನ ದರ್ಪೋಕ್ತಿಯನ್ನು ಕೇಳುತ್ತಿದ್ದ ಶ್ರೀರಾಮನು ಸಮೀಪದಲ್ಲಿ ತಂದೆ ಇರುವನೆಂಬ ಗೌರವದಿಂದ ಇದುವರೆಗೆ ಸುಮ್ಮನಿದ್ದನು. ಈಗ ಮಾತನ್ನು ಮಿತಗೊಳಿಸಿ ಅವನು "ಭಾರ್ಗವ, ನೀನು ಮಾಡಿದ ಕಾರ್ಯವನ್ನು ಕೇಳಿದ್ದೇನೆ. ಪಿತೃಋಣದಿಂದ ಮುಕ್ತನಾಗುವುದಕ್ಕಾಗಿ ನೀನು ಕ್ಷತ್ರಿಯರಮೇಲೆ ಸೇಡುತೀರಿಸಿಕೊಂಡಿರುವುದನ್ನು ಮೆಚ್ಚುತ್ತೇವೆ (೧-೨). ಆದರೆ ನಾನು ಶೌರ್ಯವಿಲ್ಲದವನೂ ಕೈಲಾಗದವನೂ ಎಂಬಂತೆ ಕ್ಷತ್ರಿಯ ಧರ್ಮದ ಹೆಸರನ್ನೆತ್ತಿ ನನ್ನ ತೇಜಸ್ಸನ್ನು ಹಗುರವಾಗಿ ಕಾಣುತ್ತಿದ್ದೀಯೆ. ಈಗ ನನ್ನ ಪರಾಕ್ರಮವನ್ನಾದರೂ ನೋಡು" ಎಂದು ಹೇಳಿ ಕ್ರುದ್ಧನಾಗಿ ಪರುಶುರಾಮನ ಕೈಯಿಂದ ವೈಷ್ಣವ ಧನುಸ್ಸನ್ನೂ ಶರವನ್ನೂ ಥಟ್ಟನೆ

ಆರೋಪ್ಯ ಸ ಧನೂ ರಾಮಃ ಶರಂ ಸಜ್ಯಂ ಚಕಾರ ಹ ।
ಜಾಮದಗ್ನ್ಯಂ ತತೋ ರಾಮಂ ರಾಮಃ ಕ್ರುದ್ಧೋಽಬ್ರವೀದ್ವಚಃ ॥

ಬ್ರಾಹ್ಮಣೋಽಸೀತಿ ಮೇ ಪೂಜ್ಯೋ ವಿಶ್ವಾಮಿತ್ರಕೃತೇನ ಚ ।
ತಸ್ಮಾಚ್ಛಕ್ತೋ ನ ತೇ ರಾಮ ಮೋಕ್ತುಂ ಪ್ರಾಣಹರಂ ಶರಮ್ ॥

ಇಮಾಂ ಪಾದಗತಿಂ ರಾಮ ತಪೋಬಲಸಮಾರ್ಜಿತಾನ್ ।
ಲೋಕಾನಪ್ರತಿಮಾನ್ ವಾ ತೇ ಹನಿಷ್ಯಾಮಿ ಯದಿಚ್ಛಸಿ ॥ ೭

ನ ಹ್ಯಯಂ ವೈಷ್ಣವೋ ದಿವ್ಯಃ ಶರಃ ಪರಪುರಂಜಯಃ ।
ಮೋಘಃ ಪತತಿ ವೀರ್ಯೇಣ ಬಲದರ್ಪವಿನಾಶನಃ ॥ ೮

ವರಾಯುಧಧರಂ ರಾಮಂ ದ್ರಷ್ಟುಂ ಸರ್ಷಿಗಣಾಃ ಸುರಾಃ ।
ಪಿತಾಮಹಂ ಪುರಸ್ಕೃತ್ಯ ಸಮೇತಾಸ್ತತ್ರ ಸರ್ವಶಃ ॥ ೯

ಗಂಧರ್ವಾಪ್ಸರಸಶ್ಚೈವ ಸಿದ್ಧಚಾರಣಕಿಂನರಾಃ ।
ಯಕ್ಷರಾಕ್ಷಸನಾಗಾಶ್ಚ ತದ್ದ್ರಷ್ಟುಂ ಮಹದದ್ಭುತಮ್ ॥ ೧೦

---

ನೆಳೆದುಕೊಂಡನು (೩-೪) ಅನಂತರ ಶ್ರೀರಾಮನು ಧನುಸ್ಸಿಗೆ ಹೆದೆಯೇರಿಸಿ ಶರವನ್ನು ಹೂಡಿ "ಜಾಮದಗ್ನ್ಯ, ನೀನು ಬ್ರಾಹ್ಮಣನೆಂದೂ ವಿಶ್ವಾಮಿತ್ರ ಮುನಿಗಳ ಸಂಬಂಧಿಯೆಂದೂ* ನಿನ್ನಲ್ಲಿ ಪೂಜ್ಯಭಾವವನ್ನು ತಳೆದಿದ್ದೇನೆ. ಆದ್ದರಿಂದ ನಿನ್ನ ಪ್ರಾಣವನ್ನು ಹೀರಬಲ್ಲ ಈ ಶರವನ್ನು ನಿನ್ನಮೇಲೆ ಬಿಡಲಾರೆ (೫-೬). ಆದರೆ ನಿನ್ನ ಸಂಚಾರಶಕ್ತಿಯನ್ನು ಕುಂಠಿತಗೊಳಿಸಲೊ? ಅಥವಾ ನಿನ್ನ ತಪೋಬಲದಿಂದ ಲಬ್ಧವಾದ ದಿವ್ಯಲೋಕವನ್ನು ಘಾತಿಸಲೊ? ಹೇಳು. ಏಕೆಂದರೆ, ದಿವ್ಯವಾದ ಈ ವೈಷ್ಣವಾಸ್ತ್ರವು ಎಂದಿಗೂ ವ್ಯರ್ಥವಾಗ ತಕ್ಕದ್ದಲ್ಲ. ಇದು ಶತ್ರುವಿನ ಬಲದರ್ಪಗಳನ್ನು ಅಡಗಿಸಿಯೇ ತೀರತಕ್ಕದ್ದು" ಎಂದು ಹೇಳಿದನು (೭-೮). ಶ್ರೀರಾಮನು ಆ ದಿವ್ಯಾಯುಧವನ್ನು ಹಿಡಿದು ನಿಂತಿರಲು ಬ್ರಹ್ಮಾದಿದೇವತೆಗಳೂ ಋಷಿಗಳೂ ಯಕ್ಷರಾಕ್ಷಸಾದಿಗಳೂ ಆ

---

* ವಿಶ್ವಾಮಿತ್ರರ ಸೋದರಿಯಾದ ಸತ್ಯವತಿಯ ಮಗ ಜಮದಗ್ನಿ. ಜಮದಗ್ನಿಯ ಮಗ ಪರಶುರಾಮ. ಆದ್ದರಿಂದ ವಿಶ್ವಾಮಿತ್ರರಿಗೆ ಪರಶುರಾಮನು ಸೋದರಿಯ ಪೌತ್ರನಾಗಬೇಕು.

ಜಡೀಕೃತೇ ತದಾ ಲೋಕೇ ರಾಮೇ ವರಧನುರ್ಧರೇ ।
ನಿರ್ವೀರ್ಯೋ ಜಾಮದಗ್ನ್ಯೋಽಥ ರಾಮೋ ರಾಮಮುದೈಕ್ಷತ ॥

ತೇಜೋಽಭಿಹತವೀರ್ಯತ್ವಾಜ್ಜಾಮದಗ್ನ್ಯೋ ಜಡೀಕೃತಃ ।
ರಾಮಂ ಕಮಲಪತ್ರಾಕ್ಷಂ ಮಂದಂ ಮಂದಮುವಾಚ ಹ ॥ ೧೨

ಕಶ್ಯಪಾಯ ಮಯಾ ದತ್ತಾ ಯದಾ ಪೂರ್ವಂ ವಸುಂಧರಾ ।
ವಿಷಯೇ ಮೇ ನ ವಸ್ತವ್ಯಮಿತಿ ಮಾಂ ಕಶ್ಯಪೋಽಬ್ರವೀತ್ ॥ ೧೩

ಸೋಽಹಂ ಗುರುವಚಃ ಕುರ್ವನ್ ಪೃಥಿವ್ಯಾಂ ನ ವಸೇ ನಿಶಾಮ್ ।
ತದಾ ಪ್ರತಿಜ್ಞಾ ಕಾಕುತ್ಸ್ಥ ಕೃತಾ ಭೂಃ ಕಶ್ಯಪಸ್ಯ ಹಿ ॥ ೧೪

ತದಿಮಾಂ ತ್ವಂ ಗತಿಂ ವೀರ ಹಂತುಂ ನಾರ್ಹಸಿ ರಾಘವ ।
ಮನೋಜವಂ ಗಮಿಷ್ಯಾಮಿ ಮಹೇಂದ್ರಂ ಪರ್ವತೋತ್ತಮಮ್ ॥

ಲೋಕಾಸ್ತ್ವಪ್ರತಿಮಾ ರಾಮ ನಿರ್ಜಿತಾಸ್ತಪಸಾ ಮಯಾ ।
ಜಹಿ ತಾನ್ ಶರಮುಖ್ಯೇನ ಮಾ ಭೂತ್ ಕಾಲಸ್ಯ ಪರ್ಯಯಃ ॥

---

ಅದ್ಭುತವನ್ನು ನೋಡುವುದಕ್ಕಾಗಿ ಬಂದು ನೆರೆದರು (೯-೧೦). ಲೋಕವು ನಿಶ್ಚೇತನವಾದಂತಾಯಿತು ಶ್ರೀರಾಮನ ತೇಜಸ್ಸಿನೆದುರಿಗೆ ಪರಶುರಾಮನು ನಿರ್ವೀರ್ಯನಾಗಿ ಜಡನಾದನು*. ಅವನು ಮಿಸುಕಾಡದೆ ಶ್ರೀರಾಮನನ್ನು ನೋಡುತ್ತ ನಿಂತನು (೧೧). ಅನಂತರ ಪದ್ಮನೇತ್ರನಾದ ಶ್ರೀರಾಮನನ್ನು ಕುರಿತು "ಕಾಕುತ್ಸ್ಥ, ಹಿಂದೆ ನಾನು ಕಶ್ಯಪನಿಗೆ ಭೂಮಂಡಲವನ್ನು ಧಾರೆ ಯೆರೆದು ಕೊಟ್ಟಾಗ ಅವನು ತನ್ನ ದೇಶದಲ್ಲಿ ನಾನು ವಾಸಮಾಡಕೂಡದೆಂದು ಹೇಳಿದ್ದಾನೆ (೧೨-೧೩). ಆದ್ದರಿಂದ ನಾನು ಗುರ್ವಾಜ್ಞೆಯನ್ನು ಪಾಲಿಸು ವುದಕ್ಕಾಗಿ ಈ ಭೂಮಿಯಲ್ಲಿ ಒಂದು ರಾತ್ರಿಯೂ ಇರಕೂಡದು. ಇರುವುದಿಲ್ಲ ವೆಂದು ಕಶ್ಯಪನಿಗೆ ಮಾತುಕೊಟ್ಟಿದ್ದೇನೆ. ಈ ಭೂಮಿ ಕಶ್ಯಪನಿಗೆ ಸೇರಿದ್ದು. (೧೪). ಆದ್ದರಿಂದ ರಾಘವ, ಮನೋವೇಗದಿಂದ ಮಹೇಂದ್ರಪರ್ವತಕ್ಕೆ ಹೋಗುತ್ತೇನೆ. (ನನ್ನ ಗತಿಯನ್ನು ಕುಂಠಿತಗೊಳಿಸಬೇಡ) ನಾನು ಸಂಪಾದಿಸಿರುವ ತಪೋಲೋಕವನ್ನು ಘಾತಿಸು. ತಡವೇಕೆ? (೧೫-೧೬).

---

* ಆ ಸಮಯದಲ್ಲಿ ಪರಶುರಾಮನಲ್ಲಿದ್ದ ವೈಷ್ಣವ ತೇಜಸ್ಸು ಶ್ರೀರಾಮನಲ್ಲಿ ಸೇರಿ ಹೋಯಿತೆಂದು ಪದ್ಮಪುರಾಣದಲ್ಲಿಯೂ, ನೃಸಿಂಹಪುರಾಣದಲ್ಲಿಯೂ ಹೇಳಿದೆ.

ಅಕ್ಷಯಂ ಮಧುಹಂತಾರಂ ಜಾನಾಮಿ ತ್ವಾಂ ಸುರೋತ್ತಮಮ್ ।
ಧನುಷೋऽಸ್ಯ ಪರಾಮರ್ಶಾತ್ ಸ್ವಸ್ತಿ ತೇऽಸ್ತು ಪರಂತಪ ॥ ೧೭

ಏತೇ ಸುರಗಣಾಃ ಸರ್ವೇ ನಿರೀಕ್ಷಂತೇ ಸಮಾಗತಾಃ ।
ತ್ವಾಮಪ್ರತಿಮಕರ್ಮಾಣಮಪ್ರತಿದ್ವಂದ್ವಮಾಹವೇ ॥ ೧೮

ನ ಚೇಯಂ ಮಮ ಕಾಕುತ್ಸ್ಥ ವ್ರೀಡಾ ಭವಿತುಮರ್ಹತಿ ।
ತ್ವಯಾ ತ್ರೈಲೋಕ್ಯನಾಥೇನ ಯದಹಂ ವಿಮುಖೀಕೃತಃ ॥ ೧೯

ಶರಮಪ್ರತಿಮಂ ರಾಮ ಮೋಕ್ತುಮರ್ಹಸಿ ಸುವ್ರತ ।
ಶರಮೋಕ್ಷೇ ಗಮಿಷ್ಯಾಮಿ ಮಹೇಂದ್ರಂ ಪರ್ವತೋತ್ತಮಮ್ ॥

ತಥಾ ಬ್ರುವತಿ ರಾಮೇ ತು ಜಾಮದಗ್ನ್ಯೇ ಪ್ರತಾಪವಾನ್ ।
ರಾಮೋ ದಾಶರಥಿಃ ಶ್ರೀಮಾಂಶ್ಚಿಕ್ಷೇಪ ಶರಮುತ್ತಮಮ್ ॥ ೨೧

ಸ ಹತಾನ್ ದೃಶ್ಯ ರಾಮೇಣ ಸ್ವಾನ್ ಲೋಕಾಂಸ್ತಪಸಾರ್ಜಿತಾನ್
ಜಾಮದಗ್ನ್ಯೋ ಜಗಾಮಾಶು ಮಹೇಂದ್ರಂ ಪರ್ವತೋತ್ತಮಮ್

---

ಈ ಧನುಸ್ಸನ್ನು ನೀನು ಸೆಳೆದುಕೊಂಡಮೇಲೆ ನೀನು ಶಾಶ್ವತನೂ ಸುರೋತ್ತಮನೂ ಆದ ಮಧುಸೂದನನೆಂದು ತಿಳಿದುಕೊಂಡೆನು. ಹೇ ವೀರ, ನಿನಗೆ ಕಲ್ಯಾಣವಾಗಲಿ (೧೭). ದೇವತೆಗಳೆಲ್ಲರೂ ಬಂದು ಅಸಾಧಾರಣ ವಾದ ಕರ್ತೃತ್ವಶಕ್ತಿಯುಳ್ಳವನೂ ಯುದ್ಧದಲ್ಲಿ ಅಸದೃಶವೀರನೂ ಆದ ನಿನ್ನನ್ನು ವೀಕ್ಷಿಸುತ್ತಿದ್ದಾರೆ. ನಿನ್ನಿಂದ ಸೋತೆನೆಂದು ನಾನು ನಾಚಿಕೆ ಪಡಬೇಕಾಗಿಲ್ಲ. ನೀನು ತ್ರಿಲೋಕೇಶ್ವರ (೧೮-೧೯) ಶ್ರೀರಾಮ, ಅಸಾಧಾರಣವಾದ ಈ ಶರವನ್ನು ಬಿಡು. ಅನಂತರ ನಾನು ಮಹೇಂದ್ರಗಿರಿಗೆ ಹೋಗುತ್ತೇನೆ" ಎಂದು ನುಡಿದನು. ಆಗ ಪ್ರತಾಪಶಾಲಿಯಾದ ದಾಶರಥಿಯು ಆ ದಿವ್ಯಾಸ್ತ್ರವನ್ನು ಬಿಡಲು, ಅದು ಪರಶುರಾಮನ ತಪಃಸಂಪಾದಿತ * ಲೋಕ ವನ್ನು ನಾಶಪಡಿಸಿತು. ಅದನ್ನು ಕಂಡು ಪರಶುರಾಮನು ಕೂಡಲೇ ಮಹೇಂದ್ರ

* ತಪಃಸಂಪಾದಿತವಾದ ಲೋಕವೆಂದರೆ ತಪೋಜನ್ಯವಾದ ಪುಣ್ಯ.

ತತೋ ವಿತಿಮಿರಾಃ ಸರ್ವಾ ದಿಶಶ್ಚೋಪದಿಶಸ್ತಥಾ ।
ಸುರಾಃ ಸರ್ಷಿಗಣಾ ರಾಮಂ ಪ್ರಶಶಂಸುರುದಾಯುಧಮ್ ॥ ೨೩

ರಾಮಂ ದಾಶರಥಿಂ ರಾಮೋ ಜಾಮದಗ್ನ್ಯಃ ಪ್ರಶಸ್ಯ ಚ ।
ತತಃ ಪ್ರದಕ್ಷಿಣಂ ಕೃತ್ವಾ ಜಗಾಮಾತ್ಮಗತಿಂ ಪ್ರಭುಃ ॥ ೨೪

ಇತಿ ಶ್ರೀಮದ್ರಾಮಾಯಣೇ ಬಾಲಕಾಂಡೇ ಷಟ್ಸಪ್ತತಿತಮಃ ಸರ್ಗಃ



ಪರ್ವತಕ್ಕೆ ಹೋದನು (೨೦-೨೨). ಸಮಸ್ತ ದಿಕ್ಕುಗಳಲ್ಲಿಯೂ ಕತ್ತಲೆಯು ಹರಿದು ಬೆಳಕು ಹರಡಿತು. ದೇವತೆಗಳೂ ಋಷಿಗಳೂ ಶ್ರೀರಾಮನನ್ನು ಸ್ತುತಿಸಿದರು. ಜಾಮದಗ್ನ್ಯನು ಹೋಗುವಾಗ ರಾಮನನ್ನು ಹೊಗಳಿ ಪ್ರದಕ್ಷಿಣೆಮಾಡಿ ತನ್ನ ಸ್ಥಾನಕ್ಕೆ ಹೊರಟುಹೋದನು (೨೩-೨೪).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಎಪ್ಪತ್ತಾರನೆಯ ಸರ್ಗ



## ಸಪ್ತಸಪ್ತತಿತಮಃ ಸರ್ಗಃ

### ಅಯೋಧ್ಯಾಪ್ರವೇಶಃ

ಗತೇ ರಾಮೇ ಪ್ರಶಾಂತಾತ್ಮಾ ರಾಮೋ ದಾಶರಥಿರ್ಧನುಃ ।
ವರುಣಾಯಾಪ್ರಮೇಯಾಯ ದದೌ ಹಸ್ತೇ ಸಸಾಯಕಮ್ ॥ ೧

ಅಭಿವಾದ್ಯ ತತೋ ರಾಮೋ ವಸಿಷ್ಠಪ್ರಮುಖಾನ್ಋಷೀನ್ ।
ಪಿತರಂ ವಿಹ್ವಲಂ ದೃಷ್ಟ್ವಾ ಪ್ರೋವಾಚ ರಘುನಂದನಃ ॥ ೨

ಜಾಮದಗ್ನ್ಯೋ ಗತೋ ರಾಮಃ ಪ್ರಯಾತು ಚತುರಂಗಿಣೀ ।
ಅಯೋಧ್ಯಾಭಿಮುಖೀ ಸೇನಾ ತ್ವಯಾ ನಾಥೇನ ಪಾಲಿತಾ ॥ ೩

## ಸರ್ಗ ೭೭

ದಶರಥನು ಪರಿವಾರಸಮೇತನಾಗಿ ಅಯೋಧ್ಯೆಯನ್ನು ಪ್ರವೇಶಿಸುವುದು.
ಭರತಶತ್ರುಘ್ನರು ಯುಧಾಜಿತನೊಡನೆ ಕೇಕಯ ದೇಶಕ್ಕೆ ಹೋಗು
ವುದು ಶ್ರೀರಾಮನು ಸೀತೆಯೊಡನೆ ಸುಖದಿಂದ ಇರುವುದು

ಪರಶುರಾಮನು ಮಹೇಂದ್ರಪರ್ವತಕ್ಕೆ ಹೊರಟುಹೋಗಲು ಶಾಂತನಾದ ಶ್ರೀರಾಮನು (ದೇವತೆಗಳೊಡನೆ ಅಲ್ಲಿಗೆ ಬಂದಿದ್ದ) ಮಹಾತ್ಮನಾದ ವರುಣನ* ಕೈಯಲ್ಲಿ ಆ ವೈಷ್ಣವಧನುಸ್ಸನ್ನೂ ಬಾಣವನ್ನೂ ನ್ಯಾಸವಾಗಿ ಒಪ್ಪಿಸಿದನು (೧). ಅನಂತರ ವಸಿಷ್ಠಾದಿಮುನಿಗಳಿಗೆ ವಂದಿಸಿ ಭಯದಿಂದ ಏನೂ ತೋಚದೆ ಕುಳಿತಿದ್ದ ತಂದೆಯ ಬಳಿಗೆ ಹೋಗಿ "ಮಹಾರಾಜ, ಜಾಮದಗ್ನ್ಯನು ಹೊರಟುಹೋದನು. ಚತುರಂಗಸೇನೆಯು ಪ್ರಭುವಾದ ನಿನ್ನ ರಕ್ಷಣೆಯಲ್ಲಿ ಕ್ಷೇಮವಾಗಿದೆ. ಇನ್ನು ಅಯೋಧ್ಯಾಭಿಮುಖವಾಗಿ

---

* ಭೃಗುವಲ್ಲಿಯಲ್ಲಿ ವರುಣನು ಬ್ರಹ್ಮಜ್ಞಾನಿಯೆಂದು ಸ್ಪಷ್ಟವಾಗಿದೆ ಅವನು ಆಗಾಗ ಯಜ್ಞಗಳನ್ನು ನಡೆಸುತ್ತಿದ್ದನೆಂದು ಪುರಾಣಗಳಲ್ಲಿ ಕಥೆ ಇದೆ ಆದ್ದರಿಂದ ಅವನ ವಶದಲ್ಲಿ ಧನುಸ್ಸಿದ್ದರೆ ಲೋಕಕ್ಕೆ ಭೀತಿ ಇಲ್ಲವೆಂದು ಶ್ರೀರಾಮನ ಆಶಯವಿರಬಹುದು.

ರಾಮಸ್ಯ ವಚನಂ ಶ್ರುತ್ವಾ ರಾಜಾ ದಶರಥಃ ಸುತಮ್ ।
ಬಾಹುಭ್ಯಾಂ ಸಂಪರಿಷ್ವಜ್ಯ ಮೂರ್ಧ್ನಿ ಚಾಘ್ರಾಯ ರಾಘವಮ್ ॥
ಗತೋ ರಾಮ ಇತಿ ಶ್ರುತ್ವಾ ಹೃಷ್ಟಃ ಪ್ರಮುದಿತೋ ನೃಪಃ ।
ಪುನರ್ಜಾತಂ ತದಾ ಮೇನೇ ಪುತ್ರಮಾತ್ಮಾನಮೇವ ಚ ॥ ೫
ಚೋದಯಾಮಾಸ ತಾಂ ಸೇನಾಂ ಜಗಾಮಾಶು ತತಃ ಪುರೀಮ್ ।
ಪತಾಕಾಧ್ವಜಿನೀಂ ರಮ್ಯಾಂ ತೂರ್ಯೋದ್ಘುಷ್ಟನಿನಾದಿತಾಮ್ ॥
ಸಿಕ್ತರಾಜಪಥಾಂ ರಮ್ಯಾಂ ಪ್ರಕೀರ್ಣಕುಸುಮೋತ್ಕರಾಮ್ ।
ರಾಜಪ್ರವೇಶಸುಮುಖೈಃ ಪೌರೈರ್ಮಂಗಲವಾದಿಭಿಃ ॥ ೭
ಸಂಪೂರ್ಣಾಂ ಪ್ರಾವಿಶದ್ರಾಜಾ ಜನೌಘೈಃ ಸಮಲಂಕೃತಾಮ್ ।
ಪೌರೈಃ ಪ್ರತ್ಯುದ್ಗತೋ ದೂರಂ ದ್ವಿಜೈಶ್ಚ ಪುರವಾಸಿಭಿಃ ॥ ೮
ಪುತ್ರೈರನುಗತಃ ಶ್ರೀಮಾನ್ ಶ್ರೀಮದ್ಭಿಶ್ಚ ಮಹಾಯಶಾಃ ।
ಪ್ರವಿವೇಶ ಗೃಹಂ ರಾಜಾ ಹಿಮವತ್ಸದೃಶಂ ಪ್ರಿಯಮ್ ॥ ೯

---

ಪ್ರಯಾಣಮಾಡಬಹುದು” ಎಂದು ಅರಿಕೆಮಾಡಿದನು (೨-೩). ಮಗನ ಮಾತನ್ನು ಕೇಳಿ ದಶರಥನು ಅವನನ್ನು ಎರಡು ಕೈಗಳಿಂದಲೂ ಅಪ್ಪಿಕೊಂಡು ಶಿರಸ್ಸನ್ನು ಆಘ್ರಾಣಿಸಿದನು. ಪರಶುರಾಮನು ಹೊರಟುಹೋದನೆಂಬುದನ್ನು ಕೇಳಿ ದಶರಥನು ಆನಂದದಿಂದ ಉಬ್ಬಿದನು. ತನ್ನ ಮಗನೂ ತಾನೂ ಮತ್ತೆ ಹುಟ್ಟಿಬಂದೆವೆಂದು ತಿಳಿದುಕೊಂಡನು (೪-೫). ಕೂಡಲೆ ಮುಂದೆ ಪ್ರಯಾಣ ಮಾಡಬೇಕೆಂದು ಸೇನೆಗೆ ಆಜ್ಞಾಪಿಸಿ ಎಲ್ಲರೊಡನೆ ಅಯೋಧ್ಯಾನಗರಕ್ಕೆ ಬಂದು ಸೇರಿದನು. ಪಟ್ಟಣಿಗರು ನಗರವನ್ನು ಸುಂದರವಾಗಿ ಅಲಂಕರಿಸಿದ್ದರು. ಧ್ವಜಸ್ತಂಭಗಳ ಮೇಲೆ ಪತಾಕೆಗಳು ಹಾರಾಡುತ್ತಿದ್ದವು. ಮಂಗಳವಾದ್ಯವು ಭೋರ್ಗರೆಯುತ್ತಿತ್ತು (೬) ರಾಜಬೀದಿಗಳಲ್ಲಿ ನೀರನ್ನೆರಚಿ ಪುಷ್ಪರಾಶಿ ಯನ್ನು ಚೆಲ್ಲಿದ್ದರು. ತಮ್ಮ ರಾಜನು ಆಗಮಿಸುವನೆಂದು ಪ್ರಜೆಗಳ ಮುಖವು ಹರ್ಷದಿಂದ ಅರಳಿತ್ತು. ಕಿಕ್ಕಿರಿದು ನೆರೆದ ಪೌರರೂ ಬ್ರಾಹ್ಮಣರೂ ಮಂಗಳ ವಚನಗಳನ್ನು ಹೇಳುತ್ತ ನಗರಕ್ಕೆ ದೂರದಲ್ಲಿಯೇ ದಶರಥನನ್ನು ಸ್ವಾಗತಿಸಿ ಕರೆತಂದರು (೭-೮). ಮಹಾರಾಜನು ಶ್ರೀಮಂತರಾದ ತನ್ನ ಪುತ್ರರೊಂದಿಗೆ ಹಿಮಾಲಯದಂತೆ (ಉನ್ನತವೂ ವಿಶಾಲವೂ ಶುಭ್ರವೂ ಆಗಿ) ರಮಣೀಯ

ನನಂದ ಸ್ವಜನೈ ರಾಜಾ ಗೃಹೇ ಕಾಮೈಃ ಸುಪೂಜಿತಃ ।
ಕೌಸಲ್ಯಾ ಚ ಸುಮಿತ್ರಾ ಚ ಕೈಕೇಯೀ ಚ ಸುಮಧ್ಯಮಾ ॥ ೧೦

ವಧೂಪ್ರತಿಗ್ರಹೇ ಯುಕ್ತಾ ಯಾಶ್ಚಾನ್ಯಾ ರಾಜಯೋಷಿತಃ ।
ತತಃ ಸೀತಾಂ ಮಹಾಭಾಗಾಮೂರ್ಮಿಲಾಂ ಚ ಯಶಸ್ವಿನೀಮ್ ॥

ಕುಶಧ್ವಜಸುತೇ ಚೋಭೇ ಜಗೃಹುರ್ನೃಪಪತ್ನಯಃ ।
ಮಂಗಲಾಲಾಪನೈಶ್ಚೈವ ಶೋಭಿತಾಃ ಕ್ಷೌಮವಾಸಸಃ ॥ ೧೨

ದೇವತಾಯತನಾನ್ಯಾಶು ಸರ್ವಾಸ್ತಾಃ ಪ್ರತ್ಯಪೂಜಯನ್ ।
ಅಭಿವಾದ್ಯಾಭಿವಾದ್ಯಾಂಶ್ಚ ಸರ್ವಾ ರಾಜಸುತಾಸ್ತದಾ ॥ ೧೩

ಸ್ವಂ ಸ್ವಂ ಗೃಹಮಥಾಸಾದ್ಯ ಕುಬೇರಭವನೋಪಮಮ್ ।
ಗೋಭಿರ್ಧನೈಶ್ಚ ಧಾನ್ಯೈಶ್ಚ ತರ್ಪಯಿತ್ವಾ ದ್ವಿಜೋತ್ತಮಾನ್ ॥

ರೇಮಿರೇ ಮುದಿತಾಃ ಸರ್ವಾ ಭರ್ತೃಭಿಃ ಸಹಿತಾ ರಹಃ ।
ಕುಮಾರಾಶ್ಚ ಮಹಾತ್ಮಾನೋ ವೀರ್ಯೇಣಾಪ್ರತಿಮಾ ಭುವಿ ॥ ೧೫

---

ವಾಗಿದ್ದ ರಾಜಭವನವನ್ನು ಪ್ರವೇಶಿಸಿದನು (೯). ಅಲ್ಲಿ ತನಗೆ ಬೇಕಾದ ವಸ್ತುಗಳನ್ನು ತರಿಸಿಕೊಂಡು ಆಪ್ತಪರಿವಾರದೊಡನೆ ಸಂಮಿಳಿತನಾಗಿ ಸಂತೋಷದಲ್ಲಿದ್ದನು. ರಾಜಪತ್ನಿಯರಾದ ಕೌಸಲ್ಯೆ, ಸುಮಿತ್ರೆ, ಕೈಕೇಯಿಯರೂ ಇತರ ರಾಜಸ್ತ್ರೀಯರೂ ಸೊಸೆಯರನ್ನು ಸ್ವಾಗತಿಸುವುದಕ್ಕಾಗಿ ಬಂದರು. ಅವರು ಸೀತೆ, ಊರ್ಮಿಳೆ, ಮಾಂಡವಿ ಮತ್ತು ಶ್ರುತಕೀರ್ತಿಯರನ್ನು ಕಂಡು ಮಾತನಾಡಿ ಆದರದಿಂದ ಬರಮಾಡಿಕೊಂಡರು (೧೦-೧೧). ಬಳಿಕ ಆ ಹೆಂಗಸರೆಲ್ಲರೂ ಉತ್ತಮವಾದ ದುಕೂಲಗಳನ್ನುಟ್ಟು ಮಂಗಳ ಘೋಷದೊಡನೆ ದೇವಸ್ಥಾನಗಳಿಗೆ ಹೋಗಿ ಅರ್ಚನೆಮಾಡಿದರು. ಅನಂತರ ಸೀತೆ ಮೊದಲಾದ ಆ ರಾಜಕುಮಾರಿಯರು ಗುರುಹಿರಿಯರೆಲ್ಲರಿಗೂ ನಮಸ್ಕರಿಸಿ ಕುಬೇರಭವನದಂತೆ ಸಂಪದ್ಭರಿತವಾದ ತಮ್ಮ ತಮ್ಮ ಭವನಗಳಿಗೆ ತೆರಳಿದರು (೧೨-೧೩). ಅಲ್ಲಿ ಗೋವುಗಳನ್ನೂ ಧನಧಾನ್ಯಗಳನ್ನೂ ಬ್ರಾಹ್ಮಣೋತ್ತಮರಿಗೆ ದಾನಮಾಡಿ ತಮ್ಮ ಗಂಡಂದಿರೊಂದಿಗೆ ವಿಹರಿಸುತ್ತ ಹರ್ಷದಿಂದಿದ್ದರು (೧೪). ಪತ್ನೀಸಮೇತರಾದ ಆ ರಾಜಕುಮಾರರಾದರೋ

ಕೃತದಾರಾಃ ಕೃತಾಸ್ತ್ರಾಶ್ಚ ಸಧನಾಃ ಸಸುಹೃಜ್ಜನಾಃ ।
ಶುಶ್ರೂಷಮಾಣಾಃ ಪಿತರಂ ವರ್ತಯಂತಿ ನರರ್ಷಭಾಃ ॥ ೧೬

ಕಾಲೇ ಕಾಲೇ ತು ನೀತಿಜ್ಞಾಸ್ತೋಷಯಂತೋ ಗುರುಂ ಗುಣೈಃ ।
ಕಸ್ಯಚಿತ್ತ್ವಥ ಕಾಲಸ್ಯ ರಾಜಾ ದಶರಥಃ ಸುತಮ್ ॥ ೧೭

ಭರತಂ ಕೈಕಯೀಪುತ್ರಮಬ್ರವೀದ್ರಘುನಂದನಃ ।
ಅಯಂ ಕೇಕಯರಾಜಸ್ಯ ಪುತ್ರೋ ವಸತಿ ಪುತ್ರಕ ॥ ೧೮

ತ್ವಾಂ ನೇತುಮಾಗತೋ ವೀರ ಯುಧಾಜಿನ್ಮಾತುಲಸ್ತವ ।
ಶ್ರುತ್ವಾ ದಶರಥಸ್ಯೈತದ್ಭರತಃ ಕೈಕಯೀಸುತಃ ॥ ೧೯

ಗಮನಾಯಾಭಿಚಕ್ರಾಮ ಶತ್ರುಘ್ನಸಹಿತಸ್ತದಾ ।
ಆಪೃಚ್ಛ್ಯ ಪಿತರಂ ಶೂರೋ ರಾಮಂ ಚಾಕ್ಲಿಷ್ಟಕಾರಿಣಮ್ ॥ ೨೦

ಮಾತೄಶ್ಚಾಪಿ ನರಶ್ರೇಷ್ಠಃ ಶತ್ರುಘ್ನಸಹಿತೋ ಯಯೌ ।
ಯುಧಾಜಿತ್ ಪ್ರಾಪ್ಯ ಭರತಂ ಸಶತ್ರುಘ್ನಂ ಪ್ರಹರ್ಷಿತಃ ॥ ೨೧

---

ಅಪ್ರತಿಮವೀರರು. ಧನುರ್ವಿದ್ಯಾಪಾರಂಗತರು. ಐಶ್ವರ್ಯಸಂಪನ್ನರು. ಇಷ್ಟಮಿತ್ರಪರಿವೃತರು ಆ ಪುರುಷಶ್ರೇಷ್ಠರು ತಂದೆಗೆ ವಿಧೇಯರಾಗಿ ಅವನ ಶುಶ್ರೂಷೆಯನ್ನು ಮಾಡಿಕೊಂಡಿದ್ದರು (೧೫-೧೬). ನೀತಿಜ್ಞರಾದ ಅವರ ಸದ್ಗುಣಗಳಿಂದ ದಶರಥನು ಸಂತುಷ್ಟನಾಗಿದ್ದನು. ಹೀಗೆ ಕೆಲವು ದಿನಗಳು ಕಳೆದಮೇಲೆ ಒಂದು ದಿನ ದಶರಥನು ಕೈಕೇಯೀಪುತ್ರನಾದ ಭರತನನ್ನು ಕರೆದು "ಮಗು, ನಿನ್ನ ಸೋದರಮಾವನಾದ ಯುಧಾಜಿತನು ನಿನ್ನನ್ನು ಕರೆದುಕೊಂಡು ಹೋಗುವುದಕ್ಕಾಗಿ ಬಂದವನು; ಅದಕ್ಕೋಸ್ಕರ ಅವನು ಇಲ್ಲಿಯೇ ಇದ್ದಾನೆ" ಎಂದು ಹೇಳಿದನು (೧೭-೧೮). ಭರತನು ದಶರಥನ ಈ ಸಮ್ಮತಿವಾಕ್ಯವನ್ನು ಕೇಳಿ ಕೇಕಯದೇಶಕ್ಕೆ ಹೋಗಲು ಮನಸ್ಸುಮಾಡಿದನು. ಅವನೊಡನೆ ಹೊರಡಲು ಶತ್ರುಘ್ನನು ಸಿದ್ಧನಾದನು. ಭರತಶತ್ರುಘ್ನರು ತಮ್ಮ ತಂದೆಗೂ ಧರ್ಮಾತ್ಮನಾದ ಶ್ರೀರಾಮನಿಗೂ ತಾಯಂದಿರಾದ ಕೌಸಲ್ಯೆ, ಸುಮಿತ್ರೆ, ಕೈಕೇಯಿಯರಿಗೂ ಹೋಗಿಬರುತ್ತೇವೆಂದು ತಿಳಿಸಿದರು (೧೯-೨೦). ಯುಧಾಜಿತನಿಗೆ ಭರತಶತ್ರುಘ್ನರು ತನ್ನೊಡನೆ ಬರುವರೆಂಬುದನ್ನು ಕೇಳಿ

ಸ್ವಪುರಂ ಪ್ರಾವಿಶದ್ವೀರಃ ಪಿತಾ ತಸ್ಯ ತುತೋಷ ಹ ।
ಗತೇ ಚ ಭರತೇ ರಾಮೋ ಲಕ್ಷ್ಮಣಶ್ಚ ಮಹಾಬಲಃ ॥ ೨೨

ಪಿತರಂ ದೇವಸಂಕಾಶಂ ಪೂಜಯಾಮಾಸತುಸ್ತದಾ ।
ಪಿತುರಾಜ್ಞಾಂ ಪುರಸ್ಕೃತ್ಯ ಪೌರಕಾರ್ಯಾಣಿ ಸರ್ವಶಃ ॥ ೨೩

ಚಕಾರ ರಾಮೋ ಧರ್ಮಾತ್ಮಾ ಪ್ರಿಯಾಣಿ ಚ ಹಿತಾನಿ ಚ ।
ಮಾತೃಭ್ಯೋ ಮಾತೃಕಾರ್ಯಾಣಿ ಕೃತ್ವಾ ಪರಮಯಂತ್ರಿತಃ ॥ ೨೪

ಗುರೂಣಾಂ ಗುರುಕಾರ್ಯಾಣಿ ಕಾಲೇ ಕಾಲೇಽನ್ವವೈಕ್ಷತ ।
ಏವಂ ದಶರಥಃ ಪ್ರೀತೋ ಬ್ರಾಹ್ಮಣಾ ನೈಗಮಾಸ್ತದಾ ॥ ೨೫

ರಾಮಸ್ಯ ಶೀಲವೃತ್ತೇನ ಸರ್ವೇ ವಿಷಯವಾಸಿನಃ ।
ತೇಷಾಮತಿಯಶಾ ಲೋಕೇ ರಾಮಃ ಸತ್ಯಪರಾಕ್ರಮಃ ॥ ೨೬

ಸ್ವಯಂಭೂರಿವ ಭೂತಾನಾಂ ಬಭೂವ ಗುಣವತ್ತರಃ ।
ರಾಮಸ್ತು ಸೀತಯಾ ಸಾರ್ಧಂ ವಿಜಹಾರ ಬಹೂನೃತೂನ್ ॥ ೨೭

---

ಆನಂದವಾಯಿತು. ಅವನು ಭರತಶತ್ರುಘ್ನರನ್ನು ಕರೆದುಕೊಂಡು ತನ್ನ ನಗರಕ್ಕೆ ಪ್ರಯಾಣಮಾಡಿದನು ಅವನ ತಂದೆಯಾದ ಕೇಕಯರಾಜನಿಗೆ ಇವರು ಬಂದುದರಿಂದ ಸಂತೋಷವಾಯಿತು (೨೧-೨೨). ಇತ್ತ ರಾಮ ಲಕ್ಷ್ಮಣರು ತಂದೆಯನ್ನು ದೇವರೆಂದು ಭಾವಿಸಿ ಸೇವೆಮಾಡಿಕೊಂಡಿದ್ದರು. ಧರ್ಮಾತ್ಮನಾದ ರಾಮನು ತಂದೆಯ ಆಜ್ಞೆಯ ಪ್ರಕಾರ ಪ್ರಜೆಗಳಿಗೆ ಪ್ರಿಯವೂ ಹಿತಕರವೂ ಆದ ಸಕಲ ಕಾರ್ಯಗಳನ್ನೂ ನಿರ್ವಹಿಸುತ್ತಿದ್ದನು (೨೩). ಹಾಗೆಯೇ ತಾಯಂದಿರಿಗೆ ಮಾಡಿಕೊಡಬೇಕಾದ ಕೆಲಸಗಳನ್ನೂ ಗುರುಹಿರಿಯರ ಕೆಲಸಗಳನ್ನೂ ಕಾಲಕಾಲದಲ್ಲಿ ಅತ್ಯಂತ ವಿಧೇಯನಾಗಿ ನೋಡಿಕೊಳ್ಳುತ್ತಿದ್ದನು (೨೪). ಶ್ರೀರಾಮನ ಶೀಲಸದಾಚಾರಗಳನ್ನು ನೋಡಿ ದಶರಥನಿಗೆ ಮಾತ್ರವಲ್ಲದೆ ಆ ದೇಶದಲ್ಲಿದ್ದ ಬ್ರಾಹ್ಮಣರಿಗೂ, ವಾಣಿಜ್ಯ ಮುಂತಾದ ವ್ಯವಹಾರದ ಜನರಿಗೂ, ಸಕಲ ಪ್ರಜೆಗಳಿಗೂ ಬಹಳ ಸಂತೋಷ ವಾಯಿತು (೨೫) ಆ ನಾಲ್ವರು ಪುತ್ರರಲ್ಲಿ ಸತ್ಯಸಂಧನಾದ ಶ್ರೀರಾಮನ ಕೀರ್ತಿಯು ಅಧಿಕವಾಗಿ ಹರಡಿತು. ಅವನು ಅಧಿಕಗುಣಸಂಪನ್ನನಾಗಿ ಬ್ರಹ್ಮದೇವನಂತೆ ನಕಲ ಜನರ ಆದರಕ್ಕೆ ಪಾತ್ರನಾದನು. ಮತ್ತು

ಮನಸ್ವೀ ತದ್ಗತಮನಾ ನಿತ್ಯಂ ಹೃದಿ ಸಮರ್ಪಿತಃ ।
ಪ್ರಿಯಾ ತು ಸೀತಾ ರಾಮಸ್ಯ ದಾರಾಃ ಪಿತೃಕೃತಾ ಇತಿ ॥ ೨೮

ಗುಣಾದ್ರೂಪಗುಣಾಚ್ಚಾಪಿ ಪ್ರೀತಿರ್ಭೂಯೋಽಭ್ಯವರ್ಧತ ।
ತಸ್ಯಾಶ್ಚ ಭರ್ತಾ ದ್ವಿಗುಣಂ ಹೃದಯೇ ಪರಿವರ್ತತೇ ॥ ೨೯

ಅಂತರ್ಗತಮಭಿವ್ಯಕ್ತಮಾಖ್ಯಾತಿ ಹೃದಯಂ ಹೃದಾ ।
ತಸ್ಯ ಭೂಯೋ ವಿಶೇಷೇಣ ಮೈಥಿಲೀ ಜನಕಾತ್ಮಜಾ ॥ ೩೦

ದೇವತಾಭಿಃ ಸಮಾ ರೂಪೇ ಸೀತಾ ಶ್ರೀರಿವ ರೂಪಿಣೀ ॥

ತಯಾ ಸ ರಾಜರ್ಷಿಸುತೋಽಭಿರಾಮಯಾ
ಸಮೇಯಿವಾನುತ್ತಮರಾಜಕನ್ಯಯಾ ।

---

ಶ್ರೀರಾಮನು ಸೀತೆಯೊಡನೆ ವಿಹರಿಸುತ್ತ ಬಹುಕಾಲ ಸುಖವಾಗಿದ್ದನು (೨೬-೨೭). ಆ ಧೀರನು ಸೀತೆಯಲ್ಲಿಯೇ ಅನುರಕ್ತನಾಗಿದ್ದನು. ಸೀತೆಯ ಹೃದಯದಲ್ಲಿ ಯಾವಾಗಲೂ ರಾಮನೇ ಇರುತ್ತಿದ್ದನು. ತಂದೆಯು ಗೊತ್ತು ಮಾಡಿಕೊಟ್ಟ ಮಡದಿಯೆಂದು ರಾಮನಿಗೆ ಸೀತೆಯಲ್ಲಿ ಪ್ರೀತಿ (೨೮). ಆ ಪ್ರೀತಿಯು ಸೀತೆಯ ಸದ್ಗುಣಗಳಿಂದಲೂ ರೂಪಲಾವಣ್ಯಗಳಿಂದಲೂ ಇನ್ನೂ ಅಧಿಕವಾಗಿ ಬೆಳೆಯುತ್ತ ಹೋಯಿತು. ಸೀತೆಗೆ ಗಂಡನಮೇಲಿನ ಪ್ರೇಮವು ಹೃದಯದಲ್ಲಿ ದಿನದಿನವೂ ದ್ವಿಗುಣವಾಗಿ ಹೆಚ್ಚುತ್ತಲಿತ್ತು (೨೯). ಜನಕತನಯಳಾದ ಆ ಮೈಥಿಲಿಯು ತನ್ನ ಹೃದಯದಲ್ಲಿರುವ ಇಂಗಿತವನ್ನು ಮನಃಪೂರ್ವಕವಾಗಿ ಗಂಡನಲ್ಲಿ ಹೇಳಿಕೊಳ್ಳುತ್ತಿದ್ದಳು. ಅಪ್ಸರೆಯಂತೆಯೂ ಸಾಕ್ಷಾಲ್ಲಕ್ಷ್ಮೀದೇವಿಯಂತೆಯೂ ಸುಂದರಿಯಾದ ಸೀತೆಯು ಶ್ರೀರಾಮನಿಗೆ ಪ್ರೀತಿಪಾತ್ರಳಾಗಿದ್ದಳು (೩೦). ಹೀಗೆ ರಾಜಪುತ್ರನಾದ ಶ್ರೀರಾಮಚಂದ್ರನು

ಅತೀವ ರಾಮಃ ಶುಶುಭೇಽತಿಕಾಮಯಾ
ವಿಭುಃ ಶ್ರಿಯಾ ವಿಷ್ಣುರಿವಾಮರೇಶ್ವರಃ ॥ ೩೧

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ
ಆದಿಕಾವ್ಯೇ ಚತುರ್ವಿಂಶತಿಸಹಸ್ರಿಕಾಯಾಂ ಸಂಹಿತಾಯಾಂ
ಬಾಲಕಾಂಡೇ ಸಪ್ತಸಪ್ತತಿತಮಃ ಸರ್ಗಃ

ಶ್ರೀಮದ್ವಾಲ್ಮೀಕಿರಾಮಾಯಣೇ ಬಾಲಕಾಂಡಃ ಸಂಪೂರ್ಣಃ



ತನ್ನನ್ನು ಅತಿಶಯವಾಗಿ ಪ್ರೇಮಿಸುವ ಚೆಲುವೆಯಾದ ಆ ರಾಜಕುಮಾರಿಯೊಡನೆ ಲಕ್ಷ್ಮೀಸಮೇತನಾದ ಶ್ರೀಮನ್ನಾರಾಯಣನಂತೆ ವಿರಾಜಿಸುತ್ತಿದ್ದನು (೩೧).

ಇಲ್ಲಿಗೆ ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ಎಪ್ಪತ್ತೇಳನೆಯ ಸರ್ಗ

— ಬಾಲಕಾಂಡವು ಸಂಪೂರ್ಣವಾಯಿತು —



ಕಾಕಪಕ್ಷಧರಂ ದೇವಂ ವನಮಾಲಾವಿಭೂಷಿತಮ್ ।
ಶ್ರೀರಾಮಂ ಬಾಲಕಂ ಧ್ಯಾಯೇದ್ ಬಾಲಕಾಂಡೇ ಮುನೀಶ್ವರ ॥



# ಅನುಬಂಧ

## ೧

## ತಥಾ ಸರ್ಗಶತಾನ್ ಪಂಚ ಷಟ್‌ಕಾಂಡಾನಿ ತಥೋತ್ತರಮ್

—ಪುಟ ೩೬

ಆರು ಕಾಂಡಗಳಲ್ಲಿ ಒಟ್ಟು ಐದುನೂರು ಸರ್ಗಗಳಿವೆಯೆಂದೂ, ಅವುಗಳಲ್ಲಿ ಇಪ್ಪತ್ತುನಾಲ್ಕುಸಾವಿರ ಶ್ಲೋಕಗಳಿವೆಯೆಂದೂ, ಇವುಗಳಲ್ಲದೆ ಉತ್ತರಕಾಂಡವನ್ನು ವಾಲ್ಮೀಕಿಗಳು ವಿರಚಿಸಿದರೆಂದೂ ಸರಳವಾದ ಅರ್ಥವು ಈ ಶ್ಲೋಕದಿಂದ ಹೊರಡುತ್ತದೆ. ಉತ್ತರಕಾಂಡದಲ್ಲಿರುವ ಸರ್ಗಸಂಖ್ಯೆಯನ್ನೂ ಶ್ಲೋಕಸಂಖ್ಯೆಯನ್ನೂ ಇಲ್ಲಿ ಹೇಳಲಿಲ್ಲ. ಉತ್ತರಕಾಂಡಸಹಿತವಾಗಿ ಒಟ್ಟು ಏಳು ಕಾಂಡಗಳಿಗೆ ಮೇಲೆ ತಿಳಿಸಿದ ಸಂಖ್ಯಾಪ್ರಮಾಣವು ಅನ್ವಯಿಸುತ್ತದೆಯೆಂದು ಕೆಲವರ ಮತವಿದೆ. ಆದರೆ ಈ ಎರಡು ಪಕ್ಷಗಳಲ್ಲಿಯೂ ಮೇಲ್ಕಂಡ ಸಂಖ್ಯಾಪ್ರಮಾಣವು ಸರಿಹೋಗುವುದಿಲ್ಲ ರಾಮಾಯಣದ ಸರ್ಗಗಳನ್ನೂ ಶ್ಲೋಕಗಳನ್ನೂ ಶ್ರೀ ಗೋವಿಂದರಾಜರು ಈ ರೀತಿಯಲ್ಲಿ ಎಣಿಸಿದ್ದಾರೆ :—

| | ಸರ್ಗಗಳು | ಶ್ಲೋಕಗಳು |
|---|---|---|
| ಬಾಲಕಾಂಡ | ೭೭ | ೨೨೫೬ |
| ಅಯೋಧ್ಯಾಕಾಂಡ | ೧೧೯ | ೪೪೧೫ |
| ಅರಣ್ಯಕಾಂಡ | ೭೫ | ೨೭೩೨ |
| ಕಿಷ್ಕಿಂಧಾಕಾಂಡ | ೬೭ | ೨೬೨೦ |
| ಸುಂದರಕಾಂಡ | ೬೮ | ೩೦೦೬ |
| ಯುದ್ಧಕಾಂಡ | ೧೩೧ | ೫೯೯೦ |
| —ಆರು ಕಾಂಡಗಳು | ೫೩೭ | ೨೧೦೧೯ |
| ಉತ್ತರಕಾಂಡ | ೧೧೦ | ೩೨೩೪ |
| ಒಟ್ಟು | ೬೪೭ | ೨೪೨೫೩ |

ಕತಕ ವ್ಯಾಖ್ಯಾನದಲ್ಲಿ ಆರು ಕಾಂಡಗಳ ಸರ್ಗಸಂಖ್ಯೆ ೫೩೬ ಎಂದು ಹೇಳಿದೆಯಂತೆ. ಅದರ ಪ್ರಕಾರ ಒಂದು ಸರ್ಗ ನ್ಯೂನವಾಗುತ್ತದೆ. ಅದು ಯಾವುದೋ ತಿಳಿಯದು

ಇವುಗಳಲ್ಲಿ ಉತ್ತರಕಾಂಡದ ಶ್ಲೋಕಗಳನ್ನು ಸೇರಿಸಿಕೊಂಡರೆ ಇಪ್ಪತ್ತು ನಾಲ್ಕು ಸಾವಿರ ಶ್ಲೋಕಗಳೆಂಬುದು ಸರಿಹೋದೀತು ಅಧಿಕವಾದ ೨೫೩ ಶ್ಲೋಕಗಳನ್ನು ಪ್ರಕ್ಷಿಪ್ತವೆಂದೊ ಅಥವಾ ಅವುಗಳನ್ನು ಗಣನೆಗೆ ತೆಗೆದು ಕೊಳ್ಳದೆ ದೊಡ್ಡ ಮೊತ್ತವನ್ನು ಮಾತ್ರ ಹೇಳಿಗೆಯೆಂದೊ ಸಮಾಧಾನವನ್ನು ಹೇಳಲು ಸಾಧ್ಯ. ಆದರೆ ಸರ್ಗಸಂಖ್ಯೆ ಕೂಡುವುದಿಲ್ಲ ೧೩೭ ಸರ್ಗಗಳೇ ಅಧಿಕವಾಗುತ್ತವೆ. ಆರು ಕಾಂಡಗಳ ಸಂಖ್ಯಾಪ್ರಮಾಣವೆಂದಿಟ್ಟುಕೊಂಡರೆ ಸರ್ಗಸಂಖ್ಯೆ ಶ್ಲೋಕಸಂಖ್ಯೆಗಳೆರಡೂ ಕೂಡುವುದಿಲ್ಲ. ಈ ಬಿಕ್ಕಟ್ಟನ್ನು ಪರಿಹರಿಸಲು ವ್ಯಾಖ್ಯಾನಕಾರರು ಹೇಳುವ ಸಮಾಧಾನಗಳಿವು .—

೧. ರಾಮಾಯಣದ ರಚನೆಯಾಗಿ ಎಷ್ಟೋ ಯುಗಗಳು ಕಳೆದು ಹೋಗಿವೆ ಆದ್ದರಿಂದ ಆದಿಯಲ್ಲಿ ಸಂಖ್ಯೆಯು ಸರಿಯಾಗಿದ್ದು ಅನಂತರ ಬಹಳ ಹೆಚ್ಚುಕಡಿಮೆಯಾಗಿಬಿಟ್ಟದೆ.

೨. ಇಷ್ಟು ಸರ್ಗ ಇಷ್ಟು ಶ್ಲೋಕಗಳನ್ನು ರಚಿಸಬೇಕೆಂಬುದು ವಾಲ್ಮೀಕಿ ಮುನಿಗಳ ಸಂಕಲ್ಪ ಮುಂದೆ ಗ್ರಂಥರಚನೆಯಾಗುವಾಗ ಈ ಸಂಖ್ಯೆಯು ಹೆಚ್ಚುಕಡಿಮೆಯಾಗಿರಬಹುದು.

೩ ೫೦೦ ಸರ್ಗಗಳಿಗೂ ೨೪೦೦೦ ಶ್ಲೋಕಗಳಿಗೂ ನ್ಯೂನವಾಗಿರುವು ದಿಲ್ಲವೆಂದು ಈ ಶ್ಲೋಕದ ಅಭಿಪ್ರಾಯ. ಮುಂದೆ ಸರ್ಗಗಳೂ ಶ್ಲೋಕಗಳೂ ಹೆಚ್ಚಿದರೂ ದೋಷವಿಲ್ಲ.

೪. ಏಳು ಕಾಂಡಗಳನ್ನನುಸರಿಸಿ ಶ್ಲೋಕಸಂಖ್ಯೆಯನ್ನು ಹೇಳಿದೆ. ಆರು ಕಾಂಡಗಳನ್ನನುಸರಿಸಿ ಸರ್ಗಸಂಖ್ಯೆಯನ್ನು ಹೇಳಿದೆ ಆರು ಕಾಂಡ ಗಳಲ್ಲಿಯೂ ೩೭ ಸರ್ಗಗಳು ಹೆಚ್ಚಲು ಕಾರಣ ಲೇಖಕಪ್ರಮಾದ. ಒಂದು ಸರ್ಗವನ್ನು ಎರಡು ಸರ್ಗವೆಂದು ಎಣಿಸಿ ಅನೇಕ ಸರ್ಗಗಳಲ್ಲಿ ಲೇಖಕರು ತಪ್ಪುಮಾಡಿರಬೇಕು.

೫ ಸಂಖ್ಯಾಪ್ರಮಾಣವು ಸರಿಹೋಗುವುದಿಲ್ಲವಾದ್ದರಿಂದ ಸಂಖ್ಯಾ ಪ್ರಮಾಣವನ್ನು ಹೇಳುವ ಶ್ಲೋಕವೇ ಪ್ರಕ್ಷಿಪ್ತ

ಇವುಗಳಲ್ಲಿ ೪-೫ ನೆಯ ಸಮಾಧಾನಗಳು ಯುಕ್ತವಾಗಿ ತೋರುವುದಿಲ್ಲ. ಏಳು ಕಾಂಡಗಳನ್ನನುಸರಿಸಿ ಶ್ಲೋಕಸಂಖ್ಯೆ, ಆರು ಕಾಂಡಗಳನ್ನನುಸರಿಸಿ ಸರ್ಗಸಂಖ್ಯೆ ಎಂಬುದು ಸರಿಯಾಗದು. ಶ್ಲೋಕವೇ ಪ್ರಕ್ಷಿಪ್ತವೆಂಬುದೂ ಸಮಾಧಾನವಲ್ಲ ಅದು ಪ್ರಕ್ಷಿಪ್ತವಾದರೂ ಪ್ರಕ್ಷೇಪಕಾರನು ಯಾವ ಆಶಯದಿಂದ ಸಂಖ್ಯಾಪ್ರಮಾಣವನ್ನು ಹೇಳಿದ್ದಾನೆ? ಅವನ ಮತದಂತೆ ಸರ್ಗಸಂಖ್ಯೆ ಶ್ಲೋಕಸಂಖ್ಯೆಗಳ ಗಣನೆ ಹೇಗೆ? ಎಂಬ ಪ್ರಶ್ನೆ ಏಳುತ್ತದೆ. ಆದ್ದರಿಂದ ಮೊದಲನೆಯ ಮೂರು ಸಮಾಧಾನಗಳು ತಕ್ಕಮಟ್ಟಿಗೆ ಒಪ್ಪುವಂತಿವೆ. ರಾಮಾಯಣದ ರಚನೆಯಾಗಿ ಎಷ್ಟೋ ಯುಗಗಳು ಕಳೆದುಹೋಗಿವೆಯೆಂಬುದು ಆಧುನಿಕ ವಿಚಾರಸರಣಿಗೆ ಅಯುಕ್ತವಾಗಿ ತೋರಿದರೂ, ಅನೇಕ ಸಹಸ್ರವರ್ಷಗಳು ಸಂದಿವೆಯೆಂದು ಒಪ್ಪಬಹುದಷ್ಟೆ. ಮುದ್ರಣಕ್ರಮವು ಇಲ್ಲದ ಕಾಲದಲ್ಲಿ ಗ್ರಂಥ ವಿಪರ್ಯಾಸವಾಗಲು ಅನೇಕ ಸಹಸ್ರವರ್ಷಗಳೇ ಸಾಕು. ಈ ಮತದಲ್ಲಿಯೂ ಸರ್ಗಸಂಖ್ಯೆಗಳು ಹೆಚ್ಚಾಗಲು ಕಾರಣವೇನು? ಅದೇ ಪ್ರಮಾಣದಲ್ಲಿ ಶ್ಲೋಕ ಸಂಖ್ಯೆಗಳು ಹೆಚ್ಚಬೇಕಾದ್ದು ಯುಕ್ತವಲ್ಲವೆ? ಒಟ್ಟು ೧೩೭ ಸರ್ಗಗಳು ಹೆಚ್ಚಿದಾಗ ಶ್ಲೋಕಗಳು ೨೫೩ ಮಾತ್ರ ಹೆಚ್ಚಲು ಸಾಧ್ಯವೆ? ಆದ್ದರಿಂದ ಮೇಲ್ಕಂಡ ಸಮಾಧಾನಗಳಲ್ಲಿ ೨ ಮತ್ತು ೩ ನೆಯ ಸಮಾಧಾನಗಳು ಗ್ರಾಹ್ಯವೆಂದು ಕಾಣುತ್ತದೆ.

ಸಂಖ್ಯಾಪ್ರಮಾಣವು ಆರು ಕಾಂಡಗಳಿಗೆ ಮಾತ್ರ ಸಂಬಂಧಿಸಿದೆ. ಸಂಖ್ಯಾಪ್ರಮಾಣವನ್ನು ಹೇಳುವ ಶ್ಲೋಕವು ಪ್ರಕ್ಷಿಪ್ತವಿರಬಹುದು-ಇಲ್ಲದಿರಬಹುದು. ಉತ್ತರಕಾಂಡವು ವಾಲ್ಮೀಕಿಪ್ರಣೀತವಿರಬಹುದು - ಇಲ್ಲದಿರಬಹುದು. ಇದು ಹೀಗೆಯೇ ಎಂದು ನಿರ್ಣಯ ಅಶಕ್ಯವೂ ಹೌದು, ಅಯುಕ್ತವೂ ಹೌದು ಆರು ಕಾಂಡಗಳಿಂದ ೫೦೦ ಸರ್ಗಗಳಾಗಬೇಕು. ಉಳಿದ ೩೭ ಸರ್ಗಗಳಲ್ಲಿ ಕೆಲವು ಲೇಖಕಪ್ರಮಾದದಿಂದ ಆಗಿರಬಹುದು. ಕೆಲವು ಪ್ರಕ್ಷಿಪ್ತವಿರಬಹುದು. ಶ್ಲೋಕಗಳ ಸಂಖ್ಯೆ ೨೪೦೦೦ ವಾಗಲು ಸುಮಾರು ೩೦೦೦ ಶ್ಲೋಕಗಳು ಕಡಿಮೆಯಾಗುತ್ತವೆ. ಇವು ಯಾವ ಯಾವ ಸರ್ಗಗಳಲ್ಲಿದ್ದವೆಂದು ಹೇಳಲು ಶಕ್ಯವಿಲ್ಲ. ಕಾಲಮಹಿಮೆಯಿಂದ ಈ ಶ್ಲೋಕಗಳು ನಷ್ಟವಾಗಿರಬೇಕು. ರಾಮಾಯಣದಲ್ಲಿ ಅನೇಕ ಸ್ಥಳಗಳಲ್ಲಿ ಪೂರ್ವಾಪರವಿರೋಧಗಳಿವೆ. ಕೆಲವು ಕಡೆ 'ಪೂರ್ವಾಪರವಿಷಯಗಳನ್ನು ಊಹಿಸಿ

*

ಅಧ್ಯಾಹಾರಮಾಡಿಕೊಳ್ಳಬೇಕಾಗಿದೆ. ಕೆಲವು ಕಡೆ ಅವಶ್ಯವಾಗಿ ವರ್ಣಿಸ ಬೇಕಾದ ಸಂದರ್ಭಗಳನ್ನು ವಾಲ್ಮೀಕಿಮುನಿಗಳು ಬಿಟ್ಟಿದ್ದಾರಲ್ಲ ಎನ್ನಿಸುತ್ತದೆ. ಈ ವಿರೋಧಗಳನ್ನು, ಈ ಅಧ್ಯಾಹಾರಗಳನ್ನು, ಈ ವರ್ಣನೀಯ ಸಂದರ್ಭ ಗಳನ್ನು ಸಮನ್ವಯ ಮಾಡಿ ಸಂಪೂರ್ತಿಗೊಳಿಸಿ ವರ್ಣಿಸುವ ಸುಮಾರು ೩೦೦೦ ಶ್ಲೋಕಗಳು ನಷ್ಟವಾಗಿವೆಯೆಂದು ಹೇಳಬಹುದು.

ಮಹಾಗ್ರಂಥದಲ್ಲಿ ಹೊಸ ಶ್ಲೋಕಗಳ ಪ್ರಕ್ಷೇಪವು ಸಾಧ್ಯವೆಂದು ಒಪ್ಪುವುದಾದರೆ ಇರುವ ಶ್ಲೋಕಗಳ ಲೋಪವೂ ಸಾಧ್ಯವೆಂದು ಮನಗಾಣ ಬೇಕು.

## ೨

## ಏವಂ ತಾಸಾಂ ದದೌ ರಾಜಾ ಭಾರ್ಯಾಣಾಂ ಪಾಯಸಂ ಪೃಥಕ್

—ಪುಟ ೧೧೦-೧೧೧

ಈ ಕ್ರಮದಲ್ಲಿ ಪಾಯಸದ ವಿತರಣವನ್ನು ಒಪ್ಪಿದರೆ ಕೆಲವು ವಿರೋಧ ಗಳು ಉದ್ಭವಿಸುತ್ತವೆ. ಅಧ್ಯಾತ್ಮರಾಮಾಯಣ, ಕಾಳಿದಾಸನ ರಘುವಂಶ, ಭೋಜನ ಚಂಪೂರಾಮಾಯಣ, ಕ್ಷೇಮೇಂದ್ರನ ರಾಮಾಯಣಮಂಜರಿ ಮುಂತಾದ ಕೆಲವು ಗ್ರಂಥಗಳಲ್ಲಿ ಕೌಸಲ್ಯೆ ಮತ್ತು ಕೈಕೇಯಿ ಇವರಿಬ್ಬರಲ್ಲಿ ಪ್ರತಿಯೊಬ್ಬರಿಗೂ ನಾಲ್ಕಾಣೆ ಭಾಗದಷ್ಟು ಸಂದಿತೆಂದೂ ಸುಮಿತ್ರೆಗೆ ಎಂಟಾಣೆ ಭಾಗದಷ್ಟು ಸಂದಿತೆಂದೂ ವರ್ಣಿಸಿದೆ. ರಾಮ ಲಕ್ಷ್ಮಣ ಭರತ ಶತ್ರುಘ್ನ — ಈ ನಾಲ್ವರೂ ಪಾಯಸದ ಚತುರ್ಥಾಂಶಸಮನ್ವಿತರೆಂದು ಹೇಳಿದೆ. ಆದ್ದರಿಂದಲೇ ವಾಲ್ಮೀಕಿ ರಾಮಾಯಣದಲ್ಲಿ ಭರತನನ್ನು 'ಸಾಕ್ಷಾದ್ ವಿಷ್ಣೋಶ್ಚತುರ್ಭಾಗಃ ಸರ್ವೈಃ ಸಮುದಿತೋ ಗುಣೈಃ' (ಸರ್ಗ ೧೮-ಶ್ಲೋಕ ೧೩) ಎಂದು ಹೇಳಿದೆ. ಲಕ್ಷ್ಮಣ ಶತ್ರುಘ್ನರನ್ನು 'ವಿಷ್ಣೋರರ್ಧಸಮನ್ವಿತೌ' (೧೮-೧೪) ಎಂದು ಹೇಳಿದೆ. ಆದಕಾರಣ ವಾಲ್ಮೀಕಿ ರಾಮಾಯಣದ ಪಾಯಸ ವಿಭಾಗದಲ್ಲಿರುವ ಶ್ಲೋಕಗಳಿಗೆ ಕೆಳಗೆ ಕಂಡಂತೆ ಅರ್ಥವನ್ನು ಹೇಳ ಬಹುದು.

ಕೌಸಲ್ಯಾಯೈ ನರಪತಿಃ ಪಾಯಸಾರ್ಧಂ ದದೌ ತದಾ |
ಅರ್ಧಾದರ್ಧಂ ದದೌ ಚಾಪಿ ಸುಮಿತ್ರಾಯೈ ನರಾಧಿಪಃ ||

"ದಶರಥನು ಕೌಸಲ್ಯೆಗೆ ಪಾಯಸದ ಅರ್ಧಭಾಗವನ್ನು ಕೊಟ್ಟನು. ಅನಂತರ ಅವಳಿಗೆ ಕೊಟ್ಟಿದ್ದ ಅರ್ಧಭಾಗದಲ್ಲಿ ಅರ್ಧವನ್ನು ಸುಮಿತ್ರೆಗೆ **ಕೊಡಿಸಿದನು.**"

ಇದರಿಂದ ಕೌಸಲ್ಯೆಗೆ ನಾಲ್ಕಾಣೆಭಾಗ ಉಳಿಯಿತು. ಸುಮಿತ್ರೆಗೆ ನಾಲ್ಕಾಣೆ ಭಾಗ ಸಂದಿತು. ಅನಂತರ

ಕೈಕೇಯ್ಯೈ ಚಾವಶಿಷ್ಟಾರ್ಧಂ ದದೌ ಪುತ್ರಾರ್ಥಕಾರಣಾತ್ ||

"ತನ್ನಲ್ಲಿ ಉಳಿದುದರಲ್ಲಿ ಅರ್ಧವನ್ನು ಕೈಕೇಯಿಗೆ ಕೊಟ್ಟನು."

ಕೈಕೇಯಿಗೆ ನಾಲ್ಕಾಣೆ ಭಾಗ ಸಂದಿತು. ದಶರಥನಲ್ಲಿ ಪಾಯಸದ ಕಾಲುಭಾಗ ಉಳಿಯಿತು.

ಪ್ರದದೌ ಚಾವಶಿಷ್ಟಾರ್ಧಂ ಪಾಯಸಸ್ಯಾಮೃತೋಪಮಮ್ |
ಅನುಚಿಂತ್ಯ ಸುಮಿತ್ರಾಯ್ಯೈ ಪುನರೇವ ಮಹೀಪತಿಃ ||

"ಕೌಸಲ್ಯೆಗೆ ಕೊಟ್ಟು ಉಳಿದುದರ ಅರ್ಧಭಾಗವನ್ನು ದಶರಥನು ಸುಮಿತ್ರೆಗೆ ಕೊಟ್ಟನು."

ಪುನಃ ಸುಮಿತ್ರೆಗೆ ನಾಲ್ಕಾಣೆ ಭಾಗ ಪಾಯಸವು ಸಂದಿತು. ಈ ವಿಭಾಗ ಕ್ರಮದಲ್ಲಿ ಇನ್ನೂ ಒಂದು ಔಚಿತ್ಯ ಉಂಟು. ಕೌಸಲ್ಯೆಗೆ ಕೊಟ್ಟ ಅರ್ಧದಲ್ಲಿ ಒಂದು ಭಾಗ ಸುಮಿತ್ರೆಗೆ ಸಂದು ಅದರಿಂದ ಲಕ್ಷ್ಮಣನು ಜನಿಸಿದನು. ಆದ್ದರಿಂದ ರಾಮಲಕ್ಷ್ಮಣರಿಗೆ ಸ್ನೇಹವು ವಿಶೇಷವಾಗಿ ಬೆಳೆಯಿತು. ಉಳಿದ ಅರ್ಧದಲ್ಲಿ ಒಂದು ಭಾಗದಿಂದ ಭರತನೂ ಇನ್ನೊಂದು ಭಾಗದಿಂದ ಶತ್ರುಘ್ನನೂ ಜನಿಸಿದರು. ಆದ್ದರಿಂದ ಅವರಿಬ್ಬರಲ್ಲಿ ಸ್ನೇಹವು ವಿಶೇಷವಾಗಿ ಬೆಳೆಯಿತು.

ಈ ಪಕ್ಷದಲ್ಲಿ ರಾಮನನ್ನು 'ವಿಷ್ಣೋರರ್ಧಂ ಮಹಾಭಾಗಂ' (೧೮-೧೧) ಎಂದು ಹೇಳಿರುವುದು ವಿರುದ್ಧವಾಗುತ್ತದೆಯೆಂದು ಶಂಕೆ ಬರುತ್ತದೆ. ಅದಕ್ಕೆ ಸಮಾಧಾನವೇನೆಂದರೆ, ವಿಷ್ಣುವಿನ ಅಂಶವುಳ್ಳವನೆಂದು ಅರ್ಥಮಾಡಬೇಕು. ಅರ್ಧವೆಂದರೆ ಸಮಭಾಗವೆಂದು ಅರ್ಥವಲ್ಲ. ಶಂಖ ಚಕ್ರಾದಿಗಳಿಲ್ಲದ್ದರಿಂದ ಸಾಕ್ಷಾತ್ ವಿಷ್ಣುವಿಗಿಂತ ಕೆಲವು ಅಂಶಗಳಲ್ಲಿ ನ್ಯೂನತೆಯುಳ್ಳವನೆಂದು ಅರ್ಥ.

ಸಾಂಪ್ರದಾಯಿಕವಾದ ಅರ್ಥದಲ್ಲಿ ಲಕ್ಷ್ಮಣಶತ್ರುಘ್ನರು ಪಾಯಸದ ಆರಾಣೆಯ ಅಂಶದಿಂದ ಜನಿಸಿದವರು. ಅವರನ್ನು 'ವಿಷ್ಣೋರರ್ಧಸಮನ್ವಿತೌ' ಎಂದು ಹೇಳಿದ್ದು ಹೇಗೆ? ಆಗಲೂ ಅರ್ಧವೆಂದರೆ ಒಂದು ಅಂಶವೆಂದೂ ಸಮಭಾಗವಲ್ಲವೆಂದೂ ಒಪ್ಪಬೇಕಾಗುತ್ತದೆ ಭರತನು ಪಾಯಸದ ಅಷ್ಟಮಾಂಶದಿಂದ ಜನಿಸಿದವನು ಅವನನ್ನು 'ಸಾಕ್ಷಾದ್ವಿಷ್ಣೋಶ್ಚತುರ್ಭಾಗಂ' ಎಂದು ಹೇಳುವುದು ಹೇಗೆ? ಆಗಲೂ ಭಾಗವೆಂದರ ಅಂಶವೆಂದು ಅರ್ಥ ಮಾಡಬೇಕು ಅಥವಾ ಸಾಕ್ಷಾದ್ವಿಷ್ಣುವೆಂದರೆ ರಾಮ. ರಾಮನ ನಾಲ್ಕನೆಯ ಒಂದು ಭಾಗ ಎಂದರೆ ಪಾಯಸದ ಅಷ್ಟಮಾಂಶ ಎಂದು ಹೇಳಬೇಕಾಗುತ್ತದೆ. ಅಧ್ಯಾತ್ಮರಾಮಾಯಣ ಮುಂತಾದ ಗ್ರಂಥಗಳಲ್ಲಿರುವ ಪಾಯಸವಿಭಾಗವು ಕಲ್ಪಾಂತರವನ್ನು ಅನುಸರಿಸಿದೆ ಎಂದು ಸಮಾಧಾನಮಾಡಬೇಕಾಗುತ್ತದೆ.

ಭೋಜ, ಕ್ಷೇಮೇಂದ್ರ ಮುಂತಾದವರು ವಾಲ್ಮೀಕಿಮುನಿಗಳನ್ನು ಸ್ತುತಿಸಿದ್ದಾರೆ. ವಾಲ್ಮೀಕಿರಾಮಾಯಣಕ್ಕೆ ವಿರುದ್ಧವಾಗಿ ಅವರು ಪಾಯಸ ವಿಭಾಗವನ್ನು ಹೇಳಲು ವಿಶೇಷ ಕಾರಣವೇನೂ ಇಲ್ಲ ಆದ್ದರಿಂದ ಅವರು ಹೇಳುವಂತೆ ಪಾಯಸವಿಭಾಗಕ್ಕೆ ಮೇಲ್ಕಂಡ ರೀತಿಯಲ್ಲಿ ಅರ್ಥವನ್ನು ಹೇಳುವ ಸಂಪ್ರದಾಯವಿತ್ತೆಂದೂ ಅದು ಅವರಿಗೆ ಸಮ್ಮತವೆಂದೂ ಹೇಳಬಹುದು.

ಪ್ರಾಚೀನ ಗ್ರಂಥಗಳಲ್ಲಿ ಅಕ್ಷರ ಅಕ್ಷರವನ್ನೂ ಹಿಸುಕಿ ವಾಚ್ಯಾರ್ಥಕ್ಕೆ ಪ್ರಾಧಾನ್ಯವನ್ನು ಕೊಟ್ಟು ವಿವರಿಸಲು ಹೊರಟರೆ ಇಂಥ ವಿರೋಧಗಳು ಉದ್ಭವಿಸುತ್ತವೆ. ವಾಚ್ಯಾರ್ಥವನ್ನು ಗೌಣವಾಗಿಸಿ ಮಹಾತಾತ್ಪರ್ಯಕ್ಕೆ ಬೆಲೆಗೊಟ್ಟಾಗ ವಿರೋಧಗಳೆಲ್ಲವೂ ಮಾಯವಾಗುತ್ತವೆ.

## ೩

## ಸಮಾಪ್ತಾ ರಾಮಸಹಾಯಹೇತೋಃ

—ಪುಟ ೧೧೮

ಈ ಸರ್ಗದಲ್ಲಿ ವರುಣನ ಮಗ ಸುಷೇಣನೆಂದೂ ಪರ್ಜನ್ಯನ ಮಗ ಶರಭನೆಂದೂ ಹೇಳಿದೆ. ಯುದ್ಧಕಾಂಡದ ಮೂವತ್ತನೆಯ ಸರ್ಗದಲ್ಲಿ ಶಾರ್ದೂಲನು ರಾವಣನನ್ನು ಕುರಿತು ಸುಷೇಣನು ಧರ್ಮನ ಪುತ್ರನೆಂದೂ ಶರಭನು ವೈವಸ್ವತನ ಪುತ್ರನೆಂದೂ ಹೇಳುತ್ತಾನೆ. ಇದು ವಿರುದ್ಧವಲ್ಲವೆ? ಎಂದು ಶಂಕೆ ಹುಟ್ಟುತ್ತದೆ. ಇದಕ್ಕೆ ಸಮಾಧಾನವನ್ನು ಹೀಗೆ ಹೇಳಬಹುದು :

ಬಾಲಕಾಂಡದ ಈ ಸರ್ಗದಲ್ಲಿ ವಾಲ್ಮೀಕಿ ಮುನಿಗಳು ಹೇಳಿದ ಮಾತೇ ಸತ್ಯವೆಂದು ತಿಳಿಯಬೇಕು. ಶಾರ್ದೂಲನು ಭ್ರಾಂತಿಯಿಂದ ತಪ್ಪಾಗಿ ನುಡಿದಿದ್ದಾನೆ. ಅದೇ ಸರ್ಗದಲ್ಲಿ 'ರುಧಿರಾಸಿಕ್ತಸರ್ವಾಂಗೋ ವಿಹ್ವಲ ಶ್ಚಲಿತೇಂದ್ರಿಯಃ' ಎಂದು ಶಾರ್ದೂಲನು ತನ್ನ ಸ್ಥಿತಿಯನ್ನು ವರ್ಣಿಸಿ ಕೊಂಡಿದ್ದಾನೆ. ಆದ್ದರಿಂದ ಶಾರ್ದೂಲನ ಬಾಯಿಂದ ವಾಲ್ಮೀಕಿಮುನಿಗಳು ತಪ್ಪನ್ನು ಹೇಳಿಸಿ ಅವನು ಚಲಿತೇಂದ್ರಿಯನಾಗಿದ್ದನೆಂಬುದನ್ನು ವ್ಯಂಗ್ಯವಾಗಿ ಸೂಚಿಸಿದ್ದಾರೆ.

ವಿಷ್ಣುವು ರಾಮನಾಗಿ ಜನಿಸಬೇಕೆಂದು ನಿಶ್ಚಯಿಸಿದ ಮೇಲೆ ವಾನರರು ಹುಟ್ಟಿದರೆಂದು ಕಥೆ ಇದೆಯಷ್ಟೆ. ವಾಲಿಸುಗ್ರೀವರು ಮಾತ್ರ ಬಹುಕಾಲ ಹಿಂದೆಯೇ ಹುಟ್ಟಿದ್ದರೆಂದು ತಿಳಿದುಬರುತ್ತದೆ. ರಾವಣನ ದಿಗ್ವಿಜಯ ಕಾಲದಲ್ಲಿ ವಾಲಿ ಇದ್ದನೆಂದೂ, ವಾಲಿಯೂ ಕಾರ್ತವೀರ್ಯಾರ್ಜುನನೂ ಸಮ ಕಾಲಿಕರೆಂದೂ ಗೊತ್ತಾಗುತ್ತದೆ. ಆದ್ದರಿಂದ ಜಾಂಬವಂತನ ಹಾಗೆ ವಾಲಿ ಸುಗ್ರೀವರೂ ಮೊದಲೇ ಜನಿಸಿದ್ದರೆಂದೂ ಈಗ ವಾನರೋತ್ಪತ್ತಿಯನ್ನು ಹೇಳುವಾಗ ವಾನರರಲ್ಲಿ ಮುಖ್ಯರಾದ ಅವರಿಬ್ಬರ ಉತ್ಪತ್ತಿಯು ಪೂರ್ವ ಕಥೆಯ ಅನುವಾದವೆಂದೂ ಭಾವಿಸಬೇಕು.

ರಾವಣವಧೆಗೆ ಸಹಾಯಮಾಡುವುದಕ್ಕಾಗಿ ಈ ಕಪಿಗಳು ಅವತರಿಸಿದ ರೆಂದು ಹೇಳಿದೆ. ಆದರೆ ವಾಲಿಯಿಂದ ರಾವಣವಧೆಗೆ ಯಾವ ಉಪಕಾರ ವಾಯಿತು ? ವಾಲಿಗೆ ಸುಗ್ರೀವನ ಮೇಲಿದ್ದ ದ್ವೇಷವು ರಾಮಸುಗ್ರೀವರ ಸಖ್ಯಕ್ಕೆ ನಿಮಿತ್ತವಾಯಿತು. ಅನಂತರ ಸುಗ್ರೀವಾದಿ ಕಪಿಗಳು ರಾಮನಿಗೆ ಸಹಾಯ ಮಾಡಿ ರಾವಣವಧೆಗೆ ನೆರವಾದರು. ವಾಲಿಯು ಪರಂಪರೆಯಿಂದ ಪರ್ಯಾಯವಾಗಿ ರಾಮನಿಗೆ ಸಹಾಯಮಾಡಿದನೆಂದು ತಿಳಿಯಬೇಕು. ವಾಲಿಯು ಸುಗ್ರೀವನನ್ನು ದ್ವೇಷಿಸದಿದ್ದರೆ ರಾಮಸುಗ್ರೀವರ ಸಖ್ಯವಾಗು ತ್ತಿರಲಿಲ್ಲ. ಕಪಿಗಳು ರಾಮನಿಗೆ ಉಪಕಾರಮಾಡುವ ಸಂದರ್ಭ ಒದಗು ತ್ತಿರಲಿಲ್ಲ. ವಾಲಿಯು ಅಜೇಯನೆಂದು ರಾವಣನಿಗೆ ಗೊತ್ತಿದ್ದಿತು. ವಾಲಿಯು ಜೀವಂತನಾಗಿ ರಾಮನ ಪಕ್ಷವನ್ನು ವಹಿಸಿದ್ದರೆ ರಾವಣನು ಯುದ್ಧಮಾಡು ತ್ತಿರಲಿಲ್ಲ. ಅವನು ಸೀತೆಯನ್ನು ರಾಮನಿಗೆ ತಂದು ಒಪ್ಪಿಸಿಬಿಡುತ್ತಿದ್ದನು. ಆಗ ರಾವಣ ವಧೆಗೆ ನಿಮಿತ್ತವೇ ಇರುತ್ತಿರಲಿಲ್ಲ.

೪

## ಕೌಸಲ್ಯಾಽಜನಯದ್ರಾಮಂ ಸರ್ವಲಕ್ಷಣಸಂಯುತಮ್ ।

—ಪುಟ ೧೨೦

ಶ್ರೀರಾಮಚಂದ್ರನ ಜನನಕಾಲವನ್ನು ಜ್ಯೋತಿಃಶಾಸ್ತ್ರದ ಪ್ರಕಾರ ಗೊತ್ತುಪಡಿಸಿ ಜಾತಕವನ್ನು ಸಾಂಪ್ರದಾಯಿಕವಾಗಿ ತಿಳಿಸಿದ್ದಾರೆ.

ವೈವಸ್ವತಮನ್ವಂತರದ ತ್ರೇತಾಯುಗದಲ್ಲಿ ಮೂವತ್ತುಸಾವಿರ ವರ್ಷಗಳು ಅವಶಿಷ್ಟವಾಗಿರುವಾಗ ಪ್ರಾಪ್ತವಾದ ವಿಳಂಬಿನಾಮ ಸಂವತ್ಸರದ ಮೇಷ ಮಾಸ ಚೈತ್ರ ಶುಕ್ಲ ನವಮೀ ಬುಧವಾರ ಪುನರ್ವಸು ನಕ್ಷತ್ರ ಮಧ್ಯಾಹ್ನ ಸಮಯದಲ್ಲಿ ಕರ್ಕಾಟಕಲಗ್ನ ಕರ್ಕಾಟಕರಾಶಿಯಲ್ಲಿ ಶ್ರೀರಾಮಚಂದ್ರನ ಜನನ ಆ ಕಾಲದಲ್ಲಿ ಸೂರ್ಯ, ಕುಜ, ಗುರು, ಶುಕ್ರ ಮತ್ತು ಶನಿ—ಈ ಪಂಚಗ್ರಹಗಳು ಉಚ್ಚವಾಗಿದ್ದರು. ಚಂದ್ರನು ಸ್ವಕ್ಷೇತ್ರಗತನಾಗಿಯೂ ಬುಧನು ನೀಚನಾಗಿಯೂ ಇದ್ದರು ಜನ್ಮಕಾಲದಲ್ಲಿ ಗುರುದಶಾಶೇಷ ೪ ವರ್ಷ.

### ತಾತ್ಕಾಲಿಕ ಗ್ರಹಸ್ಥಿತಿ.

| ಗ್ರಹ | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ | ರಾಹು | ಕೇತು |
|---|---|---|---|---|---|---|---|---|---|
| ನಕ್ಷತ್ರ | ಅಶ್ವಿನೀ | ಪುನ | ಶ್ರವಣ | ಉತ್ತರಾ ಭಾದ್ರ | ಪುಷ್ಯ | ರೇವತಿ | ಸ್ವಾತಿ | ಪುಬ್ಬ | ಪೂರ್ವಾ ಭಾದ್ರ |
| ಪಾದ | ೩ | ೪ | ೩ | ೩ | ೧ | ೪ | ೪ | ೪ | ೨ |

| | | | |
|---|---|---|---|
| ಬುಧ ಶುಕ್ರ | ರವಿ | | |
| ಕೇತು | ಲಗ್ನ ಕುಂಡಲಿ | | ಲಗ್ನ ಚಂದ್ರ ಗುರು |
| ಕುಜ | | | ರಾಹು |
| | | ಶನಿ | |

| | | | |
|---|---|---|---|
| ಶುಕ್ರ ಶನಿ | | ಕೇತು | ರವಿ ಕುಜ |
| | ಅಂಶ ಕುಂಡಲಿ | | ಚಂದ್ರ |
| | | | ಗುರು |
| | ರಾಹು | ಬುಧ | |

# ರಾಮಾಯಣದಲ್ಲಿ ಮುಖ್ಯ ಸಂದರ್ಭಗಳ ಕಾಲನಿರ್ಣಯ

ನಾರಾಯಣಾಧ್ವರಿ ಎಂಬ ವಿದ್ವಾಂಸರು ಶ್ರೀರಾಮೋತ್ಸವರತ್ನಾಕರ ಎಂಬ ಒಂದು ಗ್ರಂಥವನ್ನು ರಚಿಸಿದ್ದಾರೆ. ಮಹೇಶ್ವರತೀರ್ಥೀಯ, ಗೋವಿಂದ ರಾಜೀಯ ಮುಂತಾದ ರಾಮಾಯಣ ವ್ಯಾಖ್ಯಾನಗಳನ್ನು ಪರಿಶೀಲಿಸಿ ರಾಮಾಯಣ ಕಥಾಸಂದರ್ಭಗಳು ಯಾವ ಯಾವ ದಿನಗಳಲ್ಲಿ ನಡೆದ ವೆಂಬುದನ್ನು ಆ ಗ್ರಂಥದಲ್ಲಿ ವಿಸ್ತಾರವಾಗಿ ನಿರೂಪಿಸಿದ್ದಾರೆ. ವಾಚಕರ ಅವಗಾಹನೆಗೋಸ್ಕರ ಆ ವಿಷಯವನ್ನು ಇಲ್ಲಿ ಸಂಗ್ರಹಿಸಲಾಗಿದೆ

ಸೀರಧ್ವಜನೆಂಬ ಜನಕರಾಜನು ಯಜ್ಞಭೂಮಿಯನ್ನು ಶೋಧಿಸು ವುದಕ್ಕಾಗಿ ನೇಗಿಲನ್ನು ಹೂಡುತ್ತಿರುವಾಗ ಒಬ್ಬ ದಿವ್ಯಕನ್ಯೆಯು ಭೂಮಿ ಯಲ್ಲಿ ದೊರಕಿದಳು. ಅವಳು ಲಕ್ಷ್ಮೀದೇವಿಯ ಅವತಾರ. ಅವಳಿಗೆ ಸೀತೆ ಯೆಂದು ನಾಮಕರಣಮಾಡಿ ಜನಕರಾಜನು ಪೋಷಿಸಿದನು. ಜನಕನಿಗೆ ಸೀತೆಯು ಚೈತ್ರಶುಕ್ಲ ಅಷ್ಟಮಿಯ ದಿನ ದೊರಕಿದಳು. ಅವಳು ಜನಕನ ಅರಮನೆಯಲ್ಲಿ ಆರು ವರ್ಷ ಇದ್ದಳು. ಸೀತೆಯು ದೊರಕುವುದಕ್ಕೆ ಆರು ವರ್ಷಗಳ ಹಿಂದೆ ಚೈತ್ರ ಶುಕ್ಲ ನವಮಿಯ ದಿನ ಶ್ರೀರಾಮನು ಅವತರಿಸಿದನು. ರಾಮನಿಗೆ ಎಂಟನೆಯ ವರ್ಷ ಉಪನಯನವಾಯಿತು. ಅವನು ವನವಾಸಕ್ಕೆ ಹೊರಡುವಾಗ ಕೌಸಲ್ಯೆಯು 'ದಶ ಸಪ್ತ ಚ ವರ್ಷಾಣಿ ತವ ಜಾತಸ್ಯ ರಾಘವ' ಎಂದು ನುಡಿದು ಶ್ರೀರಾಮನಿಗೆ ಜನ್ಮತಃ ಹದಿನೇಳು ವರ್ಷಗಳಾಗಿದ್ದ ವೆಂದು ಸೂಚಿಸಿದ್ದಾಳೆ. ಇಲ್ಲಿ ಜನ್ಮವೆಂದರೆ ಉಪನಯನ. ಕರ್ಮ ಜ್ಞಾನಾಧಿಕಾರವು ಉಪನಯನದಿಂದ ಬರುತ್ತದೆಯಾದ್ದರಿಂದ ದ್ವಿಜನಿಗೆ ಉಪನಯನವೇ ಮುಖ್ಯಜನ್ಮ. ಆದ್ದರಿಂದ ವನವಾಸಕ್ಕೆ ಹೊರಡುವಾಗ ಶ್ರೀರಾಮನಿಗೆ ಒಟ್ಟು ಇಪ್ಪತ್ತೈದು ವರ್ಷಗಳಾಗಿದ್ದವು ಆದ್ದರಿಂದಲೇ ಸೀತೆಯು ರಾವಣಸಂನ್ಯಾಸಿಯೊಡನೆ ಮಾತನಾಡುವಾಗ 'ವನವಾಸಕ್ಕೆ ಹೊರಡುವಾಗ ನನ್ನ ಪತಿಗೆ ಇಪ್ಪತ್ತೈದು ವರ್ಷಗಳಾಗಿದ್ದವು' ಎಂದು ನುಡಿದಿದ್ದಾಳೆ. ಮತ್ತು ಮದುವೆಯಾದಮೇಲೆ ತಾನು ಹನ್ನೆರಡು ವರ್ಷಗಳವರೆಗೆ ಅಯೋಧ್ಯೆಯಲ್ಲಿ ಇದ್ದೆನೆಂದು ರಾವಣಸಂನ್ಯಾಸಿಗೂ ಸುಂದರಕಾಂಡದಲ್ಲಿ ಆಂಜನೇಯನಿಗೂ

ಹೇಳಿದ್ದಾಳೆ. ಆದ್ದರಿಂದ ಶ್ರೀರಾಮನ ವಿವಾಹಕಾಲದಲ್ಲಿ ಅವನಿಗೆ ಹನ್ನೆರಡು ವರ್ಷಗಳಾಗಿದ್ದಿರಬೇಕು ವಿಶ್ವಾಮಿತ್ರರೊಡನೆ ಯಜ್ಞರಕ್ಷಣೆಗೆ ಹೋದಾಗ ರಾಮನಿಗೆ ಹನ್ನೆರಡು ವರ್ಷ. ಫಾಲ್ಗುಣ ಶುದ್ಧ ಪೂರ್ಣಿಮಾ ಉತ್ತರಾ ಫಲ್ಗುನೀ ನಕ್ಷತ್ರದಲ್ಲಿ ಸೀತಾರಾಮರ ವಿವಾಹ ವಿವಾಹವಾದಮೇಲೆ ಹನ್ನೆರಡು ವರ್ಷ ಅಯೋಧ್ಯೆಯಲ್ಲಿ ವಾಸ ಇಪ್ಪತ್ತೈದನೆಯ ವಯಸ್ಸಿನಲ್ಲಿ ಚೈತ್ರ ಶುಕ್ಲ ಪಂಚಮಿಯ ದಿನ ಶ್ರೀರಾಮನು ಸೀತಾಲಕ್ಷ್ಮಣರೊಡನೆ ಅರಣ್ಯಕ್ಕೆ ಹೊರಟನು ಷಷ್ಠಿಯಲ್ಲಿ ಗುಹನ ಸಂದರ್ಶನ. ಸಪ್ತಮಿಯಲ್ಲಿ ಗಂಗೆಯ ದಕ್ಷಿಣತೀರಕ್ಕೆ ಗಮನ. ಅಷ್ಟಮಿಯಲ್ಲಿ ಭರದ್ವಾಜಾಶ್ರಮಕ್ಕೆ ಹೋಗುವುದು ನವಮಿಯಲ್ಲಿ ಚಿತ್ರಕೂಟಪರ್ವತದ ಕಡೆಗೆ ಪ್ರಯಾಣ ದಶಮಿಯ ಸಾಯಂಕಾಲ ಸುಮಂತ್ರನು ಅಯೋಧ್ಯೆಗೆ ಹಿಂದಿರುಗಿ ಬಂದದ್ದು. ಅದೇ ದಶಮಿಯ ಅರ್ಧರಾತ್ರ ವೇಳೆಯಲ್ಲಿ ದಶರಥನ ಮರಣ. ಏಕಾದಶಿಯಲ್ಲಿ ದಶರಥನನ್ನು ಕುರಿತು ಕೌಸಲ್ಯಾದಿಗಳ ಶೋಕ. ದ್ವಾದಶಿಯಲ್ಲಿ ಭರತನ ಬಳಿಗೆ ದೂತರ ಪ್ರಯಾಣ. ದೂತರು ಚೈತ್ರಶುದ್ಧ ಹುಣ್ಣಿಮೆಯಂದು ಗಿರಿವ್ರಜ ನಗರವನ್ನು ಸೇರಿದುದು. ಚೈತ್ರಬಹುಳ ಪಾಡ್ಯದಲ್ಲಿ ಭರತನು ಅಯೋಧ್ಯೆಗೆ ಹೊರಟುದು. ದಾರಿಯಲ್ಲಿ ಏಳು ರಾತ್ರಿಗಳು ಕಳೆದವು. ನವಮಿಯ ದಿನ ಸೂರ್ಯೋದಯಕ್ಕೆ ಪೂರ್ವದಲ್ಲಿ ಭರತನು ಅಯೋಧ್ಯೆಯನ್ನು ಪ್ರವೇಶಿಸಿದನು ಆ ದಿನವೇ ದಶರಥನಿಗೆ ಅಗ್ನಿಸಂಸ್ಕಾರ. ಅಲ್ಲಿಂದ ಹದಿಮೂರು ದಿನಗಳವರೆಗೆ ಶ್ರಾದ್ಧಾದಿಗಳು. ವೈಶಾಖಶುದ್ಧ ತ್ರಯೋದಶಿಯಲ್ಲಿ ಭರತನು ಶ್ರೀರಾಮನನ್ನು ಸಂದರ್ಶಿಸಿದ್ದು ಅನಂತರ ಮೂರು ದಿನಗಳವರೆಗೆ ಭರತನು ರಾಮನ ಬಳಿಯಲ್ಲಿಯೇ ಇದ್ದನು. ವೈಶಾಖಬಹುಳ ಬಿದಿಗೆಯಂದು ರಾಮಪಾದುಕೆಗಳೊಡನೆ ಭರತನು ಹಿಂದಿರುಗಿದನು. ಚತುರ್ಥಿಯಂದು ಭರತನು ನಂದಿಗ್ರಾಮಕ್ಕೆ ಬಂದನು. ಅಲ್ಲಿಗೆ ಶ್ರೀರಾಮನು ವನವಾಸಕ್ಕೆ ಹೊರಟು ನಲವತ್ತೈದು ದಿನಗಳು ಕಳೆದವು. ಚಿತ್ರಕೂಟದಲ್ಲಿ ಎರಡು ತಿಂಗಳಿದ್ದು ದಂಡಕಾರಣ್ಯಪ್ರವೇಶ. ಆಮೇಲೆ ದಂಡಕಾರಣ್ಯದಲ್ಲಿ ಹತ್ತು ವರ್ಷ ಹತ್ತು ತಿಂಗಳ ಕಾಲ ವಾಸ. ಪಂಚವಟಿಯಲ್ಲಿ ಎರಡು ವರ್ಷ. ಅಲ್ಲಿಗೆ ಒಟ್ಟು ಹದಿಮೂರು ವರ್ಷಗಳು ಕಳೆದವು. ಹದಿನಾಲ್ಕನೆಯ ವರ್ಷ

ಚೈತ್ರ ಬಹುಳ ಅಷ್ಟಮೀ ಮಧ್ಯಾಹ್ನವೇಳೆಯಲ್ಲಿ ರಾವಣನು ಜಾನಕಿಯನ್ನು ಅಪಹರಿಸಿದನು. ವಾಸಿಷ್ಠರಾಮಾಯಣದಲ್ಲಿ,

ಚೈತ್ರಮಾಸೇ ಕೃಷ್ಣಪಕ್ಷೇ ತ್ವಷ್ಟಮ್ಯಾಂ ರಾಕ್ಷಸೇಶ್ವರಃ |
ಭಿಕ್ಷುರೂಪೇಣ ಚಾಗತ್ಯ ಗೃಹೀತ್ವಾ ಜಾನಕೀಂ ಯಯೌ ||

ಎಂದು ಹೇಳಿದೆ.

ಜ್ಯೇಷ್ಠ ಶುಕ್ಲ ಪೂರ್ಣಿಮೆಯ ದಿನ ವಾಲಿಯ ಸಂಹಾರ. ಆಮೇಲೆ ಮಾಲ್ಯವತ್ಪರ್ವತದಲ್ಲಿ ನಾಲ್ಕುತಿಂಗಳು ವಾಸ. ಫಾಲ್ಗುಣ ಶುಕ್ಲ ತ್ರಯೋದಶಿಯಲ್ಲಿ ಹನುಮಂತನು ಸಮುದ್ರವನ್ನು ಲಂಘಿಸಿ ಲಂಕೆಯನ್ನು ಸೇರಿ ಸೀತೆಯನ್ನು ಸಂದರ್ಶಿಸಿದನು ಮಾರನೆಯ ದಿನ ಲಂಕಾದಹನ, ಶ್ರೀರಾಮನ ಸಂದರ್ಶನ, ವಾನರಸೇನಾ ಪ್ರಯಾಣ. ಹುಣ್ಣಿಮೆಯ ದಿನ ವಾನರಸೇನೆಯು ಸಮುದ್ರತೀರವನ್ನು ಸೇರಿತು. ಅಲ್ಲಿಂದ ಮೂರುದಿನ ಶ್ರೀರಾಮನು ಸಮುದ್ರರಾಜನನ್ನು ಒಲಿಸಿಕೊಳ್ಳಲು ಪ್ರಾಯೋಪವೇಶ ಮಾಡಿದನು. ಫಾಲ್ಗುಣ ಬಹುಳ ಚತುರ್ಥಿಯಿಂದ ಅಷ್ಟಮಿಯವರೆಗೆ ಸೇತು ಬಂಧನ. ನವಮಿಯಿಂದ ಆರಂಭವಾಗಿ ಯುದ್ಧವು ಏಳು ದಿನ ನಡೆಯಿತು. ದಶಮಿಯ ದಿನ ಕುಂಭಕರ್ಣನ ವಧೆ. ತ್ರಯೋದಶಿಯಲ್ಲಿ ಲಕ್ಷ್ಮಣನಿಂದ ಇಂದ್ರಜಿತ್ತಿನ ವಧೆ. ಫಾಲ್ಗುಣ ಬಹುಳ ಅಮಾವಾಸ್ಯೆಯಲ್ಲಿ ಅಹೋರಾತ್ರವೂ ರಾಮರಾವಣರ ಯುದ್ಧ. ಮಾರನೆಯ ದಿನ ಇನ್ನೂ ಅಮಾವಾಸ್ಯಾತಿಥಿಯು ಉಳಿದಿರುವಾಗ ರಾವಣನ ಸಂಹಾರ. ಚೈತ್ರಶುದ್ಧ ತದಿಗೆಯಲ್ಲಿ ಸೀತಾದೇವಿ ಯೊಡನೆ ಸಮಾಗಮ. ಚತುರ್ಥಿಯಲ್ಲಿ ಅಯೋಧ್ಯೆಯ ಕಡೆಗೆ ಪ್ರಯಾಣ. ಪಂಚಮಿಯಂದು ಭರದ್ವಾಜಾಶ್ರಮದಲ್ಲಿ ನಿವಾಸ. ಅಲ್ಲಿಗೆ ಹದಿನಾಲ್ಕು ವರ್ಷಗಳು ಕಳೆದವು. ಮಾರನೆಯ ದಿನ ಷಷ್ಠಿಯಲ್ಲಿ ನಂದಿಗ್ರಾಮಕ್ಕೆ ಹೋಗಿ ಭರತನೊಡನೆ ಸಮಾಗಮ. ಚೈತ್ರ ಶುಕ್ಲ ಸಪ್ತಮೀ ಪುಷ್ಯನಕ್ಷತ್ರ ದಲ್ಲಿ ಶ್ರೀರಾಮನ ಪಟ್ಟಾಭಿಷೇಕ ನಡೆಯಿತು.

೫೫

**ಊನಷೋಡಶವರ್ಷೋ ಮೇ ರಾಮೋ ರಾಜೀವಲೋಚನಃ**

—ಪುಟ ೧೩೩

ರಾಮನಿಗೆ ಇನ್ನೂ ಹದಿನಾರು ವರ್ಷವಾಗಿಲ್ಲವೆಂದು ದಶರಥನು ಹೇಳುತ್ತಾನೆ. ಹದಿನೈದುವರ್ಷ ಪೂರ್ತಿಯಾಗಿತ್ತೆಂದು ಲೋಕರೂಢಿಯಿಂದ ಆ ಮಾತಿಗೆ ಅರ್ಥವಾಗುತ್ತದೆ. ಆಮೇಲೆ ಸ್ವಲ್ಪ ದಿನಗಳಲ್ಲಿ ರಾಮನ ವಿವಾಹವಾಯಿತು. ಅವನು ಸೀತೆಯೊಡನೆ ಹನ್ನೆರಡು ವರ್ಷ ಅಯೋಧ್ಯೆಯಲ್ಲಿ ಸುಖವಾಗಿದ್ದನೆಂದೂ ಹದಿಮೂರನೆಯ ವರ್ಷ ವನವಾಸವು ಪ್ರಾಪ್ತವಾಯಿತೆಂದೂ ಸೀತೆಯ ಮಾತಿನಿಂದ ತಿಳಿದುಬರುತ್ತದೆ ಅವಳು ಅರಣ್ಯಕಾಂಡದ ೪೭ನೆಯ ಸರ್ಗದಲ್ಲಿ ರಾವಣಸಂನ್ಯಾಸಿಯನ್ನು ಕುರಿತು—

ಉಷಿತ್ವಾ ದ್ವಾದಶ ಸಮಾಃ ಇಕ್ಷ್ವಾಕೂಣಾಂ ನಿವೇಶನೇ |
ಭುಂಜಾನಾ ಮಾನುಷಾನ್ ಭೋಗಾನ್ ಸರ್ವಕಾಮಸಮೃದ್ಧಿನೀ ||
ತತಸ್ತ್ರಯೋದಶೇ ವರ್ಷೇ ರಾಜ್ಯಾಮಂತ್ರಯತ ಪ್ರಭುಃ ||

ಎಂದು ಹೇಳುತ್ತಾಳೆ. ಆದ್ದರಿಂದ ವನವಾಸಾರಂಭದಲ್ಲಿ ರಾಮನಿಗೆ ೨೭ ಅಥವಾ ೨೮ ವರ್ಷ ವಯಸ್ಸಾಗಿರಬೇಕು. ಆದರೆ ಆ ಸಮಯದಲ್ಲಿ ರಾಮನಿಗೆ ೨೫ ವರ್ಷವಾಗಿತ್ತೆಂದೂ ತನಗೆ ೧೮ ವರ್ಷವಾಗಿತ್ತೆಂದೂ ರಾವಣಸಂನ್ಯಾಸಿಗೆ ಹೇಳುತ್ತಾಳೆ :—

ಮಮ ಭರ್ತಾ ಮಹಾತೇಜಾ ವಯಸಾ ಪಂಚವಿಂಶಕಃ |
ಅಷ್ಟಾದಶ ಹಿ ವರ್ಷಾಣಿ ಮಮ ಜನ್ಮನಿ ಗಣ್ಯತೇ ||

ಅರಣ್ಯ—ಸರ್ಗ ೪೭

ಕೌಸಲ್ಯೆಯು ರಾಮನನ್ನು ವನವಾಸಕ್ಕೆ ಬೀಳ್ಕೊಡುವಾಗ

ದಶ ಸಪ್ತ ಚ ವರ್ಷಾಣಿ ತವ ಜಾತಸ್ಯ ರಾಘವ ||

ಅಯೋಧ್ಯಾ—ಸರ್ಗ ೨೦

ಎಂದು ಹೇಳುವುದನ್ನು ನೋಡಿದರೆ ಆಗ ರಾಮನಿಗೆ ೧೭ ವರ್ಷಗಳಾಗಿದ್ದವೆಂದು ಗೊತ್ತಾಗುತ್ತದೆ.

ಅಲ್ಲದೆ ಮಾರೀಚನು ರಾವಣನೊಡನೆ ದಶರಥ ವಿಶ್ವಾಮಿತ್ರರ ಸಂಭಾಷಣೆಯನ್ನು ಪ್ರಸ್ತಾವಿಸಿ

ಬಾಲೋ ದ್ವಾದಶವರ್ಷೋಽಯಮಕೃತಾಸ್ತ್ರಶ್ಚ ರಾಘವಃ ||

ಅರಣ್ಯ—ಸರ್ಗ ೩೮

ಎಂದು ನುಡಿದು ವಿಶ್ವಾಮಿತ್ರರೊಡನೆ ಹೋಗುವಾಗ ರಾಮನಿಗೆ ೧೨ ವರ್ಷಗಳಾಗಿದ್ದವೆಂದು ಅಭಿಪ್ರಾಯಪಡುತ್ತಾನೆ.

ರಾಮನು ವನವಾಸಕ್ಕೆ ಹೊರಟಾಗ ದಶರಥನ ವಚನದಂತೆ ೧೬+೧೨-೨೮ ವರ್ಷಗಳೂ, ಸೀತೆಯ ಮಾತಿನಂತೆ ೨೫ ವರ್ಷಗಳೂ, ಕೌಸಲ್ಯೆಯ ನುಡಿಯಂತೆ ೧೭ ವರ್ಷಗಳೂ ಆಗಿದ್ದವೆಂದು ತಿಳಿದುಬರುವುದರಿಂದ ಪರಸ್ಪರ ವಿರೋಧ ಸಂಭವಿಸುತ್ತದೆ. ಇದಕ್ಕೆ ಸಮಾಧಾನವೇನು?

ಈ ವಿರೋಧವನ್ನು ಪರಿಹರಿಸಬೇಕಾದರೆ ಕೆಲವು ಮಾತುಗಳಿಗೆ ತಾತ್ಪರ್ಯಾರ್ಥವನ್ನು ಹೇಳಿ ವಾಚ್ಯಾರ್ಥವನ್ನು ಹಿಗ್ಗಿಸಬೇಕಾಗುತ್ತದೆ. ದಶರಥನು ಸಭಾಮಧ್ಯದಲ್ಲಿ ವಿಶ್ವಾಮಿತ್ರರಿಗೆ ಹೇಳಿದ ಮಾತು ಯಥಾಶ್ರುತವೆಂದು ನಾವು ಅಂಗೀಕರಿಸಬಹುದು. ಅವನು ಧೋರಣೆಯಿಂದ ಮಾತನಾಡಿದನೆನ್ನುವುದು ಯುಕ್ತವಾಗಲಾರದು. ಆದ್ದರಿಂದ ವಿಶ್ವಾಮಿತ್ರರೊಡನೆ ಹೋದಾಗ ರಾಮನಿಗೆ ೧೫ ವರ್ಷಗಳಾಗಿದ್ದವೆಂದು ಒಪ್ಪಬಹುದು. ವಿಶ್ವಾಮಿತ್ರರು ಬರುವಾಗ ದಶರಥನು ರಾಮನ ವಿವಾಹದ ವಿಷಯವನ್ನು ಪರ್ಯಾಲೋಚಿಸುತ್ತಿದ್ದನು. ಆದ್ದರಿಂದ ಮಾರೀಚನು ಹೇಳಿದಂತೆ ೧೨ ವರ್ಷಗಳಲ್ಲ. ಅವನ ಮಾತನ್ನು ಯಥಾಶ್ರುತವಾಗಿ ನಾವು ತೆಗೆದುಕೊಳ್ಳಬೇಕಾಗಿಲ್ಲ. ಕರ್ಣಾಕರ್ಣಿಕೆಯಾಗಿ ಕೇಳಿದ ಮಾತನ್ನು ಅವನು ಆಡಿದ್ದಾನೆ. ರಾಮನು ಬಾಲಕನಾಗಿದ್ದಾಗಲೇ ಮಹಾಪರಾಕ್ರಮಿಯಾಗಿದ್ದನೆಂದು ಹೇಳುವುದರಲ್ಲಿ ಅವನಿಗೆ ತಾತ್ಪರ್ಯ. ಅರಣ್ಯಕ್ಕೆ ಹೊರಡುವಾಗ ರಾಮನಿಗೆ ೨೫ ವರ್ಷಗಳೆಂದು ಸೀತೆಯು ಹೇಳಿದುದಕ್ಕೂ ನಾವು ಮಹತ್ವವನ್ನು ಕೊಟ್ಟು ಯಥಾಶ್ರುತವಾದ ಅರ್ಥವನ್ನು ತೆಗೆದುಕೊಳ್ಳಬಾರದು. ರಾಮನು ಇನ್ನೂ ತರುಣನಾಗಿದ್ದನೆಂದೂ, ಅಂಥ ತಾರುಣ್ಯದಲ್ಲಿಯೇ ವನವಾಸಕ್ಕೆ ಹೊರಡಬೇಕಾದ ದೈವದುರ್ವಿಪಾಕಕ್ಕೆ ಒಳಗಾದನೆಂದೂ ಸೀತೆಯ ಮುಖ್ಯ ತಾತ್ಪರ್ಯ. ಹಾಗೆಯೇ ಕೌಸಲ್ಯೆಯ ಮಾತಿನಲ್ಲಿ 'ದಶ ಸಪ್ತ ಚ ವರ್ಷಾಣಿ' ಎಂಬುದರ ಅಭಿಪ್ರಾಯವನ್ನು ಹೀಗೆ ನಯನಮಾಡಬೇಕು :—

"ರಾಮ, ನಿನ್ನ ತಂದೆಗೆ ನನ್ನ ಮೇಲೆ ಪ್ರೇಮವಿಲ್ಲ. ನಾನು ಸಪತ್ನಿಯರಿಂದ ನಾನಾ ಕಷ್ಟಗಳಿಗೆ ಗುರಿಯಾದೆ. ನೀನು ದೊಡ್ಡವನಾದೆ; ಇನ್ನು ನನ್ನ ಕಷ್ಟ ನೀಗುವುದೆಂದು ಹದಿನೇಳು ವರ್ಷಗಳಿಂದ ಕಾದಿದ್ದೆನು."

ಈ ಹದಿನೇಳು ವರ್ಷಗಳು ರಾಮನ ವಯಸ್ಸನ್ನು ಸೂಚಿಸಬೇಕಾಗಿಲ್ಲ. ರಾಮನು ಕ್ಷತ್ರಿಯನಾದ್ದರಿಂದ ಹನ್ನೊಂದನೆಯ ವಯಸ್ಸಿನಲ್ಲಿ ಉಪನಯನ ವಾಯಿತು. ಅಲ್ಲಿಗೆ ಅವನು ಗಣನೆಗೆ ಬರುವಷ್ಟು ದೊಡ್ಡವನಾದನೆಂದು ಭಾವನೆ ಅನಂತರ ಕೌಸಲ್ಯೆಗೆ ತನ್ನ ಮಗನು ಪಟ್ಟಾಭಿಷಿಕ್ತನಾಗಿ ತನ್ನ ಕಷ್ಟವನ್ನು ಪರಿಹರಿಸಿಯಾನೆಂದು ಆಸೆ ಅಂಕುರಿಸಿರಬೇಕು ಆದ್ದರಿಂದ ಹದಿನೇಳು ವರ್ಷ ಉಪನಯನವಾದಮೇಲೆ ಅಥವಾ 'ದಶ ಸಪ್ತ ಚ ವರ್ಷಾಣಿ' ಎಂಬಲ್ಲಿ 'ಚ'ಕಾರದಿಂದ ದಶ ಎಂಬುದನ್ನು ಸಮುಚ್ಚಯಮಾಡಿ ೧೦+೭+೧೦=೨೭ ವರ್ಷ ಎಂದು ಅರ್ಥಮಾಡಬೇಕು.

ಆದ್ದರಿಂದ ರಾಮನು ಅರಣ್ಯವಾಸಕ್ಕೆ ಹೊರಡುವಾಗ ೨೭ ಅಥವಾ ೨೮ ವರ್ಷವಾಗಿತ್ತೆಂದು ತಿಳಿಯಬಹುದು

ಇನ್ನು ಸೀತೆಯು ರಾವಣಸಂನ್ಯಾಸಿಯೊಡನೆ 'ಅರಣ್ಯಕ್ಕೆ ಹೊರಡುವಾಗ ತನಗೆ ೧೮ ವರ್ಷವಾಗಿತ್ತು' ಎನ್ನುವಳಲ್ಲ. ಇದು ಹೇಗೆ? ಅಯೋಧ್ಯೆಯಲ್ಲಿ ೧೨ ವರ್ಷ ಇದ್ದೆನೆಂದು ಹೇಳಿದ್ದಾಳೆ. ಹಾಗಾದರೆ ಅವಳ ವಿವಾಹ ೬ ವರ್ಷಕ್ಕೆ ಆಯಿತೆ? ಸೀತೆಯು ಅನಸೂಯೆಯೊಡನೆ ಮಾತನಾಡುವಾಗ,

ಪತಿಸಂಯೋಗಸುಲಭಂ ವಯೋ ದೃಷ್ಟ್ವಾ ತು ಮೇ ಪಿತಾ

ಅಯೋಧ್ಯಾ ೧೧೮–೩೪

ಎನ್ನುತ್ತಾಳೆ. ಜನಕರಾಜನಿಗೆ ಸೀತೆಯು 'ಪತಿಸಂಯೋಗಸುಲಭ'ವಾದ ವಯಸ್ಸನ್ನು ಪಡೆದರೂ ಇನ್ನೂ ವಿವಾಹವಾಗಲಿಲ್ಲವೆಂದು ಖೇದವಾಯಿತಂತೆ. ೬ನೆಯ ವರ್ಷ ಪತಿಸಂಯೋಗಸುಲಭವೆ? ಇದಕ್ಕೆ ಸಮಾಧಾನವೇನೆಂದರೆ, ಸೀತೆಯು ಅಯೋನಿಜೆ. ಅವಳು ಭೂಮಿಯಲ್ಲಿ ಜನಕರಾಜನಿಗೆ ಸಿಕ್ಕಿದಳು. ಜನಕರಾಜನಿಗೆ ದೊರೆತು ೬ ವರ್ಷಗಳಾದಮೇಲೆ ವಿವಾಹವಾಯಿತು ಭೂಗರ್ಭದಲ್ಲಿ ದೊರೆತ ದಿವ್ಯಸ್ತ್ರೀಯ ವಯಸ್ಸನ್ನು ಊಹಿಸಲು ಶಕ್ಯವಿಲ್ಲ. ರಾಮನಿಗಿಂತ ಚಿಕ್ಕವಳಾಗಿರಬೇಕಾದದ್ದು ಯುಕ್ತವಾದ್ದರಿಂದ ವಿವಾಹಕಾಲದಲ್ಲಿ ಜನ್ಮತಃ ೧೫ ವರ್ಷಗಳಿಗಿಂತ ಚಿಕ್ಕವಳಾಗಿರಬೇಕು. ರಾವಣಸಂನ್ಯಾಸಿಯೊಡನೆ ಹೇಳಿದ ಮಾತು ಜನಕರಾಜನಿಗೆ ದೊರೆತಕಾಲವನ್ನು ಹಿಡಿದು ಎಣಿಸಿ ಹೇಳಿದುದು.

೭

## ಗುಪ್ತಂ ಕುಶಿಕಪುತ್ರೇಣ ಜ್ವಲನೇನಾಮೃತಂ ಯಥಾ

— ಪುಟ ೧೩೯

ಗರುಡನು ಅಮೃತವನ್ನು ತರಲು ಹೋಗಿದ್ದನು. ದೇವತೆಗಳು ಅಮೃತದ ಸುತ್ತಲೂ ಚಕ್ರಾಕಾರವಾಗಿ ಪ್ರಜ್ವಲಿಸುವ ಅಗ್ನಿಯಿಂದ ಅಮೃತಕ್ಕೆ ಅಭೇದ್ಯವಾದ ರಕ್ಷಣೆಯನ್ನು ಏರ್ಪಡಿಸಿದ್ದರೆಂದು ಮಹಾಭಾರತದ ಆದಿಪರ್ವಾಂತರ್ಗತವಾದ ಆಸ್ತೀಕ ಪರ್ವದಲ್ಲಿ ಉಕ್ತವಾಗಿದೆ.

೭

## ಅನಿಂದ್ರಂ ಲೋಕಮಿಚ್ಛಂತೀ ಕಾವ್ಯಮಾತಾ ನಿಷೂದಿತಾ

— ಪುಟ ೧೫೯

ದೇವತೆಗಳೊಡನೆ ಯುದ್ಧಮಾಡಿ ಸೋತುಹೋದ ದೈತ್ಯರು ಶುಕ್ರಾಚಾರ್ಯನನ್ನು ಮರೆಹೊಕ್ಕರು. ಶುಕ್ರನು ಅವರಿಗೆ ಅಭಯವನ್ನು ಕೊಟ್ಟು ಮಂತ್ರಾಸ್ತ್ರಗಳನ್ನು ಸಂಪಾದಿಸಿಕೊಂಡು ಬರುವುದಕ್ಕಾಗಿ ತಪಸ್ಸಿಗೆ ಹೋದನು. ಆ ಸಮಯದಲ್ಲಿ ದೇವತೆಗಳು ದೈತ್ಯರಮೇಲೆ ಯುದ್ಧಕ್ಕೆ ಹೋದರು. ಆಗ ದೈತ್ಯರು ಶುಕ್ರನ ತಾಯಿಯಾದ ಖ್ಯಾತಿಯನ್ನು ಮರೆ ಹೊಕ್ಕರು. ಅವಳು ತನ್ನ ತಪೋಬಲದಿಂದ ವಿಷ್ಣುವನ್ನೂ ಇಂದ್ರನನ್ನೂ ನುಂಗುತ್ತೇನೆಂದು ನುಗ್ಗಿಬಂದಳು. ಆಗ ವಿಷ್ಣುವು ತನ್ನ ಚಕ್ರದಿಂದ ಅವಳ ಶಿರಸ್ಸನ್ನು ಕತ್ತರಿಸಿದನು ಈ ಕಥೆಯು ಮತ್ಸ್ಯಪುರಾಣದಲ್ಲಿಯೂ ದೇವೀ ಭಾಗವತದಲ್ಲಿಯೂ ಬಂದಿದೆ.

೮

## ಸ ಚ ರಾಜಾ ನರಶ್ರೇಷ್ಠ ಯಜ್ಞಸ್ಯಾಂತಮವಾಪ್ತವಾನ್

— ಪುಟ ೩೩೮

ಬಹ್ವೃಚ ಬ್ರಾಹ್ಮಣದಲ್ಲಿ "ಹರಿಶ್ಚಂದ್ರೋ ಹ ವೈಧಸ ಐಕ್ಷ್ವಾಕೋ ರಾಜಾ" ಇತ್ಯಾದಿಯಾಗಿ ಈ ನರಮೇಧದ ಕಥೆ ಬಂದಿದೆ. ಅದರಲ್ಲಿ ಯಾಗ ಮಾಡಿದವನು ಹರಿಶ್ಚಂದ್ರ. ಶುನಃಶೇಫನು ಅಜೀಗರ್ತಿಯ ಮಗ. ಪ್ರಾಜಾಪತ್ಯ ಮಂತ್ರಸ್ತುತಿಯಿಂದ ಅವನಿಗೆ ಬಿಡುಗಡೆಯಾಯಿತು ಎಂದು ಕಥೆ ಇದೆ.

ಆದ್ದರಿಂದ ಶ್ರುತಿಗೆ ವಿರುದ್ಧವಾಗಿ ಇಲ್ಲಿ ಅಂಬರೀಷನ ಹೆಸರಿದೆಯೆಂದು ಶಂಕೆ ಬರುತ್ತದೆ. ಇದಕ್ಕೆ ಸಮಾಧಾನ ಹೀಗೆ: ಹರಿಶ್ಚಂದ್ರನೆಂಬ ಇನ್ನೊಂದು ಹೆಸರು ಅಂಬರೀಷನಿಗೆ ಇದ್ದಿರಬೇಕು. ಋಚೀಕನಿಗೆ ಅಜೀಗರ್ತಿ ಎಂಬ ಹೆಸರೂ ಇದ್ದಿತು ಅಥವಾ ವೇದಾರ್ಥವನ್ನೇ ಪುರಾಣದಲ್ಲಿ ಉಪಬೃಂಹಣ ಮಾಡಲಾಗುತ್ತದೆ. ಆದ್ದರಿಂದ ಅಂಬರೀಷನೂ ಇಂಥ ಯಾಗವನ್ನು ಮಾಡಿರ ಬಹುದು. ಅದಕ್ಕೆ ಆಧಾರವಾದ ಶ್ರುತಿಯು ಈಗ ಉಪಲಬ್ಧವಿಲ್ಲ.

೬

## ಯದೃಚ್ಛಯಾಗತೈರ್ವೀರೈರ್ನಿರ್ಜಿತಾ ತವ ಪುತ್ರಕೈಃ

— ಪುಟ ೩೬೭

ಇಲ್ಲಿ 'ಪುತ್ರಕೈಃ' ಎಂದು ಬಹುವಚನವನ್ನು ಪ್ರಯೋಗಿಸಿದ್ದು ಹೇಗೆ? ದಶರಥನ ಪುತ್ರರು ನಾಲ್ವರಾದರೂ ಮಿಥಿಲೆಗೆ ಬಂದವರು ಇಬ್ಬರು. ಶಿವಧನುಸ್ಸಿಗೆ ಹೆದೆಯೇರಿಸಿ ಸೀತೆಯನ್ನು ಗೆದ್ದವನು ಒಬ್ಬನೆ. ವ್ಯಾಖ್ಯಾನ ಕಾರರು ಹೇಳುತ್ತಾರೆ: 'ಪೂಜಾರ್ಥದಲ್ಲಿ ಬಹುವಚನ. ಮುಂದೆ ಅಳಿಯ ನಾಗತಕ್ಕ ರಾಮನಿಗೆ ಗೌರವವನ್ನು ಸೂಚಿಸುವುದಕ್ಕಾಗಿ ಜನಕನು ರಾಮ ನನ್ನು ಬಹುವಚನದಿಂದ ಕರೆದಿದ್ದಾನೆ.'

ಇದೇನೋ ಸರಿಯೇ. ಗುರುಹಿರಿಯರನ್ನು ಬಹುವಚನದಲ್ಲಿ ವ್ಯವಹರಿಸು ತ್ತೇವೆ. ಅಳಿಯನನ್ನೂ ಬಹುವಚನದಲ್ಲಿ ಕರೆಯುವುದುಂಟು. ಜನಕರಾಜನ ಮಾತನ್ನೇ ದೂತರಾಗಿ ಬಂದ ಅವನ ಮಂತ್ರಿಗಳು ದಶರಥನಿಗೆ ಹೇಳು ತ್ತಿದ್ದಾರೆ. ಆದರೆ ರಾಮಾಯಣದಲ್ಲಿ ವಸಿಷ್ಠವಿಶ್ವಾಮಿತ್ರಾದಿ ಮುನಿಗಳನ್ನು ಕೂಡ ಬಹುವಚನದಲ್ಲಿ ವ್ಯವಹರಿಸಿಲ್ಲ. ದಶರಥನನ್ನು ಜನಕರಾಜನು ಏಕವಚನದಲ್ಲಿಯೇ ಮಾತನಾಡಿಸುತ್ತಾನೆ. ಶಿಷ್ಯನು ಗುರುವನ್ನೂ ಮಗನು ತಂದೆಯನ್ನೂ ಪತ್ನಿಯು ಪತಿಯನ್ನೂ ಏಕವಚನದಲ್ಲಿಯೇ ಸಂಬೋಧಿಸಿ ವ್ಯವಹರಿಸುತ್ತಾರೆ. ಹೀಗಿರಲು ಹುಡುಗನಾದ ರಾಮನನ್ನು ಜನಕನು ಬಹುವಚನದಲ್ಲಿ ಕರೆದಿದ್ದಾನೆಂದರೆ ಮನಸ್ಸಿಗೆ ಸರಸವಾಗಿ ಹಿಡಿಸಲಾರದು. ಜನಕನ ಮುಂದಿನ ಮಾತಿನಲ್ಲಿಯೇ 'ರಾಮೇಣ' ಎಂದು ಏಕವಚನವಿದೆ ಪೂಜಾರ್ಥದಲ್ಲಿ ಬಹುವಚನವನ್ನು ಇನ್ನೆಲ್ಲಿಯೂ ಜನಕನಾಗಲಿ ಇತರರಾಗಲಿ ಬಳಸಿಲ್ಲ.

—'ನನ್ನೊಡನೆ ನೀನು ಯುದ್ಧಕ್ಕೆ ನಿಂತರೆ ನನಗಿಂತಲೂ ಅಧಿಕನಾಗುತ್ತೀಯೆ' ಎಂದು ವರವನ್ನು ಕೊಟ್ಟಿದ್ದಾನೆ. ಶಿವನ ಶ್ರೇಷ್ಠತೆಯನ್ನು ಪ್ರತಿಪಾದಿಸುವ ಶ್ರುತಿಸ್ಮೃತಿಪುರಾಣ ವಚನಗಳನ್ನು ಅಸಂಖ್ಯಾತವಾಗಿ ಉದಾಹರಿಸಬಹುದು" ಎನ್ನುತ್ತಾರೆ.

ಇವುಗಳಲ್ಲಿ ಯಾವ ಪಕ್ಷವನ್ನು ವಹಿಸಿದರೂ ಇನ್ನೊಂದು ಪಕ್ಷವನ್ನು ಅಪ್ರಾಮಾಣಿಕವೆಂದು ತಳ್ಳಿಹಾಕಬೇಕಾಗುತ್ತದೆ. ವೈದಿಕಮಾರ್ಗಾನುಸಾರಿಗಳಾದ ಆಸ್ತಿಕರು ಹೀಗೆ ಹೇಳುವುದು ಸರ್ವಥಾ ಯುಕ್ತವಲ್ಲ. ಆದ್ದರಿಂದ ಎರಡು ಪಕ್ಷಗಳೂ ಪ್ರಾಮಾಣಿಕವೆಂದು ತಿಳಿದು ಏಕೇಶ್ವರವಾದವನ್ನವಲಂಬಿಸುವುದೇ ನಮಗೆ ಸರಿಯಾದ ಮಾರ್ಗ. ಶಿವನು ಬೇರೆಯಲ್ಲ ವಿಷ್ಣು ಬೇರೆಯಲ್ಲ. 'ಶಿವಾಯ ವಿಷ್ಣುರೂಪಾಯ ಶಿವರೂಪಾಯ ವಿಷ್ಣವೇ' ಎಂದು ಮಾರ್ಕಾಂಡೇಯ ಋಷಿಗಳು ಹರಿವಂಶದಲ್ಲಿ ಹೇಳಿದ್ದಾರೆ. ಅವರೇ—

ಯೋ ವೈ ವಿಷ್ಣುಃ ಸ ವೈ ರುದ್ರೋ ಯೋ ರುದ್ರಃ ಸ ಪಿತಾಮಹಃ |
ಏಕಮೂರ್ತಿಸ್ತ್ರಯೋದೇವಾ ರುದ್ರವಿಷ್ಣುಪಿತಾಮಹಾಃ ||

ಎಂದು ನುಡಿದು ಬ್ರಹ್ಮ ವಿಷ್ಣು ಶಿವ ಎಂಬ ತ್ರಿಮೂರ್ತಿಗಳಿಗೂ ಅಭೇದವನ್ನೇ ಪ್ರತಿಪಾದಿಸಿದ್ದಾರೆ. ವಿಷ್ಣುಪುರಾಣದಲ್ಲಿ—

ಸೃಷ್ಟಿಸ್ಥಿತ್ಯಂತಕರಿಣೀಂ ಬ್ರಹ್ಮವಿಷ್ಣುಶಿವಾತ್ಮಿಕಾಮ್ |
ಸ ಸಂಜ್ಞಾಂ ಯಾತಿ ಭಗವಾನೇಕ ಏವ ಜನಾರ್ದನಃ ||

ಎಂದು ಹೇಳಿದೆ ಆದ್ದರಿಂದ ಒಬ್ಬನೇ ಪರಮಾತ್ಮನು ಉಪಾಧಿಭೇದದಿಂದ ನಾನಾ ನಾಮಗಳನ್ನೂ ನಾನಾ ರೂಪಗಳನ್ನೂ ಲೀಲಾರ್ಥವಾಗಿ ಧರಿಸುತ್ತಾನೆಂದೂ ಹರಿಹರರಲ್ಲಿ ಭೇದವಿಲ್ಲವೆಂದೂ ತಿಳಿಯುವುದು ಯುಕ್ತವಾದದ್ದು. ವೇಷಕ್ಕೆ ತಕ್ಕ ಆಟ. ಹಾಗಿಲ್ಲದಿದ್ದರೆ, ಲಕ್ಷ್ಮಣಭರತಶತ್ರುಘ್ನರು ಸೀತೆಯನ್ನು ತಾಯಿಯಂತೆ ನಡೆಸಿಕೊಂಡದ್ದು ಹೇಗೆ? ಅವರೂ ಸಹ ಶ್ರೀರಾಮನಂತೆ ವಿಷ್ಣುವಿನ ಅಂಶಸಂಭೂತರಷ್ಟೆ?

ಪರಶುರಾಮನು ಪ್ರಕೃತದಲ್ಲಿ ವಿಷ್ಣುವನ್ನು ಅಧಿಕವೆಂದು ಹೇಳುವುದರ ತಾತ್ಪರ್ಯವೇನೆಂದರೆ: 'ಶಿವಧನುಸ್ಸನ್ನು ಹಿಂದೆ ವಿಷ್ಣುವೇ ದುರ್ಬಲಗೊಳಿಸಿ

ದ್ದಾನೆ. ಅದನ್ನು ಮುರಿಯುವುದರಲ್ಲಿ, ರಾಮನ ಹೆಚ್ಚುಗಾರಿಕೆ ಇಲ್ಲ. ವೈಷ್ಣವಧನುಸ್ಸನ್ನು ಹೆದೆಯೇರಿಸಲಿ, ನೋಡೋಣ' ಎಂದು.

ಪರಶುರಾಮನು ವಿಷ್ಣುವಿನ ಅವತಾರವಷ್ಟೆ. ಅವನನ್ನು ಶ್ರೀರಾಮನು ಸೋಲಿಸಿದನಲ್ಲವೆ? ಶ್ರೀರಾಮನು ವಿಷ್ಣುವಿನ ಅವತಾರವೇ. ತನ್ನನ್ನೇ ತಾನು ಗೆದ್ದನೆಂದರೆ ಅರ್ಥವೇನು? ರಾಮಾಯಣದಲ್ಲಿ ಶ್ರೀರಾಮನ ಸರ್ವೋತ್ಕರ್ಷವನ್ನು ಹೇಳುವುದು ಪ್ರಧಾನ. ಅದಕ್ಕೆ ಪೋಷಕವಾಗಿ ಈ ಕಥೆಗಳು—ಎಂದು ತಿಳಿದು ಮನಸ್ಸನ್ನು ಶಾಂತಗೊಳಿಸಿಕೊಳ್ಳುವುದು ಒಳ್ಳಿತು.

